# our most useful publications

## RECOMMENDED BY THE P. U. C. BOARD

**For PUC Ist Year Science Students**

1. Basic Physics by Paramasivayya & others 6-00
2. Elements of Chemistry by Bommannavar 6-00
3. Text Book of Biology by Suryanarayan 8-00
4. P,U.C. Mathematics by Gopalan & S. Horadi 6-50
5. Basic Statistics by A. B. Rao 6-00

**For PUC Arts Students.**

1. Introduction to Economics by Prin Halayya 5-00
2. ಅರ್ಥಶಾಸ್ತ್ರ ಪರಿಚಯ ಪ್ರಿ. ಹಾಲಯ್ಯ-ಮಾದಯ್ಯ (ಅಚ್ಚಿನಲ್ಲಿ) 5-00
3. P. U. C. Politics by Prin. Emmi 4-00
4. ರಾಜ್ಯಶಾಸ್ತ್ರ by M. S. Patil 4-00
5. ಸರಳ ಪ್ರಾಕೃತಿಕ ಭೂಗೋಲ by ಅಚ್ಯುತರಾವ 7-00

**For PUC. II year Scieince Studnets**

1. Basic Physics by Prof. Katti & Rajsekhar Bhusnurmath 8-00
2. "Chemistry" by walters & Neglur 6-00
3. P.U.,C. II year Mathematics by Gopalan & Horadi 6-50
4. Biology II year by Suryanarayan 8-00

**For PUC. II year Arts Students**

1. Indian Economy (IInd Edition) by Prin. Halayya 6-00
2. ಭಾರತದ ಆರ್ಥಿಕ ವ್ಯವಸ್ಥೆ (ಅಚ್ಚಿನಲ್ಲಿ) ಪ್ರಿ. ಹಾಲಯ್ಯ
3. Elements of Government by Prin. Halayya 6-00
4. ರಾಜ್ಯಶಾಸ್ತ್ರ by M. S. Patil 5-00
5. Indian Geography by Achyut Rao 6-00

*Ask Your nearest Book Sellers or write to us directly ;*

ಕಳೆದ 20 ವರ್ಷಗಳಿಂದಲೂ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡು ತ್ತಿರುವ ಅತ್ಯಧಿಕ ಪ್ರಸಾರವುಳ್ಳ ನಮ್ಮ ಶೈಕ್ಷಣಿಕ ಮಾಸಪತ್ರಿಕೆಗಳ

ಪ್ರೈಮರಿ VII ನೇ ತರಗತಿಯ ಪಬ್ಲಿಕ್ ಪರೀಕ್ಷೆಯ ವಿದ್ಯಾರ್ಥಿ ಗಳಿಗಾಗಿ ಮಾರ್ಗದರ್ಶೀ ಮಾಸಪತ್ರಿಕೆ. ಸಂಚಿಕೆಗಳು 12.

**ಮಿಲ್ಕೀ ಮ್ಯಾಗಝಿನ** (ಪ್ರತಿ ತಿಂಗಳ 25ನೇ ತಾರೀಖಿಗೆ ಪ್ರಕಟನೆ) ವಾರ್ಷಿಕ ಚಂದಾ : ರೂ 14/- (ಕನ್ನಡ ಮಾಧ್ಯಮ)

ಮೈಸೂರು ರಾಜ್ಯದ ಪಾಠಪಟ್ಟಿಯ ಪ್ರಕಾರ ಪ್ರೈಮರಿ VII ನೇ ತರಗತಿಯ (ಮಿಡ್ಲ ಸ್ಕೂಲ್) (District Level Exam) ಪರೀಕ್ಷೆಗಾಗಿ ಇರುವ ಎಲ್ಲ ವಿಷಯುಗಳ ಪ್ರಶ್ನೋತ್ತರಗಳು ಇದರಲ್ಲಿವೆ

S. S. L C. ಕನ್ನಡ ಮಾಧ್ಯಮ ವಿದ್ಯಾರ್ಥಿಗಳಿಗಾಗಿ ಆದರ್ಶ ಮಾಸಪತ್ರಿಕೆ

**ಎಸ್. ಎಸ್. ಸಿ. ಮ್ಯಾಗಝಿನ** ಸಂಚಿಕೆಗಳು 12 (2 ವಿಶೇಷಾಂಕ ಸೇರಿ) ವಾರ್ಷಿಕ ಚಂದಾ ರೂ. 20/-

ಪ್ರಕಟನೆ: ಪ್ರತಿ ತಿಂಗಳ 12 ನೇ ತಾರೀಖಿಗೆ 1973-74 ರ ಹೊಸ ಪಾಠಪಟ್ಟಿಯಂತೆ ಎಲ್ಲ ವಿಷಯಗಳ ವಿವೇಚನೆಯೂ ಇದರಲ್ಲಿದೆ.

An Ideal Monthly Magazine For S. S. L. C. Students of the English Medium

**S. S. C. MAGAZINE** Issues : 12 (Including 2 Spl) Annual Sub Rs. 22.

Publication : every 22nd All Subjects wll be dealt as Per the revised Syllabus for 1973-74.

An indispensable Monthly Magazine For the P.U.C. 1st year and 2nd year Students.

**COLLEGE MAGAZINE** Issues : 10 (June to Feb) (including one Spl.) Publication : every 30th.

Separate Magazines for 1st year and 2nd year. All Subjects will be dealt as per the new Syllabus common for the Mysore State. Edition A, for Arts and Commerce, and B for Science: Subscription for each year.

| Editioh A : (Arts-Com.) | Edition B : Science |
| --- | --- |
| Sub Rs 25/- | Sub. Rs. 22/- |
| (in English & Kannada Medium.) | (in English Medium only) |

ವಿವರಗಳಿಗೆ ಇಂದೇ ಬರೆಯಿರಿ : Telephone : **8251**

**ಮ್ಯಾಗಝಿನ್ ಪಬ್ಲಿಕೇಶನ್ಸ**
ಚಂದ್ರಸದನ, ಸ್ಟೇಶನ್ ರೋಡ
ಧಾರವಾಡ 1

**BHARAT BOOK DEPOT & PRAKASHAN, DHARWAR**

# ಯಾರು ಕೇಳುತ್ತಾರೆ, ಹೇಳಿರಣ್ಣ

ಅಲ್ಲಿ ಮುಳುಗುತ್ತಾರೆ, ಇಲ್ಲಿ ಏಳುತ್ತಾರೆ
ಎದ್ದು ಮೆರೆಯುತ್ತಾರೆ, ಕದ್ದು ಮೀರುತ್ತಾರೆ
ಯಾರು ಕೇಳುತ್ತಾರೆ, ಹೇಳಿರಣ್ಣ.

ಕದ್ದು ಕೇಳುತ್ತಾರೆ, ಸುದ್ದಿ ಮಾಡುತ್ತಾರೆ
ಗುದ್ದಿ ನೋಡುತ್ತಾರೆ, ಒದ್ದು ಓಡುತ್ತಾರೆ
ಯಾರು ಕೇಳುತ್ತಾರೆ, ಹೇಳಿರಣ್ಣ.

ಹೊರ ಮೆಚ್ಚುತ್ತಾರೆ ಒಳಗೆ ಚುಚ್ಚುತ್ತಾರೆ
ಮರೆಗೆ ಕಚ್ಚುತ್ತಾರೆ, ತೆರೆಗೆ ಬಿಚ್ಚುತ್ತಾರೆ
ಯಾರು ಕೇಳುತ್ತಾರೆ, ಹೇಳಿರಣ್ಣ.

ತಲೆಯ ಕೆರೆಯುತ್ತಾರೆ, ಕಲೆಯ ಕೊರೆಯುತ್ತಾರೆ
ನೆಲವ ಮರೆಯುತ್ತಾರೆ, ಬೆಲೆಗೆ ಮೆರೆಯುತ್ತಾರೆ
ಯಾರು ಕೇಳುತ್ತಾರೆ, ಹೇಳಿರಣ್ಣ.

ಬಲೆಯ ಬೀಸುತ್ತಾರೆ, ಬುಟ್ಟಿಗೆಸೆಯುತ್ತಾರೆ
ಇಟ್ಟು ಕೊಳೆಸುತ್ತಾರೆ, ಹೊಟ್ಟೆ ಬೆಳೆಸುತ್ತಾರೆ
ಯಾರು ಕೇಳುತ್ತಾರೆ, ಹೇಳಿರಣ್ಣ.

ಮೇಜು ಗುದ್ದುತ್ತಾರೆ, ಮೈಕು ಮುರಿಯುತ್ತಾರೆ
ಮಾಲೆ ಬೇಡುತ್ತಾರೆ, ಮೋಜು ಮಾಡುತ್ತಾರೆ
ಯಾರು ಕೇಳುತ್ತಾರೆ, ಹೇಳಿರಣ್ಣ.

ಫಂಡು ಎತ್ತುತ್ತಾರೆ, ಎತ್ತಿ ಹಾಕುತ್ತಾರೆ
ಬಂಡು ಹೂಡುತ್ತಾರೆ, ಬೆಂಡು ಸುಲಿಯುತ್ತಾರೆ
ಯಾರು ಕೇಳುತ್ತಾರೆ, ಹೇಳಿರಣ್ಣ.

ಕೈಯ ಮುಗಿಯುತ್ತಾರೆ, ಕಾಲು ಕೆದರುತ್ತಾರೆ
ಬಾಲ ಹಿಡಿಯುತ್ತಾರೆ, ಮೇಲೆ ಏರುತ್ತಾರೆ
ಯಾರು ಕೇಳುತ್ತಾರೆ, ಹೇಳಿರಣ್ಣ.

ಬಾಯಿ ಬಡಿಯುತ್ತಾರೆ, ಕಾಯಿ ಒಡೆಯುತ್ತಾರೆ
ಮರ್ಜಿ ಹಿಡಿಯುತ್ತಾರೆ, ಕುರ್ಚಿ ಪಡೆಯುತ್ತಾರೆ
ಯಾರು ಕೇಳುತ್ತಾರೆ, ಹೇಳಿರಣ್ಣ.

ರೈಲು ತಡೆಯುತ್ತಾರೆ, ದೀಪ ಒಡೆಯುತ್ತಾರೆ
ಕಲ್ಲು ತೂರುತ್ತಾರೆ, ಸುಳ್ಳು ದೂರುತ್ತಾರೆ
ಯಾರು ಕೇಳುತ್ತಾರೆ, ಹೇಳಿರಣ್ಣ.

ಹೊತ್ತು ಹೊರೆವರಿಲ್ಲ, ಕಿತ್ತು ತಿಂಬವರೆಲ್ಲ
ಬಿತ್ತಿ ಬೆಳೆದವರಿಗೂ ತುತ್ತು ಭರವಸೆಯಿಲ್ಲ
ಎತ್ತ ಹೊರಳಿದರಿದೇ, ನೋಟವಣ್ಣ.

ಹೇಳುವವರೇ ಎಲ್ಲ, ಕೇಳುವವರೇ ಇಲ್ಲ
ಹೇಳಿ ಕೇಳೀ ಬಾಳ ಏಕತಾರಿಯ ಪದವ
ಯಾರು ಕೇಳುತ್ತಾರೆ, ಹೇಳಿರಣ್ಣ.

—ಚೆನ್ನವೀರ ಕಣವಿ

# ಮಾದರಿಗಳು

ಪ್ರಾಸ ಛಂದ ಬಿಗಿಬಂಧಗಳಲ್ಲಿ
ಅಪೂರ್ವತೆಯ ಆಗಂತುಕ ಚಂದಗಳಲ್ಲಿ
ಸಮಯದ ಉಸಿರುಕಟ್ಟಿಸುವ ನಿಯಮಗಳಿಗೆ
ಲಕ್ಷಣವಾಗಿದ್ದವು. ಈಗ ವಿಲಕ್ಷಣವಾಗಿವೆ—
ಅರ್ಥಕ್ಕಿಂತ ನಾದವಾಗಿ;
ವರ್ತಮಾನದ ವಿನೋದವಾಗಿ.

ಕ್ಷಣಗಳಲ್ಲಿ ಬಿಗಿಯಾಗಿ ಕಚ್ಚಿ
ಗಂಟೆಗಳಲ್ಲಿ ಅಳ್ಳಕವಾದವು.
ಯಾಂತ್ರಿಕ ಪ್ರಾವೀಣ್ಯದ ಅಂಗಾಲಿನ ಮರಿಗಳು,
ಅಭಿನಯಕ್ಕಿಂತ ನಾಟ್ಯದಲ್ಲಿ
ಸಂವಾದಕ್ಕಿಂತ ಗಮಕದಲ್ಲಿ
ನೈಜಕ್ಕಿಂತ ಪಾಠಪ್ರಸಾಧನದಲ್ಲಿ
ರಂಗದ ಸಿಳ್ಳು ಚಪ್ಪಾಳೆಗಳಿಗೆ ತರಪೇತಾಗಿ
ಶಹಬಾಸುಗಿರಿ ಗಿಟ್ಟಿಸಿ ಈಗ ತಮ್ಮ
ವಂಶವಾಹಿಗಳ ಮಿತತೆ, ಜಟಿಲತೆಗೆ ಮೂಗುಮುರಿಯುತ್ತಿವೆ.
ಕಾಲದಿಂದ ಋಷಿಪಂಚಮಿ
ಮಾಡಿಕೊಂಡ ಅಭಿನೇತ್ರಿಯರು—
ಕಾಲದಲ್ಲಿದ್ದೂ ಅಕಾಲಿಕವಾಗಿ;
ದೇಶದಲ್ಲಿದ್ದೂ ಪರದೇಶಿಯಾಗಿ.

ಸ್ಥಳ, ಉಪಯುಕ್ತತೆಯ ಲೆಕ್ಕಿಸದೆ ಊರ್ಧ್ವಕ್ಕಿಂತ ಅಗಲಗಳಲ್ಲಿ.
ವಿಶಾಲ ಶೂನ್ಯಗಳನೊಳಗೊಂಡು ಜ್ಯಾಮಿತಿಯ ಪ್ರಥಮ ಸೂತ್ರಗಳಲ್ಲಿ
ಕಲಿತ ನಿರ್ದೋಷ ರೇಖೆಗಳಿಂದ ಬಯಲುಗಳ ನಿಯತ ಭಾಗಿಸಿ
ಪರಿಮಿತಿಯಲ್ಲಿ ಅರ್ಥಗಳ ಇಕ್ಕಟ್ಟಿನಲ್ಲಿ ಅನುರೂಪತೆಯ
ವೈಭವೀಕರಿಸಿಕೊಂಡ ರೂಕ್ಷ ಮಾದರಿಗಳು --
ಚರಿತ್ರೆಗಳಾಗಿವೆ ಚಲಾವಣೆಯಿಲ್ಲದೆ;
ಪುರಾಣಗಳಾಗಿವೆ ವಾಸ್ತವತೆಯಿಲ್ಲದೆ.

ಸವೆದೆಲುಬಿನಜ್ಜಿಗಳ ಜೀವೇತಿಹಾಸದ ಹರಕುಹಾಳೆಗಳು;
ವಿಕಾಸಕಣದ ತೆನೆಬಿಡದುಳಿದ ನಿಷ್ಫಲಿತ ಕೂಳೆಗಳು;
ಪ್ರಾಣದವಿಚ್ಛಿನ್ನ ಸರಪಳಿಯ ನಿಸರ್ಗನಿಮಿತ ಕೊಂಡಿಗಳು;--
ಹೆಗ್ಗಡಲನಳೆವ ಈ ನಗೆಪಾಟಲಿನ ಇಂಚುಪಟ್ಟಿಗಳಿಂದ,
ಬಯಲಲ್ಲಿ ಮುಗಿದ ಪೂರ್ವಜರ ಕಾಲುದಾರಿಗಳಿಂದ,
ಮಾನವ್ಯ ಹಿಗ್ಗೀತು ಹೇಗೆ?
ನಾಗರಿಕತೆ ಹೆದ್ದಾರಿ ಹಿಡಿದೀತು ಹೇಗೆ?

ಆದರೂ ಬೇಕು ಈ ನಿರುಪಯುಕ್ತ ನಿಶಾನೆಗಳು--
ಹಂತಹಂತದ ನೆಲೆಗೆ ಹರಳ ಮಿನುಗು;
ಪ್ರಾಚ್ಯದ ಕ್ರಿಯಾಶೀಲ ಸಾಕ್ಷಿಗಳು--
ಪರಂಪರೆಗೆ ಹೊಳೆಯಿಸಲು ಪ್ರಗತಿಯುಲಗು.

ಕೆ. ಎಸ್. ನಿಸಾರ್ ಅಹಮದ್





# ಕೇಶ ಶೃಂಗಾರದಲ್ಲೂ ವೈಖರಿಯುಂಟು

ಲೇಖ. ವೆಂ. ಮು. ಜೋಶಿ
ಚಿತ್ರಗಳು ಬಿ. ಕೇಸರಸಿಂಗ್

ಭಾರತೀಯ ನಾರಿಯರ "ಕೇಶ ಬಂಧನ" ವೈವಿಧ್ಯ ಪೂರ್ಣವಾಗಿದೆ–ವೈಶಿಷ್ಟ್ಯಪೂರ್ಣವಾಗಿದೆ. ಇಂದು ಪೌರ್ವಾತ್ಯರಾಷ್ಟ್ರಗಳಾದ ಬ್ರಹ್ಮದೇಶ, ಬಾಲಿ, ಜಾವಾ ಹಾಗೂ ಜಪಾನುಗಳಲ್ಲಿ ಪ್ರಚಲಿತವಾಗಿರುವ "ಜಡೆ-ಮುಡಿಗಳ" ರಚನೆಗೆ ಮೂಲ ಪ್ರೇರಣೆ ಭಾರತವೇ ಆಗಿದೆ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ 'ಬಾಲ್' ಒಂದು ಹೊಸ ಸ್ಟೈಲ್ ಆಗಿ ಬರುವವರೆಗೂ ಅಲ್ಲಿಯ ಹೆಂಗಳೆಯರ 'ಕುಂತಳ'ಗಳಿಗೆ ಬೆಳೆದಂತೆ ಇಳಿಬೀಳುವ ಒಂದೇ ಗತ್ತು ಗೊತ್ತಿದ್ದುದು. ಅಲ್ಲಿ ಉಂಗುರುಗೂದಲುಗಳು ಸ್ವಾಭಾವಿಕವಾಗಿ ಬೆಳೆದಿದ್ದರೆ, ಯಂತ್ರಗಳ ಸಹಾಯದಿಂದ ಕೂದಲುಗಳಿಗೆ ತಿರುವು–ಮುರುವುಗಳನ್ನು ನೀಡುವ ಫ್ಯಾಶನ್ನು ಬಳಿಕೆಯಲ್ಲಿ ಬಂದಿತು.

ಈ ಫ್ಯಾಶನ್ನೂ ಭಾರತಕ್ಕೆ ಹೊಸದಾಗಿರಲಿಲ್ಲ. ಭಾರತದಲ್ಲಿ ಜಡೆಯನ್ನು ಕೌಶಲ್ಯಪೂರ್ಣವಾಗಿ ಕಟ್ಟುವ ಕಲೆ ಯಾವಾಗ ಬಳಕೆಯಲ್ಲಿ ಬಂದಿತು ಎಂದು ನಿಖರವಾಗಿ ಹೇಳುವದು ಸಾಧ್ಯವಿಲ್ಲವಾದರೂ- ವೇದಕಾಲದಲ್ಲಿ ಈ ಸೌಂದರ್ಯಪೂರ್ಣ ಕಲೆಯನ್ನು ಭಾರತೀಯ ನಾರಿ ಅಳವಡಿಸಿಕೊಂಡಿದ್ದಳು ಎಂಬುದು ನಿಶ್ಚಿತ.

ಮಹಾಭಾರತದಲ್ಲಿ 'ದ್ರೌಪದಿ'ಯ ಮುಡಿಯೇ ಒಂದು ದೊಡ್ಡ ಪ್ರಕರಣವೆನಿಸಿಕೊಂಡಿತು. ಭೀಮ ದುರ್ಯೋಧನನನ್ನು ಹೊಡೆಯುತ್ತಿರುವಾಗ. ಕೌರವೇಶ ತಮಗೆ ಮಾಡಿದ ಒಂದೊಂದು ಅನ್ಯಾಯವನ್ನು ನೆನೆನೆನೆದು ಒಂದೊಂದು ಏಟು ಕೊಡುತ್ತಿದ್ದ ಭೀಮ "ಇದು ಪಾಂಚಾಲಿಯ ಕೇಶ ಪ್ರಪಂಚಕ್ಕೆದು" ಎಂದು ಹೇಳಿಯೇ ಒಂದು ಪ್ರಹಾರವನ್ನು ಮಾಡುತ್ತಾನೆ. ಇದರ–ಮೇಲಿಂದ ಆ ಕಾಲಕ್ಕೇನೆ 'ಜಡೆ' ಒಂದು ವೈಶಿಷ್ಟ್ಯಪೂರ್ಣ ಸ್ಥಾನವನ್ನು ಗಳಿಸಿದ್ದಿತು.

ಜಡೆ – ಮುಡಿಯನ್ನು ಕಟ್ಟುವ – ಸೌಂದರ್ಯಪೂರ್ಣವಾಗಿ ಕಟ್ಟುವ 'ಕಲೆ' ಹರಪ್ಪ–ಮೊಹೆಂಜೋದಾರೋ ಸಂಸ್ಕೃತಿಯಲ್ಲಿಯೇ ಎದ್ದು ಕಾಣುತ್ತದೆ.

'ಸಂಸಾರ'ದ ಕಲ್ಪನೆ ಸಮಾಜದಲ್ಲಿ ರೂಪುಗೊಂಡ ಕಾಲದಲ್ಲಿಯೇ–'ಕೇಶ'ಬಂಧ ಪದ್ಧತಿಯೂ ಅಸ್ತಿತ್ವಕ್ಕೆ ಬಂದಿರಲೇಬೇಕು.

ಸಮಾಜಸ್ವಾಸ್ಥ್ಯದ ದೃಷ್ಟಿಯಿಂದ 'ಕುಟುಂಬ ಸಂಸ್ಥೆ' ಅನಿವಾರ್ಯವೆನಿಸಿದಂತೆ. ಕುಟುಂಬಸ್ವಾಸ್ಥ್ಯಕ್ಕಾಗಿ 'ಕೇಶ-ಬಂಧನಕಲೆ'ಯೂ ಅನಿವಾರ್ಯವೆನಿಸಿತು.

ಸೌಂದರ್ಯ ಆರಾಧನೆ ಸಾಮಾಜಿಕ ಮನ್ನಣೆ ಪಡೆದಂತೆ, ಕೌಶಲ್ಯಪೂರ್ಣ ಕೇಶರಚನೆ ವೈವಿಧ್ಯಪೂರ್ಣವಾಗಿ, ರೂಪುಗೊಳ್ಳತೊಡಗಿತು.

ಈ ಸ್ಪರ್ಧೆಯಲ್ಲಿ ಕರ್ನಾಟಕವೂ ತನ್ನತನವನ್ನೂ ಪ್ರದರ್ಶಿಸಿ, ಭಾರತದ ಇತರ ಪ್ರದೇಶಗಳಿಗೆ ಈ ವಿಷಯದಲ್ಲಿ ತನ್ನ ಕೊಡುಗೆಯನ್ನು ನೀಡಿದೆ.

ಕರ್ನಾಟಕದಲ್ಲಿ ಕೇಶಬಂಧನಗಳ ಪ್ರಾಚೀನ ಪದ್ಧತಿಯನ್ನು ಪ್ರತಿಬಿಂಬಿಸುವ ಹಲವಾರು ಶಿಲಾಮೂರ್ತಿಗಳು ಅಂದಿನ ಶ್ರೇಷ್ಠತೆಗೆ ಸಾಕ್ಷಿಯಾಗಿ ನಿಂತುಕೊಂಡಿವೆ.

ಶ್ರವಣಬೆಳುಗೊಳದಿಂದ ಒಂದು ಮೈಲು ದೂರದಲ್ಲಿರುವ ಜಿನನಾಥಪುರ ಹಳ್ಳಿಯಲ್ಲಿ ಕಲಾಪೂರ್ಣ ಕೇಶರಚನೆಯ ಶಿಲಾಮೂರ್ತಿಗಳು ಹೇರಳವಾಗಿ ನೋಡಲು ಸಿಗುತ್ತವೆ. ಅವುಗಳನ್ನು ನೋಡಿದಾಗ ಕರ್ನಾಟಕದಲ್ಲಿ ಈ ಕೇಶರಚನಾ ಪದ್ಧತಿ, ಅದ್ಭುತ-ಅಪ್ರತಿಮ, ಅನುಪಮ-ಅದ್ವಿತೀಯವಾಗಿತ್ತೆಂದು ಧಾರಾಳವಾಗಿ ಹೇಳಬಹುದು. ಡಮುರುಜಡೆ, ನಾಗಜಡೆ, ಚಾಮರಜಡೆ. ದೋಣಿಮುಲೆ ಜಡೆ, ಜಾರುಜಡೆ ಜಡೆ ತಂಬೂರ ಜಡೆ, ಇನ್ನೂ ಹಲವಾರು 'ಅನಾಮಿಕ' ಜಡೆಗಳನ್ನೂ ಆ ಶಿಲಾಮೂರ್ತಿಗಳಲ್ಲಿ ಕಾಣಬಹುದು.

ಬೊಗಸೆಗಣ್ಣಿನ-ಬಯಕೆ ಹೆಣ್ಣಿನ ಬಲ್ಮೊಲೆಗಳ ಭಾರವನ್ನು ಸಮತೋಲನದಲ್ಲಿಡಲು ಜಡೆಗಳ ವೈವಿಧ್ಯಪೂರ್ಣ ಬಂಧನ ಅವಶ್ಯ ಎಂಬುದನ್ನು ಅವು ಎತ್ತಿ ತೋರಿಸುತ್ತವೆ. ವಾತ್ಸಾಯನನ ಕಾಮಸೂತ್ರದಲ್ಲಿಯೂ 'ಕೇಶಪ್ರಪಂಚ'ಕ್ಕೊಂದು ವಿಶೇಷ ಸ್ಥಾನವಿದೆ.

ಜಿನನಾಥಪುರದಲ್ಲಿ ಒಂದು ಯುಗಲ ಶಿಲಾ–ಮೂರ್ತಿಯಲ್ಲಿ ಹೆಣ್ಣಿನ ಜುಟ್ಟು ಹಿಡಿದ ಗಂಡು ಅವಳ ಚುಂಬನಕ್ಕಾಗಿ ಅಣಿಗೊಂಡು ನಿಂತಿದ್ದಾನೆ. ಆ ಶಿಲ್ಪದಲ್ಲಿ ಗಂಡಿಗೂ ಜಡೆ ಇದೆ. ಹೆಣ್ಣಿಗೂ ಜಡೆ ಇದೆ. ಹೆಣ್ಣಿನ ಜಡೆ ಹಿಡಿದವನೇ ಒಡೆಯ. ತನ್ನ ನಲ್ಲೆಯ ಮಧುರ ಚುಂಬನಕ್ಕಾಗಿ ಅವಳ ಅದುರುತ್ತಿರುವ ಅಧರಗಳ ಮಿಡಿತಕ್ಕೆ ಜಡೆಯ ಹಿಡಿತ ಅವನಿಗೆ ಅನಿವಾರ್ಯವೆನಿಸಿದೆ, ಉತ್ತುಂಗ ಶಿಖಿ ಊರ್ಧ್ವ ಉರೋಜ ಪ್ರಮಾಣಬದ್ಧ ನಿತಂಬಗಳು ಈ ಶಿಲ್ಪದ ವೈಶಿಷ್ಟ್ಯವಾಗಿವೆ.

ಹೆಣ್ಣಿನ ಸೌಂದರ್ಯಕ್ಕೆ ಕೇಶಸಂಭಾರ ವಿಲಕ್ಷಣ ಕಳೆಯನ್ನು ಕೊಡಬಲ್ಲುದು ಎಂಬುದನ್ನು ಈ ಶಿಲಾಮೂರ್ತಿಗಳು 'ಮೂಕ' ಧ್ವನಿಯಲ್ಲಿಯೇ ಸಾರಿ ಹೇಳುತ್ತವೆ. ಹಳೇಬೀಡು ಬೇಲೂರುಗಳಲ್ಲಿರುವ ಶಿಲಾಬಾಲಿಕೆಯ 'ಕೇಶಬಂಧನ' ಸ್ಟೈಲ್ ತುಂಬಾ ಮೋಹಕವೆನಿಸಿವೆ. ನಾಗಕನ್ನಿಕೆಯ 'ಕಡಲ ಕುಣಿತದ' ಜಡೆ ಇನ್ನೂ ನಿತ್ಯನೂತನವಾಗಿದೆ. ಒಂದಿಲ್ಲೊಂದು ದಿನ ಅದು ಹೊಸ ಫ್ಯಾಶನ್ ಆಗಿ ಬಳಕೆಯಲ್ಲಿ ಬರುವ ಅವಕಾಶವಿದ್ದೇ ಇದೆ.

ವಿಜಯನಗರದ ಸಾಮ್ರಾಜ್ಯದ ಗತವೈಭವವನ್ನು ಸಾರುವ ಹಲವಾರು ಶಿಲಾಪ್ರತಿಮೆಗಳಲ್ಲಿ 'ನಾರಿಕೇಳ ಜಡೆ' ಇದು ಅತ್ಯಾಧುನಿಕ ಸೌಂದರ್ಯ ಪದ್ಧತಿಗಳಲ್ಲಿ ಶೃಂಗೇರಿಯ ವಿದ್ಯಾಶಂಕರ ದೇವಸ್ಥಾನದಲ್ಲಿಯ ಹೊರಾಂಗಣದಲ್ಲಿಯ ಶಿಲಾನೃತ್ಯಬಾಲಿಕೆಯ ತುರಾಯಿ 'ತುರುಬು' ಇಂದು ಪೌರ್ವಾತ್ಯ ರಾಷ್ಟ್ರಗಳಿಗೆ ಹೊಸ ಪ್ರಚೋದನೆಯನ್ನು ನೀಡಿದೆ.

ಕೋಣಾರ್ಕ, ಲೇಪಾಕ್ಷಿಗಳಲ್ಲಿಯ ಶಿಲ್ಪ ಹಾಗೂ ಭಿತ್ತಿಚಿತ್ರಗಳಲ್ಲಿ ಅದ್ಭುತ-ರಮ್ಯ ಕೇಶ ರಚನೆ ಅದ್ವಿತೀಯವೆನಿಸಿವೆ.

ಇವೆಲ್ಲವುಗಳಿಗೆ ತೀರ ಭಿನ್ನವಾಗಿ ಕಾಣುವ ಕೇಶ ರಚನೆ ಎಂದರೆ. ಅಜಂತಾ ಗುಹೆಗಳಲ್ಲಿಯ ಭಿತ್ತಿಚಿತ್ರಗಳು. 'ಸಡಿಲು ಜಡೆ' ಆ ಚಿತ್ರಗಳ ವೈಶಿಷ್ಟ್ಯವಾಗಿದೆ.

ತರುಣಿಯ ಶುದ್ಧ ಸೌಂದರ್ಯದ ಒಂದು 'ಸಾಧನ' 'ಕೇಶ ರಚನೆ' ಎಂಬುದನ್ನು ಗಮನಿಸಿದ ನಮ್ಮ ಪೂರ್ವಿಕರು ಅದರ ಕಟ್ಟುಪಾಡಿಗಾಗಿ ಎಷ್ಟೊಂದು ಕಷ್ಟಪಟ್ಟಿರಬೇಕೆಂಬುದನ್ನು ಈ ಶಿಲೆಗಳ ಮೂಲಕ ನಾವು ಊಹಿಸಿಕೊಳ್ಳಬೇಕಾಗಿದೆ. 'ಕೇಶ ಪ್ರಪಂಚ'ದ ಕತೆ, ಹೇಳುವದೆಂದರೆ, ಕೊಡದೊಳಗಷ್ಟು ನಿಲ್ಲುವದು ಸಮುದ್ರ ಜಲಂ ಎಂದು ವ್ಯಥೆಪಟ್ಟಂತೆ!

ಮುಡಿಗಳ ಮುಗಿಯದ ಕತೆ–ಅಳತೆಗೆ ನಿಲುಕದಷ್ಟು ವಿಶಾಲ.



## ಚಿತ್ರಗಳು

(೧) ಕೋಣಾರ್ಕದಲ್ಲಿಯ ಶಿಲ್ಪ: [illegible] ಭಾರದಿಂದ ಬಳಕುತ್ತಿರುವ ದೇಹಕ್ಕೊಂದು ಸಮತೋಲನ ತರುವುದಕ್ಕಾಗಿ ತುರುಬು ಗಂಟು ತಂಬೂರಿ ಜಡೆಯಾಗಿ ಕಂಗೊಳಿಸುತ್ತದೆ.

(೨) ಒಡಿಸ್ಸಾದ ಭುವನೇಶ್ವರದಲ್ಲಿಯ ಶಿಲ್ಪ: ಮುಖ ತ್ರಿಕೋಣ ತಲೆಯ ಮೇಲಿನ ಕೇಶಪ್ರಪಂಚ–ಕೇಶ ಸಂಭಾರ ಪರ್ವತದಡಿಯಲ್ಲಿಯ ಶಾಲ್ಮಲಿಗಳಂತೆ ಶೋಭಿಸುತ್ತವೆ. ಅಂತೆಯೇ ಅದು ಶಾಲ್ಮಲ ಜಡೆ ಎಂದು ಕರೆಸಿಕೊಂಡಿದೆ.

೩) ಜಿನನಾಥಪುರ: ದರ್ಪಣ ಕನ್ನಿಕೆಯ ಲಲಾಟದಲ್ಲಿ ಗುಂಗುರುಗೂದಲಗಳ ಚೆಲ್ಲಾಟವಿದೆ.

(೪) ಹಳೇಬೀಡು ನಾಗಕನ್ನಿಕೆಯ ಕಡಲ ಕುಣಿತದ ಜಡೆ.

(೫) ಅಜಂತಾ. ಗುಹೆಯಲ್ಲಿಯ ಶಿಲಾಪ್ರತಿಮೆ ಹಣ್ಣಿನ ಗೊಂಚಲೋಪಾದಿಯಲ್ಲಿ ಗುಂಗುರುಗೂದಲುಗಳ ಕೇಶಸಂಭಾರ.

(೬) ಹಂಪೆಯ ಶಿಲಾಬಾಲಿಕೆ: ನಾರಿಕೇಳ ಕೇಶ ಮುಡಿಯಲ್ಲಿ ಮೂಡಿ ನಿಂತಿರುವಳು.

(೭) ಜಿನನಾಥಪುರದ ಶಿಲ್ಪಕಲೆ: ತನ್ನ ನಲ್ಲೆಯ ಮಧುರ ಚುಂಬನಕ್ಕಾಗಿ ಹಾತೊರೆಯುವ ಪ್ರಿಯತಮ ಪ್ರೇಯಸಿಯ ಮುಡಿಯ ಹಿಡಿದದ್ದು.

(೮) ಜಿನನಾಥಪುರದ ಶಿಲ್ಪ: ಚಾಮರ ಜಡೆಯ ಗುಂಗುರು ಮುಂಗುರುಳುಗಳು ಮುಖಕ್ಕೊಂದು ವಿಶೇಷ ಕಳೆಯನ್ನು ನೀಡಿವೆ.

(೯) ಜಿನನಾಥಪುರದ ಶಿಲ್ಪ: ತರುಣಿಯ ತಲೆಯ ಮೇಲಿನ ಜಡೆಗಳ ಮಧ್ಯದಿಂದ ಇಳಿದು ಬರುವ ಕೇಶರಾಶಿ, ಆಕಾಶದಿಂದ ಭೂತಳಕ್ಕಿಳಿಯುವ ಗಂಗೆಯ ನೆನಪು ಮಾಡಿಕೊಳ್ಳುತ್ತದೆ.

(೧೦) ಶೃಂಗೇರಿಯ ಶಿಲ್ಪ. ವಿದ್ಯಾಶಂಕರ ದೇವಸ್ಥಾನದ ಹೊರಾಂಗಣದಲ್ಲಿರುವ ತುರಾಯಿ ತುರುಬನ್ನು ಕಟ್ಟಿನಿಂತ ಶಿಲಾನೃತ್ಯಬಾಲಿಕೆ.

(೧೧) ಅಜಂತಾ ಶಿಲ್ಪ: ಎಡಗಡೆಗೆವಾಲಿಸಿ ಜಡೆ ಪ್ರದರ್ಶಿಸುವ ತರುಣಿ. ಒರ್ವಳು ಮುಂಗುರುಳನ್ನು ಪ್ರದರ್ಶಿಸಿದ್ದಾಳೆ.

(೧೨) ಜಗನ್ನಾಥಪುರದಲ್ಲಿಯ ಮತ್ತೊರ್ವ ಶಿಲಾತರುಣಿ: ತಲೆಯ ಮೇಲಿನ ಡಮರು ಜಡೆ ಅವಳ ಗಾಂಭೀರ್ಯಕ್ಕೆ ಮೆರುಗನ್ನು ಇತ್ತಿದೆ.

(೧೩) ಶ್ರವಣ ಬೆಳಗೊಳದ ಶಿಲ್ಪಕಲೆ. ಇಲ್ಲಿಯ ಜಿನನಾಥ ಹಳ್ಳಿಯಲ್ಲಿರುವ ಶಿಲಾಪ್ರತಿಮೆಗಳೆಲ್ಲಾ ಕೇಶ ಶೃಂಗಾರ ಸ್ಪರ್ಧೆಗೆ ನಿಂತಂತಿದೆ. ಇಗೋ ಈ ತರುಣಿ 'ನಾಗಜಡೆ'ಯಲ್ಲಿ ನಿಸ್ಸೀಮಳು.

(೧೪) ಹಂಪೆಯ ಮಂಟಪದ ಮತ್ತೊಬ್ಬ ಶಿಲಾಬಾಲೆ: ಇವಳು ನಾರಿಕೇಳ ಜಡೆಯ ಕನ್ನಿಕೆ.

(೧೫) ಕೋಣಾರ್ಕದ ಶಿಲ್ಪತರುಣಿ: ಇವಳ ಬೆನ್ನ ಮೇಲಿರುವ ಸರ್ಪಗಂಟು ಇವಳ ಮುಖಕ್ಕೆ ಮತ್ತಷ್ಟು ಮೆರುಗು ಕೊಟ್ಟಿದೆ.

(೧೬) ಬೇಲೂರಿನ ದರ್ಪಣ ಕನ್ನಿಕೆಯ ಕೇಶ ಪ್ರಪಂಚವನ್ನು ಅಲಂಕರಿಸಿದ ವರ್ತುಲಾಕಾರದ ಒಡವೆ.

(೧೭) ಬೊಗಸೆಗಣ್ಣಿನ ಬಯಕೆಯ ಹೆಣ್ಣಿನ ಬಲ್ಮೊಲೆಗಳ ಭಾರವನ್ನು ಸಮತೂಕದಲ್ಲಿಡಲು ಅವಳ ಜಡೆ ಎಡಕ್ಕೆ ಇಡಿಯಾಗಿ ಇಳಿದಿದೆ.

(೧೮) ಅಜಂತಾ ಮಾದರಿಯ ಮುಡಿಯಲ್ಲಿಯ ಶಿಲಾಬಾಲಿಕೆ

(೧೯) ಕೇಶಭಾರ ತಾಳದೇ ಅರ್ಧ ಮುಚ್ಚಿರುವ ಕಣ್ಣೋ ಏನೋ! ಅಂತೂ ಇದೇ ಶೃಂಗಾರ ಅವಳಿಗೆ ಶೋಭೆಯನ್ನು ತಂದಿದೆ.

(೨೦) ಒಂದೇ ಮುಖಗಳಾದರೂ ಜಡೆಯಲ್ಲಿ ಮೂರು ವಿಧ. ಅಜಂತಾ ಶಿಲ್ಪ ಕಲೆ ಮಾದರಿ.

(೨೧) ಲೇಪಾಕ್ಷಿಯಲ್ಲಿಯ ಭಿತ್ತಿಚಿತ್ರ. (ಆಂಧ್ರ ಮಾದರಿ) ಉನ್ನತ ಜಡೆ ಉದ್ದನೇಣಗಳೇ ಇದರ ವೈಶಿಷ್ಟ್ಯ.

(೨೨) ಕುಂಭಕೋಣದ ಶಿಲ್ಪಕಲೆ; ದಕ್ಷಿಣ ಭಾರತದ ಕೇಶಾಲಂಕಾರದ ವೈಶಿಷ್ಟ್ಯವನ್ನು ತೋರುತ್ತಿರುವ ತುರುಬಿನ ತರುಣಿ.

(೨೩) ಹೆಗಲ ಮೇಲಿಳಿದು ಬಿದ್ದ ಶೃಂಗಾರ ಜಡೆ. ಅಜಂತಾ ಶಿಲ್ಪ ಕಲೆ.


Kirloskar engines are contributing immensely to the nation's progress in the agricultural, industrial, marine and defence sectors.

The Kirloskar Foundation; Kailas Trust and Dnyan Prabodhini project in rural areas; The 'Beautiful Poona' scheme and their encouragement to education and sport, show their concern for industrial and cultural growth.

Kirloskar rededicate themselves to the betterment of the Indian people, forever following the path lighted up by the founder, Laxmanrao Kirloskar, seventy years ago.

ONWARD ON THE ENLIGHTENED PATH






KIRLOSKAR OIL ENGINES LTD.,
13, LAXMANRAO KIRLOSKAR ROAD, POONA-411 003.

STUSA





ಊರಿಗೆ ಪ್ಲೇಗು ಬರುತ್ತಲೆ ಎಲ್ಲರೂ ಹೊಳೆಯಾಚೆ ಗುಡಿಸಲು ಹಾಕಿಕೊಂಡು ಇರತೊಡಗಿದರು. ಆದರೆ ಅಚ್ಚಂದಿ ಹಾಗು ಅವಳ ಮಗ ತಮ್ಮಾಭಟ್ಟ ಮಾತ್ರ ಊರು ಬಿಡದೆ ಕೂತರು. ಒಂದು ದಿನ ತಮ್ಮಾಭಟ್ಟನಿಗೂ ಜ್ವರ ಬಂದಿತು. ಅದು ಕಡಿಮೆಯಾಗಲಿಲ್ಲ. ಎರಡುದಿವಸಗಳನಂತರ ಅಚ್ಚಂದಿ ಊರವರೊಂದಿಗೆ ಮನೆಗೆ ಬಂದಾಗ ತಮ್ಮಾಭಟ್ಟನ ಹೆಣವು ಕಿಡಕಿಯಲ್ಲಿ ಹಣಕಿ ಹಾಕುತ್ತಿತ್ತು.

---

# ಹೆಮರಬೇಡಿ

• ಎಂ. ಕೆ. ಇಂದಿರಾ •

ಒತ್ತಿಟ್ಟನೆ ಚೀರಿಕೊಂಡ ನಾಗಾಭಟ್ಟ! ಅವನ ಹಿಂದೆ ನಿಂತ ಮುದುಕ ಸುಬ್ಬಾಜೋಯಿಸರು; ಜೌಕಿಮನೆ ಸಂಕಪ್ಪ; ಆಂಜೆ ಶೆಟ್ಟಿ; ಶೀರುಡಿಕೆ ಶ್ರೀನಿವಾಸ ಮತ್ತೂ ಇನ್ನೂ ಮೂರು ನಾಕು ಜನ ಮೆಟ್ಟಿ ಹಿಂದೆ ಸರಿದರು.

ನೋಡುವುದೇನು! ಕೋರೆಹಲ್ಲಿನ, ಗೆಡ್ಡೆಗಣ್ಣಿನ, ಅಮಾವಾಸ್ಯೆ ಬಣ್ಣದ ತಮ್ಮಾಭಟ್ಟನ ಹೆಣ ಮರದ ಕಂಬಿಯ ಕಿಟಕಿಯಲ್ಲಿ ಮುಮ್ಮಾಲೆಯಾಗಿ ಎದ್ದು ನಿಂತಿದೆ!

ಕೈಕಾಲು ಬಡಿಯುತ್ತ, ಅದುರುವಾಯಿ ಬಂದು ಜ್ಞಾನ ತಪ್ಪಿ ಬಿದ್ದಿದ್ದ ನಾಗಾಭಟ್ಟನನ್ನು ಅಲ್ಲಿಯೇ ಬಿಟ್ಟು ಎಲ್ಲರೂ ಓಟಕಿತ್ತಿದ್ದೇ!

ಹೀಗಾಗಲು ಕಾರಣವೇನೆಂದು ನೋಡುತ್ತಾಳೆ ತಮ್ಮಾಭಟ್ಟನ ಅಮ್ಮ ಅಚ್ಚಂದಿ! ತನ್ನ ಮಗನ ಹೆಣ ಕಿಟಕಿಯಲ್ಲಿ ಅಡ್ಡಡ್ಡವಾಗಿ ನಿಂತು ರಾಕ್ಷಸನಂತೆ ಗೆಡ್ಡೆ ಗಣ್ಣು ಗಿರಿಗಿರನೆ ತಿರುಗಿಸುತ್ತಿದ್ದೆ.

"ಅಯ್ಯಯ್ಯಪ್ಪೋ"–ಎಂದು ಲಬಲಬ ಬಾಯಿ ಹುಯ್ಯುಕೊಳ್ಳುತ್ತ ಹಿಂದಿರುಗಿ ಓಡುತ್ತಿರುವಾಗಲೇ ಅಚ್ಚಂದಿಯ ಸೀರೆ ಒದ್ದೆಯಾಗಿತ್ತು. ಬಂದವರೆಲ್ಲ ಥರಥರ ನಡುಗುತ್ತಿದ್ದಾರೆ. ಒಬ್ಬರ ಬಾಯಲ್ಲೂ ಸ್ವರ ಹೊರಡದಿದ್ದರೂ ಒಬ್ಬರ ಮುಖ ಒಬ್ಬರು ಭೀತಿಯಿಂದ ನೋಡುತ್ತಿರುವಾಗಲೇ ನಡೆದ ಸಂಗತಿ ಎಲ್ಲರಿಗೂ ಅರ್ಥವಾಯಿತು. ಮುಂದೇನು ಅನ್ನುವುದೇ ಬೆಟ್ಟದ ಗಾತ್ರದ ಪ್ರಶ್ನೆಯಾಗಿ ಅವರೆಲ್ಲರ ಮುಂದೆ ನಿಂತಿತು,

ವೈಶಾಖಮಾಸದಲ್ಲಿಯೇ ಮಲೆನಾಡಿನ ಹಳ್ಳಿಗಳ ಕಡೆ ಹರಡಿಕೊಂಡ ಪ್ಲೇಗು ಚಿಬ್ಬಲಗುಡ್ಡೆ ಗ್ರಾಮವನ್ನೂ ಬಿಡಲಿಲ್ಲ. ಅಲ್ಲಿ ಹತ್ತಾರು ಬ್ರಾಹ್ಮಣರ ಮನೆಗಳು ಇತರೆಯವರವು ಹತ್ತೆಂಟು ಇದ್ದವು. ಗ್ರಾಮದ ಒಂದು ಬದಿಗೆ ದಟ್ಟವಾದ ಕಾಡು, ಮತ್ತೊಂದು ಬದಿಗೆ ಹೊಳೆ. ಮಳೆಗಾಲದಲ್ಲಿ ಮಾತ್ರ ದೋಣಿ ಹೂಡಬೇಕಾದ ಹೊಳೆ, ಬಾಕಿದಿನಗಳಲ್ಲಿ ಹೆಚ್ಚೆಂದರೆ ತೊಡೆಮುಳುಗ ನೀರಿನಲ್ಲಿ ಹೊಳೆದಾಟಬಹುದು; ಬೇಸಿಗೆಯಲ್ಲಂತೂ ಮೊಳಕಾಲಿನಷ್ಟೇ ನೀರು.

ಊರಿಗೆ ಪ್ಲೇಗು ಬಂತೆಂದು ಎಲ್ಲ ಮನೆಗಳವರೂ ಹೊಳೆದಾಟಿ ಶೆಡ್ಡು ಹಾಕಿಕೊಂಡು ದನಕರುಗಳನ್ನು ಹೊಡೆದುಕೊಂಡು ಹೋದರೂ ಹಾಳುಸುರಿಯುತ್ತಿದ್ದ ಬೋಳುಗ್ರಾಮದಲ್ಲಿ ದೆವ್ವಗಳಂತೆ ಉಳಿದುಕೊಂಡವರು ಅಚ್ಚಂದಿ, ತಮ್ಮಾಭಟ್ಟ ಇಬ್ಬರೇ.

ಎಪ್ಪತ್ತುವರ್ಷಗಳ ಹಿಂದೆ ಆ ಕುಗ್ರಾಮಗಳಲ್ಲಿ ಒಂದು ಆಸ್ಪತ್ರೆಯೇ? ಡಾಕ್ಟರೇ? ಒಂದೂ ಕಾಣೆ. ಎಲ್ಲರ ಮನೆಯ ಅಜ್ಜ-ಅಜ್ಜಿಯರೇ ಆ ಹಳ್ಳಿಗಳ ಡಾಕ್ಟರುಗಳು. ನಾಟಿ, ಆಯುರ್ವೇದ, ಯೂನಾನಿ ಔಷಧಿಗಳು ಜಾರಿಯಲ್ಲಿದ್ದ ಕಾಲ. ಡಾಕ್ಟರಿಲ್ಲವೆಂದು ಯಾರೂ ಅಲ್ಪಾಯುಗಳಾಗಿದ್ದಿಲ್ಲ. ಆದರೆ ಮಾರಿ ರೋಗಗಳು ಬಂದಾಗಲೇ ಜನರು ಕಂಗಾಲಾಗುತ್ತಿದ್ದದ್ದು ಮತ್ತು ಒಂದೊಂದು ಸಾರಿ ಇರುವೆಗಳಂತೆ ಸತ್ತದ್ದೂ ಉಂಟು.

ಚಿಬ್ಬಲಗುಡ್ಡೆ ಗ್ರಾಮದಲ್ಲಿ ಒಬ್ಬಿಬ್ಬರು ಮುದುಕರು ಸತ್ತಕೂಡಲೇ ಎಲ್ಲಾ ಮನೆಯವರೂ ಮನೆಯ ಬಾಗಿಲಿಗೆ ಭದ್ರವಾಗಿ ಬೀಗಹಾಕಿಕೊಂಡು ಹೊಳೆಯಾಚೆ ಶೆಡ್ಡು ಹಾಕಿದರು. ಮೊದಲಿನಿಂದಲೂ ವಕ್ರಬುದ್ಧಿಯ ಅಚ್ಚಂದಿ, ಅವಳ ಮಗ ತಮ್ಮಾಭಟ್ಟ ಇಬ್ಬರೇ!

"ಮಾಡೂದಕ್ಕೆ ಕಸುಬಿಲ್ಲ ಇವರಿಗೆಲ್ಲ. ಅದೇನು ಮಾಡುತ್ತೆ ನಮ್ಮನ್ನು, ನೋಡಿಯೇ ಬಿಡಾಣಂತೆ ಒಬ್ಬರಿಗಿಂತ ಒಬ್ಬರು ಹೆದರು ಪುಕ್ಕರು. ಸಾಯದೆ ಸಾವಿರವರ್ಷ ಗೂಟ ಬಡಕಂಡು ಕೂತಿರತಾರ ಇವರೆಲ್ಲ?"

–ಎಂದು ಜಂಭ ಕೊಚ್ಚಿಕೊಂಡು ಊರು ಬಿಡದೆ ಕೂತರು.ನಾಲ್ಕು ದಿನವಾಯಿತು,ವಾರವಾಯಿತು.ಪ್ಲೇಗಿನ ಅಬ್ಬರ ತುಸು ಕಡಿಮೆಯಾದಂತೆ ಕಂಡಿತು.ಊರು ಬಿಟ್ಟು ಹೋದ ಎಲ್ಲರ ಮನೆಯ ಹಿತ್ತಲಿನ ತರಕಾರಿ ಕಿತ್ತು ತಂದು ತಾಯಿ ಮಗ ಅಚ್ಚುಕಟ್ಟಾಗಿ ಅಡಿಗೆ ಮಾಡಿ ತಿಂದು ತೇಗಿದರು. ಎಲ್ಲರ ಮನೆಯ ಹಲಸಿನಹಣ್ಣು, ಮಾವಿನ ಹಣ್ಣು ಇವರ ಹೊಟ್ಟೆಗಾಯಿತು.

ಜೇಷ್ಠಮಾಸದ ಜೊತೆಗೇ ಮಳೆಯೂ ಪ್ರಾರಂಭವಾಯಿತು. ಇನ್ನೇನು ಪ್ಲೇಗು ಪೂರ್ತಿ ಅಡಗಿತು. ಊರಿಗೆ ಹಿಂದಿರುಗೋಣ ಎಂದು ಅಗ್ರಹಾರದವರು ಹವಣಿಸುತ್ತಿರುವಾಗಲೇ ಇತ್ತ ಅಚ್ಚಂದಿಯ ಮಗ ತಮ್ಮಾಭಟ್ಟ ಜ್ವರ ಬಂದು ಮಲಗಿದ. ಅವನು ಎಂದೂ ಕಾಹಿಲೆ ಮಲಗಿದ ನೆನಪು ಅಚ್ಚಂದಿಗಿಲ್ಲ. ಏಳೆಂಟು ಮಕ್ಕಳು ಸತ್ತು ಉಳಿದ ಈ ತಮ್ಮಾಭಟ್ಟ ಚಿಕ್ಕಂದಿನಿಂದಲೂ ರಾಕ್ಷಸನಂತೆ ತಿಂದು ಶನಿದೇವನಂತೆ ಬೆಳೆದ. ವಾಸಕ್ಕೆ ಮನೆ, ತಿನ್ನಲು ಸಾಕಷ್ಟು ಭತ್ತ ಬರುತ್ತಿದ್ದದ್ದರಿಂದ ಸೋಮಾರಿತನ ಅವನ ಹುಟ್ಟುಗುಣವಾಗಿತ್ತು. ಜೊತೆಗೆ ಅಮ್ಮನ ಮಗುವಾಗಿ ವಕ್ರ, ನೀಚ ಬುದ್ಧಿಗಳು ಮಾತ್ರ ಬೆಳೆದುಬಂದವು. ಹಳ್ಳಿಯಲ್ಲಿದ್ದ ಒಂದು ಕೂಲಿ ಮಠದಲ್ಲಿ ನಾಲ್ಕುದಿನ ಮರಳ ಮೇಲೆ ಬೆರಳು ಆಡಿಸಿದ್ದೇ ಅವನ ಭಾರೀ ವಿದ್ಯಾಭ್ಯಾಸ, ಉಪನಯನವಾದ ನಂತರ ಅವನು ಕಲಿತದ್ದು ಚೂರುಪಾರು ಮಂತ್ರ. ಮುಖ್ಯವಾಗಿ ಶ್ರಾದ್ಧದ ಮಂತ್ರಕಲಿತಿದ್ದ ಅಷ್ಟೇ.ಕುಲೀನ ಮನೆತನದ ಒಂದು ನತದೃಷ್ಟ ಹೆಣ್ಣು ಅವನ ಹೆಂಡತಿಯಾಗಿ ಬಂದಳು. ಅವಳಿಗೂ ಎರಡು ಮಕ್ಕಳು ಸತ್ತು ಮೂರನೇ ಬಾಣಂತಿಯಾಗಿದ್ದಾಗ ಏನೋ ಕುಂಟು ತಪ್ಪುಹುಡುಕಿ ತಾಯಿ ಮಗ ಸೇರಿ ಅವಳನ್ನು ಹೊಡೆಯುತ್ತಿರುವಾಗ ಸೂಕ್ಷ್ಮಸ್ಥಳಕ್ಕೆ ಏಟು ಬಿದ್ದು ಅವಳು ಸತ್ತಾಗ ಸದ್ದು-ಗದ್ದಲವಿಲ್ಲದೆ ರಾತ್ರೋ ರಾತ್ರಿ ಸೊಸೆಯನ್ನು ಹೊಳೆದಂಡೆಯ ಬಿಲ್ಪತ್ರೆ ಮರಕ್ಕೆ ನೇಣು ಹಾಕಿ ಬೆಳಗಾಗುವುದರಲ್ಲಿ ಲಬೋಲಬೋ ಎಂದು ಎದೆ ಕುಟ್ಟಿಕೊಂಡು ಅತ್ತು. "ನನ್ನ ಸೊಸೆಗೆ ಇಪ್ರೀತ ಹೊಟ್ಟೆ ನೋವು ಬರ್‍ತಿತ್ತು. ಎಷ್ಟು ಓಸ್ತೀ ಮಾಡಿದ್ರೂ ವಾಸಿ ಆಗ್ಲಿಲ್ಲ. ಅದನ್ನು ತಡೀಲಾರ್ದೆ ನೇಣು ಹಾಕ್ಕಂಡು ಸತ್ಲು" ಎಂದು ಒಂದು ಕಥೆಕಟ್ಟಿ ನಾಟಕವಾಡಿದಳು ಅಚ್ಚಂದಿ.

ಆದರೆ ಊರಿನವರು ಯಾರೂ ಈ ಮಾತನ್ನು ನಂಬಿರಲಿಲ್ಲ. ಸೊಸೆಯ ಸದ್ಗುಣ ಎಲ್ಲರಿಗೂ ಗೊತ್ತು. ಅವಳಿಗೆ ಹೊಟ್ಟೆನೋವು ಇರಲಿಲ್ಲವೆಂದೂ ಗೊತ್ತು. ಮತ್ತು ಅಕ್ಕನನ್ನು ಅವಳ ಗಂಡ, ಅತ್ತೆ ಹೊಡೆಯುತ್ತಿದ್ದಾಗ ಹೆದರಿ ಕಂಬಳಿಯ ಮುಸುಕಿನಲ್ಲಿ ಬಿಕ್ಕುತ್ತಿದ್ದ ಸೊಸೆಯ ತಮ್ಮ ಎಂಟು ವರ್ಷದ ಶೇಷನಿಂದ ಗುಟ್ಟಾಗಿ ಎಲ್ಲರೂ ತಿಳಿದುಕೊಂಡಿದ್ದರು. ಅವಳು ಕಿರಿಚಿದರೆ ಅಕ್ಕಪಕ್ಕದ ಮನೆಗೆ ಗೊತ್ತಾಗುವುದೆಂದು ಅವಳ ಬಾಯಿಗೆ ಬಟ್ಟೆ ತುರುಕಿ ಹೊಡೆದುಕೊಂದಿದ್ದರು. ಮತ್ತೆ ತಿಂಗಳಲ್ಲೇ ಆ ಎಳೇ ಮಗುವೂ ತೀರಿಕೊಂಡಿತು. ಶೇಷ ತನ್ನ ತಾಯಿಯ ಹತ್ತಿರ ಹೊರಟುಹೋದ.

ಮಗನಿಗೆ ಮತ್ತೊಂದು ಮದುವೆಮಾಡಬೇಕೆಂದು ಅಚ್ಚಂದಿ ಬಹಳ ಹೊಂಚುಹಾಕಿದಳು. ಅವರ ನಿಜರೂಪ ಕಂಡವರು ಯಾರೂ ತಮ್ಮಾಭಟ್ಟನಿಗೆ ಹೆಣ್ಣುಕೊಡಲು ಬರಲಿಲ್ಲ.

ಸೊಸೆ ಸತ್ತು ಹತ್ತುವರ್ಷಗಳು ಕಳೆದರೂ ಈ ತಾಯಿ-ಮಗ ಗುಂಡುಗೂಳಿಗಳಂತೆ ಇರುವುದನ್ನು ಕಂಡವರು!

"ಏನು ಕಲಿಕಾಲವಪ್ಪ! ಇಂಥಾ ಚಾಂಡಾಲತನ ಮಾಡಿಯೂ ಇವರು ಗುಂಡುಕಲ್ಲಿನಂತಿದ್ದಾರೆ. ಪಾಪ-ಪುಣ್ಯಕ್ಕೆ ಹೆದರೋರಿಗೇ ಇಲ್ಲದ ಕಷ್ಟಗಳು!"

–ಎಂದು ಆಶ್ಚರ್ಯಪಡುತ್ತಿದ್ದರು. ಆದರೆ ಪಾಪದ ಪ್ರತಿಫಲ ಎಂದಾದರೂ ತಿರುಗಿ ಬಿದ್ದೇಬೀಳುತ್ತದೆ ಎಂಬುದಕ್ಕೆ ನಿದರ್ಶನವಾಗಿ ತಮ್ಮಾಭಟ್ಟ ಕಾಹಿಲೆ ಮಲಗಿದ. ಆ ಗಳಿಗೆಗೆ ಅಚ್ಚಂದಿ ಬೆಚ್ಚಿದಳಾದರೂ ಯಮಗುಂಡಿಗೆಯ ಹೆಂಗಸು! ಊರು ಬಿಟ್ಟವರನ್ನು ಹಾಸ್ಯಮಾಡಿದ ತಾವು ಈಗ ಅವರನ್ನು ಕರೆಯುವುದು ಅವಮಾನ. ಎಂಟು ಹತ್ತು ದಿನದಿಂದ ಸಿಕ್ಕಾಪಟ್ಟೆ ಊಟ-ತಿಂಡಿಮಾಡಿ ಅಜೀರ್ಣವಾಗಿದ್ದೀತು. ಹಲಸಿನಕಾಯಿ, ಬಾಳೆಕಾಯಿ, ಕುಂಬಳಕಾಯಿ ಪಲ್ಯಗಳನ್ನು ಎಮ್ಮೆ ತಿಂದಂತೆ ತಿಂದಿದ್ದ. ಅದರದ್ದೇ ಜ್ವರ, ಪ್ಲೇಗು ಪೂರಾ ಕಮ್ಮಿಯಾಗಿದೆ ಎಂದು ತಾನೇ ಧೈರ್ಯಮಾಡಿಕೊಂಡು ಮೆಣಸು, ಶುಂಠಿಹಾಕಿ ಕಟ್ಟಿಗೆ ಕಷಾಯ ಮಾಡಿ ಬಿಸಿಬಿಸಿಯಾಗಿ ಕುಡಿಸಿದಳು.

ಆದರೆ ಬೆಳಗಾಗುವುದರಲ್ಲಿ ತಮ್ಮಾಭಟ್ಟನ ನರಳಾಟ ಜಾಸ್ತಿಯಾಗಿತ್ತು. ಮತ್ತು ಅವನ ತೊಡೆಯ ಸಂದಿಯಲ್ಲಿ ಬಾಳೆಕಾಯಿ ಗಾತ್ರ ಪ್ಲೇಗಿನ ಗೆಡ್ಡೆ ಕಾಣಿಸಿಕೊಂಡಿತು. ಅಚ್ಚಂದಿ ಹೌಹಾರಿದಳು. ಆದರೆ ಮಾಡುವುದೇನು? ಇಡೀ ಗ್ರಾಮಕ್ಕೆ ತಾಯಿ-ಮಗ ಇಬ್ಬರೇ. ತನಗೆ ತಿಳಿದ ಔಷಧಿ ಮಾಡಿದಳು. ಯಾರನ್ನಾದರೂ ಕರೆದುಕೊಂಡು ಬರೋಣವೆಂದರೆ ಅತ್ತ ನಂಬಳ, ಮೇಳಿಗೆ ಕಡೆ ನಾಲ್ಕಾರು ಮೈಲು ಹೋಗಬೇಕು. ಇತ್ತ ಹೊಳೆದಾಟಿ ಬರಬೇಕೆಂದರೆ ಕುರುವಳ್ಳಿ ಹತ್ತಿರ ಬರಬೇಕು. ಅದೂ ದೂರವೇ. ಬಾಕಿಯವರು ಉಳಿದ ಶೆಡ್ಡಿನ ಕಡೆ ಹೋಗಲು ಅವಮಾನ, ಹೆದರಿಕೆ. ಅಲ್ಲದೆ ಜ್ವರ ಬಂದ ಮಗನನ್ನು ಇಡೀ

ದೀಪಾವಳಿಯು ನಮ್ಮೆಲ್ಲ ಗ್ರಾಹಕರಿಗೂ ಹಿತಚಿಂತಕರಿಗೂ ಸುಖಪ್ರದವಾಗಲಿ!

ಅವ್ಯಾಹತವಾಗಿ ಬೆಳಗಾವಿ ಜನತೆಗೆ ಅಖಂಡ ೩೬ ವರ್ಷ ಸೇವೆ ಸಲ್ಲಿಸಿ
ಇನ್ನೂ ಹೆಚ್ಚು ಸೇವೆಯನ್ನು ತೆಗೆದುಕೊಳಲೆಂದು ಇಚ್ಛಿಸುತ್ತೇವೆ.

ಮುಂಡಗಿ ಬ್ರದರ್ಸ್

ESSO ಪೆಟ್ರೋಲ್ ಪಂಪ ಕಾಲೇಜ್ ರೋಡ್ ಬೆಳಗಾವಿ phone 1398.
ಬ್ರಾಂಚ ಆಫೀಸ: ಸ್ಟೇಶನರಿ ಮರ್ಚಂಟ್ ರವಿವಾರ ಪೇಠ ಬೆಳಗಾವಿ phone: 767.
ಇದಲ್ಲದೆ ESSO ದವರ
• ಪೆಟ್ರೋಲ್ • ಡಿಜೆಲ್ • ಚಿಮಣಿ ಎಣ್ಣೆ • ಕ್ರೂಡಾಯಿಲ್
• ಮೋಬಿಲಾಯಿಲ್ • ಗ್ರೀಸ್, ಇವುಗಳ ಠೋಕ ಮತ್ತು ಕಿರುಕಳ ವ್ಯಾಪಾರಸ್ಥರು.

ಕರ್ನಾಟಕ ವಾರನಿಸ್ ಪೇಂಟ್
• ಫ್ರೆಂಚ್ ಪಾಲಿಶ್ • ಸ್ಟೇಶನರಿ • ಗ್ಲಾಸ್ ವೇಅರ್ • ಮೆಡಿಸಿನ್
ಇವುಗಳ ವ್ಯಾಪಾರಸ್ಥರು

ಮುಂಡಗಿ ಬ್ರದರ್ಸ-ಇದು ಪ್ರಾಮಾಣಿಕತೆಯ ಹೆಸರು
ಮನೆ- Phone : 1578

ಗ್ರಾಮದಲ್ಲಿ ಒಂಟಿಯಾಗಿ ಬಿಟ್ಟು ಹೋಗುವುದು ಹೇಗೆ. ಅವಳು ಹುಲಿಯಂಥ ಸಿಂಗಸಾವರೂ ಮಗನಿಗೆ ತಾಯಿ. ಅವನು ಎಂಥವನೇ ಆದರೂ ಅವಳ ಮಗ.

ಬಿಕೋ ಎನ್ನುತ್ತ ಹಾಳು ಸುರಿಯುವ ಗ್ರಾಮದಲ್ಲಿ ಮಾರಿಮೌನ. ಹಕ್ಕಿಪಕ್ಕಿಗಳೂ ಸಹ ಮಳೆಯ ಕಾರಣದಿಂದ ಗೂಡಿನಲ್ಲಿ ಮೌನತಾಳಿವೆ. ಸದ್ದೆಂದರೆ ಕಪ್ಪೆಗಳ ವಟವಟ.

ಮಗನಿಗೆ ಔಷಧಿ ಮಾಡುತ್ತಾ, ಅಕ್ಕಿ ತರಿ ಗಂಜಿ ಕುಡಿಸುತ್ತ ಮೂರುದಿನ ಕಳೆದಳು ಅಚ್ಚಂದಿ. ತಮ್ಮಾಭಟ್ಟನಿಗೆ ಮೈಮೇಲೆ ಜ್ಞಾನವಿರಲಿಲ್ಲ. ನಾಲ್ಕನೆಯದಿನ ರಾತ್ರಿ ಹನ್ನೆರಡುಗಂಟೆ ಹೊತ್ತಿಗೆ ತಮ್ಮಾಭಟ್ಟನ ಅವತಾರ ಸಮಾಪ್ತಿಯಾಯಿತು. ಗಡಿಯಾರವೆಂಬ ಸಮಯ ಸೂಚಿಯಂತ್ರವನ್ನು ಆಗಿನಕಾಲದಲ್ಲಿ ಆ ಹಳ್ಳಿಯಲ್ಲಿ ಯಾರೂ ಕಂಡಿರಲಿಲ್ಲ. ಮಗ ಸತ್ತನೆಂದು ತಿಳಿಯಿತು ಅಚ್ಚಂದಿಗೆ. ಆದರೆ ಆಗ ವೇಳೆ ಎಷ್ಟೆಂದು ತಿಳಿಯದು. ಅವಳಿಗೆ ಒಂದು ನಿದ್ದೆ ಬಂದು ಎಚ್ಚರವಾಗಿತ್ತಾದ ಕಾರಣದಿಂದ ಅರ್ಧ ರಾತ್ರಿಯೋ, ಬೆಳಗಿನಜಾವವೋ ಇರಬಹುದೆಂದು ಊಹಿಸಿದಳು.

ಜೇಷ್ಠಮಾಸದ ರಾತ್ರಿಯ ಮಳೆ ಕಣ್ಣುಮುಚ್ಚಿಕೊಂಡು ಸುರಿಯುತ್ತಿದೆ. ಅಮಾವಾಸ್ಯೆ ಕಳೆದು ಕೇವಲ ಆರುದಿನಗಳಾಗಿವೆ. ಹೆಪ್ಪುಗಟ್ಟಿದ ಕತ್ತಲು ಇಡೀ ಗ್ರಾಮಕ್ಕೆ ಬುರುಕಿ ಹಾಕಿದೆ. ಈಗ ಅಚ್ಚಂದಿಯ ಜೀವದಜೊತೆ ಗಾತಿಗಳೆಂದರೆ ಕೊಟ್ಟಿಗೆಯಲ್ಲಿದ್ದ ಎರಡು ಮುದಿದನಗಳು. ಇದ್ದ ನಾಲ್ಕಾರು ನಾಯಿಗಳೂ ಸಹ ಹೊಳೆದಾಟ ಶಡ್ಡುಗಳ ಹತ್ತಿರ ಹೋಗಿದ್ದವು. ನಡೆಯಲಾರದ ಕಜ್ಜಿನಾಯಿಯೊಂದು ಆ ಸರಜಿ ಮನೆಯ ಹಿಂದಿನ ದಾಳಿಂಬರ ಗಿಡದಬುಡದಲ್ಲಿ ಕೂತು ಆಕಾಶದ ಕಡೆಗೆ ಮುಖಮಾಡಿ ಅಪಸ್ವರದಲ್ಲಿ ಅತ್ತಾಗ:

"ಅನಿಷ್ಟರಂಡೇದೆ, ಯಾಕೆ ಇಲ್ಲಿ ಕೂತು ಬಡಕೋತಿ?"

—ಎಂದು ಅದನ್ನು ಕಲ್ಲುಹೊಡೆದು ಓಡಿಸಿದ್ದರೂ ಮನಸ್ಸು ಅಳುಕಿ ಭೀತಿಗೊಂಡಿತ್ತು.

ಈಗ ಮಗನ ವಿಕಾರವಾದ ಹೆಣ ನೋಡಿದಾಗ ಅವಳಿಗೆ ದುಃಖಕ್ಕಿಂತ ಭಯವೇ ಹೆಚ್ಚಾಯಿತು. ಅಳುವುದಕ್ಕೂ ಒಬ್ಬರೂ ಜೊತೆಗಿಲ್ಲ.

ಪ್ಲೇಗಿನ ಹೆಣ! ಮೊದಲೇ ತಮ್ಮಾಭಟ್ಟನದು ವಿಕಾರರೂಪ. ಈಗ ಕಣ್ಣಿನಿಂದಲೇ ಪ್ರಾಣಹೋಗಿತ್ತೇನೋ. ಎರಡು ಕಣ್ಣುಗಳೂ ಭಯಂಕರವಾಗಿ ತೆರೆದುಕೊಂಡಿವೆ; ಪಿಶಾಸಿಯಂತೆ ಮುಂದೆ ಚಾಚಿದ ನಾಲ್ಕು ಕೆಂಪುಹಲ್ಲುಗಳು; ಎರಡುತಿಂಗಳು ಕುರುಚಲು ಗಡ್ಡ!

ಮಗನ ಮುಖ ನೋಡಿ ಗಡಗಡ ನಡುಗಿದಳು ಅಚ್ಚಂದಿ. ಅದೂ ಹರಳೆಣ್ಣೆಯ ಕಾಲುದೀಪದ ಮಂಕು ಬೆಳಕಿನಲ್ಲಿ ಸಾಕ್ಷಾತ್ ಪಿಶಾಚಿಯಂತೆ ಕಂಡ ಅವಳ ಮುದ್ದುಕುವರ.

ಇನ್ನು ಅವಳಿಗೆ ಅಲ್ಲಿ ಕೂರುವುದಾಗಲಿಲ್ಲ. ಹೆಣವನ್ನು ಮುಂದಿನ ಚೌಕಿಯಲ್ಲೇ ಬಿಟ್ಟು ನಡುಮನೆಯ ಬಾಗಿಲು ಹಾಕಿಕೊಂಡು ಸೀಮೆಎಣ್ಣೆ ಬುಡ್ಡಿ ಹಿಡಿದು ನೆಟ್ಟಗೆ ಬಚ್ಚಲು ಮನೆಗೆ ಹೋದಳು. ಧೈರ್ಯಕ್ಕಾಗಿ ಬಚ್ಚಲು ಒಲೆ ಉರಿ ಮಾಡಿದಳು ಬಚ್ಚಲ ಮನೆ ಎದುರಿಗೇ ಕೊಟ್ಟಿಗೆಯಲ್ಲಿದ್ದ ಎರಡು ದನಗಳು, ಒಂದು ಹೋರಿಕರು ಈಗ ಅವಳಿಗೆ ಧೈರ್ಯ ತುಂಬುವ ಜೀವಿಗಳಾಗಿದ್ದವು. ನೂರುಹೆಣಗಳು, ಸಾವಿರ ದೆವ್ವಗಳು ಎದುರು ಬಂದರೂ ಅವಕ್ಕೇನೂ ಹೆದರಿಕೆ ಇಲ್ಲವಲ್ಲ.

ಕೊಟ್ಟಿಗೆಯಲ್ಲಿ ಮಲಗಿ ಮೆಲುಕು ಹಾಕುತ್ತಿದ್ದ ಅವುಗಳ ಕಣ್ಣುಗಳು ಎದುರಿನ ಒಲೆಯ ಬೆಳಕಿನಲ್ಲಿ ಕೆಂಡಗಳಂತೆ ಹೊಳೆದವು. ಅಚ್ಚಂದಿ ಒಂದು ಹಳೆಯ ದಟ್ಟಿವನ್ನು ಮೈತುಂಬ ಹೊದ್ದು ಕಾಲು ಮುದುರಿ ಬೆಂಕಿಕಾಯಿಸುತ್ತ ಕೂತಳು. ಭಯದಿಂದ ನಿದ್ದೆಯೂ ದೂರವಾಯಿತು.

ಅಂತೂ ಹಾಗೇ ಜಾಗರಿಸಿಯೇ ಬೆಳಗಾಯಿತು. ಆದರೆ ಮಳೆ ನಿಲ್ಲಲಿಲ್ಲ. ಸೂರ್ಯದರ್ಶನವಿಲ್ಲ. ವೇಳೆ ತಿಳಿಯಲು ಈಗ ಬಿಸಿಲು ನೆರಳಿನ ಗಡಿಯಾರವೂ ಇಲ್ಲ. ಅಚ್ಚಂದಿಯ ವಿಚಾರದ ಮುಂದೆ ಈಗ ಕಪ್ಪುಗೋಡೆ ಎದ್ದು ನಿಂತಿತು.

ಮುಂದಿನ ಗತಿ ಏನು? ತಾನು ಎಲ್ಲಿಗೆ ಹೋಗಬೇಕು? ಹೇಗೆ ಹೋಗಬೇಕು? ಈ ಮಳೆ, ಕೊಚ್ಚೆ, ಜಾರಿಕೆ, ಇಂಬುಳಗಳ ಕಾಟ.

ಹೊಳೆದಾಟ ಶಡ್ಡಿನ ಹತ್ತಿರ ಹೋಗಿ ಇದುವರೆಗೆ ನಿಷ್ಠುರ ಮಾಡಿಕೊಂಡ ಆ ಊರಿನ ಜನಗಳ ಕಾಲೇ ಕಟ್ಟಬೇಕು. ಅಂತೂ ಮಗನಿಗೆ ಒಂದು ಬೆಂಕಿ ಹಚ್ಚಬೇಕಲ್ಲ. ತನ್ನ ಬುದ್ಧಿಗೆ ತೋರಿದಂತೆ ಮಾಡಿದಳು.

ದನಕರೆದು ಹಾಲನ್ನು ಏನು ಮಾಡಬೇಕು? ಅದಕ್ಕಾಗಿ ಕರುವಿನ ಕಣ್ಣೆ ಕಳಚಿದಳು. ಅದು ಸಂತೋಷವಾಗಿ ತಾಯಿಯ ಹಾಲು ಕುಡಿಯಿತು. ಹೊರಗೆ ಮಳೆ ಸುರಿಯುತ್ತಿದ್ದದ್ದರಿಂದ ದನಗಳನ್ನು ಕಾಲಾಡಲೂ ಬಿಡುವಂತಿರಲಿಲ್ಲ. ಅವುಗಳ ಮುಂದೆ ಧಾರಾಳವಾಗಿ ಒಣಹುಲ್ಲು ಹಾಕಿ ಕಲಗಚ್ಚು ಇಟ್ಟಳು. ಬಹುಮೆಲ್ಲಗೆ ಬಂದು ಚೌಕಿಯ ಬಾಗಿಲು ತೆಗೆದು ಮಗನ ಹೆಣನೋಡಿದಳು. ಮೋಡ ಮುಸುಕಿದ ಮಬ್ಬು ಬೆಳಕಿನಲ್ಲಿ ಅವಳು ಕಂಡದ್ದೇನು? ಹೆಣದ ಸುತ್ತಲೂ ಇರುವೆಯ ರಾಶಿ. ಮೈತುಂಬ ಇರುವೆಯ ಹುತ್ತ. ಕೆಂಜಿರುವೆ ಹೆಣದ ಮೂಗುಬಾಯಿಗಳಿಂದ ದೊಂಪೆದೊಂಪೆಯಾಗಿ ಹೊಕ್ಕು ಹೊರಡುತ್ತಿವೆ.

ರಪ್ಪನೆ ಚೌಕಿಯ ಬಾಗಿಲು ಮುಚ್ಚಿ ನಡುಮನೆಗೆ ಬಂದು ತುಕ್ಕು ಹಿಡಿದ ಹಳೆಯ ಬೀಗ ಒಂದನ್ನು ಹುಡುಕಿ ತೆಗೆದುಕೊಂಡು ಹಿತ್ತಲ ಬಾಗಿಲಿನಿಂದ ಹೊರಬಂದು ಅಲ್ಲಿಗೇ ಬೀಗಹಾಕಿ ಬೀಗದ ಕೈಯನ್ನು ಸೆರಗಿನ ತುದಿಗೆ ಕಟ್ಟಿಕೊಂಡು, ದಟ್ಟಿ ಹೊದ್ದು ವಾಲೆಕೊಡೆ ಹಿಡಿದು ಹೊಳೆದಾಟಲು ಹೊರಟಳು.

ಹಿಂಬಾಗಿಲು ಅಗುಳಿಹಾಕಿ ಮುಂಬಾಗಿಲು ಬೀಗ ಹಾಕುವಷ್ಟು ಧೈರ್ಯವೂ ಈಗಿರಲಿಲ್ಲ. ಮೊಳಕಾಲಿನವರೆಗೆ ಏರಿಬರುವ ಇಂಬುಳಗಳನ್ನು ಕಿತ್ತು ಕಿತ್ತು ಹಾಕುತ್ತ, ಜಾರುತ್ತ–ಬೀಳುತ್ತ–ಏಳುತ್ತಾ ಹೊಳೆವರೆಗೆ ತಲುಪಿದಳು. ಆದರೆ ಹೊಳೆ ವಾರದ ಮಳೆಯಿಂದ ತುಂಬಿ ಹರಿಯುತ್ತಿದೆ. ಆಚೆಯ ದಡದಲ್ಲಿ ಒಂದು ದೋಣಿ ದಡದ ಗೂಟಕ್ಕೆ ಕಟ್ಟಿದೆಯಾದರೂ ಒಬ್ಬರಾದರೂ ಅಂಬಿಗರ ಸುಳಿವಿಲ್ಲ. ಈಗ ದೋಣಿಯಲ್ಲಿ ಅತ್ತ–ಇತ್ತ ದಾಟುವವರೇ ಇರಲಿಲ್ಲವಾದುದರಿಂದ ಅವರೂ ಇರಲಿಲ್ಲ. ಅಚ್ಚಂದಿ ಕಣ್ಣಿಗೆ ಕೈಮರೆಮಾಡಿ ನೋಡಿದಳು. ಹೊಳೆಯಾಚೆ ಮೂರು ಫರ್ಲಾಂಗ್ ದೂರದಲ್ಲಿ ದಟ್ಟವಾದ ಮರಗಳ ಗುಂಪಿನ ಮಧ್ಯೆ ಅಡಿಕೆಸೋಗೆಯ ಶಡ್ಡುಗಳು ಮಸುಕು ಮಸುಕಾಗಿ ಕಾಣುತ್ತಿವೆ. ಅಡ್ಡತಿಡ್ಡಾಗಿ ಬೀಳುವ ಮಳೆಯಿಂದ ರಕ್ಷಿಸಲು ಆ ವಾಲೆಕೊಡೆ ಸಮರ್ಥವಾಗಲಿಲ್ಲ. ಅಚ್ಚಂದಿಯ ಮೈ ಪೂರಾ ನೆನೆದು ತೊಪ್ಪೆಯಾಯ್ತು. ಕಷ್ಟದಿಂದ ಹಿಡಿದಿದ್ದ ವಾಲೆಕೊಡೆಯನ್ನು ಬಿರುಗಾಳಿಯೆಂದು ಹಾರಿಸಿಕೊಂಡು ಹೋಗಿ ಪ್ರವಾಹದಲ್ಲಿ ಎಸೆಯಿತು. ತಲೆಕೆಳಗಾಗಿ ನಡುಪ್ರವಾಹದಲ್ಲಿ ತೇಲಿ ಹೋಗುತ್ತಿದ್ದ ವಾಲೆಕೊಡೆಯನ್ನು ಅಸಹಾಯಳಾಗಿ ನೋಡಿದಳು ಅಚ್ಚಂದಿ. ಬೇಸಿಗೆಯಲ್ಲಿ ಮೊಣಕಾಲು ಮುಳುಗ ನೀರಿರುತ್ತಿದ್ದ ಜಾಗದಲ್ಲಿ ಈಗ ಎದೆ ಮಟ್ಟ ನೀರು ಬಂದಿದೆ, ಮಳೆಗಾಲದಲ್ಲಿ ದಾಟಲು



ದೀಪಾವಳಿಯು ಸರ್ವರಿಗೂ ಶುಭದಾಯಕವಾಗಲಿ!


೩೨ ವರ್ಷಗಳ ಅಖಂಡ ಸೇವೆಯ ಹಿನ್ನೆಲೆಯೊಂದಿಗೆ

ಸನ್ಮಿತ್ರ ಸಂಮಿಲನ್ ಟೀ ಕ್ಲಬ್

ಟಿಳಕ ಚೌಕ್, ಬೆಳಗಾವಿ

ಶುಚಿ, ರುಚಿಯಾದ ಉಪಾಹಾರ

ಹಾಗೂ

ಸನ್ಮಿತ್ರ ಬೋರ್ಡಿಂಗ್

ರುಚಿಕರವಾದ ಮಾಂಸಾಹಾರಿ ಊಟ

ಮಾಲೀಕರು: ಎಸ್. ಎನ್. ಶೈ

ಇರಲೆಂದು ಅಗ್ರಹಾರದ ಒಂದು ಕೊನೆಯಲ್ಲಿ ಹಾಕಿದ ಎರಡುತ್ತಂಗಿನ ಸಾರದ ನೆನಪು ಬಂದು ನೆನೆಯುತ್ತಲೇ ಅತ್ತ ಓಡಿದಳು ಅಚ್ಚಂದಿ.

ಇದ್ದ ಒಬ್ಬ ಮಗ ಪ್ಲೇಗಿನಲ್ಲಿ ಸತ್ತ ದುಃಖ; ಇಡೀ ಗ್ರಾಮದಲ್ಲಿ ಏಕಾಂಗಿ; ರಾಕ್ಷಸಿ ಮಳೆ; ತುಂಬಿ ಹರಿಯುವ ಅಡ್ಡಪ್ರವಾಹ. ಹಿಂದಿನ ದಿನದ ಮಧ್ಯಾಹ್ನದಿಂದ ಹೊಟ್ಟೆಗಿಲ್ಲದ ಹಸಿವಿನ ಸಂಕಟ; ಅರವತ್ತರ ವೃದ್ಧಾಪ್ಯದ ಅಶಕ್ತಿ; ಮುಂದೇನು ಎನ್ನುವ ಕಂಗಾಲು ಪರಿಸ್ಥಿತಿ. ಆದರೂ ನೀನೇ ಎನ್ನುವವರು ಇಲ್ಲ.

ಈಗ ತೆಂಗಿನಸಾರದ ಮೇಲೂ ಗೇಣುದ್ದ ನೀರು ಹರಿಯುತ್ತಿದೆ ಎಂದು ತಿಳಿದಾಗ ನಿಜವಾಗಿ ಅಚ್ಚಂದಿಗೆ ದುಃಖ ಒದ್ದುಬಂತು; ಆದರೂ ತಡಮಾಡಿದರೆ ಮತ್ತೂ ನೀರು ಏರಿ ಬಂದೀತು ಎಂದುಕೊಂಡು ಎರಡು ತೆಂಗಿನಸಾರಗಳ ಮೇಲೆ ಮಕ್ಕಳಂತೆ ನಿಧಾನವಾಗಿ ಅಂಬೆಗಾಲಿಡುತ್ತ ಹೊಳೆದಾಟಿ ಏರಿಗೆ ಬಂದಾಗ ಅವಳಿಗೆ ತುಸು ಜೀವ ಬಂದಿತು. ಮುಂದೆ ತೊಪ್ಪನೆ ತೊಯ್ದು ಒದ್ದೆಯ ಮುದ್ದೆಯಾಗಿ ಅವಳು ಶಡ್ಡುಗಳಿದ್ದ ಜಾಗಕ್ಕೆ ತಲುಪಿ ಅಯ್ಯಣ್ಣಭಟ್ಟರ ಶಡ್ಡಿನ ಬಾಗಿಲಲ್ಲಿ ನಿಂತಾಗ ಮಳೆ ಚಳಿ ತಡೆಯಲಾರದೆ ಒಲೆಯ ಮುಂದೆ ಕೂತು ಬೆಂಕಿಕಾಯಿಸುತ್ತಿದ್ದ ಅಯ್ಯಣ್ಣಭಟ್ಟರು ದೊಡ್ಡದಾಗಿ ಕಣ್ಣು ಬಿಟ್ರು.

"ಇದೇನೇ ಅಚ್ಚಂದೀ! ಈ ಪಾಟಿ ಮಳೇಲಿ ಒಬ್ಳೇ ಬಂದಿದ್ದೀ? ಒಳಗೆ ಬಾ. ತಮ್ಮ ಯಾಕೆ ಬರಲಿಲ್ಲವೇ?" ಎಂದು ಒಂದೇ ಬಾರಿಗೆ ಹತ್ತಾರು ಪ್ರಶ್ನೆಹಾಕಿದರು.

ಅವರ ಮುಂದೆ ಹೋಗಿ ಕುಸಿದು ಕುಳಿತ ಅಚ್ಚಂದಿ 'ಹೋ'–ಎಂದು ಅಳತೊಡಗಿದಳು.

ಮತ್ತೆ ಹತ್ತುನಿಮಿಷದಲ್ಲಿ ಅಲ್ಲಿದ್ದ ಹತ್ತಾರು ಶಡ್ಡುಗಳ ಜನರೂ ಬಂದು ತುಂಬಿದರು. ಅಚ್ಚಂದಿ ಗೋಳಿಡುತ್ತಾ ಎಲ್ಲ ವಿಷಯ ವರದಿಮಾಡಿದಳು. ಈಗ ಅವಳು ಅವರೆಲ್ಲರೆದುರು ಕರುಣೆಯ ಪರದೇಶಿಯಾದಳು. ಆಬಾಲವೃದ್ಧರಾದಿಯಾಗಿ ಅವಳ ಸಾವಿರ ಅಪರಾಧಗಳನ್ನು ಮನ್ನಿಸಿದರು.

ಮಲೆನಾಡ ಕಗ್ಗಾಡಿನ ನಡುವಿನ ಹಳ್ಳಿ. ಆಗ ಅಲ್ಲಿಗೆಲ್ಲಾ ಟಪಾಲು ಎಂಬುದೂ ಇರಲಿಲ್ಲ. ಕಾಲುನಡಿಗೆ ಬಿಟ್ಟರೆ ಎತ್ತಿನ ಗಾಡಿಯೇ ಭಾರೀ ವಾಹನ. ಹುಟ್ಟು–ಸಾವು ಏನೇ ಆದರೂ ಊರಿಂದೂರಿಗೆ ಜನ ನಡೆದು ಹೋಗಿಯೇ ವರ್ತಮಾನ ತಿಳಿಸಬೇಕು. ಇನ್ನು ಪತ್ರಿಕೆ ಅನ್ನುವ ಹೆಸರೇ ಗೊತ್ತಿಲ್ಲ. ಎಂತಹ ವೈರವೇ ಇದ್ದರೂ ಸಾವು ಎಂದಕೂಡಲೇ ಎಲ್ಲರೂ ಒಂದಾಗಿ ಬಿಡುತ್ತಿದ್ದರು. ಇಂತಹ ಪರಿಸ್ಥಿತಿಯಲ್ಲಿ ತಮ್ಮಾಭಟ್ಟನ ಸಾವು ಸಂಭವಿಸಿದ್ದು.

ಶಡ್ಡುಗಳಲ್ಲಿಯೂ ಮಳೆಯ ದೆಸೆಯಿಂದ ಥಂಡಿ ತುಂಬಿದೆ, ಒಳಗೆಲ್ಲಾ ನೀರು ಸೋರುತ್ತೆ. ಆ ಜನರ ಅವಸ್ಥೆ ಬೇಡ. ಆದರೂ ಈಗ ಇದ್ದಬಿದ್ದ ಗಂಡಸರೆಲ್ಲಾ ಅಚ್ಚಂದಿಯ ನೆರವಿಗೆ ಬಂದರು. ಒಂದು ಜನ, ಒಂದೂರು ಒಂಟಿ ಹೆಂಗಸು ಎಂತಹ ಕಷ್ಟದಲ್ಲಿ ಸಿಲುಕಿದ್ದಾಳೆ, ಪ್ಲೇಗಿನ, ಹೆಣವೆಂದು ಉದಾಸೀನ ಮಾಡಲು ಸಾಧ್ಯವೇ ಅದರ ಸಂಸ್ಕಾರ ಮಾಡಲೇಬೇಕಾದ್ದು ಬ್ರಾಹ್ಮಣ ಧರ್ಮ, ಕರ್ತವ್ಯ, ಅದರಲ್ಲೂ ಅಚ್ಚಂದಿಗೆ ಗಂಡನೂ ಇಲ್ಲ, ಮೊಮ್ಮಕ್ಕಳೂ ಇಲ್ಲ,



"ನೀವು ಹಚ್ಚಿದ ಆಕಾಶಬಾಣಕ್ಕಿಂತ ಮೇಲೆ ಹೋಗ್ತಿವೆ ಸಾರ್ ಬೆಲೆಗಳು..."

ಅವಳು ಸೊಸೆಯನ್ನು ಕೈಯಾರ ಹೊಡೆದುಕೊಂದದ್ದನ್ನು ಎಲ್ಲರೂ ಆ ಗಳಿಗೆಗೆ ಕ್ಷಮಿಸಿ ಅವಳೊಂದಿಗೆ ಹೊರಡಲು ತಯಾರಾಗುವ ವೇಳೆಗೆ ಮಳೆ ಕಂಡಾಪಟ್ಟೆ ಜೋರಾಯಿತು, ಮಳೆ, ಗಾಳಿ, ಮೋಡ. ರಾತ್ರಿಯೆಂಬಾತೆ ಮೋಡ ಮುಸುಕಿ ಕತ್ತಲುಗವಿಯಿತು. ಬೇರೆಯವರು ಏನೋ ಅಷ್ಟಿಷ್ಟು ಹೊಟ್ಟೆಗೆ ಹಾಕಿಕೊಂಡರು. ಆದರೆ ಮಡಿ ಹೆಂಗಸಾದ ಅಚ್ಚಂದಿ ಮಗನ ಹೆಣ ಅಲ್ಲಿ ಕೊಳೆಯುತ್ತಿರುವಾಗ ಇಲ್ಲಿ ತಿನ್ನಲು ಸಾಧ್ಯವೇ? ಅತಿ ಆಚಾರದಕಾಲವದು.

ಇಷ್ಟೆಲ್ಲಾ ಆಗುವ ವೇಳೆಗೆ ಸೂರ್ಯ ಎಲ್ಲಿಗೆ ಹೋಗಿದ್ದನೋ ಯಾರಿಗೆ ಗೊತ್ತು? ಎಲ್ಲರೂ ಹೊಳೆಯದಂಡೆಗೆ ಬರುವ ಹೊತ್ತಿಗೆ ಶೃಂಗೇರಿಯಕಡೆಯಿಂದ ಭರತ ಹೊಡೆದುಕೊಂಡು ಬಂದು ಹೊಳೆ ಶಡ್ಡಿನ ಬಾಗಿಲವರೆಗೂ ಬಂತು. ಆ ರುದ್ರ ಪ್ರವಾಹದಲ್ಲಿ ದೋಣಿ ಬಿಡುವುದಿಲ್ಲ ಎಂದರು ಅಂಬಿಗರು. ನಿಜವಾಗಿ ಯಾರಿಗೂ ಧೈರ್ಯವಿಲ್ಲ. ಹೊಳೆಯ ಮುಂದೆ ಎಲ್ಲರೂ ತಪಸ್ಸಿಗೆ ಕೂತರು. ಅಬ್ಬರ ಸ್ವಲ್ಪವಾದರೂ ಕಡಿಮೆಯಾಗಲೆಂದು ಕಾದರು. ಭರತ ಮತ್ತೂ ಏರಿತು. ಕತ್ತಲಾಯ್ತು, ರಾತ್ರಿಯಾಯ್ತು, ಜಾಗರಣೆಯ ಬೆಳಗಾಯಿತು. ಅಂದಿಗೆ ಅಚ್ಚಂದಿ ಹೊಟ್ಟೆಗೆ ಹಾಕಿ ಮೂರುದಿನವಾಯಿತು. ಈಗ ಅಯ್ಯಣ್ಣ ಭಟ್ಟರು ಆಪದ್ಧರ್ಮ ಬಿಚ್ಚಿಬೋಧಿಸಿದರು. ಅಚ್ಚಂದಿ ಹೊಟ್ಟೆಯ ಸಂಕಟ ತಾಳಲಾರದೆ ಅಲ್ಲಿಯೇ ಹರಿಯುವ ಹೊಳೆಯಲ್ಲಿ ಮುಳುಗಿ ಅಯ್ಯಣ್ಣ ಭಟ್ಟರ ಹೆಂಡತಿ ಯಂಟಚ್ಚಮ್ಮ ಕಲಸಿಕೊಟ್ಟ ಅರಳು ಹುರಿಯಿಟ್ಟು ತಿಂದು ಕೊತ್ತಂಬರಿ ಕಷಾಯ ಕುಡಿದು ಉಸಿರುಬಿಟ್ಟಳು. ಅಂದು ಮಧ್ಯಾಹ್ನದ ಮೇಲೆ ಭರತ ಇಳಿಯಿತು.

ಮತ್ತೆಲ್ಲ ಸಂವರಿಸಿ ಅಂಬಿಗರಿಗೆ ದವ

ಹಾಕಿ ಅವರು ಹೊಳೆದಾಟಿ ಅಗ್ರಹಾರ ತಲಪುವುದರಲ್ಲಿ ಮತ್ತೆ ಕತ್ತಲಾಗುತ್ತ ಬಂದಿತ್ತು. ಮಳೆ ಮಾತ್ರ ಸುರಿಯುತ್ತಲೇ ಇದೆ. ಅಂತೂ ಅಚ್ಚಂದಿಯ ಮನೆಬಾಗಿಲ ಮುಂದೆ ಬಂದಾಗಲೇ ಎಲ್ಲರಿಗಿಂತ ಮುಂದಿದ್ದ ನಾಗಾಭಟ್ಟ ಕಿಟಕಿಯಲ್ಲಿ ತಮ್ಮಾಭಟ್ಟನ ವಿಕಾರ ಹೆಣ ನೋಡಿ ಕಿರಿಚಿಕೊಂಡದ್ದು, ಅಚ್ಚಂದಿ ಸೀರೆಯಲ್ಲಿ ಉಚ್ಚೆಹೊಯ್ದುಕೊಂಡಾಗಿತ್ತು. ಎಲ್ಲರೂ ಮನೆಯಿಂದ ದೂರಬಂದು ನೋಡುತ್ತಾರೆ ಹಾಗೇ ಕಿಟಕಿಯಲ್ಲಿ ನಾಲಗೆ, ಕಣ್ಣು ಹೊರಚಾಚಿ ಕೋಲಿನಂತೆ ನಿಂತಿದೆ ಹೆಣ. ಎಲ್ಲರೂ ಓಡಿ ಅಯ್ಯಣ್ಣಭಟ್ಟರ ಜಗುಲಿ ಸೇರಿ ಮತ್ತೆ ಪಂಚಾಯತಿಗೆ ಕೂತರು.

ಈಗ ಅಲ್ಲಿದ್ದವರೆಲ್ಲರ ಪಾಲಿಗೆ ಹೆಣ ಎದ್ದು ಓಡಾಡುತ್ತದೆ ಎಂಬುದು ಒಂದು ಕಟ್ಟು ಕತೆಯಾಗಿತ್ತು. ಹಾಗಾದಾಗ ಏನು ಮಾಡಬೇಕು ಅನ್ನುವುದು ಮಾತ್ರ ಯಾರಿಗೂ ತಿಳಿಯದು. ಈಗ ಇದು ಹೊಸ ಅನುಭವ. ಬೆಟ್ಟದಂಥ ಸಮಸ್ಯೆ ಮುಂದೆ ಕೂತಿತ್ತು. ಅಚ್ಚಂದಿ ರಾವು ಬಡಿದು ಕೂತಳು.

ದುರ್ಮರಣದಲ್ಲಿ ಸತ್ತ ಸೊಸೆ ದೆವ್ವವಾಗಿ ಈಗ ಗಂಡನ ದೇಹ ಸೇರಿದ್ದಾಳೆ ಎಂದು ಒಬ್ಬರು ತರ್ಕ ಮಾಡಿದರು. ಈಗ ಬಾಗಿಲು ತೆಗೆಯುವುದು ಹೇಗೆ? ಆ ಹೆಣ ಮಲಗಿಸುವುದು ಹೇಗೆ? ಮುಂದಿನ ಗತಿ ಏನು?

ಈ ಅವಾಂತರದಲ್ಲಿ ಅಚ್ಚಂದಿ ಸೆರಗಿಗೆ ಗಂಟು ಹಾಕಿಕೊಂಡಿದ್ದ ಮನೆಯ ಬೀಗದ ಕೈ ಎಲ್ಲೋ ಬಿದ್ದು ಕಳೆದು ಹೋಗಿತ್ತು. ಹುಡುಕುವುದಾದರೂ ಎಲ್ಲಿ?

ಇಷ್ಟಾಗುವುದರಲ್ಲಿ ಮತ್ತೆ ರಾತ್ರಿಯಾಯ್ತು. ಇಪ್ಪತ್ತು ದಿನಕ್ಕೆ ಮುಂಚೆ ಮುಚ್ಚಿದ್ದ ಬಾಗಿಲನ್ನು ಅಯ್ಯಣ್ಣಭಟ್ಟರು ತಮ್ಮ ಜನಿವಾರದ ಬೀಗದ ಕೈಯಿಂದ ತೆಗೆದರು. ಎಲ್ಲರೂ ಅವರ ಮನೆಯ ಒಳಗೆ ನುಗ್ಗಿ ಇದ್ದುದರಲ್ಲಿ ಸ್ವಲ್ಪ ಬೆಚ್ಚಗೆ ಕೂತರು. ಇನ್ನು ಬೆಳಗಾಗುವವರೆಗೆ ಏನೂ ಮಾಡುವಂತಿರಲಿಲ್ಲ.

ಮುದುಕರೆಲ್ಲರ ಬುದ್ಧಿ, ಬಾಯಿ ನಾನಾದಿಕ್ಕಿಗೆ ಹರಿದು ಈ ಸಮಸ್ಯೆಗೆ ನಿವಾರಣೋಪಾಯ ಹುಡುಕುತ್ತಿತ್ತು. ಇದ್ದುದರಲ್ಲಿ ಗಟ್ಟಿಮುಟ್ಟಾಗಿ ತರುಣನಾಗಿದ್ದ ನಾಗಾಭಟ್ಟ ಮನೆಯೆಲ್ಲಾ ಹುಡುಕಿ ಚಕಮಕಿ ಕಲ್ಲು, ಒಣಹುಲ್ಲು, ಕಟ್ಟಿಗೆ, ತಂದು ಚೌಕಿಯ ಮಧ್ಯದಲ್ಲಿ ಬೆಂಕಿ ಮಾಡಿದ. ಸುತ್ತಲೂ ಎಲ್ಲರೂ ಕೂತು ಮೈ ಕಾಯಿಸುತ್ತ ದೊಡ್ಡ ದೊಡ್ಡ ಠರಾವು ಹಾಕಿದರು.

ಅಷ್ಟರಲ್ಲಿ ನಾಗಾಭಟ್ಟ ಯಂಟಚ್ಚಮ್ಮನ ಉಗ್ರಾಣ ಬೆದಕಿ ಅವಲಕ್ಕಿ ತಂದು ಒಗಸಿ ಬಾಳೆಎಲೆಯಲ್ಲಿ ಎಲ್ಲರ ಮುಂದೂ ತಂದಿರಿಸಿದ. ಹಾಗೇ ಅಚ್ಚಂದಿಯ ಮುಂದೂ ಬಂತು. ಯಾರೂ ಅಡ್ಡಿ ಮಾಡಲಿಲ್ಲ. ಅವಳೂ ತಿಂದು ನೀರು ಕುಡಿದಳು. ನಾಗಾಭಟ್ಟ ಅಲ್ಲಿಯೇ ಒಂದು ಬದಿಗೆ ಚಾಪೆ ಬಿಚ್ಚಿ ಮಲಗುತ್ತ ಹೇಳಿದ:

"ಆದದ್ದೆಲ್ಲಾ ಆತು. ಈಗ ಎಲ್ಲ ಮುಂಚೇ ಕಡೆ ಬಾಗ್ಲುಹಾಕಿ ತೆಪ್ಪಗೆ ಮಲಗಿ. ಬೇಗ್ಗೆ ನಾನು ಮೇಳಿಗೇ ಹೋಗಿ ಮತ್ತೆ ನಾಕು ಜನರನ್ನು ಕರಕಂಡ ಬರ್ತಿನಿ. ಮುಂದೆ ನೋಡುವ"

ದಣಿದು ಹಣ್ಣಾದ ಅವರೆಲ್ಲರೂ ಬೆಂಕಿಯ ಸುತ್ತಲೂ ಅಲ್ಲಲ್ಲೇ ಮುದುರಿಕೊಂಡರು. ಅಚ್ಚಂದಿಯೂ ಈಗ ಹೆಚ್ಚು ಕಮ್ಮಿ ಹೆಣವಾಗಿದ್ದಳು. ಅವಳೂ ಕೂತಲ್ಲೇ ಮಲಗಿದಳು. ಎಲ್ಲರಿಗೂ ಗಡದ್ದು ನಿದ್ದೆ.

ಬೆಳಗಿನ ಜಾವದ ಮಳೆಯಲ್ಲೇ ನಾಗಾಭಟ್ಟ ಮೇಳಿಗೆಗೆ

ಹೋಗಿ ಒಂಭತ್ತು ಗಂಟೆಯ ವೇಳೆಗೆ ಹತ್ತು ಹದಿನೈದು ಜನ ಧಾಂಡಿಗರೊಂದಿಗೆ ಬಂದ.

ಮುಂದಿನ ಕತೆ ಭಯಂಕರವೇ. ಹಿಂದಿನ ಬಾಗಿಲು ತೆಗೆಯಲು ಬೀಗದ ಕೈ ಇಲ್ಲ. ಮುಂದಿನ ಬಾಗಿಲು ಒಡೆಯಲು ಸಾಧ್ಯವಿಲ್ಲ. ಹಳೆಯ ಕಾಲದ ದಪ್ಪ ಹಲಗೆಯ ಒಂಟಿ ಬಾಗಿಲು. ಅದಕ್ಕೆ ತೊಡೆ ಗಾತ್ರದ ಅಗುಳಿ ಇದೆ.

ಈಗ ಮನೆಯ ಮುಂದೆ ಬಂದರೆ ಮೂರು ದಿನ ಕೊಳೆತ ಹೆಣದ ದುರ್ನಾತ. ಹೆಣ ಈಗ ನೆಲ ಬಿಟ್ಟು ಚೌಕಿಯ ತುಂಬಾ ಗಾಳಿಯಲ್ಲಿ ತೇಲಾಡುತ್ತಿದೆ. ಒಂದೊಂದು ಬಾರಿ ಕಿಟಕಿಯ ಹತ್ತಿರ ತಲೆ ಹಾಕುವ ಹೆಣದ ಕಣ್ಣು ಮೂಗುಗಳಲ್ಲಿ ಈಗಲೂ ಕೆಂಜಿರುವೆ ಸಾಲುಗಟ್ಟಿ ಹರಿಯುತ್ತಿವೆ. ಮೂರು ರಾತ್ರಿಯಲ್ಲಿ ಹೆಣ ಭಯಂಕರವಾಗಿ ಊದಿ ಶತವಿಕಾರವಾಗಿ ಹೋಗಿದೆ.

ಸುಮಾರು ಮೂವತ್ತು ಜನರೂ ಹಿಂದುಗಡೆ ಹೋಗಿ ಬಚ್ಚಲು ಮನೆಯಲ್ಲಿದ್ದ ಕೊಡಲಿಯಿಂದ ಹಿಂಬಾಗಿಲ ಬೀಗ ಒಡೆದು ಮನೆಯೊಳಗೆ ನುಗ್ಗಿದರು. ಮೂವತ್ತು ಜನರಿದ್ದುದರಿಂದ ಎಲ್ಲರಿಗೂ ಈಗ ಧೈರ್ಯವೇ. ಜಟ್ಟಿತಿಮ್ಮಯ್ಯನ ಸಲಹೆಯಂತೆ ಮೊದಲು ಚೌಕಿ ಬಾಗಿಲು ತೆಗೆದ ಕೂಡಲೇ ಎಲ್ಲರೂ ಹಳೆಯ ಮೆಟ್ಟುಗಳನ್ನು ಹೆಣದ ಮೇಲೆ ಎಸೆದರು. ಈಚಲು ಹಿಡಿಯಿಂದ ಹೆಣ ಬಡಿದರು. ದೊಡ್ಡ ದೊಡ್ಡ ಕುಂಟೆಗಳಿಂದ ಬಡಿದು ಅಂತೂ ಹೆಣವನ್ನು ಬೋರಲಾಗಿ ಬೀಳಿಸಿ ಅದರ ಮೇಲೆ ಎರಡು ಭಾರವಾದ ಕುಂಟೆಯನ್ನು ಹೇರಿ ಅದು ಮತ್ತೆ ಏಳದಂತೆ ಮಾಡಿದರು. ಮುಂದೆ ಅದರ ಭಯಂಕರ ರೂಪು ಕಾಣದಂತೆ ಅದರ ಮೈತುಂಬ ಕಂಬಳಿ ಸುತ್ತಿ ಹಾಗೆಯೇ ಸ್ಮಶಾನಕ್ಕೆ ಹೊತ್ತು ಆ ಮಳೆ ಚಳಿಯಲ್ಲಿ ಹಸಿ ಸೌದೆಯಲ್ಲಿ ಆ ದೆವ್ವದ ಹೆಣ ಸುಡಬೇಕಾದರೆ ಉಳಿದವರೆಲ್ಲ ಹಣವಾಗಿದ್ದರು. ಇಷ್ಟೆಲ್ಲಾ ಮುಗಿಯುವವರೆಗೆ ಅಚ್ಚಂದಿಯನ್ನು ಮಾತ್ರ ಅಯ್ಯಣ್ಣಭಟ್ಟರ ಮನೆಯ ಕೋಣೆಯ ಒಳಗೆ ಕೂರಿಸಿ ಚಿಲಕ ಹಾಕಿಕೊಂಡು ಬಂದಿದ್ದರು.

ಆದರೆ ಇದೆಲ್ಲಾ ಮುಗಿಯುವ ವೇಳೆಗೆ ಅಚ್ಚಂದಿಗೆ ಪೂರಾ ಹುಚ್ಚು ಹಿಡಿದಿತ್ತು. ತನ್ನ ಸೊಸೆಯನ್ನು ಕೊಂದ ವಿಧಾನವನ್ನು ತಾನೇ ಬಾಯಾರೆ ವರ್ಣಿಸುತ್ತಾಳೆ. ತಾಯಿ ಮಗನ ಪಾಪಕಾರ್ಯವೆಲ್ಲ ಅವಳ ಬಾಯಿಂದಲೇ ಹೊರಬರುತ್ತಿತ್ತು. ಅವಳ ಮನೆ ಶಾಶ್ವತವಾಗಿ ಮುಚ್ಚಿತು. ಯಾರ ಮನೆಯಲ್ಲೋ ತಿಂದು, ಎಲ್ಲೋ ಮಲಗಿ ಹಾಗೇ ನಾಲ್ಕಾರು ವರ್ಷ ಇದ್ದು ಒಂದುದಿನ ಹೊಳೆ ಬಿದ್ದು ಸತ್ತಳು. ಆದರೆ ಇದುವರೆಗೂ ಹೆಣ ಹಾಗೆ ಎದ್ದು ಗಾಳಿಯಲ್ಲಿ ತೇಲಾಡುತ್ತಿದ್ದುದರ ರಹಸ್ಯ, ಕಾರಣ ಯಾರಿಗೂ ತಿಳಿದಿಲ್ಲ.

ಈಗ ಅಂದರೆ ಇತ್ತಲಿನ ಎಪ್ಪತ್ತು ವರ್ಷಗಳಲ್ಲಿ ಅಚ್ಚಂದಿಯ ಮನೆ ಸಂಪೂರ್ಣ ನಾಶವಾಗಿ ಹೋಗಿದೆ. ಅಲ್ಲಿ ಲಂಟಾನ ಬೆಳೆದಿದೆ. ಅವಳ ವಂಶೀಕರೂ ಯಾರೂ ಇಲ್ಲ. ಆದರೆ ಆ ತಮ್ಮಾಭಟ್ಟನ ಹೆಣದ ಇತಿಹಾಸ ಮಾತ್ರ ಅಲ್ಲಿಯ ಜನರ ಬಾಯಲ್ಲಿ ಇಂದಿಗೂ ಅಮರವಾಗಿ ಉಳಿದಿದೆ.

ಏನೇ ಆಗಲಿ ಇದೂ ಒಂದು ಅಮರಕೀರ್ತಿ ಅಲ್ಲವೇ?

●

 WISH YOU A HAPPY DEEPAWALI 




ಮೆ|| ವಾಯ್. ಬಸಪ್ಪಾ ಪರಫ್ಯೂಮರಿ, ಬೆಂಗಳೂರ

# ಸೊಟ್ಟ ಮರ

ಶ್ರೀಮತಿ ಗೀತಾ ಕುಲಕರ್ಣಿ

## ಪಾತ್ರ ಪರಿಚಯ

ಕಿಟ್ಟ್ಯಾ – | ಪ್ರಸಾದ – | ದಿನೇಶ್ – | ಚಂದ್ರೂ – : ಕಾಲೇಜು ಯುವಕರು, ಸ್ನೇಹಿತರು

ವಸಂತರಾಯ – ಮನೆಯ ಯಜಮಾನ (ಮಹಾಜಿಪುಣ)
ವಿಮಲಮ್ಮ – ಮನೆಯ ಯಜಮಾನಿ (ಮಹಾಜಿಪುಣಿ)
ಪ್ರತಿಭಾ – ಮಗಳು
ನೀಲವ್ವ – ಮನೆಯ ಕೆಲಸದವಳು
ಅಂಜನಾ – ನೆರೆಮನೆಯವಳು

**(ಹಳೆಯ ದೊಡ್ಡಮನೆ. ಸುಣ್ಣ ಬಣ್ಣ ಕಾಣದೆ ವರ್ಷಗಳು ಕಳೆದಿವೆ. ಬಿರುಕು ಬಿಟ್ಟ ಗೋಡೆ! ಕಿಟಕಿಯ ಗಾಜು ಒಡೆದಿದೆ. ನಾಲ್ಕಾರು ಮುರುಕು ಖುರ್ಚಿಗಳು-ಭಗ್ನಸ್ಥಿತಿಯಲ್ಲಿದ್ದ ಸೋಫಾ, ಮೂಲೆಯಲ್ಲಿ-ನಡೆಯದ ನಿಂತ ದೊಡ್ಡ ಗಡಿಯಾರ...ರವಿವರ್ಮನ ಕೆಲವು ಚಿತ್ರಗಳು, ಆ ಮನೆ ಇಷ್ಟೇ ಹಳೆಯದು ಎಂದು ಸಾರಲು ನಿಂತಿವೆ. ಬಾಗಿಲಿಗೆ ಮುಖಚಾಚಿ ಮುದಿಯ ಜೂಲು ನಾಯಿ ಮಲಗಿಕೊಂಡಿದೆ. ಮನೆಯ ಎಡಗಡೆಗಿದ್ದ ಕೋಣೆಯಲ್ಲಿ ವಿದ್ಯಾರ್ಥಿಗಳು ತಮ್ಮಲ್ಲೇ ಮಾತನ್ನಾಡಿಕೊಳ್ಳುತ್ತಿದ್ದಾರೆ.)**

**ಕಿಟ್ಟ್ಯಾ:** ಏನೋ ಊರೆಲ್ಲ ಸುತ್ತಾಡಿ ಈ ಮಹಾಮನೆಯಲ್ಲಿ ರೂಮು ಸಿಕ್ಕಿತೂ ಅಂದ್ರೆ–ಇಲ್ಲಿದ್ದ ಸೊಳ್ಳೆ, ತಗಣೆ ಕಾಟದಲ್ಲಿ ರಾತ್ರಿಯಂತೂ ಶಿವರಾತ್ರಿಯ ಜಾಗರಣೆ ಆಯ್ತು. ಇನ್ನು ಮುಂದಿನ ರಾತ್ರಿ ಹೀಗೆ ಕಳೆದ್ರೆ ನಮ್ಮ ಓದು, ಆರೋಗ್ಯಕ್ಕೆ ದೇವರೇ ಗತಿ! ಛಿ...ಛಿ...ಬಿರುಕು ಗೋಡೆಯಲ್ಲಿ ತುಂಬಿದ್ದ ತಗಣೆ, ಹೊರಗಿನ ಗಿಡಗಂಟೆಯಲ್ಲಿ ಸೇರಿದ್ದ ಸೊಳ್ಳೆಗಳ ಪ್ರಭಾವ ಗೊತ್ತಿದ್ದರೆ...ನಾನಂತೂ ಈ ರೂಮಿಗೇ ಬರುತ್ತಿರಲಿಲ್ಲ...ಹೂಂ–ಏಳು. ಇನ್ನು ಮಲಗಿ ಕನಸು ಕಂಡ್ರೆ ಕಾಲೇಜು ಕಲಿಯೋ ಆಸೆ ನಾವಿಬ್ರೂ ಬಿಟ್ಟು ಬಿಡಬೇಕಾಗುತ್ತದೆ. ಏಳು ಒಂದಿಷ್ಟು ಸ್ನಾನ ಮಾಡಿ ಮೊದ್ಲೇ ಹೋದ್ರೆ ಹೋಟೇಲಲ್ಲಿ ಬಿಸಿ ಊಟನಾದ್ರೂ ಕಾಣ್ತೇವೆ.ಏ ಪ್ರಸಾದ,ಇಲ್ನೋಡೋ. ನಲ್ಲಿ ಗೊಟರ್ ಗೊಟರ್ ಹೇಳ್ತಾ ಇದೆ. ಯಾಕೋ ನೀರೂ ಸ್ಟ್ರಾಯಿಕ್ ಮಾಡಿದಹಾಗಿದೆಯಲ್ಲ? ಪ್ರಸಾದ...ನಾವು ಈ ರೂಮಿಗೆ ಬಂದ ಘಳಿಗೆ ಚೆನ್ನಾಗಿಲ್ಲ ಅಂತಕಾಣ್ತದೆ. ರಾತ್ರಿ ಏನಾದ್ರೂ ಸ್ವಲ್ಪ ಓದೋಣಾ ಅಂದ್ರೆ ಲೈಟ್ ಹೋಗಿ ಬಿಡ್ತು...ಈಗ ನೀರೂ ಕೈ ಕೊಟ್ಟಿತು. ಪಾಪಿ ಹೋದಲ್ಲಿ ಮೊಣಕಾಲುಮಟ ನೀರಂತೆ! ಇಲ್ಲಿ ನಮಗೆ ಆ ನೀರೂ ಇಲ್ಲ!

**ಪ್ರಸಾದ:** (ಆಕಳಿಸುತ್ತ ಎದ್ದು) ಅದಕ್ಕೇನೋ ಡ್ರಾಟೆಡ್ ಏರಿಯಾದಿಂದ ಬಂದವರೂ ಅಂತ ತಮಾಷೆ ಮಾಡೋದು...ಹೋಗಲಿ ಬಿಡು...ಒಂದು ದಿನ ಲೈಟು ನೀರು ಎರಡೂ ನಾವು ಹೊಸಬ್ರು ಅಂತ ನಮ್ಮೊಟ್ಟಿಗೆ ಆಟ ಆಡಿರಬೇಕು. ಅದಕ್ಕೆ ಯಾಕಿಷ್ಟು ನಿರಾಸೆ? ಇಲ್ನೋಡು ಈ ನಿಸರ್ಗದ ಚಂದ ನೋಡು! ಎದುರಿಗೆ ಫಲಭರಿತ ಹಣ್ಣಿನ ಗಿಡಗಳು, ಹೊಟ್ಟೆ ಹಸಿದಾಗ ತಿಂದು ಹಸಿವೆಯನ್ನು ಹಿಂಗಿಸಿಕೊಳ್ಳಬಹುದು. ಬೇಸರವಾದ್ರೆ ಈ ಸೃಷ್ಟಿಯ ಚೆಲುವನ್ನು ನೋಡಬಹುದು.

**ಕಿಟ್ಟ್ಯಾ:** (ಅಸಹನೆಯಲ್ಲಿ) ಹೋಗಯ್ಯ ಕವಿ ಮಹಾಶಯ! ಭಾರಿ ಬಂದಿದ್ದಾನೆ. ಬಾಯಿ ಮಾತಿನಲ್ಲಿ ಸ್ವರ್ಗಸುಖ ಅನುಭವಿಸೋದಕ್ಕೆ...ಏಳು ಏಳು ಈಗ ಸ್ನಾನಕ್ಕೆ ಸಂಚಕಾರಬಂತು. ಇನ್ನೂ ಊಟಕ್ಕೆ ಗೃಹಚಾರ ಕೆಟ್ರೆ...ಮೊದಲೇ ಹೊಟ್ಟೆ ತಾಳ ಕುಟ್ಟುತ್ತಾ ಇದೆ. ಏಳೋ ಕುಂಭಕರ್ಣನ ಮಗನೇ!

**ಪ್ರಸಾದ:** ಹಾ...ಏಳ್ತೀನೆ ಏಳ್ತೀನೆ...ನಿಲ್ಲು ನಿಲ್ಲು...ಒಳ್ಳೆ ನಕ್ಷತ್ರಿಕನ ಹಾಗೆ ಗಂಟು ಬಿದ್ದಿದ್ದೀಯಲ್ಲ...ಒಳಗೆ ಸೊಳ್ಳೆ ತಗಣೆಯ ಕಾಟ, ಹೊರಗೆ ಈ ಮುದಿನಾಯಿಯ ಕಾಟ. ಅಯ್ಯೋ ಈ ದರಿದ್ರ ನಾಯಿ ಎದುರಿಗೆ ಮಲಗಿ ಕಾಲಿಗೆ ಬಾಯಿ ಹಾಕಿಬಿಟ್ರೆ ಕಾಲೇಜು ಬಿಟ್ಟು ಆಸ್ಪತ್ರೆ ಸೇರಬೇಕಾದೀತು!

**ಕಿಟ್ಟ್ಯಾ:** ಎಲೆ ಬೆಪ್ಪೇ ಅದು ನಾಯಿ ಏನೋ.ನೋಡಿದ್ರೆ ಗೊತ್ತಾಗೋದಿಲ್ವೇನೋ? ನಾಯಿ ಜನ್ಮ ನಿಜ! ಆದ್ರೆ ಅದರ ಕರ್ತವ್ಯ ಮಾಡೋವಷ್ಟು ತಾಕತ್ತು ಇದ್ದಂತೆ ಕಾಣೋದಿಲ್ಲ. ಸುಮ್ನೆ ಬಿದ್ದುಕೊಂಡಲ್ಲೇ ಬದುಕುವ ಹಾಗೆ ಕಾಣ್ತದೆ. ಈ ಮನೆ ನೋಡು! ಏನು ಮಾಸಲು ಬಣ್ಣ! ಕಿಟಕಿಯ ಗ್ಲಾಸು ಓರೆ ಕೋರೆ ಒಡೆದಿದೆ. ಮುರಿದ ಫರ್ನೀಚರ್! ಎಲ್ಲ ಮಾಡರ್ನ್ ಆರ್ಟ ಇದ್ದ ಹಾಗೆ ...ಇದ್ದಕ್ಕಿದ್ದ ಹಾಗೆ ಆ ಎಂದು ಬಾಯಿ ತೆರೆದು ನಿಂತು ಬಿಟ್ಟಿದೆ. ಇಲ್ಲಿ ಇನ್ನು ಏನೇನು ಕಾಣೋದುಂಟೋ? ನಡೆ... ಹೊಟ್ಟೆಯಲ್ಲಿ ಹಸಿವೆ ತಡೆಯೋದಕ್ಕೆ ಆಗದೆ ಕುರ್ ಕುರ್ ಅಂತದೆ ನಾಯಿ ಮರಿ ಹಾಗೆ!

**(ಅಲ್ಲಿಗೆ ಬೊಜ್ಜು ಮೈಯ, ಗಿಡ್ಡ ದೇಹ, ರಾಗವಾಗಿ ಎಳೆದೆಳೆದು ಮಾತನ್ನಾಡುವ ಮನೆಯ ಯಜಮಾನಿ ಮಗುವಿನ ಕೈಹಿಡಿದು ಬರ್ತಾಳೆ.)**

**ವಿಮಲಮ್ಮ:** ಈ ರೂಮ್ನಲ್ಲಿ ಹಿಂದಿದ್ದ ಹುಡುಗರು ಭಾಳ ಒಳ್ಳೆವರಿದ್ರು–ನಮ್ಮ ಪಾಪು ಅಂದ್ರೆ ಆಯ್ತು.! ಕಾಲೇಜಿನಿಂದ ಬರುವಾಗ ಇವನಿಗೇಂತ್ಲೆ ಬಿಸ್ಕೀಟು. ಚಾಕಲೇಟು ಏನಾದ್ರೂ ತರಲೇಬೇಕು! ಅವರು ರೂಮು ಬಿಟ್ಟು ಊರಿಗೆ ಹೋದ್ರೂ ಇವನು ಅವರನ್ನ ನೆನಪಿಸಿಕೊಳ್ಳದ ದಿನವೇ ಇಲ್ಲ. ರಾತ್ರಿಯಲ್ಲಿ ಎದ್ದು ರೂಮಿಗೆ ಹೋಗೋಣ...ಅನ್ನು ಮಾಮಾ ಬಂದಿದ್ದಾನೆಂದು ಹಟ ಮಾಡಿದ್ದೇ ಮಾಡಿದ್ದು (ನಗು) ಅದಕ್ಕೆ ಬಂದೆ. ರಾತ್ರಿ ನಿದ್ರೆ ಆಯಿತಲ್ಲ? ಪಾಪು ಇಲ್ನೋಡು ಇಬ್ರು ಮಾಮಾ ಬಂದಿದ್ದಾರೆ. ರಾತ್ರಿ ಕೇಳುತ್ತಿದ್ದಿಯಲ್ಲ?

**(ಹುಡುಗ ಕಕ್ಕಾಬಿಕ್ಕಿಯಾಗಿ ತಾಯಿಯ ಮಾತು ಅರ್ಥವಾಗದ ಹಾಗೆ ನೋಡುತ್ತದೆ.)**

**ಪ್ರಸಾದ:** (ದೇಶಾವರಿ ನಗು) ನಿದ್ದೆ! ಇಂಥ ನಿದ್ದೆ ಬಹಳ ದಿನದ ಬಳಿಕ ಮಾಡಿದ್ದು ದಿಂಬಿಗೆ ತಲೆ ಇಟ್ಟದ್ದೇ ಗೊತ್ತು!...

**ಕಿಟ್ಟ್ಯಾ:** ಕಿವಿಗೆ ಇಂಥ ಸಂಗೀತ ಬಿದ್ರೆ ಯಾರಿಗೆ ಇಂಥ ನಿದ್ರೆ ಬರಲಿಕ್ಕಿಲ್ಲ? ಜೋಗುಳ ಹಾಡಿ ತೂಗಿದ ಹಾಗೆ!

**ವಿಮಲಮ್ಮ:** (ಉಬ್ಬಿಕೊಂಡು) ನಮ್ಮ ರೇಡಿಯೋದ ಸೌಂಡೇ ಹಾಗೆ! ಅದು ನಮ್ಮ ಮಾವನವರ ಕಾಲದ್ದು. ಈಗೆಲ್ಲಿ ಸಿಗಬೇಕು ಇಂಥ ರೇಡಿಯೋ?

**(ಈ ಮಾತು ನಡೆಯುವಾಗ ಕಿಟ್ಟ್ಯಾ ಅವರಿಂದ ಸ್ವಲ್ಪ ದೂರ ಬಂದು ಮೆಲ್ಲನೆ ಉಸುರುತ್ತಾನೆ.)**

ನನ್ನು ಹೇಗೆ ಸಹಿಸಿಕೊಳ್ತಾಳೋ? ಬಂದು ಒಂದು ದಿನಾ ಆಗಿದೆ...ಆಯಮ್ಮ ಬಂದು ಏನೇನೋ ಮಂತ್ರಿಸಿ ಹೋದ್ಳು...ಇವನು ಬಂದು ಇದ್ದುದನ್ನೆಲ್ಲ ಹೇಳದೆ, ಕೇಳದೆ ಕಬ್ಳಿಸಿ ಹೋಟೇಲಲ್ಲಿ ಆರ್ಡರ್ ಕೊಟ್ಟ ಹಾಗೆ ಕೊಟ್ಟು ಕಾಫಿ ಗುಟುಕರಿಸಿ ಹೋದ. ಬರಿ ಹೋದ ಅಷ್ಟೇ ಅಲ್ಲ! ಇವನ ಕುಟುಂಬಕ್ಕೆ ಮೆಸೇಜ್ ಕಳುಹಿಸುವ ಕೆಲಸಾನೂ ಒಪ್ಪಿಸಿ ಹೋದ. ನೀನು ಹೀಗೆ ಪೆದ್ದಾನಾಗಿ ಬಿಟ್ರೆ...ನಾವು ಕಲಿತು ಪಾಸಾದ ಹಾಗೆ! ನಮ್ಮ ಅಪ್ಪ-ಅಮ್ಮ ಈ ವರ್ಷ ಆಸೆ ಬಿಡಬೇಕು...ಇಲ್ಲಾಂದ್ರೆ ನಾವು ಈ ರೂಮು ಬಿಡಬೇಕು.

**ಪ್ರಸಾದ:** ಒಂದೇ ದಿನಕ್ಕೆ ಇಷ್ಟು ನಿರಾಸೆ ತಾಳಿದ್ರೆ ಹೇಗೆ ಕಿಟ್ಟೂ? ಹೊಸ ಸ್ಥಳ ಹೊಂದಿಕೊಳ್ಳೋದಕ್ಕೆ ಒಂದೆರಡು ದಿನಗಳು ಬೇಕು. ಈಗಂತೂ ಊಟದ ಸಮಯ ದಾಟಿತು. ಬಾ ಇದ್ದ ಬ್ರೆಡ್ಡು-ಜಾಮು ತಿಂದು ಕಾಲೇಜಿಗೆ ಹೋಗೋಣ. ನಾಳೆಯಿಂದ ಎಲ್ಲಾ ಸರಿ ಹೋಗುತ್ತದೆ. ಬಾ, ಬೇಸರ ಮಾಡಿಕೊಳ್ಳೋದು ಬೇಡ ಕಿಟ್ಟೂ.

**ಕಿಟ್ಟು:** (ಗಾಬರಿಯಲ್ಲಿ) ಪ್ರಸಾದ...ಹುಡುಗ ಇಲ್ಲೇ ಬರೋ ಹಾಗೆ ಕಾಣ್ತದೆ!

**ಪ್ರಸಾದ:** ಯಾರೋ? ಯಾವ ಹುಡುಗ?

**ಕಿಟ್ಟು:** (ಸಿಟ್ಟಿನಲ್ಲಿ) ಈ ಮನೆಯ ವಂಶೋದ್ಧಾರಕ! ಗಂಡ-ಹೆಂಡ್ತಿಯ ಏಕೈಕ ಪುತ್ರ! ಪಾಪು ದ ಗ್ರೇಟ್! ನನಗೆ ನಿನ್ನ ಹಾಗೆ ಇರಲು ಸಾಧ್ಯವಿಲ್ಲ...ಬಾಗಿಲು ಹಾಕ್ತೀನೆ ನೋಡು! ಅಪ್ಪ ಬಂದು ಅರ್ಧ ಬ್ರೆಡ್ಡು ತಿಂದು ನಮಗೆ ಊಟ ಇಲ್ಲದ ಹಾಗೆ ಮಾಡಿದ! ಇನ್ನು ಮಗ ಬಂದು ಉಳಿದ ಬ್ರೆಡ್ಡೂ ತಿಂದು ಉಪವಾಸ ವ್ರತ ಮಾಡಿಸಿ ನಮಗೆ ಪುಣ್ಯ ಸಿಗೋ ಹಾಗೆ ಮಾಡೋದು ಬೇಡವೋ!

(ಬಾಗಿಲು ಹಾಕಿದ ಸದ್ದು)

## ದೃಶ್ಯ-೨

(ಮುರುಕು ಖುರ್ಚಿ, ವಿಮಲಮ್ಮ ಕೂತು ಪತ್ರಿಕೆ ಓದುತ್ತಿದ್ದಾಳೆ. ಕೆಲಸದವಳು ಕಸ ತೆಗೆಯುತ್ತಿದ್ದಾಳೆ)

**ವಿಮಲಮ್ಮ:** (ಗುಟ್ಟಿನಲ್ಲಿ ಮಾತನ್ನಾಡಿದಂತೆ) ಏ...ನೀಲವ್ವ...ಆ ಅಂಜನಮ್ಮನ ಗಂಡಗೆ ಬೇರೆ ಯಾರೋ ಇದ್ದಾರಂತಲ್ಲ? ಮನೇಲಿ ಹೆಂಡ್ತಿ ಮಕ್ಕಳನ್ನ ಅವರು ಸರಿಯಾಗಿ ನೋಡಿಕೊಳ್ತಾರಾ?

**ನೀಲವ್ವ:** (ಕಸ ತೆಗೆಯುವುದನ್ನು ನಿಲ್ಲಿಸಿ ಅಚ್ಚರಿಯಲ್ಲಿ) ಛೆ...ಛೆ...ಸಾಹೇಬ್ರು ದೇವರಂಥ ಮನುಷ್ಯ! ಅಂಜನಮ್ಮ...ಮಕ್ಕಳೂ ಅಂದ್ರೆ ಆಯ್ತು! ನಿನ್ನೆ ಊರಿಂದ ಬರೋವಾಗ ಅವರು ತಂದ ಸಾಮಾನು! ಅಂಜನಮ್ಮಗೆ ಕಪಾಟು ತುಂಬಿದ ಸೀರೆಗಳು! ಮತ್ತೂ ತಂದಿದ್ದಾರೆ. ನಿನ್ನೆ ನಂಗೂ ಒಂದು ಸೀರೆ ಕೊಟ್ಟರಮ್ಮ!

**ವಿಮಲಮ್ಮ:** ನಿನಗೆ? ಯಾಕಂತೆ? ಹಬ್ಬವೂ ಇಲ್ಲವಲ್ಲಾ? ಮತ್ತೆ ಸಾಹೇಬ್ರಿಗೂ ನಿನ್ನ ಮೇಲೆ?

**ನೀಲವ್ವ:** (ಅಸಹನೆಯಿಂದ) ನಿಮ್ಮ ಸಾಹೇಬ್ರು ಬೇಕಾದ್ರೆ ನನ್ನ ಹತ್ರ ಎರಡು ಮಾತಾದ್ರೂ ಆಡ್ತಾರೆ...ಅಂಜನಮ್ಮನ ಗಂಡ...ನನ್ನ ಹತ್ರ ಮಾತಾಡಿಯೇ ಇಲ್ಲ...ಅವರ ಮಗಳು ಬೇಬಿ ಹೋದ ತಿಂಗಳು ನ್ಯೂಮೋನಿಯಾ ಏನೋ ಜ್ವರ ಬಂತಲ್ಲ! ರಾತ್ರಿಯಲ್ಲಿ ಕೂತು ನಾನು ನಿದ್ದೆ ಕೆಟ್ಟಿದ್ದೇನಂತೆ, "ತಕ್ಕೋ ನೀಲವ್ವ...ನಿನಗೆ ಸೀರೆ!" ಅಂದ್ರು...ನನಗೆ ಕಣ್ತುಂಬ ನೀರು ಬಂತು. ಮಹರಾಯರು ಮುತ್ತೈದೆಯಾಗಿರಲಿ ಎಂದು ಮನಸ್ಸಿನಲ್ಲಿ ಬೇಡಿಕೊಂಡೆ...ಅಂಜನಮ್ಮ ಸಹಾಯಕ್ಕೆ ಯಾರೂ ಕರೆಯಲಿ...ಕೈಯಲ್ಲಿದ್ದ ಕೆಲಸ ಬಿಟ್ಟು ಬರ್ತಾರೆ.

**ವಿಮಲಮ್ಮ:** ಅಂಜನಮ್ಮ ಅವರ ಮದುವೆಯ ಹೆಂಡ್ತಿಯಲ್ಲ! ಹಾಗೇ ಓಡಿ ಬಂದೋವಳು! ಇದೆಲ್ಲ ನಿನಗೆ ಹೇಗೆ ಗೊತ್ತಾಗಬೇಕು? ಅದಕ್ಕವಳು ಗಂಡಗೆ ಅಷ್ಟು ಗಿಲೀಟು ಮಾಡೋದು. ಈ ನಾಟಕವೆಲ್ಲ ಅದಕೆ! ನಮಗೆ ನೋಡು ಯಾವ ಮುಲಾಜೂ ಇಲ್ಲ. ನಮ್ಮ ನೆಲ ಗಟ್ಟಿ ನೆಲ! ಕುಸಿಯುತ್ತದೆ ಎನ್ನೋ ಭಯವಿಲ್ಲ. ಕೆಸರಲ್ಲಿ ನಡೆಯೋ ಅಂಜನಮ್ಮ ನೋಡಿ ನಡೆಯಬೇಕಲ್ಲ? ಇರಲಿ...ನೀನು ಆ ಎಂದು ಬಾಯಿ ತೆರೆದು ನಿಂತದ್ಯಾಕೆ? ಗುಡ್ಡದಷ್ಟು ಪಾತ್ರೆ ಬಿದ್ದಿದೆ. ನಿನ್ನಷ್ಟೆತ್ತರಕ್ಕೆ ಬಟ್ಟೆ ಬಿದ್ದಿದೆ. ಅಂಜನಾ ಒಂದು ಕೂಗು ಹಾಕಿದ್ರೆ ಇಲ್ಲಿ ಕೆಲ್ಸ ಇಲ್ಲೇ ಬಿಟ್ಟು ಓಡ್ತಿ. ಏನು ಮಂತ್ರ ಮಾಡಿದ್ದಾಳೋ ನಿನಗೆ!

**ನೀಲವ್ವ:** ಮರೆತೇ ಹೋಗಿತ್ತು....ಆಚೆ ಮನೆ ನಿರ್ಮಲಮ್ಮ ಹೂ-ಪಪ್ಪಾಯಿ ಬೇಕಂತ ಹಣ ಕೊಟ್ಟಿದ್ರು...ನಿಮಗೆ ಹೇಳೋದು...

**ವಿಮಲಮ್ಮ:** ಆಗಲೇ ಹೇಳಬಾರದಿತ್ತಾ ನೀಲವ್ವ? ಹೂವಿನ ಸರಸಮ್ಮ ಹೂ-ಹಣ್ಣು ತಕ್ಕೊಂಡು ಹೋಗಿ ಬಿಟ್ಳು...ಗಿಡದಲ್ಲಿ ಹಣ್ಣು ಇರೋ ಹಾಗಿಲ್ಲ...ರೂಮಿನ ಹುಡುಗರ ಗಿಡುಗನ ಕಣ್ಣು ತಪ್ಪಿಸಬೇಕಲ್ಲ? ಅದಕ್ಕೆ ಕೊಟ್ಟು ಬಿಟ್ಟೆ. ಹಣ ತಾ ಇಲ್ಲಿ ...ನಾಳೆ ಕೊಡ್ತೇನೆ...ಅವರಿಗೆ ಹಾಗೇ ಹೇಳು....

(ಬಾಗಿಲು ತಟ್ಟಿದ ಸದ್ದು)

**ವಿಮಲಮ್ಮ:** ಯಾರು ನೋಡು ನೀಲವ್ವ? ಓ ನೀವಾ...ಬನ್ನಿ ಅಂಜನಮ್ಮ... ಇದೇನು ಇಷ್ಟು ಬೆಳಿಗ್ಗೆ?

**ಅಂಜನಾ** ನಿನ್ನೆ ಅವರು ಊರಿಂದ ಬಂದ್ರು...ಎಳನೀರು...ಹಲ್ವ...ಇದೆಲ್ಲ ತಿಂಡಿ ತಂದ್ರು...ನಿಮ್ಮ ಪಾಪೂಗೆ ತಿಂಡಿ ಪ್ರೀತಿಯಲ್ವೆ? ಅದಕ್ಕೇ ತಂದುಬಿಟ್ಟೆ.

**ವಿಮಲಮ್ಮ:** ಇಷ್ಟೊಂದು ಯಾಕೆ ತಂದದ್ದು? ಚಿಕ್ಕ ಅಂಗಡೀನೇ ಇಡಬಹುದಲ್ಲ? ನಿಮ್ಮ ಕೈಯೇ ದೊಡ್ಡದು. ನಿಮ್ಮ ಮನಸ್ಸಿಗೆ ಹಾಗೆ ಬಿಡಿ!

(ನೀಲವ್ವ ಅಚ್ಚರಿಯಲ್ಲಿ ನೋಡುತ್ತಾಳೆ.)

**ಅಂಜನಾ:** ಇವೊತ್ತು ನಮ್ಮಲ್ಲಿ ನನ್ನೆಲ್ಲ ಸ್ನೇಹಿತೆಯರಿಗೆ ಊಟಕ್ಕೆ ಕರೆದಿದ್ದೇನೆ. ನೀವೂ ಬರಬೇಕು. ಅವರ ಸ್ನೇಹಿತರೂ ಬರ್ತಾರೆ...ನಿಮ್ಮವರಿಗೆ ನೀವು ಹೇಳಬೇಕು ಅವರು...

**ವಿಮಲಮ್ಮ:** ಅವರು ಹಾಗೆಲ್ಲ ಸುಲಭದಲ್ಲಿ ಸಿಗ್ತಾರೆಯೇ? ನಾನು ಕಾಣುವುದು ಪುಣ್ಯವಾಗಿದೆ. ಒಂದೇ! ಎರಡೇ ಕೆಲಸಗಳು! ಆ ಕಮಿಟಿ, ಈ ಕಮಿಟಿ, ಇದರಲ್ಲೇ ಹೊತ್ತು ಹೋಗ್ತದೆ...ಮನೆಯ ಜವಾಬ್ದಾರಿಗೆ ನಾನಿದ್ದೇನಲ್ಲ...ನಾಲಗೆ ಚಪಲ ಅಷ್ಟಿಷ್ಟಲ್ಲ...ಅಡಿಗೆ ಮಾಡಿ ಕಾಯೋದು...ಬಿಟ್ಟು ಊಟ ಮಾಡುವುದಕ್ಕೆ ಮನಸ್ಸಾದರೂ ಹೇಗೆ ಬರುತ್ತದೆ ಹೇಳಿ? ಕಾಯೋದು ನನ್ನ ದಿನದ ಕೆಲಸ ನೋಡಿ!

**ಅಂಜನಾ:** ಉಂಟೇ? ಮನೆಯವರು ಊಟಮಾಡದೆ ನಾವಾದ್ರೂ ಹ್ಯಾಗೆ ಊಟ ಮಾಡಬೇಕು? ಅವರು ಊರಿಗೆ ಹೋದ್ರೆ...ಅನ್ನ-ಉಪ್ಪಿನಕಾಯಲ್ಲಿ ನಾನು ಊಟ ಮುಗಿಸುತ್ತೇನೆ...ತಂದ ತರಕಾರಿ ಅಲ್ಲೇ ಮೂಲೆಯಲ್ಲಿ ಕೊಳೆತು ಬಿದ್ದಿರುತ್ತದೆ.

**ವಿಮಲಮ್ಮ:** ಅದಕ್ಕೇ ಹೇಳಿದ್ದು. ಅವರು ಬರೋದನ್ನ ನಂಬಬೇಡಿ. ನಾನು ಪಾಪು ಬರ್ತೇವೆ. ನೆರೆಯಲ್ಲಿರೋ ನಿಮ್ಮ ಮನೆ, ನನ್ನ ಮನೆ ಇದ್ದ ಹಾಗೆ.

**ಅಂಜನಾ** ಮನೆಯಲ್ಲಿ ಇನ್ನು ತಯಾರಿ ಆಗಬೇಕು...ನೀವು ಬೇಗ ಬಂದು ಬಿಡಿ...

**ವಿಮಲಮ್ಮ:** (ದೇಶಾವರಿ ನಗು) ಸ್ವಲ್ಪ ಕೂತುಕೊಳ್ಳಿ....ಚಹಾ ಮಾಡಿಕೊಂಡು ಈಗ ಬರ್ತೇನೆ. ಎರಡು ನಿಮಿಷದಲ್ಲಿ ಚಹಾ ತಯಾರು.

**ಅಂಜನಾ:** (ಎದ್ದು ಹೊರಡುತ್ತ) ಛೆ...ಛೆ...ನಾನೀಗ ಕುಡಿದೇ ಬಂದದ್ದು... ಈಗೇನೂ ಬೇಡ. ಊಟಕ್ಕೆ ಮಾತ್ರ ಬೇಗ ಬನ್ನಿ. (ಹೋಗುತ್ತಾಳೆ.)

**ನೀಲವ್ವ:** ಅಂಜನಮ್ಮ ಮನೆಗೆ ಯಾರಾದ್ರೂ ಬಂದ್ರೆ ಅವರನ್ನ ಕೇಳೋದೇ ಇಲ್ಲ... ಸರಸರ ಒಳಗೆ ಹೋಗಿ ಮಾಡಿಕೊಂಡೇ ಚಹಾದ ಕಪ್ಪು ಕೈಯಲ್ಲಿ ಕೊಟ್ರೇ ಸಮಾಧಾನ. (ಬಾಗಿಲು ತಟ್ಟುವ ಸದ್ದು. ನೀಲವ್ವ ಹೊರಕ್ಕೆ ಹೋಗಿ ಮತ್ತೆ ಬಂದು) ಬಲಗಡೆ ರೂಮಿನಲ್ಲಿರೋ ದಿನೇಶ ರಾಯರು, ಚಂದ್ರಣ್ಣ ಬಂದಿದ್ದಾರೆ.

**ವಿಮಲಮ್ಮ:** ಯಾಕಂತೆ?

**ಚಂದ್ರೂ:** ಒಂದು ವಾರದಿಂದ್ಲೂ ಮೇಲಿನ ಹಂಚು ಒಡೆದದ್ದು ಹೇಳಿದ್ದೇ ಬಂತು. ನಿಮ್ಮ ಮಿಸ್ಟರ್ ಕಣ್ಣಿಗೆ ಬಿದ್ರೆ ಹೇಳಿ. ಕಸಕಡ್ಡಿ-ಬಿಸಿಲು-ಸಾಲದ್ದಕ್ಕೆ ಮಂಗ ಬಂದು ಸ್ಟ್ಯಾಂಡಿನಲ್ಲಿರೋ ಬಟ್ಟೆ, ಟೇಬಲಿನ ಮೇಲಿಟ್ಟ ತಿಂಡಿ ಹಾಳು ಮಾಡೋದನ್ನು ಸುಮ್ಮನೆ ಸಹಿಸಬೇಕಾಗಿದೆ. ಗೋಡೆಗೆ ಸುಣ್ಣ ಕೊಡ್ತೇನೆ ಎಂದಿದ್ರು...ತಗಣೆ-ಸೊಳ್ಳೆ ಕಾಟದಲ್ಲಿ ನಿದ್ದೆಯಂತೂ ಸೊನ್ನೆಯಾಗಿ ಬಿಟ್ಟಿದೆ. ರೂಮಿಗೆ ಬರೋವಾಗ ಸುಣ್ಣ ಕೊಡಿಸ್ತೇನೆ, ಫರ್ನೀಚರ್ ಕೊಡ್ತೇವೆ ಅಂದಿದ್ರು...ಒಂದು ವರ್ಷವಾದ್ರೂ...

**ವಿಮಲಮ್ಮ:** (ಅಸಹಾಯಕಳಂತೆ) ನನಗೂ ಗೊತ್ತಿದೆ...ನನ್ನ ಹಠೀಟರಹ ಯಾರು ಬದಲು ಮಾಡೋದಕ್ಕೆ ಬರ್ತದೆ ಹೇಳಿ? ಓದೋ ಹುಡುಗರಿಗೆ ಎಲ್ಲಾ ಅನುಕೂಲ ಮಾಡಬೇಕೆಂದು ನನಗೂ ಗೊತ್ತು. ಆದ್ರೆ ನಮ್ಮವರ ಸ್ವಭಾವ ನಿಮಗೂ ಗೊತ್ತಿಲ್ಲ? ಯಾವುದನ್ನೂ ಮಾಡೋದಿಲ್ಲ...ಹೆಣ್ಣು ಹೆಂಗಸು ನಾನು...ಪಾಪುನ್ನ ಕಟ್ಟಿಕೊಂಡು...ನೀವೆಲ್ಲ ಇಲ್ಲಿದ್ದೀರೆಂತ್ಲೇ ನಾನು ಬದುಕಿರೋದು! ಇವರ ಉಪದ್ರಕ್ಕೆ ನನ್ನ ತೌರೂರು ನನಗೆ ಎರವಾಗಿದೆ. ಮುಂದಿನ ತಿಂಗಳು ಬಾಡಿಗೆ ಕೊಡ್ತೀರಲ್ಲಾ? ನಾನೇ ನಿಂತು ಸುಣ್ಣ-ರಿಪೇರಿ ಮಾಡ್ತೇನೆ.

(ದಿನೇಶ್-ಚಂದ್ರೂ ಹೋಗುತ್ತಾರೆ)

**ವಿಮಲಮ್ಮ:** (ತಿರಸ್ಕಾರದಿಂದ) ಸುಣ್ಣ ಕೊಡಬೇಕಂತೆ! ಸುಣ! ನರ್ಮದಾ ಬಾಯಿ ಅಮ್ಮಾವ್ರ ಒಂದು ರೂಮಿಗೆ ೪೫ ರೂ. ಬಾಡಿಗೆ ತಕ್ಕೊಳ್ಳುತ್ತಾಳೆ. ಸುಣ್ಣ ಬಣ್ಣ–ರಿಪೇರಿ ಹೆಸರೂ ಅವಳೆದುರು ಎತ್ತುವ ಹಾಗಿಲ್ಲ. ನಾನು ಪಾಪ, ಓದೋ ಹುಡುಗರು ಅಂತ ೪೦ ರೂ.ಗೆ ರೂಮು ಕೊಟ್ಟಿದ್ದು. ರಾತ್ರಿಯೆಲ್ಲಾ ಲೈಟು ಉರಿಸೋದು, ಗಲಾಟೆ ಮಾಡೋದು. ಇವರು ಓದೋದಕ್ಕೆ ಬಂದದ್ದೂ–ಸುಣ್ಣ ಬಣ್ಣ ಯಾಕಂತೆ? ನಾನು ಹೆಣ್ಣು ಹೆಂಗಸು...ಧತ್ ಅಂತ ನನ್ನೆದುರು ಬಂದು ನಿಲ್ಲುತ್ತಾರೆ. ಹೇಳೋದಿಲ್ಲ, ಕೇಳೋದಿಲ್ಲ...ಲೈಟು, ನೀರು ಕೊಟ್ಟ ರೂಮಿಗೆ ೪೦ ರೂ. ಅಂದ್ರೆ...ದಮ್ಮಯ್ಯ ಅಂತ ಬರ್ತಾರೆ. ಹೋದ್ರೆ ಹೋಗ್ಲಿ...ನಮಗೇನು ಇವರೇ ಬೇಕಂತ ಇಲ್ಲವಲ್ಲಾ! ನೀಲವ್ವ ನಿಂಗೆ ಸಂಬಳ ಕೊಟ್ಟಿದ್ದಾರಲ್ಲ?

**ನೀಲವ್ವ:** ಸಂಬಳ ಯಾಕೆ? ಮೊನ್ನೆ ನನ್ನ ಮಗನಿಗೆ ಜ್ವರ ಬಂದು ಹಾಸಿಗೆ ಹಿಡಿದಾಗ ನಿಮ್ಮ ಹತ್ರ ಹಣ ಕೇಳಿದೆ...ನೀವು ಈಗಿಲ್ಲ ಎಂದ್ರಿ...ಆಗ ಇವರೇ ಡಾಕ್ಟರಲ್ಲಿ ನನ್ನ ಮಗನ್ನ ಕರಕೊಂಡು ಹೋಗಿ ಔಷಧ, ಟಾನಿಕು, ಬಿಸ್ಕೀಟು ತಂದು ಕೊಟ್ಟು–ಸಂಬಳಾನೂ ಕೊಟ್ಟು ಕಳಿಸಿದ್ರು.

**ವಿಮಲಮ್ಮ:** ನಿನಗೆ ಇನ್ನೊಬ್ರು ಮನೆ ಎಂಜಲಾನೇ ತುಂಬ ರುಚಿ ನೀಲವ್ವ. ಇಷ್ಟು ರೂಮಿನವರ ಸಂಬಳ ನಿನಗೆ ಬರೋ ಹಾಗೆ ಮಾಡಿದ್ರೂ...ನನ್ನ ಬಗ್ಗೆ ಒಂದು ಒಳ್ಳೆಯ ಮಾತು? ಹೋಗ್ಲಿ ಬಿಟ್ಟೆ ಕೆಲಸ ಮಾಡೋ ಹಾಗೆ ಪಾತ್ರೆಗೆ ಬರಿ ಕೈ ಆಡಿಸಬೇಡ. ಪಾತ್ರೆ ಲಕ ಲಕ ಹೊಳೆಯುವ ಹಾಗೆ ಮಾಡು.

(ವಠಾಣಿಯು ಬುಟ್ಟಿ ಕೈಯಲ್ಲಿ ಹಿಡಿದು ವಿಮಲಮ್ಮ ಅಡಿಗೆ ಕೋಣೆಗೆ ಹೋಗುತ್ತಾಳೆ)

**ನೀಲವ್ವ:** ಅಬ್ಬಾ! ಈ ಅಮ್ಮಗೆ ಜಗತ್ತಿನಲ್ಲಿ ಯಾರಾದ್ರೂ ಒಳ್ಳೆಯವರು...ಕಂಡದ್ದು ನಾನಂತು ನೋಡಿಲ್ಲ. ಕೈ ಬಿಚ್ಚಿ ಒಂದೇ ಒಂದು ಪೈಸೆ ಕೊಟ್ಟಿದ್ದೂ ಇಲ್ಲ. ಇವರ ಮನೆಕೆಲಸದ ಸಂಬಳ ಹುಡುಗರ ಲೆಕ್ಕಕ್ಕೆ! ಹೋಗೋವಾಗ ಏನು ತಕ್ಕೊಂಡು ಹೋಗ್ತಾರೇ ಮಣ್ಣು!

## ದೃಶ್ಯ-೩

(ರಂಗಭೂಮಿಯ ನಡುವೆ ಒಂದು ತೆರೆ. ಒಂದು ಬದಿಗೆ ವಿದ್ಯಾರ್ಥಿಗಳ ರೂಮಿನ ಒಂದು ಭಾಗ ತೆರೆಯ ಇನ್ನೊಂದು ಬದಿಗೆ ಮನೆಯೊಡೆಯರ ಅಡಿಗೆ ಕೋಣೆಯ ದೃಶ್ಯ ಕಾಣುವಂತಿರಬೇಕು. ವಿದ್ಯಾರ್ಥಿಗಳ ರೂಮಿನಲ್ಲಿ ಮಾತು ಕತೆ ನಡೆದಿದೆ.)

**ದಿನೇಶ್:** ನೀವಿಬ್ರೂ ಬಂದದ್ದು ನಮಗೆ ಪ್ರಾಣವಾಯು ಸಿಕ್ಕಿದಂತಾಯ್ತು. ಇಲ್ಲಿ ಬೋರ್ ಹೊಡೆದುಬಿಟ್ಟಿತ್ತು. ಇಂಥ ಗಂಡ–ಹೆಂಡ್ತಿ ದೀಪ ಹಿಡಿದುಹುಡುಕಿದ್ರೂ ಎಲ್ಲೂ ಸಿಗಲಿಕ್ಕಿಲ್ಲ ಪ್ರಸಾದ. ನೀವು ಬರೋ ಮೊದಲು LandLord ನ ದಾಳಿ ನಮ್ಮ ರೂಮಿಗೆ. ಬೆಳಿಗ್ಗೆದ್ದು ಅವನ ಶೇವ್‌ನಿಂದ ಪ್ರಾರಂಭವಾದ ಕಾರ್ಯಕ್ರಮ ಟಿಫೀನು ಮುಗಿಸಿ–ಮತ್ತೆ ರಾತ್ರಿಯ ನಮ್ಮ ಹೋಟೇಲಿನ ಊಟಕ್ಕೂ ಹಾಜರಾಗ ಬಿಡುತ್ತಿದ್ದ. ತೂಗಾಡುತ್ತ ಬರುವ ಅವನನ್ನು, ಆ ವಾಸನೆಯನ್ನು ತಡೆದು ತಡೆದು ಸಾಕಾಗಿತ್ತು. ನಾಲ್ಕು ದಿನ ಅವನು ಈ ರೂಮಿಗೆ ದರ್ಶನ ಕೊಡಲಿಲ್ಲ. ದೇವರಿಗೆ ಕಾಯಿ ಒಡೆದು ಬಂದು ಬಿಟ್ಟೆವು. ಆದ್ರೆ ಈಗ ನಿಮ್ಮ ಮಾತಿನಿಂದ ತಿಳಿದದ್ದು ಪುಣ್ಯಾತ್ಮನ ದರ್ಶನ ನಿಮ್ಮ ರೂಮಿಗೆ ಆಗುತ್ತಿತ್ತೆಂದು. ಕಿಟ್ಟು ಅವನಿಂದ ಬಿಡುಗಡೆ ಹೊಂದೋದು ಬಹಳ ಕಷ್ಟಪ್ಪಾ...

**ಪ್ರಸಾದ:** ಇದೆಲ್ಲ ನೋಡಿದ್ರೆ...ನಾವೇನಪ್ಪಾ...ಹೊರಗೆ ಇರೋವರು...ಆದ್ರೆ ಅವನ ಹೆಂಡ್ತಿ!

**ಚಂದ್ರೂ:** ಹಾ...ಹಾ...ಹಾಗೆ ತಿಳಿದುಕೊಬೇಡ...ಸೇರಿಗೆ ಸವ್ವಾಸೇರು ಅಂತಾರಲ್ಲಾ ಹಾಗೆ. ಇಬ್ರು ಜೊತೆ ಬರಾಬರಿ ಇದೆ. ಅದಕ್ಕೆ ಒಗ್ಗರಣೆ ಕೊಡೋದಕ್ಕೆ ಚಿರಂಜೀವಿ ಇದ್ದಾನೆ.

**ಕಿಟ್ಟು:** ನಾನಂತೂ ಈ ರೂಮಿಗೆ ಬಂದ ಮೇಲೆ ನಿದ್ದೇನೇ ಮಾಡಿಲ್ಲಪ್ಪಾ...ದಿಂಬಿಗೆ ತಲೆ ಇಟ್ಟೆನೋ ಇಲ್ವೊ? ಒಳಗೆ ಏನು ಮಾಡ್ತಾರೋ...ಕಿವಿಯಲ್ಲಿ ಶಂಖ ವಾದ್ಯ ಊದಿದ ಹಾಗೆ! ಕಾಲೇಜ ಬಿಟ್ಟತೂ ಅಂದ್ರೆ...ನಾನಂತೂ ರೂಮಿನ ಶೋಧದಲ್ಲಿ ತೊಡಗಿದ್ದೇನೆ.

**ಚಂದ್ರೂ:** ರೂಮು ಸಿಗೋ ಛಾನ್ಸ್ ಇದೆಯಾ?"

**ಕಿಟ್ಟು:** (ಬೇಸರದಲ್ಲಿ) ಒಂದು ಚಿಕ್ಕ ಮನೆಯೇನೋ ಖಾಲಿ ಇದೆ...ಆದ್ರೆ ರೂಮಿಲ್ಲ ...ಮನೆ ಬಾಡಿಗೆ ನಾವಿಬ್ರೂ ಹೇಗೆ ವಹಿಸಿಕೊಳ್ಳೋದು? ಇದೇ ಈಗಿರೋ ಸಮಸ್ಯೆ.

**ದಿನೇಶ್:** ಯಾಕೆ ಚಂದ್ರೂ ನಾವೂ ಈ ಅರಮನೆಯ ಋಣದಿಂದ ಪಾರಾಗೋ ಯೋಚನೆ ಮಾಡಬಾರದು? ಎಲ್ರೂ ಒಟ್ಟಾಗಿ ಆ ಮನೆ ಹಿಡಿದು...

**ಚಂದ್ರೂ:** Thank you ಮೈ ಫ್ರೆಂಡ ಕಿಟ್ಟೂ...ನಿನ್ನ ಬಾಯಲ್ಲಿ ಸಕ್ಕರೆ ಬೀಳಲಿ. (ಮೆಲ್ಲನೆ ಪ್ರಸಾದನ ಕಿವಿಯಲ್ಲಿ ಸಕ್ಕರೆ ಹೆಚ್ಚು ಕೇಳಬಾರದಪ್ಪಾ ಇವನು! ಅದಕ್ಕೂ ರೇಶನ್ ಆಗಿದೆ!) ನಾಲ್ಕು ಜನ ಸೇರಿ ಆ ಮನೆ ತಕ್ಕೊಳ್ಳೋಣ. ಈ ಮಹಾಶಯನಿಗೆ ಗುಡ್‌ಬೈ ಹೇಳೋಣ. ಇಲ್ಲಾಂದ್ರೆ ಸಂಸಾರದಲ್ಲಿ ವಿರಕ್ತಿ ಉಂಟಾಗಿ ನಾವು ಕಲಿತು ಡಿಗ್ರಿ ತೆಗದುಕೊಳ್ಳುವ ಬದಲು ಸನ್ಯಾಸಿಂಗಾಗಿ ಕಾಡು ಸೇರುತ್ತೇವೆ.

**ಕಿಟ್ಟು:** ಇಲ್ಲಾ ತಲೆ ಕೆಟ್ಟು ಹುಚ್ಚರಾಸ್ಪತ್ರೇನೇ ನಮ್ಮ ಮುಂದಿನ ಕಾಲೇಜಾದ್ರೆ?

[ಎಲ್ಲರೂ ನಗುತ್ತಾರೆ]

**ದಿನೇಶ್:** (ಕಿವಿ ಆಲಿಸಿದಂತೆ ಮಾಡಿ) ನಿಮ್ಮಿಬ್ರಿಗೂ ಒಂದು ಹೊಸ ಜಗತ್ತು ತೋರಿಸುತ್ತೇನೆ...ತಯಾರಿದ್ದೀರಾ? ಬೊಂಬೈಕಾ ರಾಜಾ ದೇಖೋ...ಡಿಲ್ಲಿಕಾರಾನಿ ದೇಖೋ.

**ಕಿಟ್ಟು:** ಏನಿದು? ಏನು? ರಾಜಾ ಎಲ್ಲಿ? ರಾಣಿ ಎಲ್ಲಿ? ಏನು ಮಾತಿದು?

**ಚಂದ್ರೂ:** ನಿಮಗೆ ಮಹಾಶಯನ ಒನ್‌ಆಕ್ಟ್ ಪ್ಲೇ ನೋಡಬೇಕಾ? ಟಿಕೇಟಿಲ್ಲಾ, ಫ್ರೀ ಶೋ. ನೋಡೋ ಕಿಟ್ಟೂ ಇವನ ಕಾಟ ಒಂದು ದಿನ ಬಹಳ ಆಗಿತ್ತು. ಅವನ್ನ ಹೊಡೆದು ಬಿಡೋಷ್ಟು ಸಿಟ್ಟು ಬಂದಿತ್ತು. ಕಿಟಕಿ ಬಾಗಿಲು ಒಡೆದು ಬಿಡಬೇಕಂತ ಕೈ ಎತ್ತಿದೆ. ಕಿಡಿಕಿಯಲ್ಲಿ ಒಂದು ರಂಧ್ರ ಕಾಣಿಸಿತು. ಹೀಗೆ ಕಣ್ಣಿಟ್ಟೆ. ಓಬೀರಾಯನ ಕಾಲದ ಮುರುಕು ಸ್ಟೂಲಿನಲ್ಲಿ ಕೂತು ಮುರುಕು ಟೇಬಲಿನ ಮೇಲೆ ಊಟ ಮಾಡುತ್ತಿದ್ದ.

**ಪ್ರಸಾದ:** ಊಟ ಎಂದ ಕೂಡ್ಲೆ ನೆನಪಾಯಿತು. ಅವನ ಹೆಂಡತಿ ಅಡಿಗೆ ಎಂದ್ರೆ ನಳಪಾಕ ಅಂತೆ? ಊಟಕ್ಕೆ ಏಳೆಂಟು ಬಗೆಯ ಅಡಿಗೆ ಇಲ್ಲದಿದ್ರೆ ಇವನ ಬಾಯಿಗೆ ಅನ್ನ ಸೇರೋದಿಲ್ಲಂತೆ!

**ಚಂದ್ರೂ:** (ಅಣಕಿಸುತ್ತ) ಛೇ...ಛೇ...ಛೇ...ಹೇಗೆ ರುಚಿ ಆಗಬೇಕು ಈ ಬಾದಷಹನಿಗೆ. ಬೇಗಂ ತಯಾರಿಸಿದ ಅಡಿಗೆ ಆ ಬಾದಷಹನಿಗೆ ಸಿಗುತ್ತಿತ್ತೊ ಏನೊ? ಇವನಿಗೆ ಸಿಗೋ ಅಡಿಗೆ ನಮಗೆ ಸಿಕ್ಕಿದ್ರೆ...

**ಕಿಟ್ಟು:** (ಬಾಯಲ್ಲಿ ನೀರೂರಿದಂತೆ) ಏನೋ ಅಷ್ಟು ಡಿಲೀಶಿಯಸ್ Food ಏನೋ ಅವನು ದಿನಾಲೂ ತಿನ್ನೋದು? ಹಾಗಿದ್ರೆ ಅವನ ಮನೆ ಬೆಕ್ಕಾದ್ರು ನಾನು


 ದೀಪಾವಳಿಯು ಶುಭದಾಯಕವಾಗಲಿ ! 

ಆಟೋಮೊಬೈಲ್, ಕಾರ್ ಬಿಡಿಭಾಗಗಳು

A....ದಿಂದ Z ವರೆಗಿನ ನಿಮ್ಮ ಎಲ್ಲ ಅವಶ್ಯಕತೆಗಳನ್ನು ಪೂರೈಸಲಾಗುತ್ತದೆ.

ದಯವಿಟ್ಟು ಸಂಪರ್ಕಿಸಿರಿ:

ರಾಧಾಕೃಷ್ಣ

ಆಟೋ ಸೆಂಟರ್

ಪುಣೆ-ಬೆಂಗಳೂರು ರಸ್ತೆ, ದಾವಣಗೆರೆ

ಫೋನ ನಂ. : 48 pp.



ಆಗಬೇಕಿತ್ತು. ಜೀವನದಲ್ಲಿ ಆಹಾರಕ್ಕಾಗಿ ಅಲ್ಲವೇನೋ ಮನುಷ್ಯ ಇಷ್ಟೆಲ್ಲ ಕಷ್ಟ ಪಡೋದು? ಅದು ಸಿಕ್ಕ ಮೇಲೆ...

**ದಿನೇಶ್:** ಹಾಂ!...ಆತುರ ಬೇಡ ಗೆಳೆಯ! ನಿಧಾನ...ಗಡಿಬಿಡಿಯಲ್ಲಿ ಅವನ ಊಟದ ರುಚಿ ಕೆಟ್ಟೀತು.

**ಕಿಟ್ಟು:** ಈಗ ಅವನು ಊಟ ಮಾಡೋ ಸಮಯವೇನೋ?

**ಚಂದ್ರೂ:** ಶುಶ್...ಮೆಲ್ಲಗೆ ಮಾತಾಡು. ಈಗ ಬಂದಂತೆ ಕಾಣುತ್ತದೆ...ದಿನೇಶ್ ನಮ್ಮ ರೇಶ್ ವಿಂಡೋದ ಕರ್‍ಟನ್ ಸ್ವಲ್ಪ ಓರೆ ಮಾಡು..ಇವರೂ ಸ್ವಲ್ಪ ಕಣ್ಣೋಡಿಸಲಿ.

**[ಕಿಟ್ಟು, ಪ್ರಸಾದ ಆತುರದಿಂದ ಕಾಟಿಘಲ್ಲಿ ಕಾಲೂರಿ ಬಗ್ಗಿ ಕಿಡಿಕಿಯಲ್ಲಿದ್ದ ರಂಧ್ರದಲ್ಲಿ ಕಣ್ಣಿಡುತ್ತಾರೆ].**

(ಒಳಗಿನ ದೃಶ್ಯ ಕಾಣುತ್ತದೆ. ಯಜಮಾನ ತೂರಾಡುತ್ತ ಬಂದು ಮುರುಕು ಕುರ್ಚಿಯಲ್ಲಿ ಧೊಪ್ಪನೆ ಕೂತುಕೊಳ್ಳುತ್ತಾನೆ. ಕೆದರಿದ ತಲೆಗೂದಲು. ಕೆಂಪಗಾದ ಕಣ್ಣುಗಳು–ಕೊಳೆ ತುಂಬಿದ ಶರ್ಟು ಹರಿದ ಪ್ಯಾಂಟು...ಎದುರಿಗೆ ಒಂದು ಊಟದ ತಟ್ಟೆ...ಮುಂದೆ ಒಡಕು ಹಿತ್ತಾಳಿಯ ಪಾತ್ರೆ ಒಂದೆರಡು. ಅದರಲ್ಲಿ ಒಂದು ಸೌಟು, ಕಿಟ್ಟು, ಪ್ರಸಾದ ನೋಡಿ ಹೊರಗೆ ಮುಖ ತಿರುಗಿಸಿ ದಿನೇಶ, ಚಂದ್ರುನನ್ನು ಇದೇನು ಎಂದು ಪ್ರಶ್ನಿಸುತ್ತಾರೆ.)

**ದಿನೇಶ್:** ಇನ್ನೂ ಮುಂದೆ ನೋಡು... One act play ...ಇಂಟ್ರವೆಲ್ ಸ್ಟ್ರಿಂಗ ಪಾರ್ಟು ಬಂದಾಗ ನೀವು ಕಣ್ಣು ತಿರುಗಿಸಿದ ಹ್ಯಾಗೆ?

**(ಕಿಟ್ಟು ಪ್ರಸಾದ ಮತ್ತೆ ಕಿಡಿಕಿಯ ರಂಧ್ರದಲ್ಲಿ ಕಣ್ಣಿಡುತ್ತಾರೆ)**

**ವಸಂತರಾಯ:** (ಪಾತ್ರೆಯಲ್ಲಿ ತಣ್ಣಗಿನ ಹಿಮಂದೀಕಿರುವ ಅಡಿಹೊತ್ತಿದ್ದ ಅನ್ನಕ್ಕೆ ಸೌಟು ಹಾಕಿ) ಸಾಕು...ಸಾಕು...ಎಷ್ಟು ಬಡಿಸೋದು? ನನಗೆ ಬಡಿಸಿದಷ್ಟು ತೃಪ್ತಿ ಇಲ್ಲ...ಹೊಟ್ಟೆ ತುಂಬದು? ಸಾರು...ಹಾಂ...ಎಷ್ಟು ರುಚಿ! ನಿನ್ನ ಕೈಯಲ್ಲಿ ಮೊದಲ ದಿನ ತಿಂದದ್ದೆ ನಾನು ನಿನ್ನನ್ನ ಬಿಟ್ಟು ಬೇರೆಯ ವರನ್ನ ಮದುವೆ ಆಗುವುದಿಲ್ಲ ಎಂದು ಹಟ ಹಿಡಿದದ್ದು. ವಾಹ್...ಇಷ್ಟೆಲ್ಲ ಯಾಕೆ ಮಾಡಬೇಕು? ನನಗಾಗಿ? ಎಷ್ಟು ಸಲ ಹೇಳಿದೆ...ನೀನು ದಣಿದುಕೊಬೇಡಾ ಎಂದು...ಎಲ್ಲಿ ಕೇಳ್ತಿ? ಇಷ್ಟೆಲ್ಲ ಮಾಡಿ ನನಗೆ ತಿನಿಸಿದಾಗ್ಲೆ ನಿನಗೆ ಸಮಾಧಾನ... ಸಾಕು. ಸಾಕು. (ಮತ್ತೆ ಇನ್ನೊಂದು ಪಾತ್ರೆಯಲ್ಲಿಯ ಸಾರು ಹಾಕಿಕೊಂಡು) ನನ್ನ ಫ್ರೆಂಡ್ ದಿನಕರ್‌ನನ್ನು ಒಂದು ಸಲ ಕರ್‍ಕೊಂಡು ಬರ್‍ತೇನೆ...ಭಾರಿ ಹೇಳಿಕೊಳ್ತಾನೆ ತನ್ನ ಹೆಂಡತಿ ಅಡಿಗೆ ಅಂದ್ರೆ ಎಂಥವನೂ ಬೆರಳು ಕಚ್ಚಬೇಕಂತೆ. ಇಲ್ಲಿ ಬರಲಿ... ಅವನ ಸೊಕ್ಕೆಲ್ಲ ಜರ್‍ರನೆ ಇಳಿದು ಹೋಗುತ್ತದೆ...ಕರೆದುಕೊಂಡು ಬರಲಾ?. ಹಾಂ...ನೆನಪಾಯಿತು...ನಮ್ಮ ರೂಮಿನ ಹುಡುಗರು ತುಂಬಾ ಒಳ್ಳೆಯವರಲ್ಲಾ? ಅವರಿಗೆ ಏನು ಬೇಕಾದ್ರೂ ಕೊಡು ನಮ್ಮ ಪಾಪು ಅವರ ರೂಮಿನಲ್ಲೇ ಇರ್‍ತಾನೆ ಅಂತೀಯಾ? ಇರಲಿ, ಏನು ಪೆಪ್ಪರಮೆಂಟ್–ಬಿಸ್ಕಿಟ್ ಕೊಡ್ತಾರಾ?...ಅದಕ್ಕೆ ಪಾಪು ಅಲ್ಲಿಗೆ ಓಡೋದು....

**(ಊಟ ಮುಗಿಸಿ ತೇಗು ತೆಗೆದು ಎದ್ದಾಗ ಯಜಮಾನಿ ಬರುತ್ತಾಳೆ. ಮಾತು ಈಗ ಪಿಸುಗುಟ್ಟದಂತೆ.)**

**ವಿಮಲಮ್ಮ:** ಹಗಲೆಲ್ಲ ದಣಿದು ರಾತ್ರಿ ಮಲಗಬೇಕೆಂದರೆ...ಇದೇನು ಬರುವ ಸಮಯವೇನು? ನಾಚಿಕೆ ಬಿಟ್ಟ ಮನುಷ್ಯನಿಗೆ ಏನು ಹೇಳೋದು? ಅಂಜನಾಸ ಗಂಡ ಕೇಳೋ ಮೊದಲೇ ಬೇಕಾಗುವುದಕ್ಕೂ ಹೆಚ್ಚು ತಂದು ಕೊಡುತ್ತಾನೆ...

**ವಸಂತರಾಯ:** ನಿನಗೆ ಯಾರು ತಂದು ಕೊಡಬೇಕು? ನೀನೇ ಈ ಮನೆಯಲ್ಲಿ ಗಂಡು!

**ವಿಮಲಮ್ಮ:** ಯಾಕೆ ಗಂಡು? (ಸಿಟ್ಟಿನಲ್ಲಿ) ಸುಮ್ಮನೆ ಮನೆ ನಡಿಸಿಕೊಂಡು ಹೋಗ್ತೇನೆ ಅಂತ್ಲಾ?

**ವಸಂತರಾಯ:** ಮನೆ ಭಾಡಿಗೆ ನಿನಗೆ...ರೂಮಿನಲ್ಲಿ ಉರಿಸೋ ಲೈಟು...ನೀರಿನ ಹಣದಲ್ಲಿ ನಮ್ಮ ಮನೆಯ ಎರಡೂ ಖರ್ಚು ಉಳಿಸಿಕೊಳ್ಳೋದು ಸುಳ್ಳಾ? ಅವರ ಹಣದಲ್ಲೇ ನೀರು ಕಾಯಿಸಿ...ಬಕೆಟ್ಟಿಗೆ ೩ ರೂ. ತಕ್ಕೊಳ್ಳುತ್ತಿ....ಅದೆಲ್ಲ ಹಣ ನಿನ್ನ ಕೈಗೆ. ನನಗೆ ಈ ತಣ್ಣಗಿನ ಅಡಿ ಹಿಡಿದ ಅನ್ನ...ಬೇಳೆಯ ನೀರು. ಹುಡುಗರ ರೂಮಿನಲ್ಲಿ ನನಗೆ ಬೆಳಿಗ್ಗೆ ತಿಂಡಿ.

**ವಿಮಲಮ್ಮ:** ನನ್ನ ತೌರುಮನೆ ಇದೆ...ಅವರು ಕಳಿಸೋ ಅಕ್ಕಿ...ಉಳಿದ ಸಾಮಾನಿನಲ್ಲಿ ಮನೆ ನಡೆಸಿದ್ರೆ...ನಿಮ್ಮಿಂದ ಇಂಥ ಮಾತು...ನನ್ನ ಅಕ್ಕ ತಂಗಿಯಂದಿರ ಗಂಡಂದಿರಿಗೆಲ್ಲ ಹೆಂಡ್ತಿ ಎಂದರೆ ಪಂಚಪ್ರಾಣ. ಇಲ್ಲಿ ನನ್ನ ಪ್ರಾಣ ಹೋದ್ರು ಯಾರು ಕೇಳೋರಿಲ್ಲ...ನಿನ್ನೆ ರಾತ್ರಿಯಾಗಿತ್ತು. ಬಾಗಿಲು ಬಡ ಬಡ ಬಡಿದ ಹಾಗಾಯ್ತು. ಯಾರು? ಎಂದೆ. ಉತ್ತರ ಬರಲಿಲ್ಲ...ಮತ್ತೊಮ್ಮೆ ಕೇಳಿದೆ...ಆದರೂ ಉತ್ತರವಿಲ್ಲ. ಹೋಗಿ ಬಾಗಿಲು ತೆಗೆದೆ...ಧುತ್ ಎಂದು...ಹೊಸದಾಗಿ ಬಂದ ಹುಡುಗ ಕಿಟ್ಟು ಬೆಟ್ಟದ ಹಾಗೆ ಒಳಗೇ ಬಂದು "ನನಗೆ ಕುಡಿಯೊ ನೀರು ಬೇಕಿತ್ತು. ಎಂದ. ನನ್ನೆದೆ ಗಡ ಗಡ ನಡುಗಿ ಬಿಟ್ಟಿತು. ಗಂಟಲಲ್ಲಿದ್ದ ನೀರು ಆರಿ ಹೋಗಿತ್ತು. ಹೇಗೋ ನೀರು ಕೊಟ್ಟು ಕಳಿಸಿದೆ. ಅವನೇನಾದ್ರೂ ಮಾಡಿದ್ದರೆ? ನೀವು ಗಂಡಸಾದಿ ಏನು ಪ್ರಯೋಜನ? ಮನೆಯಲ್ಲಿ ಏನಾದ್ರು ಆದ್ರೆ ಯಾರಿದ್ದಾರೆ ನನಗೆ?

**(ಕಿಟ್ಟು ಪ್ರಸಾದ ಗರಬಡಿದವರಂತೆ–ಕಿಟಕಿಯ ರಂಧ್ರದಿಂದ ಮುಖ ತಿರುಗಿಸಿ–ಮಂಚದ ಮೇಲೆ ದೊಪ್ಪನೆ ಕುಸಿದು ಬೀಳುತ್ತಾರೆ. ದಿನೇಶ್–ಚಂದ್ರೂ ಒಟ್ಟಿಗೇ ಕೇಳುತ್ತಾರೆ.)**

**ದಿನೇಶ್ ಚಂದ್ರೂ:** ಏನೋ ಏನಾಯಿತು? ದಿನೇಶ್ ಯಾಕೆ ಹೀಗೆ ಹುಳಿ ತಿಂದ ಮಂಗನ ಹಾಗಾಗಿದೆ ಮುಖ? ಅವನ ಸ್ಥಿತಿ ಕಂಡು ಕನಿಕರವೇ? ಇಲ್ಲಾ...ಅವರಿಬ್ಬರ ಸರಸ ಸಲ್ಲಾಪ ನೋಡಿ, ಕೇಳಿ ಹೊಟ್ಟೆ ಕಿಚ್ಚಾ?

**ಪ್ರಸಾದ:** ಮೊದಲ ಭಾಗ ಕಂಡು ಅವನ ಬಗ್ಗೆ ಕನಿಕರವಾಗಿದ್ದು ನಿಜ. ಆದರೆ ವಿಶ್ರಾಂತಿಯ ನಂತರ ಕಂಡು ಕೇಳಿದ ದೃಶ್ಯ ಭಯಂಕರ. ಹಾರಿಬಲ್.

**ಕಿಟ್ಟು:** (ಧ್ವನಿ ಗದ್ಗದಿತವಾಗಿ) ಕನಸು ಮನಸಿನಲ್ಲಿ ಎಣಿಸದೆ ಇದ್ದ ಮಾತು. ಇಂಥ ಮಾತು ಕೇಳೋದಕ್ಕೆ ನಾನು ನಿಂತ ಹಾಗೆ ಆಯ್ತು.

**ದಿನೇಶ್:** ಹುಡುಗಿಯರ ಹಾಗೆ ಕಣ್ಣು ತುಂಬಿತಲ್ಲ. ಎಂಥ ಮಾತು? ಛೆ... ಛೆ...ನಾಚಿಕೆ ಇದು...ಕಿಟ್ಟು, ಅನ್ಯಾಯ ಇದು.

**ಪ್ರಸಾದ:** ಮತ್ತೇನಯ್ಯಾ? ನಿನ್ನೆ ರಾತ್ರಿ ಕುಡಿಯೋದಕ್ಕೆ ನೀರಿರಲಿಲ್ಲ. ನಿಮ್ಮ ರೂಮ್ ಲಾಕ್ ಆಗಿತ್ತು. ಇನ್ನೆಲ್ಲಿ ಹೋಗಬೇಕು? ಈ ಗುಜ್ಜಾನೆ ಮರಿ ಮನೆಗೇ



ಹೋಗಬೇಕಲ್ಲ? ಕುಡಿಯುವ ನೀರು ಕೇಳಿದ್ರೆ ಅವಳಿಗೆ ಕಿಟ್ಟುನ್ನು ನೋಡಿ ಭಯ ವಾಯಿತಂತೆ...ಯಾರಿಲ್ಲದಾಗ ಇಂಥ ಹುಡುಗರು ಬಂದು ಏನಾದ್ರೂ ಮಾಡಿದ್ರೆ ಏನು ಮಾಡಬೇಕು? ಎಂದೂ ಗಂಡನ್ನ ಕೇಳಿದ್ಲು.

**ಚಂದ್ರೂ:** ಇಶ್ಶಿ...ಏನು ವಿಸೇಶ? ಹೀಗೆ ಹೇಳಿದವಳು ನಾಳೆ ನಮ್ಮನ್ನು ಹಿಡ್ಕಾ ಳೀಯೇ? ಒಟ್ಟಾರೆ ಇಲ್ಲಿದ್ರೆ ಒಂದಲ್ಲ ಒಂದು ದಿನ...

**ಕಿಟ್ಟು:** ನಾನು ಖಂಡಿತಕ್ಕೂ ಈ ರೂಮಿನಲ್ಲಿ ಇರಲಾರೆ...ಬೆಳಗಾಗಲಿ...

**ಚಂದ್ರೂ:** ಲೋ ಕಿಟ್ಟೂ...ನಾನೂ ನಿನ್ನ ಜೊತೆ ಸಿದ್ಧ...ನೀನು ಸೂಟುಕೇಸ್ಸು ಎತ್ತು, ನಾನು ಹೋಲ್‌ಡಾಲ್ ಹಿಡುಕೊಂಡು ನಿನ್ನ ಬೆನ್ನ ಹಿಂದೆ! ನೀನು ನನ್ನ ಗುರು, ನೀನು ಕಾಲಿಟ್ಟಲ್ಲಿ ನನ್ನ ಹೆಜ್ಜೆ ಇದೆ ಎಂದು ತಿಳಿದುಕೊ.

[ಚಂದ್ರೂ, ಕಿಟ್ಟು ಇಬ್ಬರೂ ಹೋಗುತ್ತಾರೆ. ದಿನೇಶ್ ಏನೋ ಯೋಚಿಸಿ ಪ್ರಸಾದನ ಕಿವಿಯಲ್ಲಿ ಪಿಸುಗುಟ್ಟುತ್ತಾನೆ. ಒಂದೇ ಬಾರಿಗೆ ಸಂತಸ ಉಕ್ಕಿದಂತೆ ಪ್ರಸಾದ, ದಿನೇಶನ ಬೆನ್ನಿಗೆ ಗುದ್ದಿ]

**ಪ್ರಸಾದ:** ಬೆಸ್ಟ್ ಐಡಿಯಾ–ಪ್ರಾರಂಭವಾಗಲಿ ನಿನ್ನ ಪ್ರಯೋಗ.

(ದಿನೇಶ್ ಕಿಟಕಿಗೆ ತಾಗಿ ಕೂತು ಧನಿ ಎತ್ತರಿಸಿ, ಬದಿಯ ರೂಮಿನಲ್ಲಿದ್ದ ಹೆಂಗಸರಿಗೆ ಕೇಳಿಸುವಂತೆ ಪ್ರಸಾದನ ಬೆನ್ನಿಗೆ ಗುದ್ದಿ)

**ದಿನೇಶ್:** (ಧನಿ ಸರಿಪಡಿಸಿ) ಪ್ರಸಾದ ನೀನೊಳ್ಳೆ ಲಕ್ಕಿ ನೋಡು! ನಿನ್ನ ರೂಮು ಮೇಟು ಘಾಟಿ ವ್ಯಕ್ತಿ! ನೀನು ಅದೃಷ್ಟದ ಕುದುರೆ ಏರಿ ಕೂತ ಹಾಗಿದೆಯಲ್ಲ? ನನಗೆ ಗೊತ್ತೇ ಇರಲಿಲ್ಲ ಬಿಡು. ಗೊತ್ತಿದ್ರೆ ನಾನವನ ಕಾಲು ತೊಳೆದು ನೀರು ಕುಡಿಯುತ್ತಿದ್ದೆ. ಒಬ್ಬನೇ ಮಗನಂತೆ? ಲಕ್ಷ್ಮಿ ಅವರ ಮನೆಯಲ್ಲಿ ಕಾಲು ಮುರಿದು ಬಿದ್ದಿದ್ದಾಳಂತೆ?

**ಪ್ರಸಾದ:** ಒಂದು ಸಾರಿ ಅವನ ಒತ್ತಾಯಕ್ಕೆ ಅವನ ಮನೆಗೆ ಹೋಗಿ ಹೆದರಿಬಿಟ್ಟಿದ್ದೆ. ಅದು ಮನೆಯೇನೋ? ಅರಮನೆ! ಈ ಮನೆ ಅವನ ಬಚ್ಚಲು ಮನೆಗೆ ಸಮ! ಕೈ ಕಾಲಿಗೊಬ್ಬರು ಆಳು!ಕಾಳು! ಅಡಿಗೆ ಎಂದರೆ ನಳಪಾಕ! ಅಂಥ ಮನೆ! ಅಂಥ ಊಟ! ನಾನು ಈ ಜನ್ಮದಲ್ಲಿ ನೋಡಿಲ್ಲ–ಉಂಡಿಲ್ಲ.

**ದಿನೇಶ್:** ಸಾಕು ಮಾಡು...ನನ್ನ ಬಾಯಲ್ಲಿ ಬಸರಿನಂತೆ ನೀರು ಬರುತ್ತದಲ್ಲಾ... ಕೇಳಿಯೇ ನನ್ನ ಸ್ಥಿತಿ ಹೀಗಾದ್ರೆ...ಪಾಪ ನಮ್ಮ ಕಿಟ್ಟೂ ಇಲ್ಲಿ ಹ್ಯಾಗಿರುತ್ತಾನೋ? ಅವನ ಮದುವೆ–ಗಿದುವೆ?

**ಪ್ರಸಾದ:** ಅಲ್ಲೇ ಇದೆ ಚಮತ್ಕಾರ! ನನಗೆ ಈಗಾಗಲೇ ಅಪ್ಪಯ್ಯ–ಅಮ್ಮ ನನ್ನಿಂದ ಭಾಷೆ ತಕೊಂಡು ಆಗಿದೆ. ಕಲಿಯೋ ದಿಮಾಕಿನಲ್ಲಿ ಲವ್ ಗೀವ್ ಅಂತ ಎಲ್ಲಾದ್ರೂ ಒಂದು ಹುಡುಗೀನ್ನ ಗಂಟು ಹಾಕಿಕೊಂಡ್ರೆ ಈ ಮನೆಯ ಅನ್ನದ ಋಣ ತೀರಿತು ಎಂದು ತಿಳಿದುಕೋ ಅಂದಿದ್ದಾಳೆ. ಆದ್ರೆ ಕಿಟ್ಟೂ ಅದೃಷ್ಟ ಎನ್ನಬೇಕು...

**ದಿನೇಶ್:** ಏನು ಈಗಾಗಲೇ ಅವನು ಹುಡುಕಿ ಆಗಿದೆಯೋ? ಅಂಥ ಲಕಿ ಹುಡುಗಿ ಯಾರಪ್ಪಾ?

**ಪ್ರಸಾದ:** ಏ...ಹುಡುಕಿಲ್ವೋ...ಹುಡುಕಲು ಅವನಿಗೇ ಛಾನ್ಸ್ ಕೊಟ್ಟಿದ್ದಾರೆ. ಅವನಿಗೆ ಯಾರಲ್ಲಿ ಪ್ರೀತಿ ಆಗ್ತದೋ ಅದು ಅವನ (Parents)ಗೆ ಒಪ್ಪಿಗೆ... ಇಂಥ ತಂದೆ–ತಾಯಿ ಯಾರಿಗಾದ್ರೂ ಸಿಕ್ತಾರೇನೋ?

**ದಿನೇಶ್:** (ಧ್ವನಿ ಇನ್ನಷ್ಟು ಏರಿಸಿ) ಏ ಪ್ರಸಾದ ನಿನಗೆ ತಂಗಿ–ಗಿಂಗಿ ಇಲ್ವೇನೊ? ನನ್ನ ಹೊಟ್ಟೆಯಲ್ಲಿ ನಿಜಕ್ಕೂ ಸಂಕಟ...ನನಗೊಬ್ಬ ತಂಗಿ ಇರಬಾರದಿತ್ತೇನೊ? ನನಗಿಂತ ದೊಡ್ಡವರಾಗಿ ಹುಟ್ಟಿ ಮೂರು ಜನ ಅಕ್ಕಂದಿರು ತಂದೆಯ ಕೈಯಲ್ಲಿ ಕಾಸಿಲ್ಲದಂತೆ ಮಾಡಿದ್ದಾರೆ...ಈ ಹೀಡೆಗಳಲ್ಲಿ ಒಬ್ಬಳಾದ್ರೂ ತಂಗಿಯಾಗಿದ್ರೆ... ಎಂಥಾ ಛಾನ್ಸ್ ಇತ್ತಯ್ಯ!...ಅಯ್ಯೋ ಅನ್ಯಾಯವಾಯ್ತು.

**ಪ್ರಸಾದ:** ನನಗೂ ಅಳಬೇಕು ಅಂತ ಕಾಣ್ತದೆ. ನನಗೆ ತಂಗಿ ಇದ್ದಾಳೆ! ಆದ್ರೆ ತೀರ ಚಿಕ್ಕವಳು ನೋಡಿಯಪ್ಪ ಹತ್ತುವರ್ಷದ ಹುಟ್ಟು ಹಬ್ಬದ ಪೇಸ್ಟ್ರ ಲಾಡು ನಿಮಗೆಲ್ಲ ನಾನು ಕೊಟ್ಟಿಲ್ಲವೇ? ದೊಡ್ಡವಳಿದ್ದಿದ್ರೆ...ನನ್ನ ಮಾತು ಮೀರುತ್ತಿರ ಲಿಲ್ಲ ನಮ್ಮ ಕಿಟ್ಟೂ...

**ದಿನೇಶ್:** ಹಣದ ತಿಜೋರಿಯಲ್ಲಿ ಕೂತ ಈ ಕಿಟ್ಟೂಗೆ ಮಾವನಾಗುವ ರಾಜಯೋಗ ಯಾರಿಗುಂಟೊ?

(ಒಂದು ವಾರ ಕಳೆದಿದೆ. ಪ್ರಸಾದ–ದಿನೇಶ್ ಕಾಲೇಜಿನಿಂದ ರೂಮಿಗೆ ಬರುವ ದಾರಿಯಲ್ಲಿ–)

**ನಿಮಲಮ್ಮ:** (ದೇಶಾವರಿ ನಗೆ) ಕಾಲೇಜು ಮುಗಿಯಿತಾ? ನಮ್ಮ ಪಾಪು ಬೆಳಗಿ !

ನಿಂದಲೂ ಎರಡೂ ರೂಮಿಗೆ ಓಡೋದು ಬೀಗ ನೋಡಿ ಮತ್ತೆ ಬರೋದು ನಡೆದಿದೆ. ಅವನನ್ನು ಹಿಡಿಯೋದೇ ಕಷ್ಟವಾಗಿದೆ ನನಗೆ.

**ದಿನೇಶ್:** ಯಾಕೆ ಪಾಪೂಗೆ ಅಷ್ಟೊಂದು ಸಂತೋಷ...ಅಯ್ಯೊ ನಾನು ಬರಿಗೈಯಲ್ಲೇ ಬಂದು ಬಿಟ್ಟೆ....

**ಪ್ರಸಾದ:** ಓ...ನಾನೂ ಹಾಗೆ ಬಂದು ಬಿಟ್ಟೆ...ನನ್ನದೂ ಬರಿಗೈ...

**ವಿಮಲಮ್ಮ:** ಇವೊತ್ತು ಅವನು ನಿಮ್ಮ ಚಾಕಲೇಟು–ಬಿಸ್ಕೀಟು ಕೇಳೋದಕ್ಕೆ ಓಡಿ ಬಂದಿಲ್ಲ. ಊರಿಂದ ಬೆಳಿಗ್ಗೆ ನನ್ನ ಮಗಳು ಪ್ರಭಾ ಬಂದ್ಲು. ಬರೋವಾಗ ಉಂಡೆ ಚಕ್ಕುಲಿ ತಂದಿದ್ಲು. ಅದನ್ನ ನಿಮಗೆಲ್ಲ ಕೊಡಬೇಕಲ್ಲ? ಪಾಪು ಒಂದೇ ಕಾಲಲ್ಲಿ ನಿಂತು ಕಾಯುತ್ತಿದ್ದ. (ಅತ್ತಿತ್ತ ನೋಡಿ) ಇದೇ ಈಗ ಎಲ್ಲಿಯೋ ಆಟಕ್ಕೆ ಹೋಗಿರಬೇಕು. ನಿಮಗೆ ಕೊಡದೆ ಅವನ ಗಂಟಲಲ್ಲಿ ಉಂಡೆ, ಚಕ್ಕುಲಿ ಇಳೀಬೇಕಲ್ಲ?

**ದಿನೇಶ್:** ಪಾಪುಗೆ ನಾನೆಂದರೆ ಆಯ್ತು...ನಮಗೂ ಅಷ್ಟೆ...ಅವನಿಗೆ ಕೊಡೋ ಮಾಮೂಲಿ ಕೊಡದಿದ್ರೆ ರೂಮಿನಲ್ಲಿ ಮಲಗಿ ನಿದ್ದೆ ಮಾಡೋದು ಸಾಧ್ಯವಿಲ್ಲ.

**[ಪ್ರಸಾದನತ್ತ ನೋಡಿ ಕಣ್ಣು ಚಿವುಟುತ್ತಾನೆ.]**

**ಪ್ರಸಾದ:** ನಿಮ್ಮ ಮಗಳು ಈಗ S.S.L.C.ಯಲ್ಲಿ ಓದುತ್ತಿದ್ದಾಳೆ ಎನ್ನಲಿಲ್ವೆ ನೀವು. ಮತ್ತೆ ನಡುವೆ ರಜೆ ಎಲ್ಲಿ?

**ವಿಮಲಾಬಾಯಿ:** ಐದಾರು ದಿನಗಳಿಂದ ಯಾಕೋ ಮೈಯಲ್ಲಿ ಚೆನ್ನಾಗಿಲ್ಲ (ನರಳಿದಂತೆ) ಅಲ್ದೆ ಪ್ರಭಾನ್ನ ನೋಡಬೇಕೂ ಎನಿಸಿತು. ಇವರಿಗೆ ಹೇಳಿದೆ... ಅವರು ತಕ್ಷಣ ಹೋಗಿ ಕರೆದುಕೊಂಡೇ ಬಂದ್ರು.

**ದಿನೇಶ್:** ಅದಕ್ಕೆ ರಾಯರು ನಮ್ಮ ರೂಮಿನತ್ತ ಸುಳಿದೇ ಇಲ್ಲ! ಮೊನ್ನೆ ಮುಗಿಯಬೇಕಾಗಿದ್ದ ನೆಸ್‌ಕಾಫಿ ಇನ್ನೂ ಎರಡು ದಿನ ಬರುತ್ತದೆ! ಹಾಗಾದ್ರೆ ನಿಮ್ಮ ಮಗಳು ಬಂದು...

**ಪ್ರಸಾದ:** ಕಾಯಿಲೆ ಎಂದ್ರೆ ಮಗಳು ಓದು ಎಂದು ಕೂತುಕೊಳ್ಳೋದಕ್ಕೆ ಆಗ್ತದೇನೊ? ಈಗಲೂ ನಿಮಗೆ ಜ್ವರ–ಗಿರ?


ಶ್ರೀ ಗಜಾನಂದ ಮೋಟಾರ-
ಆ್ಯಂಡ ಸೈಕಲ್ ಮಾರ್ಟ
ಫೋನ್ : 722
ಪಿ. ಬಿ. ರೋಡ, ದಾವಣಗೆರೆ–೨
ಡೀಲರ್ಸ :
೧. ಆಟೊಮೊಬೈಲ್
ಟಿ.ಎಂ ಬಿ ಪಿ. ೬, ಲೇ ಲ್ಯಾಂಡ್, ಬೆಡ್ ಫೋರ್ಡ
೨. ಟ್ರಾಕ್ಟರ್ಸ
ಝುಟರ್ 2011 ಇಂಟರನ್ಯಾಶನಲ್,
B-275, ರಶಿಯನ್ DT-14, ಎಸ್ಕಾರ್ಟ್ಸ-37
ಮತ್ತು ಮ್ಯಾಸ್ಸಿ-ಫರ್ಗುಸನ್
೩. ಮೋಟರ್ ಸೈಕಲ್ಸ
ರಾಯಿಲ್ ಎನ್ ಫೀಲ್ಡ, ೩·5 ರಾಜದೂತ,
ಜಾವಾ, 2·5, ಲ್ಯಾಂಬ್ರೆಟ್ಟಾ ಮತ್ತು ವೆಸ್ಪಾ
ಸ್ಪೇರ್-ಪಾರ್ಟ್ಸ, ಮಶಿನರಿ, ಹಾರ್ಡವೇರ್‌ಗಳಿಗಾಗಿ
ನಂಬುಗೆಯ ವ್ಯವಹಾರ: ಸಾಮಾನ್ಯ ದರಗಳು
ನಿಮ್ಮ ಅವಶ್ಯಕತೆಗಳಿಗಾಗಿ ಇಂದೇ ಸಂದರ್ಶಿಸಿರಿ.


**ವಿಮಲಾಬಾಯಿ:** ಎರಡು ದಿನ ಸ್ವಲ್ಪ ಬೆಚ್ಚಗಾಗಿತ್ತು. ಈಗ ಹುಶಾರಿದ್ದೇನೆ. ಆದ್ರೆ ಆ ಎರಡು ದಿನ ನನ್ನ ಅವಸ್ಥೆ ನೋಡಿ ಅವರು ಹೇಳದೇ ಹೋಗಿ ಕರೆದುಕೊಂಡು ಬಂದದ್ದು....ನಿಮ್ಮ ಫ್ರೆಂಡು ಕಿಟ್ಟೂ ಕಾಣೋದಿಲ್ಲ? ಜೊತೆಯಾಗಿಯೇ ಇರೋವರು?

**ಪ್ರಸಾದ:** ಅವನೇ ನಮ್ಮ ಕೈಗೇ ಸಿಕ್ಕರೆ ಕೇಳಿ ಟೆನ್ನಿಸ್ ಆಡಿ ದಣಿದು ಬರೋದು... ನಮ್ಮ ದರಿದ್ರ ಬ್ರೆಡ್ಡು ಜಾಮು ಅವನಿಗೆಲ್ಲಿ ಗಂಟಲ್ಲಿ ಇಳೀಬೇಕು? ತಂದೆ–ತಾಯಿಯ ಮುದ್ದಿನ ಮಗ. ಅವರ ಮಾತು ಕೇಳದೆ ಇಲ್ಲಿ ಕಲಿಯೋದಕ್ಕೆ ಬಂದು ಒದ್ದಾಡುತ್ತಿದ್ದಾನೆ. ಕೈಗೊಂದು ಕಾಲಿಗೊಂದು ಆಳು–ಕಾಳು ಇಟ್ಟುಕೊಂಡು ಬೆಳೆದ ಹುಡುಗ.... ಅವನ ಅರಮನೆಯಂಥ ಮನೆ, ಅಲ್ಲಿಯ ಸುಖ ಕಂಡು ನನ್ನ ತಲೆಯೇ ತಿರುಗಿ ಹೋಗಿತ್ತು!

**ವಿಮಲಾಬಾಯಿ:** (ಬಾಯಿ ಮೇಲೆ ಕೈಯಿಟ್ಟು) ಹೌದಾ? ನೋಡಿದ್ರೆ...ನನಗೂ ಅನುಮಾನ ಬಂದಿತ್ತು. ಇಲ್ಲೇ ಮಾತಿನಲ್ಲಿ ನಿಂತುಬಿಟ್ಟೆ....ತಟ್ಟೆ ತುಂಬ ಇಟ್ಟಿದ್ದ ತಿಂಡಿ ಅಲ್ಲೇ ಉಳಿಯಿತು. ಈಗ ರೂಮಿಗೇ ಕಳಿಸ್ತೇನೆ. (ಗಡಿಬಿಡಿಯಲ್ಲಿ ಒಳಜ ಹೋಗುತ್ತಾಳೆ.)

**ದಿನೇಶ್:** (ಪ್ರಸಾದನ ಬೆನ್ನಿಗೊಂದು ಗುದ್ದಿ) ನೋಡಿದೇನಯ್ಯ...ಬಿಟ್ಟ ಬಾಣ ಸರಿಯಾಗಿ ನಾಟಿದೆ. ಹೇಗೆ ನಡೆದಿದೆ ಗೊಂಬೆ ಕುಣಿತ?

**ಪ್ರಸಾದ:** ಬಾ...ಬಾ...ಇಲ್ಲೇ ನಿಂತು ಮುಂದಿನ ನಾಟಕ ನೋಡೋದಕ್ಕೆ ಪ್ರೇಕ್ಷಕರಿಲ್ಲದ ಹಾಗಾಗಬಾರದಲ್ಲ? ...ಯಾರ ಹೆಸರಿನಿಂದಲಾದ್ರು ಚಕ್ಕುಲಿ... ಉಂಡೆ ನಮ್ಮ ಹೊಟ್ಟೆ ಸೇರುತ್ತದಲ್ಲ!

**(ಇಬ್ಬರೂ ನಗುತ್ತ ರೂಮಿನತ್ತ ಹೋಗುತ್ತಾರೆ. ಸ್ವಲ್ಪ ಹೊತ್ತಿಗೆ ಚಂದ್ರೂ, ಕಿಟ್ಟೂ ಬರ್‍ತಾರೆ.)**

**ಚಂದ್ರೂ:** (ಉತ್ಸಾಹದಲ್ಲಿ) ಏ ದಿನೇಶ್ ನಮ್ಮಿಬ್ಬರಿಗೆ ಇವೊತ್ತು ಎಂಥ ಛಾನ್ಸ್ ಬೆಳಿಗ್ಗೆ ನರಿಮುಖ ನೋಡಿ ಎದ್ದಿರಬೇಕು. ನಮ್ಮ ಕಿಟ್ಟೂ! ಕೃಷ್ಣಪ್ಪ ನಾಯಕ ನಮ್ಮ ಪುರಂದರದಾಸರ ಜನ್ಮನಾಮ ಅಲ್ವೆ? ನಾಯಕರ ಅಕ್ಕನೋ, ತಂಗಿಯೋ ಈ ವಿಮಲಮ್ಮ ನಮ್ಮನ್ನು ದಾರಿಯಲ್ಲೇ ತಡೆದು ಎಂಥ ಒತ್ತಾಯ ಅಂತಿಯಾ? ಒಳಕ್ಕೆ ಕರೆದು ಮಗಳು ಪ್ರಭಾನ್ನ ಗುರುತು ಮಾಡಿ ಕೊಟ್ಟು, ತಿಂಡಿ ತಿನಿಸಿದ್ರೂ ಅಂದ್ರೆ ಏನು ಮುಖ ನೋಡ್ತೀಯಾ ದಿನೂ? ಈ ಮಾತು ಇನ್ಯಾರಾದ್ರೂ ಹೇಳಿದ್ರೆ ನಾನೂ ನಂಬುತ್ತಿರಲಿಲ್ಲ ಬಿಡು. ಆದ್ರೆ ತಿಂದದ್ದು ನನ್ನ ಬಾಯಿ! ತುಂಬಿದ್ದು ಇದೇ ಹೊಟ್ಟೆ! ಸುಳ್ಳು ಎಂದು ಹ್ಯಾಗೆ ಹೇಳ್ಲಿ? ಅವರ ಆತಿಥ್ಯ ಕಿಟ್ಟೂಗೆ ಅಳಿಯತನ ಮಾಡೋ ಹಾಗಿತ್ತು.

**ಕಿಟ್ಟು:** (ಬೇಸರದಿಂದ) ಹೋಗಯ್ಯ ನೀನು ಮೂರ್ಖಶಿಖಾಮಣಿ,

**ಚಂದ್ರೂ:** (ಇನ್ನಷ್ಟು ಉತ್ತೇಜಿತನಾಗಿ) ಈ ಜನ್ಮದಲ್ಲಿ ಆ ಹೆಂಗಸು ಇಷ್ಟು ಉದಾರಿ, ಇಂಥ ಪ್ರೀತಿ ತೋರಿಸಬಹುದೂ ಎಂದು ಗೊತ್ತಿರಲಿಲ್ಲ. ನಮ್ಮ ಕಿಟ್ಟೂ ಅವರ ಕಣ್ಣಿಗೊಬ್ಬ ಅರಸುಮಗ ಎಂದು ಕಂಡಿರಬೇಕು. ಅಥವಾ ಅವಳಿಗೆ ಹುಚ್ಚು ಗಿಚ್ಚು? ಅಲ್ವೇನೋ ಕಿಟ್ಟೂ? ಆದ್ರೆ ಕಿಟ್ಟೂ ಮಾತ್ರ ಬೆರಳಿನಿಂದ ತಿಂಡಿ ಮುಟ್ಟಲೇ ಇಲ್ಲ. ಹೊಟ್ಟೆ ಸರಿಯಾಗಿಲ್ಲ ಎಂದುಬಿಟ್ಟ.

**ಕಿಟ್ಟು:** (ಸಿಟ್ಟಿನಲ್ಲಿ) ಸಾಕು ಮಾಡೋ ಬಕಾಸುರ! ಆ ಹೆಂಗಸಿನ ಮುಖ ಕಂಡ್ರೆ ನನ್ನ ಪಿತ್ತ ನೆತ್ತಿಗೇರುತ್ತದೆ. ಆ ದಿನ ಗಂಡನ ಹತ್ರ ಅವಳು ಹೇಳಿದ್ದನ್ನ ನಾನು ಮರೆಯೋದಕ್ಕೆ ಸಾಧ್ಯವಿಲ್ಲ. ಈ ರೂಮು ಬಿಡಬೇಕು ನಾನು ನಿದ್ದೆ ಮಾಡಬೇಕಾಗಿದೆ. ಆ ವರೆಗೆ ಅವಳ ಹೆಸರು ತೆಗೆಬೇಡ ಚಂದ್ರೂ...

**ಚಂದ್ರೂ:** ಅವಳದು ಬೇಡ ಮಹಾರಾಯ...ಅವಳ ಮಗಳು ಪ್ರಭಾ...ಅವಳ ಕಣ್ಣೆಲ್ಲ ನಿನ್ನ ಮೇಲಿತ್ತು!

**ದಿ: + ಪ್ರ:** (ಮುಸಿ ಮುಸಿ ನಗುತ್ತ) ಹುಡುಗಿ ಹೇಗಿದ್ದಾಳೆ?

**ಚಂದ್ರೂ:** ಇದ್ದಾಳೆ ಸುಮಾರಾಗಿ...ಎಲ್ಲ ಹುಡುಗಿಯರ ಹಾಗೆ ಅವಳಿಗೂ ಒಂದು ಜಡೆ, ಎರಡು ಕಣ್ಣುಗಳು, ಮುಖಕ್ಕಿಷ್ಟು ಬಿಳಿ ಬಣ್ಣ!

**ದಿ + ಪ್ರ** ಮತ್ತೆ ನಮ್ಮ ಕಿಟ್ಟೂನ್ನ ಅಳಿಯ...

**ಕಿಟ್ಟು:** ಯಾಕೆ? ಬಾರಿಸಿ ಬಿಡ್ತೇನೆ ನೋಡು! ನೀವೇ ಬೇಕಾದ್ರೆ ಅವಳನ್ನ ಹಿಡಿದು ಅಪರೂಪದ ಅತ್ತೆ, ಮಾವಗೆ ಅಳಿಯಾಗಿ ಬಿಡಿ. ಹೋಗಿ, ಇನ್ನೂ ತಟ್ಟೆಯಲ್ಲಿ ತುಂಬಿದೆ ತಿಂಡಿ.!

**ಪ್ರಸಾದ:** (ನಗು) ಅದು ನಮಗಲ್ಲ. ಕೇವಲ ನಿನಗೆ! ನಿನ್ನ ಮೇಲೆ ಅವಳಿಗೆ ಅಲ್ಲ... ಮಗಳಿಗೆ ಲವ್ ಆಗಿರಬೇಕು. (ಕಿಟ್ಟೂ ಬಟ್ಟೆ ಬದಲಾಯಿಸುತ್ತಿದ್ದಾನೆ.)

**ದಿನೇಶ್:** ಚಂದ್ರೂ ನಮಗೆ ದಾರಿಯಲ್ಲಿ ಸಿಕ್ಕ ವಿಮಲಮ್ಮ ಹೇಳಿದ್ದು...ತಿಂಡಿ ಕಳುಹಿಸಿಕೊಡುತ್ತೇನೆ. ನೀವು ರೂಮಿಗೆ ಹೋಗಿ ಎಂದು! ನಾವಿಲ್ಲಿ ಕಾದು ಕೂತದ್ದ. ಬಂತು ನಿಮಗೆ ಅಲ್ಲಿ ಕಂಠಪೂರ್ತಿ. ತಿನಿಸಿ ಕಳುಹಿಸಬೇಕಾದ್ರೆ ಏನೋ ಮಸಲತ್ತು ಇರಬೇಕು.!

**ಕಿಟ್ಟು:** (ಏನೂ ತಿಳಿಯದೆ) ಯಾಕೆ ಪ್ರಸಾದ, ನೀನೂ ನನ್ನ ನೋಡಿ ನಗ್ತೀರಲ್ಲ? ನಿಮ್ಮನ್ನು ವಿಮಲಮ್ಮನ ಹಾಗೆ ಹುಚ್ಚರಾಸ್ಪತ್ರೆಗೆ ಕಳಿಸಬೇಕು...ಆ ದಿನ ಗಂಡನ ಎದುರು ಏನಾದ್ರೂ ಮಾಡಿದ್ರೆ ಎಂದ್ಲಲ್ಲ?

**ಪ್ರಸಾದ:** ಅವಳಿಗೆ ನಿನ್ನ ಕಂಡು ಹೆದರಿಕೆ ಆಗಿರಬಹುದು...ಮಗಳಿಗೆ ಅದರ ವಿರುದ್ಧ ಆಗಿದ್ರೆ?

**ಕಿಟ್ಟು:** ಸಾಕು ಮಾಡು ಈ ಮಾತು. ಅಂದ ಹಾಗೆ ನಾವು ನೋಡಿದ ಮನೆ. ಇನ್ನೂ ನಾಲ್ಕು ದಿನಕ್ಕೆ ನನ್ನ ಕೈಗೆ ಬರ್ತದೆ. ಇಲ್ಲಿಂದ ಒಮ್ಮೆ ಪಾರಾಗಿ ಬಿಡ್ತೇನಪ್ಪಾ.

**ದಿನೇಶ್:** (ಪ್ರಸಾದನಿಗೆ ಕಣ್ಣು ಚಿಮುಟಿ) ಛಿ...ಛಿ...ಏನೋ ಕಿಟ್ಟು ಇಷ್ಟು ಸುಲಭದಲ್ಲಿ ನಿನ್ನ ಹೇಗಯ್ಯ ಹೋಗೋದಕ್ಕೆ ಬಿಡೋದು? ಅಲ್ಲಾ...ನಿನ್ನ ಅದೃಷ್ಟ ಖುಲಾಯಿಸೋ ಯೋಗ ಬರುತ್ತಿರುವಾಗ...ನೀನು ಈ ಭಾಗ್ಯ ತಂದ ರೂಮನ್ನು ಬಿಡೋದೆಂದರೆ?

**(ಅಷ್ಟರಲ್ಲಿ ಪ್ರಭಾ ರೂಮಿನ ಬಾಗಿಲಲ್ಲಿ ಒಯ್ಯಾರದಲ್ಲಿ ನಿಂತು)**

**ಪ್ರಭಾ:** ರಾತ್ರಿ ಊಟಕ್ಕೆ ಎಲ್ರೂ ಮನೆಗೇ ಬರಬೇಕಂತೆ. ಅಮ್ಮ ಹೇಳಿ ಬಾ ಅಂದ್ರು...ಯಾರೂ ತಪ್ಪಿಸಬಾರದಂತೆ. (ಮಿಂಚಿನಂತೆ ಓಡುತ್ತಾಳೆ.)

**ಚಂದ್ರೂ:** ದಿನೇಶ್ ಇದೇನೋ? ನನ್ನ ಕಣ್ಣು-ಕಿವಿ ಸರಿಯಾಗಿದೆಯಲ್ಲ? ಅಥವಾ ನನಗೂ ಬುದ್ಧಿ ಭ್ರಮಣೆಯಾಗಿದೆಯೋ?

**ದಿನೇಶ್:** (ಏನೂ ತಿಳಿಯದವನಂತೆ) ನಂಗೂ ಏನೂ ತೋಚೋದಿಲ್ಲ. ಈ ಟ್ರಾನ್ಸ್‌ಫರ್ ಸೀನರಿ ಆದದ್ದೂ ಯಾಕೆ? ಪ್ರಸಾದ ಇದೇನೋ? ಕಿಟ್ಟೂ ನಿನಗಾದ್ರೂ ಏನಾದ್ರೂ ಗೊತ್ತಾ? ಒಂದು ವರ್ಷದಿಂದ ಈ ರೂಮಿನಲ್ಲಿ ಇದ್ದೇನೆ...ಒಂದು ಗುಟುಕು ನೀರು ಈ ಮಹಾರಾಯ್ತಿ ಕೊಟ್ಟದ್ದೂ ಗೊತ್ತಿಲ್ಲ.

**ಕಿಟ್ಟು:** ರೂಮು ಬಿಡ್ತೇವೆ ಅಂತ ಏನಾದ್ರೂ ಅನುಮಾನ ಬಂದಿರಬೇಕು... ಅದಕ್ಕೆ ಊಟದ ಲಂಚ ಇರಬೇಕು. ಆದ್ರೆ ಅವಳ ಮನೆಯ ಊಟದ ಆಸೆಯಲ್ಲಿ ಬರಿ ಹೊಟ್ಟೆಯಲ್ಲಿ ಹೋದ್ರೆ. ಕೊಕ್ಕರೆ, ನರಿ ಮನೆಗೆ ಊಟಕ್ಕೆ ಹೋದ ಕಥೆ ಗೊತ್ತಲ್ಲ?

**(ಪ್ರಸಾದ-ದಿನೇಶ ಕಣ್ಣರಳಿಸಿ ಅವನನ್ನೇ ನೋಡಿ ನಗುತ್ತ)**

**ಪ್ರಸಾದ:** ಏನೇ ಇರಲಿ ಮಹಾರಾಯಾ...ಊಟಕ್ಕೆ ಮಾತ್ರ ತಪ್ಪಿಸಬೇಡ. ಈ ವೀಕಿನಲ್ಲಿ ಕೈಯಲ್ಲಿದ್ದ ಹಣಾನೂ ಖರ್ಚಾಗಿ ಒಂದೆರಡು ಉಪವಾಸ ಮಾಡುವ ಸ್ಥಿತಿ ಬಂದಿತ್ತು. ಯಾವ ದೇವರಿಗೆ ನಮ್ಮ ಗುಟ್ಟು ಗೊತ್ತಾಯಿತೋ. ಅವನಾಗಿಯೇ ನಿಂತು ಅವಳಿಂದ ಆಮಂತ್ರಣ ಕಳುಹಿಸಿದ್ದಾನೆ.

**ದಿನೇಶ್:** ಹಸಿವೆ ಭೂತ ಹೊಟ್ಟೆಯಲ್ಲಿ ಇಟ್ಟುಕೊಂಡೇ ಅಲ್ಲಿಗೆ ಹೋಗೋಣ... ಅವರಿಗೆ ಬರಿ ಪಾತ್ರೆಯೇ ಗತಿಯಾಗಬೇಕು. ಆದೀತಲ್ಲ ಕಿಟ್ಟು...ಹೀಗಾದ್ರೂ ನಿನ್ನ ಸಿಟ್ಟು ತೀರಿಸಿಕೋ. ಬರೋದಿಲ್ಲವೆಂದಿಯಾ...ಎಲ್ಲ ಕೆಟ್ಟು ಹೋಗುತ್ತದೆ.

**ಚಂದ್ರೂ:** ಏನು ಕೆಟ್ಟು ಹೋಗುತ್ತದೆ? ಅಡಿಗೆ ಕೆಟ್ಟು ಹೋಗ್ತದೆ...ಊಟ ಮಾಡಿದ್ರೆ ನಮ್ಮ ಹೊಟ್ಟೆ ಕೆಟ್ಟು ಹೋಗ್ತದೋ?

**ದಿನೇಶ್:** ಈಗ ಸುಮ್ಮನಿರು...ನಂದೂ, ಪ್ರಸಾದನದೂ ಒಂದು ಗುಟ್ಟಿನ ಮಾತಂ ಸಮಯ ಬರಲಿ....ಹೇಳ್ತೇನೆ. ಈಗ ಹೋಗೋಣ.

**(ಒಂದು ವಾರ ಕಳೆದಿದೆ. ಎರಡೂ ರೂಮಿನ ಸಾಮಾನು ಪ್ಯಾಕ್ ಮಾಡಿ ಎತ್ತಿನ ಬಂಡಿಯಲ್ಲಿ ಇಡುತ್ತಾರೆ.)**

**ದಿನೇಶ್:** ಕಿಟ್ಟೂ ಒಂದು ವಾರದಲ್ಲಿ ನಮ್ಮೆಲ್ಲರ ವೇಟ್ ಎರಡೆರಡು ಪೌಂಡು ಹೆಚ್ಚಾಗಿರಬೇಕಲ್ಲ? ನಿಜವಾಗ್ಲೂ excellent ಊಟ! ಆದರಲ್ಲೂ ಪ್ರಭಾನ ಸಿಹಿ ಮಾತುಗಳು! ವಿಮಲಮ್ಮನ ಅಮೃತದ ಕೈಯೂಟ, ಯಜಮಾನನ ಉಪಚಾರದಲ್ಲಿ ಯಾವ ಅಳಿಯತನಕ್ಕೂ ಕಡಿಮೆಯಿರಲಿಲ್ಲ. ವಾರಭವಿಷ್ಯದಲ್ಲಿ ನಾಲ್ಕು ಜನಕ್ಕೂ ಸುಗ್ರಾಸ ಭೋಜನ ಯೋಗ ಎಂದಿದ್ದಿರಬೇಕು. ಕಿಟ್ಟೂ ಇದಕೆ ನಿಂದೇನಾದ್ರೂ ಕಮೆಂಟ್ಸ್ ಇದೆಯೂ?

**ಪ್ರಸಾದ:** ಈ ಮನೆಯ ಬಗ್ಗೆ...ಹೋಗಲಿ. ವಿಮಲಮ್ಮನ ಬಗ್ಗೆ, ಅದೂ ಹೋಗಲಿ...ಪ್ರಭಾನ ಬಗ್ಗೆಯಾದ್ರೂ ನೀನು...

**ಕಿಟ್ಟು:** (ಸೂಟಕೇಸ್ ದೊಪ್ಪನೆ ಗಾಡಿಯಲ್ಲಿ ಇಟ್ಟು) ನಿಜವಾಗಿಯೂ ನಿಮ್ಮೊಟ್ಟಿಗೆ ಇರೋದೆಂದ್ರೆ ನನಗೇ ನಾಚಿಕೆಯಾಗಿಬಿಡ್ತು. ಊಟ ಕಾಣದ ಹಾಗೆ, ತಟ್ಟೆಯಲ್ಲಿ ಹಾಕಿದ್ರೂ ಇಲ್ವೊ ಗಬಗಬ ತಿಂದು ಹೊಟ್ಟೆಬಾಕರು ಎಂದು ತೋರಿಸಿದ್ರಿ...ಹೆಣ್ಣು ಕಂಡೇ ಇಲ್ಲ ಎನ್ನೋ ಹಾಗೆ ಏನು ಹರಟೆ ಏನು ನಗು! ಏನ್ಹೊದು ಹೊಗಳೋದು! ಪ್ರಸಾದ, ದಿನೇಶ್ ಆ ಹೆಂಗಸಿನ ಸೆರಗು ಹಿಡಿದು ಓಡಾಡೋದು ನೋಡಿದ್ರೆ...ಎಲ್ಲಿ ಮನೆಅಳಿಯ ಆಗ್ತಾರೋ ಎಂದುಕೊಂಡೆ. ಅಲ್ವೇನೋ ಚಂದ್ರೂ?

**ಚಂದ್ರೂ:** ಆಸಂಶಯ ನಂಗೂ ಬಂದಿತ್ತು. ನಯೇ ಪೈಸೆ ಬಿಚ್ಚದ ಗಂಡ-ಹೆಂಡ್ತಿ ದಿನಾಲೂ ಹಬ್ಬದೂಟ ಮಾಡಿಸಬೇಕಾದ್ರೆ...ಅವರಿಬ್ಬರಲ್ಲಿ ಏನೋ ಗುಟ್ಟಿರಬೇಕು. ನಮ್ಮ ದಿನೂ ಇಲ್ವೆ ಪ್ರಸಾದನ್ನ ಮನೆ ಅಳಿಯ.

**(ದಿನೇಶ್-ಪ್ರಸಾದ ಗಹಗಹಿಸಿ ನಗುತ್ತಾರೆ)**

**ಕಿಟ್ಟು:** (ಸಾಮಾನೆಲ್ಲ ಗಾಡಿಯಲ್ಲಿರಿಸಿ ರೂಮು ಲಾಕ್ ಮಾಡಿ) ತಕ್ಕೊಳಯ್ಯ ಬೀಗದ ಕೈ ನಿಮ್ಮ ಅತ್ತಿಗೆ ಕೊಟ್ಟು...ಪ್ರಭಾನ್ನ ಕಣ್ತುಂಬ ನೋಡಿ-ಹೋಗಿ ಬರುವುದಾಗಿ ಹೇಳಿಬನ್ನಿ. ನಾನೂ ಚಂದ್ರೂ ಹೊರಟೆವು.

**ಪ್ರ + ದಿ:** ಏ...ನಿಲ್ಲಯ್ಯಾ ಕಿಟ್ಟೂ ...ಎಲ್ಲ ಹೊರಟದ್ದು? ಮನೆಯ ಯಜಮಾನರಿಗೆ ಹೇಳಿ ಹೋಗುವಷ್ಟೂ ನಿಮ್ಮಲ್ಲಿ ಮ್ಯಾನರ್ಸ್ ಇಲ್ವೇನೋ? ಏ ಕಿಟ್ಟೂ ನೀನು ಅಂತಿಂಥವನಲ್ಲ! ಲಕ್ಷಾಧೀಶರ ಏಕೈಕ ಪುತ್ರ! ನಿನ್ನ ಪುಣ್ಯದಿಂದ ಒಂದು ವಾರ ಸುಖ ಭೋಜನ ನಮಗೆಲ್ಲ ಪ್ರಾಪ್ತವಾಗಿತ್ತು. ಅದಕ್ಕಾಗಿಯಾದ್ರೂ ಅವರಿಬ್ಬರಿಗೆ ಥ್ಯಾಂಕ್ಸ್ ಕೊಡೋದು ನಿನ ಧರ್ಮ. ಬಾ...ಜೊತೆಗೆ ನಾವೂ ಬರ್ತೇವೆ.

**ಕಿಟ್ಟು:** (ಗಾಬರಿಯಲ್ಲಿ) ಏನು ನನ್ನಿಂದಾಗಿ? ಆ ಚಿಕ್ಕಪ್ರಾಯದ ಬಾಲೆ ಚದುರೆ! ಗಂಡನೆದುರು ಹೆದರದ ಹೆಣ್ಣು...ನನಗಾಗಿ ಸುಖಭೋಜನ ಮಾಡಿಸುತ್ತಾಳಾ? ಅಲ್ವೊ...ಪ್ರಸಾದ...ಅರ್ಧ ಡಜನ್ ಹೆಣ್ಣುಗಳು...೪ ಗಂಡುಗಳ ದಂಡು, ನಮ್ಮ ಮನೆಯೊಂದು ಕಿಷ್ಕಿಂಧ! ನನ್ನ ಮನೆಯ ಬಡತನ ನಿನಗೂ ಗೊತ್ತು!...ಇಲ್ಲೂ ನನ್ನ ಹಾಸ್ಯ ಮಾಡುವ ಚಪಲವೇ?

(ಮತ್ತೆ ನಗು...ಪ್ರಸಾದ ಚಂದ್ರೂನ ಕಿವಿಯಲ್ಲಿ ಪಿಸುಗುಟ್ಟುತ್ತಾನೆ. ಚಂದ್ರೂ ಬಿದ್ದು ಬಿದ್ದು ನಕ್ಕು ಹೊಟ್ಟೆ ಹಿಡಿದುಕೊಳ್ಳುತ್ತಾನೆ. ಅಷ್ಟರಲ್ಲಿ ವಿಮಲಮ್ಮ ಗಾಬರಿಗೊಂಡು)

**ವಿಮಲಮ್ಮ:** ನೀಲವ್ವ ಹೇಳಿದ್ಲು...ನೀವು ರೂಮು ಬಿಡ್ತೀರಂತೆ? ಅಯ್ಯೋ ಹೊರಟೇ ಬಿಟ್ಟಿದ್ದಾ? ಯಾಕೆ? ದಿನೇಶ್...ನೀವು ಪ್ರಸಾದ ನಾನು ಹೇಳಿದ ಮಾತು ಹೇಳಿಲ್ವಾ ಕಿಟ್ಟೂ ಅವರಿಗೆ?

**ಕಿಟ್ಟು:** (ಗಾಡಿಯವನಿಗೆ ಮುಂದಕ್ಕೆ ಹೋಗಲು ಹೇಳಿ) ತಕ್ಕೊಳ್ಳಿ ನಿಮ್ಮ ರೂಮಿನ ಕೀಲಿಕೈ...ಗೋಡೆ, ಕಿಟಕಿ, ಬಾಗಿಲು ಇದ್ದ ಹಾಗೆ ಬಿಟ್ಟು ಹೋಗ್ತಿದ್ದೇವೆ. ನಾವೇನೂ ತಕ್ಕೊಂಡು ಹೋಗಿಲ್ಲ. ತಗಣಿ, ಸೊಳ್ಳೆ ಸಹಿತ ಒಳಗೇ ಭದ್ರವಾಗಿರಿಸಿದ್ದೇವೆ. ಏ ಬಾರಯ್ಯಾ, ಏನು ನೋಡುತ್ತಾ ನಿಂತಿದ್ದೀರಿ? ಬಂದು ಬಿಡಿ...ಇಲ್ಲಿ ನಿಲ್ಲೋ ಏರ್ಪಾಡು ಏನಾದ್ರೂ ಮಾಡಿಕೊಂಡಿದ್ರೆ...ನಿಂತುಬಿಡಿ. ನಾನಂತೂ ಹೊರಟೆ.

**(ಪ್ರಸಾದ-ದಿನೇಶ್-ಚಂದ್ರೂ-ಕಿಟ್ಟೂನ ಹಿಂಬಾಲಿಸುತ್ತ)**

**ಪ್ರಸಾದ:** ನಿಲ್ಲಯ್ಯಾ ಕಿಟ್ಟೂ ಹಾಗೆ ಹೋಗಬೇಡ. ಇಲ್ಲಿ ನಿಲ್ಲೋ ಏರ್ಪಾಡು ಕೇವಲ ನಿನಗಾಗಿ ಮಾಡಿತ್ತು. ನಮಗಾಗಿ ಅಲ್ಲ! ಮನೆ ಅಳಿಯನ ಭಾಗ್ಯ ನಮದಲ್ಲ ನಿನ್ನದು!

**(ಎಲ್ಲರೂ ನಗುತ್ತಾರೆ. ಕಿಟ್ಟೂ ಕಕ್ಕಾಬಿಕ್ಕಿಯಾಗಿ ನೋಡುತ್ತಾನೆ. ವಿಮಲಮ್ಮನ ದುಃಖ ಉಮ್ಮಳಿಸಿ ಬಂದಂತೆ ಪ್ರಭಾ ತಲೆತಗ್ಗಿಸಿ ನಿಲ್ಲುತ್ತಿರುವಂತೆ-ತೆರೆ ಬೀಳುತ್ತದೆ.)**

(ಮುಗಿದುದು)



# ರಾಜತಂತ್ರದ ಸಂಕೋಲೆಗಳು

ಗೋವಿಂದಮೂರ್ತಿ ದೇಸಾಯಿ

ನಾನಾವರ್ಣದ ವಸ್ತ್ರಗಳಿಂದ ಅಲಂಕೃತಗೊಂಡ ಗಜಾಶ್ವಗಳೊಂದಿಗೆ ನೂರಾರು ಮೊಗಲ್‌ಸೈನಿಕರು ವಾದ್ಯಮೇಳದೊಂದಿಗೆ ವಿಜಾಪುರದ ಆದಿಲ್‌ಶಾಹಿ ಅರಮನೆಗೆ ಮೆರವಣಿಗೆಯಲ್ಲಿ ಬಂದಾಗ, ಅರಮನೆಯ ಕಾವಲುಗಾರರು ಅವರನ್ನು ಮಹಾದ್ವಾರದಲ್ಲಿಯೇ ತಡೆದರು. ಮೆರವಣಿಗೆಯ ಗತಿ ಅವಕುಂಠಿತವಾದೊಡನೆ ಹಿಂದಿದ್ದ ಮೊಗಲ್ ಸೇನಾಪತಿಗಳು ಮುಂದೆ ಬಂದು ತಾವು ಸಮ್ರಾಟ ಔರಂಗಜೇಬರಿಂದ ಸುಲ್ತಾನ ಸಿಕಂದರ ಆದಿಲ್‌ಶಹಾರಿಗೆ ನಜರನ್ನು ಮತ್ತು ಫರ್ಮಾನನ್ನು ತಂದಿರುವದಾಗಿ ಹೇಳಿದರು.

ಮೊಗಲರ ಮೆರವಣಿಗೆ ನಗರದ ಫತ್ತೇ ದರ್ವಾಜಿಗೆ ಬಂದಾಗಲೇ ಸಿಕಂದರನಿಗೆ ಸಮ್ರಾಟನು ತಮಗೆ ಕಳಿಸಿದ ಗೌರವದ ಉಡುಗೊರೆಯ ಮೆರವಣಿಗೆ ಅರಮನೆಯತ್ತ ಹೊರಟ ವಿಷಯವು ತಿಳಿದಿತ್ತು. ಸಮ್ರಾಟನ ನಜರೆಂದಮೇಲೆ ತಾವೇ ಅರಮನೆಯ ಹೊರಕ್ಕೆ ಬಂದು ಸಕಲ ಮರ್ಯಾದೆಗಳೊಂದಿಗೆ ಬರಮಾಡಿಕೊಂಡು ನಜರನ್ನು ತಮ್ಮ ಸಿಂಹಾಸನದ ಮೇಲಿರಿಸಿ ಸಮ್ರಾಟನಿಗೆ ಕೊಡಬೇಕಾಗಿದ್ದ ಗೌರವವನ್ನೇ ಆ ನಜರಿಗೂ ಸಲ್ಲಿಸಬೇಕಲ್ಲ ಎಂದು ವಿಹ್ವಲಗೊಂಡಿದ್ದನು. ಸಮ್ರಾಟನು ಒಂದೊಂದುಸಲ ಗೌರವೋಚಿತವಲ್ಲದ ಉಡುಗೊರೆ ಕಳಿಸಿ ತಮ್ಮ ಸಾಮಂತರನ್ನು ಪರೀಕ್ಷೆ ಮಾಡುತ್ತಿದ್ದನು. ಸಿಕಂದರನು ಮೊಗಲರ ಸಾಮಂತನಾಗಿರಲಿಲ್ಲ. ಹೀಗಾಗಿ ನಜರನ್ನು ಸ್ವಾಗತಿಸಬೇಕೋ ಅಥವಾ ಬೇಡವೋ ಎಂಬ ವಿಚಾರದಲ್ಲಿ ಮುಳುಗಿದನು. ಕೊನೆಗೆ ತನ್ನಾಜ್ಞೆಗೆ ಕಾಯುತ್ತಿದ್ದ ಸೇವಕನನ್ನು ಕರೆದು "ನಮಗೆ ದೇಹಾಲಸ್ಯವಾಗಿದ್ದರಿಂದ ಅಂತಃಪುರದ ಹೊರಕ್ಕೆ ಬಂದು ಸಕಲ ಮರ್ಯಾದೆಯೊಂದಿಗೆ



ಸಮ್ರಾಟರ ನಜರನ್ನು ಸ್ವಾಗತಿಸಲಿಕ್ಕಾಗುವದಿಲ್ಲ ಅದ ಕ್ಕಾಗಿ ನಜರನ್ನು ಅವರಿಗೆ ದರ್ಬಾರಕ್ಕೆ ತೆಗೆದುಕೊಂಡು ಬರಬೇಕೆಂದು ಹೇಳು. ನಾವು ಕೆಲಸಮಯದಲ್ಲಿ ದರ್ಬಾರಿಗೆ ಬರುವೆವು" ಎಂದು ಹೇಳಿಕಳಿಸಿದ.

ಸುಲ್ತಾನ ಸಿಕಂದರನ ಆಜ್ಞೆಯನ್ನು ಸೇವಕನು ಮೊಗಲ್ ಸೇನಾಪತಿಗಳಿಗೆ ಹೇಳಿದಾಗ ಅವರು ಮನಸ್ಸಿನಲ್ಲಿಯೇ ಕುದಿಯಹತ್ತಿದರು. ಸಾಮಾನ್ಯ ಸುಲ್ತಾನನೊಬ್ಬನು ಸಮ್ರಾಟನ ನಜರಿಗೆ ಹೀಗೆ ಅಗೌರವ ಮಾಡಿದ್ದನ್ನು ಅವರು ಇದುವರೆಗೆ ಕೇಳಿರಲಿಲ್ಲ. ಸುಲ್ತಾನರ ಆಜ್ಞೆಯೆಂದ ಮೇಲೆ ಅಮಾನ್ಯ ಮಾಡಲೂ ಬರುವಂತಿರಲಿಲ್ಲ. ಕಾರಣ ಅವರೀಗ ಸುಲ್ತಾನರ ರಾಜ್ಯದಲ್ಲಿದ್ದರು.

ಮೊಗಲ್ ಸೇನಾಪತಿಗಳು ಮೆರವಣಿಗೆಯ ಹಿಂದೆ ಶೃಂಗರಿಸಿದ ಆನೆಯ ಮೇಲೆ ಬಂಗಾರದ ಅಂಬಾರಿಯನ್ನಿರಿಸಿ ಅದರಲ್ಲಿಟ್ಟ ಮುತ್ತು ರತ್ನ ಖಚಿತ ಸ್ವರ್ಣದ ಪೆಟ್ಟಿಗೆಯನ್ನು ಗೌರವದಿಂದ ತಲೆಯಮೇಲಿರಿಸಿಕೊಂಡು ದರ್ಬಾರಿಗೆ ಬಂದರು. ಸೇನಾಪತಿಗಳ ಹಿಂದೆ ಹತ್ತಾರು ಮೊಗಲಸೇವಕರು ತಾಟುಗಳಲ್ಲಿ ಅಮೂಲ್ಯವಾದ ವಸ್ತ್ರಾಭರಣಗಳನ್ನು ಹಾಕಿಕೊಂಡು ಸಾಲಾಗಿ ಬರಹತ್ತಿದರು. ಮುಂದೆ ಕೆಲ ಕ್ಷಣಗಳಲ್ಲಿ ಸಿಕಂದರನು ದರ್ಬಾರಿಗೆ ಬಂದೊಡನೆ ಸಚಿವರು ಮತ್ತು ಸರ್ದಾರರು ಎದ್ದು ನಿಂತು ಸುಲ್ತಾನನಿಗೆ ಗೌರವವನ್ನು ಪ್ರದರ್ಶಿಸಿದರು. ಸಿಕಂದರನು ಸಿಂಹಾಸನಾರೂಢನಾದೊಡನೆ ಮೊಗಲ್ ಸೇನಾಪತಿಗಳು ತಮ್ಮ ತಲೆಯಮೇಲಿದ್ದ ಸುವರ್ಣ ಪೆಟ್ಟಿಗೆಯನ್ನು ಸಿಂಹಾಸನದ ಮೇಲಿಡಲು ಮುಂದೆ ಬಂದರು. ಆಗ ಸುಲ್ತಾನನು "ಅದನ್ನು ಸಿಂಹಾಸನದ ಕೆಳಗಿಡಿ" ಎಂದು ದರ್ಪದಿಂದ ಹೇಳಿದನು.

"ಹುಜೂರ್ ಇದು ಸಮ್ರಾಟರ ನಜರು. ನೆಲದ ಮೇಲಿಡಲಾಗದು" ಎಂದರು, ಮೊಗಲ ಸೇನಾಪತಿಗಳು ಅಂಜುತ್ತ.

"ಮೊದಲು ಅದನ್ನು ನೆಲದ ಮೇಲಿಡಿ" ಎಂದು ಗರ್ಜಿಸಿದ ಸಿಕಂದರ.

"ಸುಲ್ತಾನ ಹಾಗೆ ಮಾಡಿದರೆ ಸಮ್ರಾಟರಿಗೆ

**ಹದಿನೆಂಟರ ಹರೆಯದ ಸುಲ್ತಾನ ಸಿಕಂದರನು ಮೊಗಲ ಸಮ್ರಾಟ್ ಔರಂಗಜೇಬನ ನಜರನ್ನು ಗೌರವಿಸಲಿಲ್ಲ. ಅದು ಅವನ ವಿರುದ ಯುದ್ಧಕ್ಕೆ ಆಹ್ವಾನವಾಗಿತ್ತು. ಆದಿಲಶಾಹಿಯ ಗೌರವವನ್ನುಳಿಸಲು ದಿಟ್ಟತನದ ಕ್ರಮವನ್ನು ಕೈಕೊಂಡ ಸಿಕಂದರನನ್ನು ಸುಂದರಿ ಝೀನತ ತುಂಬ ಪ್ರಶಂಸಿಸಿದಳು. ಆದಿಲಶಾಹಿ ಅರಸೊತ್ತಿಗೆಯ ಕೊನೆಯ ಅಂಕದ ಕಥೆಯಿದು.**

ಅ...ಪ...ಚಾ...ರ್" ಎಂದರು, ಮೊಗಲ್ ಸೇನಾಪತಿಗಳು ತೊದಲುತ್ತ.

"ಇದು ಸುಲ್ತಾನ ಸಿಕಂದರನ ದರ್ಬಾರ. ಯಾರಿಗೆ ಯಾವ ಗೌರವವನ್ನು ಸಲ್ಲಿಸಬೇಕೆಂಬ ನಿರ್ಧಾರವನ್ನು ಕೈಗೊಳ್ಳುವದು ಸುಲ್ತಾನರಾದ ನಮಗೆ ಸೇರಿದ್ದು." ಎಂದು ದರ್ಪದಿಂದ ಹೇಳಿ ತಮ್ಮ ಸೇನಾಪತಿಗೆ "ಸರ್ಜಾಖಾನ, ಅವರ ತಲೆಯ ಮೇಲಿದ್ದ ನಜರಿನ ಪೆಟ್ಟಿಗೆಯನ್ನು ಇಸಗೊಂಡು ಅದರ ಬಾಗಿಲನ್ನು ತೆರೆಯಿರಿ" ಎಂದನು.

ಆದಿಲ್‌ಶಾಹೀ ಸೇನಾಪತಿಗಳು ಮುಂದೆ ಬಂದು ಮೊಗಲ್ ಸೇನಾಪತಿಗಳಿಂದ ಔರಂಗಜೇಬನು ಕಳಿಸಿದ ಪೆಟ್ಟಿಗೆಯನ್ನು ತೆಗೆದುಕೊಂಡು ಸಿಂಹಾಸನದ ಕೆಳಗೆ ನೆಲದ ಮೇಲಿಟ್ಟು ಮುಚ್ಚಳವನ್ನು ತೆರೆದರು. ಅದರಲ್ಲಿ ಸಮ್ರಾಟ ಔರಂಗಜೇಬನ ಒಂದು ಪಾದರಕ್ಷೆಯಿತ್ತು. ಸಮ್ರಾಟ ಔರಂಗಜೇಬನು ತಮ್ಮದೊಂದು ಪಾದರಕ್ಷೆಯನ್ನು ಮೆರವಣಿಗೆಯಲ್ಲಿ ಕಳಿಸಿ ಪರರಾಜರಿಗೆ ನಜರೆಂದು ಕೊಡುತ್ತಿದ್ದನು. ಯಾರು ಆ ನಜರನ್ನು ಗೌರವಪೂರ್ವಕವಾಗಿ ಸ್ವಾಗತಿಸಿ ತಮ್ಮ ಸಿಂಹಾಸನದ ಮೇಲಿರಿಸಿ ಔರಂಗಜೇಬನಿಗೆ ಸಲ್ಲಿಸಬೇಕಾದ ಮಾನವನ್ನು ಅದಕ್ಕೆ ಸಲ್ಲಿಸುತ್ತಿದ್ದರೋ ಅವರನ್ನು ಸಮ್ರಾಟನು ಸ್ನೇಹಿತರೆಂದು ಭಾವಿಸುತ್ತಿದ್ದನು. ಹಾಗೆ ಮಾಡದವರನ್ನು ಶತ್ರುಗಳೆಂದು ಬಗೆಯುತ್ತಿದ್ದನು. ಅಂತಲೇ ಸಮ್ರಾಟ ಔರಂಗಜೇಬನ ಕಾಣಿಕೆ ತಮಗೆ ಬಂದಿದೆ ಎಂದು ಕೇಳಿದಾಗಲೇ ಸಿಕಂದರನು



ವಿಚಲಿತನಾಗಿದ್ದನು.

ಸಿಕಂದರನು ಔರಂಗಜೇಬನ ಆ ಪಾದರಕ್ಷೆಯನ್ನು ನೋಡಿ ಮೊಗಲ್ ಸೇನಾಪತಿಗಳಿಗೆ "ಇದೇನು ನಿಮ್ಮ ಸಮ್ರಾಟರು ಒಂದೇ ಪಾದರಕ್ಷೆಯನ್ನು ಕಳಿಸಿರುವ ರಲ್ಲ. ನಮ್ಮ ಪಾದಗಳು ಅವರ ಪಾದರಕ್ಷೆಗಳನ್ನು ಹಾಕಿಕೊಳ್ಳಬೇಕಿದ್ದರೆ ಎರಡನ್ನೂ ಅವರು ಕಳಿಸ ಬೇಕಿತ್ತಲ್ಲ! ಹೋಗಿ ಇದನ್ನು ತೆಗೆದುಕೊಂಡು ಓಡುತ್ತ ಹೋಗಿ ಇದರ ಜೊತೆಯ ಇನ್ನೊಂದು ಪಾದರಕ್ಷೆಯನ್ನು ತೆಗೆದುಕೊಂಡು ಬನ್ನಿ. ಆಗ ನಾವು ನಿಮ್ಮ ಸಾಮ್ರಾಟರ ನಜರನ್ನು ಸ್ವೀಕರಿಸುತ್ತೇವೆ" ಎಂದನು. ಸುಲ್ತಾನ ಅರ್ಧ ಅಪಹಾಸ್ಯ ಅರ್ಧ ಗಾಂಭೀರ್ಯ ಬೆರೆತ ಧ್ವನಿಯಲ್ಲಿ.

ಮೊಗಲ್ ಸೇನಾಪತಿಗಳಿಗೆ ಇನ್ನೂ ಹದಿನೆಂಟರ ಹೊಸ್ತಿಲಲ್ಲಿ ನಿಂತ ಸುಲ್ತಾನ ಸಿಕಂದರನು ಔರಂಗ ಜೇಬನನ್ನು ಹೀಗೆ ಅಗೌರವಿಸಬಹುದೆಂದು ಅನಿಸಿರ ಲಿಲ್ಲ. ಸುಲ್ತಾನನ ಧೈರ್ಯಾಭಿಮಾನಗಳಿಗೆ ವಿಜಾ ಪುರದ ದರ್ಬಾರವೇ ತಲೆದೂಗಿತು. ಅದಿಲ್‌ಶಾಹೀ ಸೈನ್ಯಾಧಿಕಾರಿಗಳು ಸುಲ್ತಾನನ ಈ ಮಾತುಗಳನ್ನು ಕೇಳಿ ಹರ್ಷೋದ್ಗಾರಗಳನ್ನು ತೆಗೆದರು.

ಅಪಮಾನಿತರಾದ ಮೊಗಲ್ ಸೈನಿಕರು ತಮ್ಮ ನಜರುಗಳ ತಾಟುಗಳನ್ನೆತ್ತಿಕೊಂಡು ದರ್ಬಾರದಿಂದ ಮೆಲ್ಲನೆ ಹೊರಕ್ಕೆ ಹೋದರು. ಆಗ ವಿಜಾಪುರವೇ ನಗುತ್ತಿತ್ತು. ಅದಿಲ್‌ಶಾಹೀ ಮನೆತನದ ಗೌರವ ಪತಾಕೆಯನ್ನು ಎತ್ತಿ ಹಿಡಿದ ಬಿಸಿರಕ್ತದ ಸಿಕಂದ ರನ್ನು ಪ್ರಜೆಗಳೆಲ್ಲರೂ ಪ್ರಶಂಸಿಸಿದರು. ಎಲ್ಲರ ನಾಲಿಗೆಗಳ ಮೇಲೂ ಸಿಕಂದರನ ಪ್ರಶಂಸೆಯ ಮಾತು ಗಳೇ ಮಾತುಗಳು.

ವಿಜೇತರಂತೆ ಸುಲ್ತಾನ ಸಿಕಂದರನು ದರ್ಬಾರ ವನ್ನು ಮುಗಿಸಿಕೊಂಡು ಅಂತಃಪುರದಲ್ಲಿಯ ತಮ್ಮ ಶಯ್ಯಾಗೃಹಕ್ಕೆ ಹೋದಾಗ ಶಯ್ಯಾಗೃಹದ ಒಳಗಿನ ದ್ವಾರದ ಮರೆಯಲ್ಲಿ ಅಡಗಿನಿಂತ ರಿಝೀನತ್ ಉನ್ನಿಸಾ ಬೊಗಸೆ ಬೊಗಸೆ ಗುಲಾಬಿ ಪಕಳೆ ಗಳನ್ನು ಸಿಕಂದರನ ಮೇಲೆ ತೂರಿದಳು. ಸಿಕಂದರನು ಹೊರಳಿ "ಇದೇನು! ಪುಷ್ಪವೃಷ್ಟಿ!" ಎಂದು ಮುಗುಳು ನಗುತ್ತಿರುವಾಗ ರಿಝೀನತ್ ಕಿಲಕಿಲನೆ ನಕ್ಕು "ಸುಲ್ತಾನ ಸಿಕಂದರ ಅದಿಲ್‌ಶಹಾಕೀ ಜಿಂದಾಬಾದ" ಎಂದಳು.

"ಓ... ನೀ...ನೇ...ನಿ...ನಿ...ನಿ...ಲ್ಲ" ಎಂದ ವನೇ ಅವಳತ್ತ ಧಾಪಿಸಿ ಬಂದಾಗ ಅವಳು ಜಾರಿ ಕೊಂಡು ಮುಂದೆ ಹೋದಳು. ಸುಲ್ತಾನನು ಅವಳ ಬೆನ್ನತ್ತಿ ಅವಳನ್ನು ಹಿಡಿದು "ನಿನ್ನನ್ನು ಈ ಶಯ್ಯಾ ಗೃಹದಲ್ಲಿ ಯಾರು ಬಿಟ್ಟರು?" ಎಂದು ಕೇಳಿದನು, ನಗುತ್ತ.

"ಅದಿಲ್‌ಶಾಹೀ ಮನೆತನದ ಧವಲಕೀರ್ತಿಯು ಆಚಂದ್ರಾರ್ಕವಾಗಿ ನಿಲ್ಲುವಂತೆ ಮಾಡಿದ ಜಹಾಪನಾ ಅವರಿಗೆ ಪ್ರಣಾಮಗಳನ್ನು ಸಲ್ಲಿಸಲು ಬರುವ ಪ್ರಜೆ ಗಳಿಗೆ ಸುಲ್ತಾನರ ಅಪ್ಪಣೆಯು ಬೇಕಾಗುವದೆಂದು ಈ ಬಡಪ್ರಜೆಗೆ ಗೊತ್ತಿರಲಿಲ್ಲ. ಕ್ಷಮಿಸಿ ಸುಲ್ತಾನ" ಎಂದಳು, ರಿಝೀನತ್.

"ಈ ಸ್ವರ್ಣದಗಿಳಿ ಎಷ್ಟು ಮಾತನಾಡಲು ಕಲಿತಿದೆಯಲ್ಲ" ಎಂದು, ರಿಝೀನತಳನ್ನು ಬರಸೆಳೆದು ಅಪ್ಪಿಕೊಂಡನು ಸಿಕಂದರ.

"ಇದೇನು ಸುಲ್ತಾನ ನಿಮ್ಮ ತೋಳುಗಳಲ್ಲಿ ನನ್ನನ್ನು ಬಂಧಿಸಿದಿರಿ. ಯಾರಾದರೂ ಬಂದು ನೋಡಿ ದರೆ... ಏ...ನಂ...ದಾ...ರು"

"ಏನನ್ನುತ್ತಾರೆ! ಅಂತಃಪುರದ ಬಾಗಿಲಹಿಂದೆ ಅವಿತುಕೊಂಡು ನನ್ನ ಮೇಲೆ ದಾಳಿಮಾಡಿ ಓಡಿಹೋಗುತ್ತಿದ್ದ ಅಪರಾಧಿಯನ್ನು ಬಂಧಿಸಿದ್ದೇನೆ ಬಂದು ಕರೆದುಕೊಂಡು ಹೋಗಿ ನ್ಯಾಯವಿಚಾರಣೆ ಮಾಡಿರಿ ಎಂದು ಹೇಳುತ್ತೇನೆ" ಎಂದನು, ಸಿಕಂದರ ನಗುತ್ತ.

"ನ್ಯಾಯನಿರ್ಣಯದಲ್ಲಿ ನಾನು ಅಪರಾಧಿ ಎಂದು ಸಿದ್ಧವಾದರೆ ನನಗಾವ ಶಿಕ್ಷೆಯನ್ನೀಯುತ್ತೀರಿ ಸುಲ್ತಾನ" ಎಂದು, ಸಿಕಂದರನ ಎದೆಯ ಮೇಲೆ ಮೆಲ್ಲನೆ ತನ್ನ ತಲೆಯನ್ನಿಡುತ್ತ ಕೇಳಿದಳು ರಿಝೀನತ್.

"...ಶಿ...ಕ್ಷೆ...!" ಎಂದವನೇ ಸಿಕಂದರನು ರಿಝೀನತ್‌ಳನ್ನು ಅಪ್ಪಿಕೊಂಡು ಮುತ್ತಿನ ಮಳೆ ಯನ್ನೇ ಸುರಿಸಿದನು. ರಿಝೀನತ್‌ಳ ಅಧರಗಳ ಮೇಲೆ!

"ನಾನು ಮಾಡಿದ ಅಪರಾಧವೇನು ಸುಲ್ತಾನ?" ಎಂದು ರಿಝೀನತ್‌ಳು ಆನಂದಪುಳಕಿತಳಾಗಿ "ಜಹಾ ಪನಾ, ಅಬಲೆಯೊಬ್ಬಳ ಮೇಲೆ ತಾವೇ ಹಲ್ಲೆ ಮಾಡಿ ಅಬಲೆಯನ್ನೇ ಅಪರಾಧಿಯೆಂದು ಕರೆಯುವಿರಲ್ಲ! ಸುಲ್ತಾನ ನಾವಿನ್ನೂ ಅವಿವಾಹಿತರೆಂಬುದು ಲಕ್ಷ ದಲ್ಲಿ ಇದೇ ತಾನೇ!!" ಎಂದು ಕೇಳಿದಳು ರಿಝೀನತ್.

"ಓ...! ಇಷ್ಟೇ ತಾನೇ... ಹಾಗಾದರೆ ನಾವೆಂದು ವಿವಾಹಬದ್ಧರಾಗೋಣ ಹೇಳು" ಎಂದು ಕೇಳಿದ ಸಿಕಂದರ.

"ಅಂದೆಂದು ಔರಂಗಜೇಬನಿತ್ತ ಯುದ್ಧದೌತಣ ವನ್ನು ಸ್ವೀಕರಿಸಿ ಸುಲ್ತಾನರು ಸಮ್ರಾಟನನ್ನು ಪರಾ ಜಿತಗೊಳಿಸುವರೋ ಅಂದೇ ಈ ರಿಝೀನತ್ ಸುಲ್ತಾ ನರ ಕೊರಳಿಗೆ ಮಾಲೆ ಹಾಕುವಳು."

"ಒಂದು ಪಕ್ಷಕ್ಕೆ ಭವಿಷ್ಯವು ವ್ಯತಿರಿಕ್ತವಾಗಿ ನಡೆದರೆ..." ಸಿಕಂದರನು ಕೇಳಿದನು.

"ಹಾಗೆನ್ನಬೇಡಿ ಸುಲ್ತಾನ" ಎಂದು ರಿಝೀನತ್ ಸಿಕಂದರನ ಬಾಯಿಯ ಮೇಲೆ ಕೈಯಿಡುತ್ತ – "ಮೂವತ್ತು ವರುಷಗಳಕಾಲ ರಾಜ್ಯವನ್ನಾಳಿ ವಿಜಾ ಪುರ ರಾಜ್ಯದ ಕೀರ್ತಿ ಅಜರಾಮರವಾಗುವಂತೆ ಮಾಡಿ ಗೋಳಗುಮ್ಮಟದಲ್ಲಿ ಚಿರನಿದ್ರೆ ಮಾಡು ತ್ತಿರುವ ಮೊಹಮ್ಮದ ಆದಿಲ್‌ಶಹಾರ ಈ ರಾಜ್ಯವು ಭಗ್ನವಾಗುವದನ್ನು ಈ ರಿಝೀನತ್ ಉನ್ನಿಸಾಳ ಕಣ್ಣು ಗಳಂತೂ ಕಾಣವು." ಎಂದಳು.

"ಭಲೇ... ಇದ್ದರೆ ಇಂತಹ ವೀರರಮಣಿಯರಿರ ಬೇಕು. ವಿಜಾಪುರದ ಅದಿಲ್‌ಶಾಹೀ ಅಂತಃಪುರ ವನ್ನು ಸೇರಲು ನೀನು ಅರ್ಹಳಿರುವಿ ಎಂಬ ಮಾತಿಗೆ ಬೇರೆ ಸಾಕ್ಷಿಯೇ ಬೇಕಿಲ್ಲ. ರಿಝೀನತ್ ಇಂದು ನೀನು ನನ್ನ ಜೊತೆಯಲ್ಲಿಯೇ ಭೋಜನವನ್ನು ಸ್ವೀಕರಿಸ ಬೇಕು" ಎಂದು, ಸಿಕಂದರನು ರಿಝೀನತ್‌ಳನ್ನು ಕರೆ ಕೊಂಡು ಭೋಜನಶಾಲೆಗೆ ಹೋದರು.

ಮುಂದೆ ಸಿಕಂದರ, ಹಿಂದೆ ರಿಝೀನತ್ ನಡೆಯು ತ್ತಿರುವಾಗ ಸೌಂದರ್ಯದ ಪ್ರಕಾಶವೇ ನೆಲದ ಮೇಲೆ ನಡೆದು ಹೋಗುವಂತೆ ಕಾಣುತ್ತಿತ್ತು. ರಿಝೀನತ್ ಸಿಕಂದರನಿಗೆ ಸರಿ ಹೋಗುವ ರೂಪಸಿ ಯಾಗಿದ್ದಳು. ಸಿಕಂದರನ ಈ ಆಯ್ಕೆಯನ್ನು ಅರ ಮನೆಯು ತುಂಬಾ ಮೆಚ್ಚಿಕೊಂಡಿತ್ತು. ರಿಝೀನತ್ ಸಿಕಂದರನ ಹತ್ತಿರದ ಸಂಬಂಧಿಕಳಾಗಿದ್ದಳು. ಅಂತಲೇ ಅವರಿಬ್ಬರೂ ಅಷ್ಟು ಅನ್ಯೋನ್ಯ ಪ್ರೀತಿಯಿಂದ ನಡೆದು ಕೊಳ್ಳುತ್ತಿದ್ದರು. ಆದರೆ ಇವರಿಬ್ಬರ ವಿವಾಹ ವನ್ನು ಔರಂಗಜೇಬನಮಗನಾದ ಮುಹಮ್ಮದ ಆಜಂನನ್ನು ಮದುವೆಮಾಡಿಕೊಂಡ ವಿಜಾಪುರದ ರಾಜಕುಮಾರಿ ಸಹರಬಾನು ಮಾತ್ರ ವಿರೋಧಿಸು ತ್ತಿದ್ದಳು. ರಿಝೀನತ್‌ಳಲ್ಲಿ ಮೊಗಲರ ಬಗ್ಗೆ ದ್ವೇಷ ಭಾವನೆ ತುಂಬಿದೆ ಎಂಬುದನ್ನು ಸಹರಬಾನು ಅರಿ ತಿದ್ದಳು. ಅವಳ ಪ್ರಭಾವದಿಂದ ಸಿಕಂದರನಲ್ಲಿ ಮರಾಠಾ ರಾಜನಾದ ಸಂಭಾಜಿಮಹಾರಾಜನಿಗೆ ಸಹಾಯಮಾಡಿ ಔರಂಗಜೇಬನು ದಕ್ಷಿಣದಲ್ಲಿ ತಲೆ



ದೀಪಾವಳಿಯ ಸಂತಸವು ಕಸ್ತೂರಿಯ ಸುವಾಸನೆಯಂತೆ ಹರಡಲಿ


ಶ್ರೀ ರಾಮಕೃಷ್ಣ ಆಂಯಿಲ್ ಮಿಲ್ಸ್, ಲಿಮಿಟೆಡ್
ಇವರ ಪ್ರಸಿದ್ಧ ತಯಾರಿಕೆಗಳಾದ
ಕಸ್ತೂರಿ ಬಾರ್‌ಸೋಪ್, ಸೋನಾ ಸ್ಯಾಂಡಲ್ ಸೋಪ್,
ಅನಿತಾ ಟಾಯಿಲಟ್ ಸೋಪ್,
ಆ್ಯಗ್‌ಮಾರ್ಕ್ ನಿರ್ಮಲ ಕೊಬ್ಬರಿ ಎಣ್ಣೆ
ಮೊದಲಾದವುಗಳ ಏಜಂಟರು

ಮಾಲಕರು : ಜಿ. ಎಮ್. ವೀರಭದ್ರಪ್ಪ

ಶ್ರೀ ಸಾಯಿನಾಥ ಜನರಲ್ ಏಜನ್ಸಿ

ಚಾಮರಾಜ ಪೇಟೆ, ದಾವಣಗೆರೆ-1 • • ಫೋನ: ೪೮೮

ಎತ್ತ್ರದಂತೆ ಮಾಡುವನೋ ಎಂದು ಅಧೀರಳಾಗಿದ್ದಳು. ಆಗೀಗ ಸಿಕಂದರನಿಗೆ ರಿಝೀನತ್‌ಳ ಬಗ್ಗೆ ಸಹರಬಾನು ಎಚ್ಚರಿಕೆಯನ್ನು ಕೊಡುತ್ತಲೇ ಇದ್ದಳು. ಸಿಕಂದರ ನಗೆಯಲ್ಲಿ ಮಾತನ್ನು ತೇಲಿಸಿ ಸಹರಬಾನುವಿನೊಂದಿಗೆ ರಿಝೀನತಳ ಬಗ್ಗೆ ಯಾವ ಮಾತನ್ನೂ ಆಡುತ್ತಿರಲಿಲ್ಲ. ರಿಝೀನತಳಕಿಂತಲೂ ಸುಂದರಳಾದ ಮೊಗಲಕನ್ಯೆಯನ್ನು ತಂದು ತಾನು ಸಿಕಂದರನ ಮದುವೆಮಾಡಿ ಎರಡೂ ಮನೆತನಗಳ ಬಾಂಧವ್ಯವನ್ನು ಬಿಗಿಗೊಳಿಸುವದಾಗಿ ಹೇಳುತ್ತಿದ್ದ ಸಹರಬಾನುವಿನ ಮಾತಿಗೆ ಸಿಕಂದರನು ಯಾವ ಪ್ರತಿಕ್ರಿಯೆಯನ್ನೂ ವ್ಯಕ್ತಪಡಿಸುತ್ತಿರಲಿಲ್ಲ.

ಸುಲ್ತಾನ ಸಿಕಂದರನು ಸಮ್ರಾಟನ ನಜರನ್ನು ಅಗೌರವ ರೀತಿಯಲ್ಲಿ ಕಂಡನೆಂಬ ಮಾತು ಮಿಂಚಿನಂತೆ ಎಲ್ಲೆಡೆಯಲ್ಲಿಯೂ ಪಸರಿಸಿತಲ್ಲದೆ ದಿಲ್ಲಿಯು ಆಘಾತವಾದಂತೆ ತತ್ತರಿಸಿತು. ಸಿಕಂದರನು ಸಂಭಾಜಿ ಮಹಾರಾಜರಿಗೆ ಸಹಾಯ ಸಲ್ಲಿಸಿ ಮೊಗಲರು ದಕ್ಷಿಣದಲ್ಲಿ ಕಾಲು ಚಾಚದಂತೆ ಮಾಡುವರೆಂಬ ಮಾತು ಔರಂಗಜೇಬನಿಗೆ ಸ್ಪಷ್ಟವಾಯಿತು. ಸಿಕಂದರನ ಈ ಕೃತಿಯನ್ನು ನೋಡಿ ಸಮ್ರಾಟ ಔರಂಗಜೇಬನು ಕುಪಿತನಾದನು.

ತಕ್ಷಣವೇ ವಿಜಾಪುರದ ಮುಖ್ಯ ಸೇನಾಪತಿಯಾದ ಸರ್ಜಾಖಾನರಿಗೆ ಔರಂಗಜೇಬನು ಒಂದು ಪತ್ರವನ್ನು ಬರೆದು, "ಮರಾಠಾ ಸರ್ದಾರನಾದ ಸಂಭಾಜಿಯನ್ನು ಗಿಲಗಿಲನೆ ಅರೆದು ಕುಡಿಯುವಂತೆ ಮಾಡಲು ನೀವು ನಮಗೆ ಸಕಲ ಸಹಾಯವನ್ನು ಸಲ್ಲಿಸಿದರೆ ಸಂಭಾಜಿ ನಿಮ್ಮಿಂದ ಗೆದ್ದ ನಿಮ್ಮ ರಾಜ್ಯವನ್ನು ನಾವು ಮರಳಿಕೊಡಿಸಲು ಸಹಾಯ ಮಾಡುವೆವು. ಅದಕ್ಕೆ ಸಿಕಂದರನಿಗೆ ಈ ಮಾತು ಹೇಳಿ ನಮ್ಮನ್ನು ನೀವು ಬೆಂಬಲಿಸಬೇಕು." ಎಂದು ತಿಳಿಸಿದರು. ಸಮ್ರಾಟನ ಪತ್ರದ ಜೊತೆ ರಾಜರಾಜಕುಮಾರಿ ಸಹರಬಾನು ಒಂದು ಪತ್ರವನ್ನು ಬರೆದು "ಸಮ್ರಾಟ ಔರಂಗಜೇಬರು ಶೀಘ್ರದಲ್ಲಿಯೇ ದಕ್ಷಿಣಕ್ಕೆ ದಂಡಯಾತ್ರೆಗೆ ಬರಲಿರುವರು. ಅವರು ಬಂದಾಗ ಮರಾಠಾ ಸರ್ದಾರ ಸಂಭಾಜಿಯನ್ನು ಸದೆಬಡೆಯಲು ಸಮ್ಮನರಾದ ನೀವು ಮೊಗಲ್ ಸೈನ್ಯಕ್ಕೆ ಸಹಾಯ ಮಾಡಿ ಖಾನ್-ಇ-ಜಹಾನರಿಗೆ ಸಂಪೂರ್ಣ ಸಹಕಾರವನ್ನು ನೀಡಬೇಕು. ಇದರಿಂದ ನನ್ನ ತವರೂರಾದ ವಿಜಾಪುರ ಆದಿಲ್‌ಶಾಹೀ ಕೀರ್ತಿ ದ್ವಿಗುಣಿತಗೊಳ್ಳುವದೆಂದು ನಾನು ಭಾವಿಸಿದ್ದೇನೆ" ಎಂದು ತಿಳಿಸಿದ್ದಳು.

ಸಮ್ರಾಟ ಔರಂಗಜೇಬನ ಪತ್ರವನ್ನು ಸುಲ್ತಾನ ಸಿಕಂದರನು ಮಂತ್ರಿಮಂಡಲ ಮತ್ತು ಸೈನ್ಯಾಧಿಕಾರಿಗಳೊಂದಿಗೆ ಚರ್ಚಿಸಿದಾಗ ಅಲ್ಲಿ ಸೇರಿದವರೆಲ್ಲರೂ "ಸಮ್ರಾಟರು ದಂಡೆತ್ತಿ ಬರಲಿ. ನಾವವರಿಗೆ ಯಾವ ಸಹಾಯವನ್ನೂ ಮಾಡುವುದು ಬೇಡ. ಒಂದು ಪಕ್ಷಕ್ಕೆ ನಮ್ಮ ಮೇಲೆ ಅವರು ದಂಡೆತ್ತಿ ಬಂದರೆ ನಮ್ಮ ಖಡ್ಗಗಳ ರುಚಿ ನೋಡಲಿ" ಎಂದರು. ಸಿಕಂದರ ತಮ್ಮ ಸೈನಿಕರ ಮಾತುಗಳನ್ನು ಮೆಚ್ಚಿಕೊಂಡ.

ಸೇನಾಪತಿ ಸರ್ಜಾಖಾನನು ಸಮ್ರಾಟನಿಗೆ ಯಾವ ಉತ್ತರವನ್ನೂ ಕಳಿಸಲಿಲ್ಲ. ಕೆಲ ಕಾಲ ತಡೆದು ಔರಂಗಜೇಬನು ಸುಲ್ತಾನ ಸಿಕಂದರನಿಗೇ ಪತ್ರವನ್ನು ಬರೆದು "ನಮ್ಮ ಸಾಮಂತರಾದ ನೀವು, ನಾವು ದಂಡಯಾತ್ರೆಗೆ ಬಂದಾಗ ನಮ್ಮ ಸೈನ್ಯಕ್ಕೆ ಆಹಾರ ಸಾಮಗ್ರಿಗಳನ್ನು ಒದಗಿಸಬೇಕು. ಮರಾಠರನ್ನು ಗೆದೆಯಲು ಹೋಗುವ ನಮ್ಮ ಸೈನ್ಯಕ್ಕೆ ನಿಮ್ಮ ರಾಜ್ಯದಲ್ಲಿ ಮುಕ್ತ ದ್ವಾರವಿರಬೇಕು. ನಿಮ್ಮ ಸೇನಾಪತಿಯಾದ ಸರ್ಜಾಖಾನರನ್ನು ಕೂಡಲೇ ನಿಮ್ಮ ರಾಜ್ಯದಿಂದ ಗಡಿಪಾರು ಮಾಡಬೇಕು" ಎಂದು ಕೇಳಿದನು.

ಸಿಕಂದರನು ಸಮ್ರಾಟನ ಪತ್ರವನ್ನು ನೋಡಿ ಕೋಪೋದ್ದೀಪಿತನಾಗಿ "ನಾವು ನಿಮ್ಮ ಸಾಮಂತರಲ್ಲ. ನಾವು ಸ್ವತಂತ್ರ ರಾಜರು. ಈ ಕಾಲ ನಮ್ಮಿಂದ ಪಡೆದ ಕಪ್ಪ-ಕಾಣಿಕೆಗಳನ್ನು ನೀವು ಮರಳಿ ಕೊಡಬೇಕಲ್ಲದೆ, ಮರಾಠರ ಮೇಲೆ ದಂಡೆತ್ತಿ ಹೋಗುವಾಗ ನಿಮ್ಮ ಸೈನ್ಯವು ನಿಮ್ಮ ರಾಜ್ಯದಲ್ಲಿಯೇ ಹಾದು ಹೋಗಬೇಕು. ಸರ್ಜಾಖಾನರನ್ನು ನಮ್ಮ ಸೇವೆಯಿಂದ ಮುಕ್ತಗೊಳಿಸುವುದು ಸಾಧ್ಯವಿಲ್ಲ" ಎಂದು ಖಾರವಾಗಿ ಹೇಳಿಬಿಟ್ಟನು.

ಈ ಪತ್ರಗಳ ತಾಕಲಾಟವು ಎರಡೂ ರಾಜ್ಯಗಳ ಮಧ್ಯದಲ್ಲಿ ಕಿಡಿಯನ್ನು ಎಬ್ಬಿಸಿತು. ಲೋಕಾನುಭವವಿಲ್ಲದ ಹದಿನೆಂಟರ ಸಿಕಂದರನು ತಮ್ಮನ್ನು ಎದುರು ಹಾಕಿಕೊಳ್ಳಬಹುದೆಂದು ಸಮ್ರಾಟನು ಕನಸಿನಲ್ಲಿಯೂ ಎಣಿಸಿರಲಿಲ್ಲ. ಹಾಗೆ ನೋಡಿದರೆ ಸಿಕಂದರನು ಅಲ್ಪವಯಿ ಇರುವಾಗ ರಾಜ್ಯಭಾರವೆಲ್ಲಾ ಸಚಿವರ ಕೈಗೆ ಹೋಗಿ ರಾಜ್ಯದ ತುಂಬಾ ಅರಾಜಕತೆ ತಲೆ ಎತ್ತಿ ತಾಂಡವವಾಡುತ್ತಿತ್ತು. ಈಗತಾನೇ ರಾಜ್ಯದಲ್ಲಿ ಶಾಂತಿ ಸಮೃದ್ಧಿಗಳು ತಲೆ ಎತ್ತುತ್ತಿರುವಾಗ ಸಿಕಂದರರು ಇಂತಹ ಸಾಹಸಕ್ಕೆ ಇಳಿಯಬಹುದೆಂದು ಔರಂಗಜೇಬನು ಭಾವಿಸಿರಲಿಲ್ಲ.।

ಯುದ್ಧವನ್ನು ಪ್ರಾರಂಭಿಸುವ ಮೊದಲು ಸಮ್ರಾಟನು ಸಿಕಂದರರಿಗೆ ಹಲವಾರು ಅಮೂಲ್ಯ ಕಾಣಿಕೆಗಳನ್ನು ಕಳಿಸಿ ತಮ್ಮೆಡೆ ಒಲಿಸಿಕೊಳ್ಳಲು ಹವಣಿಸಿದನು. ಆದರೆ ಸಿಕಂದರನು ಔರಂಗಜೇಬನ ಯಾವ ಆಮಿಷಕ್ಕೂ ಒಳಗಾಗಲಿಲ್ಲ. ರಿಝೀನತ್ ಉನ್ನೀಸಾ ಸಿಕಂದರನಿಗೆ "ಜಹಾಪನಾ, ಔರಂಗಜೇಬನ ಮಧುರ ಮಾತಿಗೆ ಮರುಳಾಗಬೇಡಿ. ಕೈಯಲ್ಲಿ ಕಠಾರಿಯನ್ನಡಗಿಸಿಕೊಂಡು ಬಾಯಿಂದ ಕುರಾನವನ್ನು ಹೇಳುವನು ಔರಂಗಜೇಬನು. ಪಾದರಕ್ಷೆಯ ಕಾಣಿಕೆಯನ್ನು ಕಳಿಸಿ ಅವಮಾನ ಮಾಡಿದ್ದು ಸಾಲದೇನು?" ಎಂದು ಹೇಳಿದಳು.

ಸುಲ್ತಾನಸಿಕಂದರನ ನಿಲುವಿನಲ್ಲಿ ಯಾವ ಬದಲಾವಣೆಯನ್ನೂ ಕಾಣದ ಸಮ್ರಾಟ ಔರಂಗಜೇಬನು ಮಗನಾದ ಮಹಮ್ಮದ ಆಜಂನ ನೇತೃತ್ವದಲ್ಲಿ ನಾಲವತ್ತು ಸಾವಿರ ಅಶ್ವ, ಐದುನೂರು ಆನೆ ಮತ್ತು ಹದಿನೈದುಸಾವಿರ ಕಾಲಾಳುಗಳನ್ನು ಕಳಿಸಿ ವಿಜಾಪುರ ರಾಜ್ಯದ ಕೆಂಕಲ ಪಡುವಲದಿಂದ ದಾಳಿ ಮಾಡುತ್ತ ವಿಜಾಪುರ ಕೋಟೆಯ ಮೇಲೆ ಏರಿ ಬರಲು ಹೇಳಿದ. ಸೊಲ್ಲಾಪುರದ ಕಡೆಯಿಂದ ವಿಜಾಪುರದ ಕಡೆ ಹೋಗಲು ಸೇನಾಪತಿಗಳಾದ ರಣದುಲ್ಲಾಖಾನ ಮತ್ತು ಕ್ವಿಜಬ್‌ಖಾನರೊಡನೆ ಅಪಾರ ಸೈನ್ಯವನ್ನು ಕಳಿಸಿದರು. ಕ್ವಿಜಬ್‌ಖಾನ ವಿಜಾಪುರದ ಸಮೀಪದಲ್ಲಿ ಕಳವೂರಿ ಸುರಂಗ ಮಾರ್ಗವನ್ನು ರಚಿಸಹತ್ತಿದನು. ರಾಜಕುಮಾರ ಆಜಂನು ಹುಬ್ಬಳ್ಳಿ, ಧಾರವಾಡ, ಗೋಕಾಕಗಳನ್ನು ಗೆದ್ದುಕೊಂಡು ಸೈನ್ಯ ಸಮೇತ ವಿಜಾಪುರದತ್ತ ಬಂದನು.

ವಿಜಾಪುರದ ಕೋಟೆ ಅಭೇದ್ಯ ಕೋಟೆಯೆಂದು ಕೇಳಿದ ಸಮ್ರಾಟನು ತಾನೇ ಬಂದು ವಿಜಾಪುರದ ಬಳಿಯಿರುವ ರಸುಲ್‌ಪುರದಲ್ಲಿ ಬೀಡು ಬಿಟ್ಟನು.

ಸುಲ್ತಾನ ಸಿಕಂದರನು ಸರ್ಜಾಖಾನರಿಗೆ ವಿಜಾಪುರ ಸೈನ್ಯದ ಮುಖ್ಯ ಸೇನಾಪತಿ ಹುದ್ದೆಯನ್ನು ವಹಿಸಿಕೊಟ್ಟು ಕೋಟೆಯ ಒಳಗೆ ಮೂವತ್ತು ಸಾವಿರ ಸೈನ್ಯವನ್ನಿಟ್ಟು ಮುವತ್ತು ಸಾವಿರಕ್ಕೂ ಅಧಿಕ ಸೈನ್ಯವನ್ನು ಕೋಟೆಯ ಹೊರಗೆ ಕಳಿಸಿ ಮೊಗಲರ ಬೆನ್ನಮೇಲೆ ಬೀಳಲು ಆಜ್ಞಾಪಿಸಿದ್ದನು. ಸಾವಿರದಾಆರನೂರಾ ಎಂಭತ್ತೈದು ಏಪ್ರಿಲ ಒಂದರಂದು ಮೊಗಲರು ವಿಜಾಪುರದೊಡನೆ ಯುದ್ಧವನ್ನು ಪ್ರಾರಂಭಿಸಿದ್ದರೂ, ಒಂದುವರ್ಷ ಕಾಲ ಯಾವ ಪ್ರಗತಿಯನ್ನೂ ಸಾಧಿಸಿರಲಿಲ್ಲ. ಕೋಟೆಯ ಎರಡೂ ಬದಿಗೆ ಸುರಂಗ ಮಾರ್ಗಗಳನ್ನು ತೋಡಿ ಕೋಟೆಯ ಮೇಲೆ ಗುಂಡುಗಳನ್ನು ಹಾರಿಸುತ್ತ ಬಂದಿದ್ದರೂ ಭದ್ರವಾದ ಕೋಟೆಯ ಒಂದು ಕಲ್ಲು ಕೂಡ ಸರಿದಿರಲಿಲ್ಲ.

ಸುಲ್ತಾನನ ಬೆಂಬಲಕ್ಕೆ ಸಂಭಾಜಿ ಮಹಾರಾಜರು ಮರಾಠಾ ಸರ್ದಾರ ಹಂಬೀರರಾವರೊಂದಿಗೆ ಮತ್ತು


ದೀಪಾವಳಿ ಹಬ್ಬಗಳ ರಾಜ!!!

ಹಬ್ಬದ ವೈಭವಕ್ಕಾಗಿ ಇದೋ ಇಲ್ಲಿವೆ
ಬಗ ಬಗೆಯ ಬಟ್ಟೆಗಳ ರಾಶಿ

ಕಣ್ಣ ನಗಳನ್ನು ಥಳಥಳಿಸುವ ಅತ್ಯಾಧುನಿಕ ಬಟ್ಟೆಗಳು ಯೋಗ್ಯ ಬೆಲೆಗಳಲ್ಲಿ

ಇಂದೇ ಸಂದರ್ಶಿಸಿರಿ

ಮೆ. ಎಸ್. ಟಿ. ನಾಝರೆ
ಆ್ಯಂಡ್ ಬ್ರದರ್ಸ

ಫೋನ್ ನಂಬರ್ 3790

ಜವಳಿ ವರ್ತಕರು, ಜವಳಿಸಾಲ, ಹುಬ್ಬಳ್ಳಿ

ದೀಪಾವಳಿಯು ಸರ್ವರಿಗೂ ಸುಖ-ಶಾಂತಿಯನ್ನೀಯಲಿ

ಗೋವಳಕೊಂಡದ ಸುಲ್ತಾನರು ಅಂಬಾಜಿ ಪಂಡಿತರೊಡನೆ ಅಪಾರ ಸೈನ್ಯವನ್ನು ಕಳಿಸಿದ್ದರು.

ಮೊಗಲರ ಸೈನ್ಯವು ಸಹಸ್ರಾರುಸಂಖ್ಯೆಯಲ್ಲಿ ಕೋಟೆಯನ್ನು ಸುತ್ತುವರಿಯಹತ್ತಿದ್ದರೂ ಕೋಟೆಯನ್ನು ಹೇಗೆ ಪ್ರವೇಶ ಮಾಡಬೇಕೆಂಬ ಬಗ್ಗೆ ಯೋಚಿಸುತ್ತಲೇ ಇತ್ತು. ಅಷ್ಟರಲ್ಲಿ ವಿಜಾಪುರದ ಸುತ್ತಲೂ ಮಳೆ ಬಾರದೇ ಕ್ಷಾಮವು ತಲೆ ಎತ್ತಿತು. ಹದಿನೈದು ರೂಪಾಯಿಗಳಿಗೆ ಒಂದು ಸೇರು ಜೋಳವಾಯಿತು. ಹೊರಗಿನಿಂದ ಆಹಾರ ಬರದಂತಾಗಲು ಮೊಗಲ್ ಸೈನಿಕರು ಕ್ಷುಧಾಬಾಧೆಯಿಂದ ಸಾಯಹತ್ತಿದರು. ಹಸಿವೆಯ ಬಾಧೆಯನ್ನು ತಾಳಲಾರದ ಕೆಲ ಸೈನಿಕರು ತಮ್ಮ ದನಕರುಗಳನ್ನೇ ಕಡಿದು ತಿನ್ನಹತ್ತಿದರು.

ಹೀಗೆಯೇ ಹದಿನೈದು ತಿಂಗಳು ಕಳೆದರೂ ಕೋಟೆಯನ್ನು ವಶಪಡಿಸಿಕೊಳ್ಳುವ ಮೊಗಲರ ಕನಸು ಕನಸಾಗಿಯೇ ಉಳಿಯಿತು. ಸಮ್ರಾಟ ಔರಂಗಜೇಬನು ಇದನ್ನು ನೋಡಿ ಕೋಟೆಯ ಎರಡೇ ಮೈಲುಗಳಂತರದಲ್ಲಿ ತಮ್ಮ ಡೇರೆಯನ್ನು ತಂದು ಕೋಟೆಯ ಸುತ್ತಲೂ ಸುರಂಗಮಾರ್ಗಗಳನ್ನು ತೋಡಿಸಿದನು. ಆದರೆ ಕೋಟೆಯನ್ನು ಸುತ್ತುವರಿದ ಅಗಳಂತಿಕೆಯನ್ನು ಮುಚ್ಚಿಸುವುದು ಹೇಗೆ ಎಂಬ ಸಮಸ್ಯೆ ತಲೆದೋರಿತು. ಅದನ್ನು ಮುಚ್ಚಲು ಒಂದು ಬುಟ್ಟಿ ಮಣ್ಣು ಹಾಕುವವರಿಗೆ ನಾಲ್ಕಾಣೆ ಕೊಡುವುದಾಗಿ ಸಾರಿದನು. ಸಾಕಷ್ಟು ಜನರು ಬರದಂತಾಗಲು ನಾಲ್ಕಾಣೆಯ ಬದಲು ಒಂದು ರೂಪಾಯಿ ಕೊಡುವುದಾಗಿ ಸಾರಿದನು. ಆಮೇಲೆ ಒಂದು ಬುಟ್ಟಿ ಮಣ್ಣು ತಂದು ತಂದು ಕಂದಕಕ್ಕೆ ಸುರುವಿದವರಿಗೆ ಒಂದು ಸುವರ್ಣದ ನಾಣ್ಯವನ್ನು ಕೊಡಹತ್ತಿದನು. ಸುವರ್ಣನಾಣ್ಯವನ್ನು ಕೊಡಹತ್ತಿದೊಡನೆ ಹಲವಾರು ಗ್ರಾಮೀಣರು ಸತ್ತ ಪ್ರಾಣಿಗಳನ್ನು ಮತ್ತು ಮನುಷ್ಯರ ಶವಗಳನ್ನು ಎಳೆದುತಂದು ಹಾಕಹತ್ತಿದನು. ಕೆಲ ಆಶೆ ಬುರುಕರು ಜೀವಂತಮನುಷ್ಯರನ್ನೇ ಕಂದಕದಲ್ಲಿ ದೂಡಿ ಸುವರ್ಣ ನಾಣ್ಯಕ್ಕೆ ಕೈಯೊಡ್ಡ ಹತ್ತಿದರು.

ಕಂದಕವು ಮುಚ್ಚಿದೊಡನೆ ಸ್ವತಃ ಔರಂಗಜೇಬನೇ ನಿಂತು ಯುದ್ಧನಿರ್ದೇಶನವನ್ನು ಮಾಡಹತ್ತಿದನು. ಎಲ್ಲ ಸುರಂಗ ಮಾರ್ಗಗಳಿಂದ ಮೊಗಲರ ಫಿರಂಗಿಗಳು ಕೋಟೆಯ ಗೋಡೆಗಳ ಮೇಲೆ ಹಾರಹತ್ತಿದೊಡನೆ ನೆಲವೆಲ್ಲಾ ಗದರಿದಂತಾಗಹತ್ತಿತು. ಅದಿಲ್ ಶಾಹೀ ಸೈನಿಕರು ಎಷ್ಟೇ ಕಲಿತನದಿಂದ ಕಾದಿದರೂ ಮೊಗಲರ ಗುಂಡುಗಳಿಗೆ ಬಲಿಯಾಗಿ ನೆಲಕ್ಕೆ ಬೀಳತೊಡಗಿದರು. ಕೋಟೆಯ ಹೊರಗಿನಿಂದ ಬರುತ್ತಿದ್ದ ಆಹಾರದ ಪೂರೈಕೆ ಬಂದಾಗಿದ್ದರಿಂದ ಕೋಟೆಯಲ್ಲಿ ಹಾಹಾಕಾರವೆದ್ದಿತು. ಕೋಟೆಯಲ್ಲಿಯ ಸಂಗ್ರಹವೆಲ್ಲಾ ಮುಗಿದಿತ್ತು. ಸಹಸ್ರಾರು ಸೈನಿಕರು ಆಗಲೇ ಮೊಗಲರ ಗುಂಡುಗಳಿಗೆ ಬಲಿಯಾಗಿದ್ದರು.

ಸೈನ್ಯಾಧಿಕಾರಿಗಳೆಲ್ಲರೂ ಸಿಕಂದರನಿಗೆ ಯುದ್ಧವನ್ನು ಮುಂದುವರೆಸಿ ಪ್ರಯೋಜನವಿಲ್ಲವೆಂದು ಪರ್ಯಾಯವಾಗಿ ಹೇಳಹತ್ತಿದರು. ಸಿಕಂದರನು ಸಚಿವರ ಕೈಗೊಂಬೆಯಾಗಿ ಅವರು ಹೇಳಿದಂತೆ ಕೇಳಬೇಕಾಯಿತು. ಯಾವ ಸಚಿವರಿಗೂ ಯುದ್ಧವನ್ನು ಮುಂದುವರೆಸುವುದು ಬೇಕಾಗಿರಲಿಲ್ಲ. ಪ್ರತಿಯೊಬ್ಬರೂ ಯುದ್ಧವು ಬೇಡವೆಂದು ಹೇಳುತ್ತಿದ್ದ ಮಾತುಗಳನ್ನು ಕೇಳಿ ಕೇಳಿ ಸಿಕಂದರನಿಗೆ ಭವಿಷ್ಯವೆಲ್ಲಾ ಅಂಧಕಾರವಾಗಿ ಕಾಣಹತ್ತಿತು.

ಸಿಕಂದರ ಒಂದು ದಿನವಂತೂ ಭೋಜನವನ್ನು ಸ್ವೀಕರಿಸದೇ ಅಂತಃಪುರದಲ್ಲಿ ಯೋಚನಾಮಗ್ನನಾಗಿ ಒಬ್ಬನೇ ಅಲೆದಾಡುತ್ತಿರುವಾಗ ಯುದ್ಧವನ್ನು




"ಮಕ್ಕಳಿಗೆ ಪಟಾಕಿ ಹಚ್ಚೋದು ತೋರಿಸಿ-ಕೊಡೋಣ ಅಂತ ಹೋದೆ..."

ಮುಂದುವರೆಸಬೇಕೋ ಅಥವಾ ಬೇಡವೋ ಎಂಬ ಪ್ರಶ್ನೆ ಅವನೆದುರು ಬಂದು ನಿಂತಂತಾಗುತ್ತಿತ್ತು. ನಕ್ಷತ್ರಾಕಾರದ ಆ ಪ್ರಶ್ನೆ ಭೂತಾಕಾರವಾಗಿ ಬೆಳೆಯಹತ್ತಿತು. ಸಚಿವರೆಲ್ಲರೂ ಏಕಕಂಠದಿಂದ ಯುದ್ಧವನ್ನು ನಿಲ್ಲಿಸಿ ಬಿಡಬೇಕೆಂದು ಹೇಳಹತ್ತಿದ್ದರೂ ರಿಖೀನತ್ ಮಾತ್ರ "ಜಹಾಪನಾ, ಮುಂದಿಟ್ಟ ಹೆಜ್ಜೆಯನ್ನು ನೀವೀಗ ಹಿಂದಿಟ್ಟರೆ ನಿಮ್ಮ ಸರ್ವಸ್ವವೂ ನಾಶವಾದಂತೆ. ಯುದ್ಧವನ್ನು ನಿಲ್ಲಿಸಿ ಶರಣಾಗತರಾದರೆ ನಿಮ್ಮ ಗೋರಿಯನ್ನು ನೀವೇ ಕಟ್ಟಿಕೊಂಡಂತಾಗುವುದು. ಸ್ವಾರ್ಥದ ಸಾಕಾರ ಮೂರ್ತಿಯಂತಿರುವ ಔರಂಗಜೇಬನು ನಿಮ್ಮ ಕಣ್ಣುಗಳನ್ನು ಕೀಳಿಸಿ ತನಗಾದ ಅವಮಾನದ ಸೇಡನ್ನು ತೀರಿಸಿಕೊಳ್ಳದಿರಲಾರ. ನಿಮ್ಮ ಅಧಃಪತನವು ನಿಮ್ಮೆದುರೇ ನಡೆಯುವುದನ್ನು ನೋಡುವುದಕ್ಕಿಂತ ಸಮರಾಂಗಣದಲ್ಲಿ ಹೋರಾಡಿ ಸಾವನ್ನಪ್ಪುವುದು ಲೇಸೆಂದು ನಾನು ಭಾವಿಸುತ್ತೇನೆ" ಎಂದಳು. ಸಿಕಂದರನಿಗೆ ರಿಖೀನತ್‌ಳು ಹೇಳುವ ಮಾತುಗಳು ಒಪ್ಪಿಗೆಯಾದವು. ಆದರೆ ಯಾವ ಸಚಿವರೂ ಯುದ್ಧಭವಿಷ್ಯದ ಬಗ್ಗೆ ಆಶಾದಾಯಕದ ಚಿತ್ರವನ್ನು ಕೊಡಲು ಮುಂದೆ ಬರಲಿಲ್ಲ.

ಮರುದಿವಸ ರಾತ್ರಿ ಅಂತಃಪುರದ ಮಾಳಿಗೆಯ ಮೇಲೆ ಸಿಕಂದರನು ರಾಜ್ಯದ ಹಿರಿಯ ಅಧಿಕಾರಿಗಳನ್ನು ಆಹ್ವಾನಿಸಿ ಮಂತ್ರಾಲೋಚನೆಯನ್ನು ನಡೆಸಿದನು. ಸಚಿವರು ಮತ್ತು ಹಿರಿಯ ಸೈನ್ಯಾಧಿಕಾರಿಗಳು ಸಭೆಗೆ ಬಂದಿದ್ದರು. ಮಂತ್ರಾಲೋಚನೆಗ ಮೊದಲು ಸುರಾಪಾನವಾಯಿತು. ತಲೆಯ ಮೇಲೆ ಚಂದ್ರನ ಆಹ್ಲಾದ ಕರಪ್ರಕಾಶವು ಬೆಳಗುತ್ತಿತ್ತು. ನಗರದಿಂದ ಸುಳಿಗಾಳಿ ಬೀಸಿ ಮೇಲ್ಮಾಳಿಗೆಗೆ ಬರುತ್ತಿತ್ತು. ವಿಜಾಪುರವು ಹಾಯಾಗಿ ನಿದ್ರಿಸುತ್ತಿತ್ತು. ಆದರೆ ಎಲ್ಲರ ಹೃದಯಗಳೂ ಅಲ್ಲೋಲಕಲ್ಲೋಲವಾಗಿದ್ದವು. ಸುಲ್ತಾನನು ನಗರದಿಂದ ಬರುತ್ತಿದ್ದ ಸುಳಿಗಾಳಿಯತ್ತ ಕಿವಿಯನ್ನು ಮಾಡಿ "ದಾವುದಖಾನ, ವಿಜಾಪುರವು ಏನನ್ನುತ್ತದೆ?" ಎಂದು ತಮ್ಮ ಅಂತಃಪುರದ ಅಧಿಕಾರಿಯನ್ನು ಕೇಳಿದರು "ಸುಲ್ತಾನ, ರಾಜಧಾನಿಯು ನಿಮ್ಮ ನ್ಯಾಯನಿಷ್ಠೆಯ ಮತ್ತು ಪ್ರಜಾವಾತ್ಸಲ್ಯದ ಗುಣಗಾನವನ್ನು ಮಾಡುತ್ತಿದೆ. ಸುಲ್ತಾನ ಯುದ್ಧವನ್ನು ನಿಲ್ಲಿಸಿದರೆ ಪ್ರಜೆಗಳು ಮೊದಲಿನಂತೆ ಶಾಂತಿ ಸಮೃದ್ಧಿ ಮತ್ತು ಸುಖಗಳನ್ನು ಪಡೆಯುತ್ತಾರೆ" ಎಂದನು. ದಾವುದಖಾನ.

"ದಾವುದಖಾನ, ನಾವು ಯುದ್ಧವನ್ನು ಮುಂದುವರೆಸಿ ಸಮ್ರಾಟ ಔರಂಗಜೇಬನೊಡನೆ ಹೋರಾಡಿದರೆ ರಾಜಧಾನಿಯು ಏನನ್ನಬಹುದು?" ಎಂದು ಮತ್ತೆ ಕೇಳಿದ.

"ಸಂತೋಷದ ಧ್ವನಿ ಅಡಗಿ ರೋದನವು ಕೇಳಿ ಬರುತ್ತಿದೆ. ಸಂಗ್ರಾಮದಲ್ಲಿ ಯಾರೇ ವಿಜೇತರಾದರೂ ನಿರಪರಾಧಿ ಪ್ರಜೆಗಳ ಪ್ರತಿಮನೆಯ ಮೇಲೂ ಮರಣದ ಛಾಯೆ ತನ್ನ ಮುದ್ರೆಯನ್ನೊತ್ತುತ್ತದೆ. ಮಾನಿನಿಯರ ಗೌರವವು ಗಾಳಿಯಲ್ಲಿ ತೂರಿ ಹೋಗುತ್ತಿದೆ" ಎಂದ ದಾವುದಖಾನ.

ಸಿಕಂದರನು ವಿಚಾರದ ಸುಳಿಯಲ್ಲಿ ಸಿಲುಕಿ-ಗಿರಗಿರನೆ ತಿರುಗಹತ್ತಿದ. ತನ್ನಷ್ಟಕೆ ತಾನೇ "ಅಳು, ನಗು, ಸಾವು, ಇರುವು, ದುಃಖ, ಸುಖ..." ಎಂದು ಮಾತನಾಡಿಕೊಳ್ಳಹತ್ತಿದನು. ಕೊನೆಗೆ "ನಿಮ್ಮಿಚ್ಛೆಯೇ ನನ್ನ ಇಚ್ಛೆ" ಎಂದಾಗ ಎಲ್ಲ ಸಚಿವರು ಮತ್ತು ಸೇನಾಧಿಕಾರಿಗಳು ಸಭೆಯಿಂದ ಮೆಲ್ಲನೆ ಎದ್ದುಹೋದರು. ಅದಾಗಲೇ ರಾತ್ರಿ ಸರಿದಿತ್ತು. ಸುಲ್ತಾನನು ಯೋಚಿಸಿಯೇ ಯೋಚಿಸಿದ. ಯೋಚನೆ ಮಾಡುತ್ತಲೇ ಅಂತಃಪುರಕ್ಕೆ ಹೋಗಿ ರಿಖೀನತ್‌ಳನ್ನು ಕರೆಸಿದನು. ರಿಖೀನತ್‌ಳ ಮುಂದೆ "ರಿಖೀನತ್ ನಾಳೆಗೆ ಯುದ್ಧವನ್ನು ನಿಲ್ಲಿಸಬೇಕೆಂಬ ನಿರ್ಧಾರಕ್ಕೆ ನಾವು ಬಂದಿದ್ದೇವೆ" ಎಂದ ಹೆದರುತ್ತ.

"ಸುಲ್ತಾನ, ಇದು ತಮ್ಮ ಅಂತಿಮ ನಿರ್ಧಾರ ತಾನೇ?..." ರಿಖೀನತ್ ಕೇಳಿದಳು.

"ಅ...ಹು...ದು ರಿಖೀನತ್. ಸಭೆಯಲ್ಲಿ ಮಂತ್ರಾಲೋಚಿಸಿ ನಾವು ಈ ನಿರ್ಧಾರಕ್ಕೆ ಬಂದಿದ್ದೇವೆ" ಎಂದು ತಡೆದು, "...ಅ...ಲ್ಲ...ದೆ..." ಎಂದರು.

"ಅಲ್ಲದೇ...ಏನು...? ಜಹಾಪನಾ...?"

"ಯುದ್ಧದ ಬೇಗೆಯಿಂದ ಅಳುತ್ತಿರುವ ಸಹಸ್ರಾರು ಪ್ರಜೆಗಳ ಆಕ್ರಂದನವು ನಿಂತು ಶಾಂತಿ ನೆಲೆಸಿದಾಗ ನಾವು ವಿವಾಹವಾಗಿ ಹಾಯಾಗಿ ಇರಬಹುದಲ್ಲ"

"ಅದು ಸಾಧ್ಯವಾಗದ ಮಾತು ನನ್ನರಸ"

"ಏಕೆ...? ನನ್ನನ್ನು ವಿವಾಹವಾಗುವ ಮನಸ್ಸು ನಿನಗಿಲ್ಲವೆ?"

"ಮನಸ್ಸಲ್ಲ ಸುಲ್ತಾನ, ಅದೃಷ್ಟವಿಲ್ಲ. ಯುದ್ಧ ನಿಂತಾಗ ವಿಜಾಪುರದಲ್ಲಿ ನೆಲಸುವುದು ಸಮೃದ್ಧಿಯ ಶಾಂತಿಯಲ್ಲ, ಸ್ಮಶಾನ ಶಾಂತಿ. ವಿಜಾಪುರ ದರ್ಬಾರದಲ್ಲಿ ಉಳಿಯುವುದು ಸಿಂಹಾಸನವಲ್ಲ, ಸಾಮಾನ್ಯ ಆಸನ. ಸುಲ್ತಾನ, ಸಮ್ರಾಟ ಔರಂಗಜೇಬನು ನೀವು ಶರಣಾಗತರಾದರೆ ನಿಮಗೆ ಸಿಂಹಾಸನದ ಮೇಲೆ ಕುಳ್ಳಿರಿಸಿ ಸಕಲ ಆದಿಲ್‌ಶಾಹೀ ಗೌರವಗಳನ್ನು ಮರಳಿ ಕೊಡುವನೆಂದು ಭಾವಿಸಿರುವಿರೇನು?...ನಿಮಗೆ...ಭ–್ರಮೆ...!" ಎಂದಳು.

"ಭ್ರಮೆಯಲ್ಲ ರಿಖೀನತ್. ಅದೇ ಕರಾರಿನ ಮೇಲೆ ನಾವು ಶರಣಾಗತರಾಗಬೇಕೆಂದಿದ್ದೇವೆ."

"ಶರಣಾಗತರಾಗುವವರು ಕರಾರನ್ನು ಹಾಕಲು ಸಾಧ್ಯವೆ? ಸುಲ್ತಾನ, ಸಮ್ರಾಟ ಔರಂಗಜೇಬನು ಬೆಳ್ಳಗೆ ಕಂಡರೂ ಹಾಲಲ್ಲ. ಕುರಾನವನ್ನು ಪಠಿಸಿದರೂ ಸಜ್ಜನನಲ್ಲ. ಕಾಣಿಕೆಗಳನ್ನು ಕಳಿಸಿ ನಿಮ್ಮನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದರೂ ಸ್ನೇಹಿತನಲ್ಲ. ಅದಿಲ್ ಶಾಹೀ ಮನೆತನದ ಕೀರ್ತಿಯನ್ನು ಅಳಿಸಿ ಹಾಕಿ ಮೊಗಲ್ ಸಾಮ್ರಾಜ್ಯದಕೀರ್ತಿ ಧ್ವಜವನ್ನು ಹಚ್ಚ ಹೋಗಲು ಬಂದಿದ್ದಾನೆ. ಸುಲ್ತಾನ, ನಮ್ಮೊಡನೆ ಅವನೇಕೆ ಯುದ್ಧ

ಹಾಡಬೇಕು. ಅವನ ದ್ವೇಷ ಮರಾಠರೊಡನಲ್ಲವೆ?" ಎಂದಳು.

ರಿಖೀನತ್‌ಳ ಈ ಮಾತುಗಳಿಂದ ಸಿಕಂದರನಿಗೆ ತಾವು ತಪ್ಪುದಾರಿಯನ್ನು ತುಳಿಯುತ್ತಿರುವೆವೆಂದು ಅನಿಸ ಹತ್ತಿತು. ಆದರೆ ಹೋರಾಡುವ ಸೈನಿಕರೇ ಯುದ್ಧ ವನ್ನು ಬೇಡೆನ್ನುತ್ತಿರುವಾಗ ತಾನೊಬ್ಬ ಹೇಗೆ ಯುದ್ಧ ವನ್ನು ಮುಂದುವರೆಸಬೇಕೆಂಬುದು ತಿಳಿಯದಾಯಿತು ಸಿಕಂದರನಿಗೆ.

"ರಿಖೀನತ್, ನಾನು ಹಾಗಾಗಲು ಬಿಡಲಾರೆ. ನಿನ್ನೊಡನೆ ನನ್ನ ವಿವಾಹವಾಗದಿದ್ದರೆ ನನ್ನ ಜೀವನದಾಸೆ ಪೂರ್ತಿಯಾಗಲಾರದು" ಎಂದನು ಸಿಕಂದರನು. ಸಿಕಂದ ರನ ಕಣ್ಣುಗಳಲ್ಲಿದ್ದ ಪ್ರಾಮಾಣಿಕತೆ ಸಿಕಂದರನು ಲೋ ಕಾನುಭವವಿಲ್ಲದ ಮುಗ್ಧನು ಎಂಬುದನ್ನು ಸಾರಿ ಹೇಳು ತ್ತಿತ್ತು. ಮುಗ್ಧಮಗುವಿನ ಸ್ವಭಾವದ ಸಿಕಂದರನ ನಂಬಿಕೆಯ ಬಗ್ಗೆ ರಿಖೀನತ್‌ಳಿಗೆ ನಗಬೇಕೋ ಅಳ ಬೇಕೋ ಎಂಬುದೇ ತಿಳಿಯದಾಯಿತು.

"ಸುಲ್ತಾನ, ನೀವು ಭವಿಷ್ಯದಲ್ಲಿಟ್ಟ ನಂಬಿಕೆಯ ಮೇಲೆ ನನಗಂತೂ ವಿಶ್ವಾಸವಿಲ್ಲ. ಅದನ್ನು ಈ ಕ್ಷಣದಲ್ಲಿ ಮರೆತು ಬಿಡೋಣ. ನಮ್ಮ ಮುಂದಿರುವ ಈ ಅರ್ಧ ರಾತ್ರಿಯನ್ನಾದರೂ ನಾವೇಕೆ ಆಮೋದದಲ್ಲಿ ಕಳೆಯ ಬಾರದು" ಎಂದಳು ರಿಖೀನತ್.

"ರಿಖೀನತ್, ನಿನ್ನಾವ ಮಾತನ್ನು ನಾನು ವಿರೋಧಿ ಸಿದ್ದೇನೆ. ಇಂದು ನಿನ್ನ ಕೈಯಿಂದಲೇ ಮದಿರೆಯನ್ನು ಸವಿಯಬೇಕೆಂಬ ಆಶೆಯಾಗಿದೆ." ಎಂದನು.

ರಿಖೀನತ್ ಸ್ವರ್ಣಪಾತ್ರೆಯಲ್ಲಿ ಮದಿರೆಯನ್ನು ಹಾಕಿಕೊಂಡು ಬಂದು ಸಿಕಂದರನಿಗೆ ಕುಡಿಸುತ್ತಿರುವಾಗ ಸಿಕಂದರನು "ರಿಖೀನತ್, ನಿನ್ನ ನರ್ತನವನ್ನು ನೋಡ ಬೇಕೆಂದು ನನ್ನ ಮನಸ್ಸು ಬಯಸುತ್ತಿದೆಯಲ್ಲ. ನೀನು ನರ್ತಿಸಬಹುದೆ?..." ಎಂದು ದೀನವಾಣಿಯಿಂದ ಕೇಳಿದ.

"ಸುಲ್ತಾನ, ನನ್ನ ಸರ್ವಸ್ವವನ್ನೇ ನಿಮ್ಮ ಪದ ತಲಕ್ಕೆ ಅರ್ಪಿಸಿರುವಾಗ ನೀವು ನನಗೆ ಆಜ್ಞಾಪಿಸ ಬೇಕೇ ವಿನಾ ಪ್ರಾರ್ಥಿಸಬೇಕಿಲ್ಲ. ನಾನೇಕೆ, ವಿಜಾಪುರದ ಪ್ರಜೆಗಳೇ ನಿಮ್ಮನ್ನು ದೇವರಂತೆ ಕಾಣುತ್ತಾರೆ" ಎಂದ ವಳೇ ನರ್ತಿಸಲು ಪ್ರಾರಂಭಿಸಿದಳು.

ಸಿಕಂದರನಿಗೆ ಉಷಃಕಾಲದ ವರೆಗೂ ಮಯೂರ ದಂತೆ ನರ್ತಿಸುತ್ತಿದ್ದ ರಿಖೀನತ್‌ಳನ್ನೇ ನೋಡುತ್ತ, ಕೂಡಬೇಕೆನಿಸಿತು. ಅವನಿಗೆ ಮದಿರೆ ಮತ್ತು ಮದಿರಾಕ್ಷಿ ರಿಖೀನತ್‌ಳನ್ನು ಬಿಟ್ಟು ಆ ಕ್ಷಣದಲ್ಲಿ ಬೇರೇನೂ ಕಾಣದ ದಾಯಿತು. ರಿಖೀನತ್ ನಸುಕಿನ ವರೆಗೂ ನರ್ತಿಸಿದಳು. ರಿಖೀನತ್‌ಳ ಕಾಲಿನ ಗೆಜ್ಜೆಗಳ ಧ್ವನಿ ಅಂತಃಪುರದ ಬಾಗಿ ಲನ್ನು ಸೀಳಿ ಹೊರಬರುತ್ತಿತ್ತು. ಸಿಕಂದರನು ರಿಖೀ ನತ್‌ಳ ಮುಖವನ್ನೇ ನೋಡುತ್ತ ಕುಳಿತಿದ್ದನು. ನರ್ತಿಸಿ ನರ್ತಿಸಿ, ರಿಖೀನತ್ ಒಮ್ಮೆಲೆ ನೆಲಕ್ಕೆ ಬಿದ್ದಾಗ ಸಿಕಂದ ರನು ಅವಳನ್ನೆತ್ತಿಕೊಂಡು ತನ್ನ ತೊಡೆಯ ಮೇಲೆ ಹಾಕಿಕೊಂಡು ದಾಸಿಯರನ್ನು ಕರೆಸಿದ. ಒಬ್ಬ ಪರಿ ಚಾರಿಕೆಯು ಧಾವಿಸುತ್ತ ಹೋಗಿ ಅರಮನೆಯ ಹಕೀ ಮರನ್ನು ಕರೆದುಕೊಂಡು ಬಂದಳು. ಹಕೀಮರು ಅವ ಳನ್ನು ಪಲ್ಲಂಗದ ಮೇಲೆ ಮಲಗಿಸಿ ಉಪಚಾರ ವನ್ನು ಪ್ರಾರಂಭಿಸಿದರು. ಅಷ್ಟರಲ್ಲಿ ಅಂತಃಪುರದ ಕಡೆಗೆ ಹತ್ತಾರು ಹೆಜ್ಜೆಗಳ ಧ್ವನಿ ಬರಹತ್ತಿತು. ಬರುವವ ರಾರೆಂದು ನೋಡಲು ಸಿಕಂದರನು ಹೊರಗೆ ಬಂದಾಗ ನವಾಬ ಅಬ್ದುರ್‌ರಾವುಫ್ ಮತ್ತು ಸರ್ಜಾಖಾನರು ಬಂದು ವಿಷಣ್ಣ ವದನದಿಂದ "ಸುಲ್ತಾನ, ನಮ್ಮ ಸೈನ್ಯವು ಶರಣಾಗತವಾಯಿತೆಂದು ಮೊಗಲ್ ಸೇನಾಪತಿ ಫಿರೋಜ ಜಂಗರಿಗೆ ಹೇಳಿ ಬಂದೆವು" ಎಂದು ಹೇಳಿ ನತ ಮಸ್ತಕರಾಗಿ ನಿಂತರು. ಸಿಕಂದರನ ಕಣ್ಣುಗಳಿಂದ ನೀರು ಉದುರುತ್ತಿದ್ದವೇ ವಿನಾ ಬಾಯಿಂದ ಮಾತುಗಳೇ ಬರ ಲಿಲ್ಲ.

ಸಿಕಂದರನು ಮೆಲ್ಲನೆ ಒಳಗೆ ಬಂದು "ಹಕೀಮ ಸಾಹೇಬ, ರಿಖೀನತ್ ಬದುಕಬಹುದಲ್ಲ..." ಎಂದಾಗ ಹಕೀಮರು ನಿಟ್ಟುಸಿರು ಬಿಡುತ್ತ "ಜಹಾಪನಾ, ಅಲ್ಲಾನ ಇಚ್ಛೆ ಏನಿದೆಯೋ ಏನೋ" ಎಂದರು.

ಸಿಕಂದರನು ಎಷ್ಟೋ ಹೊತ್ತು ರಿಖೀನತ್‌ಳ ಬದಿ ಯಲ್ಲಿಯೇ ಕುಳಿತಿದ್ದನು. ಅಂದು ರವಿವಾರ ಸಪ್ಟೆಂಬರ ೧೨, ೧೬೮೬. ವಿಜಾಪುರವು ಪತನವಾದ ದಿನ. ಅಂದೇ, ಮಧ್ಯಾಹ್ನ ಒಂದು ಗಂಟೆಗೆ ಸುಲ್ತಾನ ಸಿಕಂದರ ಆದಿಲ್ ಶಾಹೀ ಸಿಂಹಾಸನವನ್ನು ತ್ಯಜಿಸಿ ಮೊಗಲರ ಸೈನ್ಯಾಧಿ ಕಾರಿಗಳಾದ ರಾವದಲಪತ್ ಬುಂದೇಲಾ ಮತ್ತು ಸಮ್ರಾಟರ ಸೇನಾಧಿಕಾರಿಗಳೊಂದಿಗೆ ಔರಂಗಜೇಬನನ್ನು ಭೆಟ್ಟಿಯಾಗಲು ಅವನು ಬೀಡು ಬಿಟ್ಟ ರಸುಲ್‌ಪುರಕ್ಕೆ ಹೋದ. ಸಿಕಂದರನ ಕೈಗಳಿಗೆ ಬೆಳ್ಳಿಯ ಬೇಡಿಯನ್ನು ಹಾಕಲಾಗಿತ್ತು. ಸಿಕಂದರನು ರಾಜಧಾನಿಯಲ್ಲಿ ಹಾಸಿ ಹೋಗುವಾಗ ಇಕ್ಕೆಲಗಳಲ್ಲಿಯೂ ಪ್ರಜೆಗಳು ನಿಂತು ಕಣ್ಣೀರನ್ನು ಸುರಿಸುತ್ತಿದ್ದರು. ಸಿಕಂದರನು ಫತ್ತೇ ದರ್ವಾ ಜನ್ನು ದಾಟಿ ಹೋಗುವಾಗ ಅರಮನೆಯ ಸೇವಕನೊ ಬ್ಬನು ಓಡುತ್ತ ಬಂದು ಸುಲ್ತಾನ, ರಿಖೀನತ್ ಉನ್ನಿಸಾ ಕಣ್ಣು ಮುಚ್ಚಿದರೆಂದು ಹಕೀಮರು ನಿಮಗೆ ತಿಳಿಸಲು ಹೇಳಿದರು "ಎಂದನು.

"ರಿಖೀನತ್ ಕೂಡ ನನ್ನಿಂದ ದೂರವಾದಳೆ! ಅವಳ ಕಣ್ಣುಗಳು ನನ್ನ ಕೈಗಳಿಗೆ ಬೇಡಿ ಬಂದದ್ದನ್ನು ನೋಡ ಲಿಲ್ಲ...ಅ...ಪ್ಪೇ..." ಎಂದು ಖಿನ್ನಮನಸ್ಕನಾಗಿ. ಕಣ್ಣೀರನ್ನು ಸುರಿಸುತ್ತ ಮುನ್ನಡೆದ.

ಸಿಕಂದರನು ರಸುಲ್‌ಪುರದ ಡೇರೆಯ ಬಳಿ ಹೋ ದಾಗ ಮೊಗಲ್ ಸೇನಾಪತಿ ರಣದುಲ್ಲಾಖಾನ ಬಾಗಿಲಿಗೆ ಬಂದು ಸಿಕಂದರನನ್ನು ಸ್ವಾಗತಿಸಿ ಔರಂಗಜೇಬನೆತ್ತ ಕರೆದೊಯ್ದ.

ಸಿಕಂದರನ ಅಲೌಕಿಕ ಸೌಂದರ್ಯವನ್ನು ನೋಡಿ ಔರಂಗಜೇಬನ ಮನಸ್ಸು ಕರಗಿತು. ತಮ್ಮ ಬದಿಯಲ್ಲಿ ಯೇ ಕುಳ್ಳಿರಿಸಿಕೊಂಡು ರೇಶಿಮೆಯ ನಿಲುವಂಗಿ, ರತ್ನ ಖಚಿತ ಕಠಾರಿ, ವಜ್ರದ ಪದಕವಿದ್ದ ಮುತ್ತಿನ ಹಾರ ವನ್ನು ಕೊಟ್ಟು ವರ್ಷ ಒಂದಕ್ಕೆ ಒಂದು ಲಕ್ಷ ರೂಪಾಯಿ ಪಿಂಚಣಿಯನ್ನು ದಯಪಾಲಿಸಿರುವುದಾಗಿ ಪ್ರಕಟಿಸಿದ. ಔರಂಗಜೇಬನ ಯಾವ ಮಾತಿಗೂ ಸಿಕಂದರನು ಪ್ರತಿ ಕ್ರಿಯೆಯನ್ನು ತೋರಿಸಲಿಲ್ಲ. ಸಿಕಂದರ ಜೀವಿಸಿದ್ದರೂ ನಿರ್ಜೀವಿಯಂತೆ ಇದ್ದ.

ರಸುಲ್‌ಪುರದಿಂದ ಸಿಕಂದರನನ್ನು ನೇರವಾಗಿ ದೌಲ ತ್‌ಬಾದಿನ ಸೆರೆಮನೆಗೆ ಕಳಿಸಿದರು. ಸಮ್ರಾಟರ ಸೇನಾ ಪತಿ ರಣದುಲ್ಲಾಖಾನನು ಸಿಕಂದರನಿಗೆ "ಸುಲ್ತಾನ ಸಮ್ರಾಟರಲ್ಲಿ ಕ್ಷಮೆ ಕೋರಿದ್ದರೆ ನಿಮಗೆ ಮರಳಿ ಸಿಂಹಾ ಸನವನ್ನು ಕೊಡುತ್ತಿದ್ದರೋ ಏನೋ..." ಎಂದ.

"ಕ್ಷಮೆಯನ್ನು ಬೇಡಿ ಸ್ವರ್ಣದ ಅರಮನೆಯಲ್ಲಿ ಇರು ವುದಕ್ಕಿಂತ ರಜತದ ಸಂಕೋಲೆಗಳನ್ನು ಹಾಕಿಕೊಂಡು ದೌಲತ್‌ಬಾದಿನ ಸೆರೆಮನೆಯಲ್ಲಿರುವುದೇ ಲೇಸೆಂದು ನನಗೆ ಅನಿಸಹತ್ತಿದೆ" ಎಂದ ಸಿಕಂದರ. ಸಿಕಂದ ರನು ಹತ್ತಾರು ವರುಷಗಳ ಕಾಲ ಸೆರೆಮನೆಯಲ್ಲಿ ಕೊಳೆ ಯುತ್ತಿದ್ದರೂ ವಿಜಾಪುರದವರು ಅವನನ್ನೇ ರಾಜನೆಂದು ಮನ್ನಿಸುತ್ತಿದ್ದರಂತೆ. ಇದನ್ನು ಕೇಳಿದ ಔರಂಗಜೇಬನು ಕಿಡಿಕಿಡಿಯಾಗಿ ವಿಜಾಪುರದ ಪ್ರಜೆಗಳಿಗೆ ನಾನೊಬ್ಬನೇ ರಾಜ. ಬೇರೆ ರಾಜನನ್ನು ಅವರು ನೆನೆಸಕೂಡದು"ಎಂದು ಸಿಕಂದರನಿಗೆ ವಿಷ ಹಾಕಿ ಕೊಲ್ಲಿಸಿ "ವಿಜಾಪುರದ ಪ್ರಜೆ ಗಳಿಗೆ ಈಗ ರಾಜನೆಂದರೆ ನಾನೊಬ್ಬನೇ. ಸಿಕಂದರ ಅದೆಂದೋ ಹೋಗಿದ್ದಾನೆ. ಈಗವರು ಯಾರನ್ನು ನೆನೆ ಯುತ್ತಾರೋ ನೋಡೋಣ" ಎಂದು ಗಹಗಹಿಸಿ ನಕ್ಕನಂತೆ.






ದೀಪಾವಳಿಯ ಶುಭಾಶಯಗಳು

ಬಹಳೇಹೆಸರಾದ
ಹಾರುವ ಕುದುರೆ
ಛಾಪ್ ಸುವಾಸಿಕ
ಪಂಜಾಬೀ ನಸ್ಯ
ವಿಜಯಾ ಸ್ನಫ್ ವರ್ಕ್ಸ್,
ಸಾಸ್ ವಡ್, ಪುಣೆ.

रजिस्टर्ड नंबर
२१३२२७
उड़ता घोड़ा छाप
पंजाबी तपकीर
Punjabi
SCENTED SNUFF
REGD NO 213227
VIJAYA SNUFF WORKS
SASWAD, POONA, INDIA




# ಪ್ರ॥ಪೆ॥ಡಾ॥ಪಾಪಯ್ಯ ಮತ್ತು ಆಪರೇಷನ್ ಖೊ॥ಮಾ॥ಕಾ॥

ಇತ್ತೀಚೆಗೆಂತೂ ನನ್ನ ಆಪ್ತಮಿತ್ರ ಪ್ರಯ್ವೇಟ್ ಪತ್ತೇದಾರ ಡಾ॥ ಪಾಪಯ್ಯನನ್ನ ನೋಡುಕ್ಕೇ ಆಗಿರಲಿಲ್ಲ. ಹಾಗೂ ಹೀಗೂ ಬಿಡುವುಮಾಡಿಕೊಂಡು ರಾಟನ್ ಪೇಟೆಯಲ್ಲಿದ್ದ ಅವನ ಮನೆಗೆ ಒಂದು ಸೋಮವಾರ ಹೋಗುವ ಹೊತ್ತಿಗೆ ಘಂಟೆ ಬೆಳಗ್ಗೆ ಹತ್ತಾಗಿತ್ತು. ಪಾಪಯ್ಯ ತನ್ನ ಕಾನ್‌ಫಿಡೆನ್ಷಿಯಲ್ ರೂಮಿನಲ್ಲಿ ನೂರಾರು ಫೈಲುಗಳ ಮಧ್ಯೆ ತುಂಬಾ ಸೀರಿಯಸ್ಸಾಗಿ ಏನೋ ಯೋಚನೆ ಮಾಡ್ತಾ ಕೂತಿದ್ದ.

"ಗುಡ್ ಮಾರ್ನಿಂಗ್ ಪಾಪೂ"–ಅಂದೆ.

"ಡ್ಯಾಂ ದೀಸ್ ಬ್ಲಡಿ ಸ್ಕ್ಯಾಂಡ್ರಲ್ಸ್" ಅಂದ ಪಾಪಯ್ಯ..

ನಾನು ಕಕ್ಕಾವಿಕ್ಕಿಯಾಗಿ "ಸಾರಿ, ಪಾಪೂ... ನಾನು ಈಗ ಬರಬಾರದಿತ್ತು... ಕ್ಷಮ್ಸು..."ಅಂದೆ.

"ನಿನ್ನಲ್ಲ ಮರಿ ಅಂದದ್ದು... ನನ್ನ ತಪ್ ತಿಳೀಬ್ಯಾಡ... ಈ ಫೈಲ್‌ಗಳ್ನ ನೋಡ್ತೀದ್ದಿ... ಅಂಥೇ ಏನೋ ಬಾಯಿಗ್ ಬಂದ್ ಬುಡ್ತು... ಬ್ಲಡಿ ಬಾಸ್ಟರ್ಡ್ಸ್..." ಅಂದ ಪಾಪಯ್ಯ.

ನನಗೆ ಕಟ್ಟಿದ್ದ ಉಸಿರು ಮತ್ತೆ ಬಂತು. "ಯಾರನ್ನ ಹೀಗೆ ಹೀನಾಮಾನಾ ಅಂತಾ ಇದ್ದೀಯೋ ಪಾಪೂ?... ಏನು ವಿಷಯ? ನಂಗೂ ಹೇಳಬಾರದಷ್ಟು ಗುಟ್ಟಾದ್ದೇನು?..." ಅಂತ ಕೇಳಿದೆ.

"ಅಂಥೇನಿಲ್ಲ ಮರಿ... ಅಂದ್ಹಾಗೇ... ಇವತ್ತು ನೀನು ಬಿಡುವಾಗಿದ್ದೀಯಾ?... ಏಳು ಊಟಕ್ಕೆ" ಅಂದ ಪಾಪು.

ಭರ್ಜರಿ ಊಟ ಹೊಡೆದವರೇ ಇಬ್ಬರೂ ಎಲಡಿಕೆ ಜಗಿಯುತ್ತಾ ಕಾರ್‌ನಲ್ಲಿ ಕೂತೆವು. ಆಳೊಬ್ಬ ಫೈಲ್‌ಗಳ್ನೆಲ್ಲಾ ತಂದು ಹಿಂದಿನ ಸೀಟ್‌ನಲ್ಲಿ ಇಟ್ಟ. ಕಾರ್ ಹೊರಟಿತು. ಆದರೆ ಅದು ಹೊರಟದ್ದೇ ತಿಳೀಲಿಲ್ಲ ನನಗೆ. ಆಗಲೇ ನಾನು ಕೂತಿದ್ದದ್ದು ಇಂಪಾಲದಲ್ಲಿ ಅಂತ ನನ್ನ ಮಂಕು ಬುದ್ಧಿಗೆ ತಿಳಿದದ್ದು.

"ಇಂಪಾಲಾ ಯಾವಾಗ ಕೊಂಡ್ಕೊಂಡೆ ಪಾಪೂ? ನಿನ್ನ ಹಿಂದಿನ ಕಾರ್ ಕೊಟ್‌ಬಿಟ್ಯಾ?' ಅಂತ ಕೇಳಿದ.

"ಮರಿ, ಅದನ್ನ ಕಾರೂ ಅನ್‌ಬ್ಯಾಡ... ಪಾಪ ಸುಕ್ಕೋತೈತೆ... ತಗಡಿನ ಡಬ್ಬಾ ಅನ್ನು..."

"ಛೇ...ಛೇ... ಅದ್ಯಾಕೆ ಹಾಗಂತೀ ಪಾಪೂ?"

"ನೋಡು ಮರಿ... ನನ್‌ತಾವ ನೀನು ಮಧಾರಿ ಗೋಳು ಮಾತಾಡ್ದಂಗೆ ಬಾಯಿಗ್ ಬಂದಾಗೆ ಆಡ್‌ಬ್ಯಾಡ... ಮೊನ್ನೆ... ಅಂದರೆ ಹೋದವಾರ ವೀರಾಸಾಮಿ ಗ್ಯಾರೇಜ್‌ಗೆ ತಕ್ಕೊಂಡು ಓಗಿದ್ದೀ ರಿಪೇರೀಗ ನನ್ನ ಅಳೇ ಕಾರ್ನ... ಸ್ಟಾರ್ಟಿಂಗ್ 'ಟ್ರಬಲ್ ಐತೆ ನೋಡು ವಸಿ ಅಂದೆ. ವೀರಾಸಾಮಿ ಬಾನೆಟ್ ತಗೆದು ನೋಡೂಣ ಅಂತ ತನ್ನ ಎಡ ಮೊಣಕೈನ ಮಡ್‌ಗ್ವಾಲ್ಡ್‌ಪ್ಯಾಗೆಲೂರಿ ಸ್ಪ್ಯಾನರ್‌ತಕ್ಕೊಂಡು ಏನೋ ಸರಿಮಾಡ್ದ. ಆ ವ್ಯಾಕ್ ನೋಡ್ತಾನೆ... ಎಡಮೊಣಕೈ ಊರಿದ್ದ ಜಾಗ್ದಾಗೆ ಆರಿಂಚು ಅಳ್ಳ ಬಿದ್ದೈತೆ... ಆ ವ್ಯಾಕೆ ಸುತ್ತೆ ತಕ್ಕೊಂಡು ಬಡ್ದು ಸರಿಮಾಡ್ದಾ ಅನ್ನು... ನಂಗೆ ಅವತ್ತೇ ಬ್ಯಾಸ್ರ ಉಟ್ಟಿ ಆ ತಗಡಿನ ಡಬ್ಬಾನ ಅನ್ನೆಲ್ಡಕ್ಕೆ ಕೊಟ್‌ಬುಟ್ಟೇ... ಆ ವ್ಯಾಕೆ ಓದ್‌ವಾರ ಈ ಇಂಪಾಲ ತಕ್ಕೊಂಡಿ... ಎಂಥೈತೆ... ಈಗ್ ನಾನ್ ಓಗ್ತಿರೊದು ನೂರಿಪ್ಪತ್ತು ಕಿಲೋಮೀಟರ್ಸ್ ಸ್ಪೀಡ್‌ನಾಗೆ... ಏನಾದ್ರೂ ತಿಳಿತೈತಾ...?"

"ಖಂಡಿತ ಇಲ್ಲ ಪಾಪೂ...... ನಿಜವಾಗ್ಲೂ ಕಾರೂಂದ್ರೆ ಇದು... ಅಂದ್ಹಾಗೇ ನಮ್ಮೋರೂ ಯಾಕ್ ಹೀಗೆ ಮಾಡ್‌ಬಾರ್ದು ಅಂತ?"

ಇದನ್ನು ಕೇಳುತ್ತಿದ್ದಂತೆ ಪಾಪು ಕಿಡಿಕಿಡಿಯಾದ.

"ಏನು? ನಮ್ಮೋರೂ ಮಾಡೋದಾ... ನಿನ್ನ?... ಮಾಡೀನ್ನು ಖೋಟಾಪರ್ಮ್ಸ್ ಕಾರ್ಡ್‌ನ...ಚೆಂದಾಗಿ ಮಾಡ್ತಾರೆ...ಥೂ! ಇವರ ಜನ್ಮಕ್ಕಿಷ್ಟು..." ಅಂತ ಪಾಪು ಕಿಟಕಿ ಆಚೆ ಉಗಿದ.

"ಏನ್‌ಪಾಪು...ಪಾರ್ಮ್ಸ್‌ಕಾರ್ಡ್...ಖೋಟಾನೇ ಏನ್ ನೀನ್ ಹೇಳ್ತಿರೂದು?"

"ಅದ್ಯಾಕೋ ಇಂಥ ಕೇಳ್ತೀ... ನಮ್ಮ ತರ್ಲೆಕುಂಟ್ನಳ್ಳಿ "ಮಿರ್ಚಿ" ಪತ್ರಿಕೆಯೋವ ಒಂದು ವಾರದಿಂದಲೂ ನಿತ್ಯ ಆಕ್ತಾ ಅವ್ನಲ್ಲೋ...ನೀ ಏನ್ ದಿನಾ ಪೇಪರ್ ಓದಾಕಿಲ್ವಾ?"

"ಎಲ್ಲೋ ಒಂದು ದಿನ ಓದಿದೆ... ಏನು ವಿಷಯ?"

"ಚೆಂದಾಯ್ತು ಬುಡು... ತರ್ಲೆಕುಂಟ್ನಳ್ಳಿಯಾಗೆಲ್ಲಾ ಇದೇ ಸುದ್ದಿ ಅಲ್ವೇನೋ... ಪೋಲೀಸ್ನೋರ್ಗೆ ಆ॥ಭಾ॥ಪ॥ಕಾ॥ ಖೋ. ಪರ್ಮಿಟಿಯೋರು ಕಂಪ್ಲೇಂಟ್ ಕೊಟ್ಟವ್ರಂತೆ ಮರಿ..."

"ಏನಂತ?"

"ನಾಕಾರು ಖೋಟಾಪರ್ಮ್ಸ್‌ಕಾಲ್ಡು ಬಂದವೆ.. ತನಿಕೆ ಮಾಡೀ ಅಂತ."

"ಮಾಡಿದ್ರಾ ಪಾಪೂ?"

"ಅವರು ಮಾಡಿದ್ರೆ ನಾ ಯಾಕ ಈ ಪಾಟಿ ತಲೆಕೆಡಿಸ್ಕೋಬೇಕಿತ್ತು... ಆ ಕೇಸ್ ನಂಗೇ ಕೊಟ್ಟವ್ರೆ ಪೋಲೀಸ್‌ನೋರು.... ಪತ್ತೇ ಮಾಡಿ, ನಮ್ಮ ಕೈಲಿ ಆಗಾಕಿಲ್ಲಾ ಅಂತ..."

"ಮಾಡಿದೆಯಾ ನೀನು?"

"ಆಯ್... ಅದ್ಯಾಕ ಇಂಥ್ ಕೇಳ್ತೀ... ನನ್ ಕೈನಾಗ್ ಕೇಸ್‌ಬಂದ್‌ಮ್ಯಾಗ್ ಖಲಾಸ್...ಕಳ್ಳ ಸಿಕ್ಕೇ



ಉಂಟಾ... ಅದ್ಯಕ್ತಿ್ರಗೆ ಸಿಕ್ಕಿದ್ ಅಡ್ಕೆ ಅಂಥಲ್ವಾ..."

"ಅಂತೂ ಪತ್ತೆ ಮಾಡ್ದೆ ಅನ್ನೂ...? ಏನು ವಿಷಯ?"

"ನೀ ವಸಿ ಯಡಕಾಟಿ ಎಳಗರ ಆಡ್ದಂಗಾಡ್ ಬ್ಯಾಡ... ಸುಮ್ಕೆ ನೋಡ್ತಿರು... ನಿಂಗೇ ತಿಳೀತೈಥೆ... ಮಧ್ಯ ಏನಾರ ಬಾಯ್ ಬುಟ್ಟೀ... ನನ್ನ ಪ್ಲಾಂಗೆಲ್ಲಾ ಡಾಚಕ್ಕೊ... ಈಗ್ ನಾವ್ ಒಂಠಿರೂದು ಎಲ್ಲೀಗೆ ಅನ್ಕೊಂಡಿ... ತರ್ಲೆಕುಂಟ್ನಳ್ಳೀಗೇ... ಇನ್ ಅತ್ ನಿಮ್ಸದಾಗೆ ನೋಡ್ತಿರು ವೈಖರಿ..."

ತರ್ಲೆಕುಂಟ್ನಳ್ಳಿ ಪೋಲೀಸ್ ಸ್ಟೇಷನ್ ಮುಂದೆ ಇಂಪಾಲಾ ನಿಂತಾಗ ಇನ್ಸ್‌ಪೆಕ್ಟರ್ ಬದ್ಮಾಷ್ ಸುಬ್ಬುಡು ಮೊದಲ್ಗೊಂಡು ಎಲ್ಲರೂ ಕಾರಿನ ಹತ್ತಿರವೇ ಬಂದು ಪಾಪಯ್ಯನ್ನ ಸ್ವಾಗತಿಸಿದರು. ನಾನೂ ಪಾಪಯ್ಯನ ಹಿಂಬಾಲಿಸಿದೆ. ಪೋಲೀಸ್ ಇನ್ಸ್‌ಪೆಕ್ಟರು ಚಹಾ ತರಿಸಿಕೊಟ್ಟು ಪಾಪಯ್ಯನ ಸಿಗರೇಟಿಗೆ ತಾವೇ ಅಗ್ನಿಸ್ಪರ್ಶ ಮಾಡಿದರು. ನಂತರ ತಾವೂ ತಮ್ಮ ಸಿಗರೇಟ್ ಹತ್ತಿಸಿಕೊಂಡರು. ಸ್ವಲ್ಪ ಕಾಲ ಇಬ್ಬರೂ ಧೂಮಪಾನದಲ್ಲೇ ತಲ್ಲೀನರಾಗಿದ್ದರು. ನಂತರ ಇನ್ಸ್‌ಪೆಕ್ಟರ್ ಸುಬ್ಬುಡೂನೇ ಮೌನ ಮುರಿದರು.

"ಏನ್ ಡಾ॥ ಪಾಪಯ್ಯ... ಏನಾದರೂ ಕೇಸ್‌ನಲ್ಲಿ ಕ್ಲೂ ಸಿಕ್ತೇನು?"

"ಪಾಪಯ್ಯಂಗೆ ಸೋಲು ಅನ್ನೂದೇ ಇಲ್ಲಾ ಸಾಹೇಬ್ರೆ... ಇವತ್ ನಾ ಇಲ್ಲೀಗ್ ಬಂದ ಉದ್ದೇಸಾನೇ ಬ್ಯಾರೇ... ತುಂಬಾ ಸೀಕ್ರೆಟ್ಟೂ... ಸ್ವಲ್ಪ ನಿಮ್ಮ ಕಾನ್‌ಫಿಡೆನ್ಷಿಯಲ್ ರೂಮಿಗೆ ಓಘೋವಾ ಬನ್ನಿ" ಅಂದ ಪಾಪಯ್ಯ.

ಅದೇನೋ ಇಬ್ಬರೂ ಒಂದು ರೂಮಿಗೆ ಹೋದರು. ನಾನು ಕೂತಲ್ಲೇ "ಮಿರ್ಚಿ" ಓದ್ತಾ ಇದ್ದೆ. ಅರ್ಧಘಂಟೆ ಆದ ಮೇಲೆ ಪಾಪಯ್ಯ ಇನ್ಸ್‌ಪೆಕ್ಟರೊಡನೆ ರೂಮಿನಿಂದ ಹೊರಗೆಬಂದ. ಬ॥ ಸುಬ್ಬುಡು ಮುಖದಲ್ಲಿ ಮೊದಲಿನ ಲವಲವಿಕೆ ಇರಲಿಲ್ಲ. ಮುಂಚೆ ಚೂಪಾಗಿದ್ದ ಮೀಸೆ ಯಾಕೋ ಎರಡು ತುದಿಗಳಲ್ಲೂ ಬಗ್ಗಿದಂತಿತ್ತು. ಪಾಪಯ್ಯ ನನ್ನ ಕಾರ್ನಲ್ಲಿ ಕೂರಿಸಿಕೊಂಡು ಡಿ.ಎಸ್.ಪಿ. ಮನೆಗೆ ಹೋದ. ಅಲ್ಲೂ ಪಾಪಯ್ಯನಿಗೆ ದೊಡ್ಡ ಸಾಹೇಬರಿಂದ ಭವ್ಯವಾದ ಸ್ವಾಗತ ದೊರಕಿತ್ತು. ಡಿ.ಎಸ್.ಪಿ. ಮಾತಾಡ್ತಿದ್ದ ಹಾಗೇ "ಇನ್ನು ಯಾರನ್ನ ಅರೆಸ್ಟ್ ಮಾಡೂಣಾಂತೀರಿ ಪಾಪಯ್ಯ... ಈಗಾಗಲೇ ನಾಕು ಜನ ವಿದ್ಯಾರ್ಥಿಗಳನ್ನು ದಸ್ತಗಿರಿ ಮಾಡಾಗಿದೆ.... ಇನ್ಯಾರೂ ಅಂತೀರಿ?"

"ಕೋಚಿಂಗ್ ಕ್ಲಾಸ್ ಪ್ರಿನ್ಸಿಪಾಲು ಬೆಲ್‌ಬಾಟಂ ಬ್ಯಾಟೂನ ನೀವು ಇವತ್ತೇ ಅರೆಸ್ಟ್‌ಮಾಡಿ ಲಾಕಪ್ನಾಗೆ ಆಕಿ... ಅವನ ಕೋಚಿಂಗ್ ಕ್ಲಾಸ್ ಕ್ಲೋಸೂ ಅನ್ನಿಸಿ... ಮುಂದಂದು ಆ ಮ್ಯಾಕೆ ಏಳ್ತೀನಿ"–ಅಂದ ಪಾಪು.

ಡಿ.ಎಸ್.ಪಿ. ಅದರಂತೆಯೇ ಮಾಡಿದರು. ಕೋ॥ ಕ್ಲಾ॥ಪ್ರಿ॥ ಬೆಲ್ ಬಾಟಂ ಬ್ಯಾಟೂ ದಸ್ತಗಿರಿ ಸುದ್ದಿ "ಮಿರ್ಚಿ"ಯಲ್ಲಿ ಎಂದಿಗಿಂತಲೂ ಖಾರವಾಗಿ ಪ್ರಕಟವಾಗಿತ್ತು. ತರ್ಲೆಕುಂಟ್ನಳ್ಳಿಯ ಮಹಾಜನಗಳು ಈ ಸುದ್ದಿಯನ್ನೋದಿ ದಿಗ್ಭ್ರಮೆಗೊಳಗಾಗಿದ್ದರು. "ನಪಾಸು...ನಫೀಸು" ನಾಟಕ ಆಡುತ್ತಿದ್ದ ಬೆಲ್ ಬಾಟಂ ಬ್ಯಾಟೂ ಕೋಚಿಂಗ್‌ಕ್ಲಾಸ್ ನಡೆಸಿ ತರ್ಲೆಕುಂಟ್ನಳ್ಳಿಯಲ್ಲಿ ಎರಡುಮನೆ ಕಟ್ಟಿಸಿ, ಹತ್ತೆಕರೆ ತರಿಜಮೀನುಕೊಂಡು. ಎರಡು ಅಂಬಾಸಿಡರ್ ಟ್ಯಾಕ್ಸಿ ಓಡಿಸ್ತಾ ದೊಡ್ಡ ಕುಳ ಅನ್ನಿಸಿಕೊಂಡಿದ್ದ. ಅವನೇ ಖೋಟಾಮಾರ್ಕ್ಸ್‌ಕಾರ್ಡ್ ತಯಾರಿಸ್ತಿದ್ದ. ಅಂದ ಮೇಲೆ, ಜೀವನದಲ್ಲಿನ ಅವನ ಯಶಸ್ಸಿನ ಗುಟ್ಟು ರಟ್ಟಾಗಿತ್ತು. ಪಾಪಯ್ಯನ ಜಾಣ್ಮೆಗೆ ಪೋಲೀಸ್ ಇಲಾಖೆಯವರೆಲ್ಲಾ ತಲೆದೂಗಿದ್ದರು. ಅಂದು ಅವನಿಗೆ ಹಾರಹಾಕಿ ಬೀಳ್ಕೊಟ್ಟಾಗ ಪೋಲೀಸ್‌ಸ್ಟೇಷನ್‌ನಲ್ಲಿ ಎಲ್ಲರೂ ಗೆಲುವಾಗಿದ್ದರು. ಆದರೆ ಪೋ॥ ಇ॥ ಬ॥ ಸುಬ್ಬುಡು ಮಾತ್ರ ಚಿಂತಾಕ್ರಾಂತರಾಗಿದ್ದಂತೆ ತೋರಿತು.

ನಾನು ಈ ಬಗೆಗೆ ಪಾಪಯ್ಯನ್ನ ಕಾರ್ನಲ್ಲಿ ಹೋಗ್ತಾ ಕೇಳಿದೆ. ಅವನಿಗೇಕೋ ಹೇಳುವ ಮೂಡ್ ಇರಲಿಲ್ಲ ಅಂತ ಕಾಣುತ್ತೆ. "ಕಾದು ನೋಡು, ನಾಳೀವರೆಗೆ" ಅಂದ.



ಮರುದಿನದ "ಮಿರ್ಚಿ"ಯ ಮುಖಪುಟದಲ್ಲಿ ಪೋ॥ಇ॥ ಬದ್ಮಾಷ್ ಸುಬ್ಬುಡುವನ್ನೇ ದಸ್ತಗಿರಿ ಮಾಡಿದ್ದ ಸುದ್ದಿ ಪ್ರಕಟವಾಗಿತ್ತು. ನನಗೆ ಆಶ್ಚರ್ಯವಾಗಿ ಹೋಯಿತು. ತಕ್ಷಣ ಪಾಪಯ್ಯನ ಮನೆಗೆ ಧಾವಿಸಿ ವಿಚಾರಿಸಿದೆ. ರೆಫ್ರಿಜರೇಟರ್‌ನಿಂದ ಫಾಂಟಾ ತೆಗೆದು ನನಗೆ ಕೊಟ್ಟವನೇ, ತಾನೂ ಕುಡಿಯುತ್ತಾ ಪಾಪು ಹೇಳಿದ ಮಾತು ತುಂಬಾ ಸ್ವಾರಸ್ಯವಾಗಿತ್ತು.

"ಮರಿ, ಬೆಲ್‌ಬಾಟಂ ಬ್ಯಾಟೂ ಕೋಚಿಂಗ್ ಕ್ಲಾಸ್‌ನಾಗೆ ಈ ಬ॥ ಸುಬ್ಬುಡು ಮೊದಲ್ನೇ ಬ್ಯಾಚ್ ಸ್ಟೂಡೆಂಟೂ, ಇವ್ನು ಡಿಗ್ರೀ ಪರೀಕ್ಷೆಗೆ ನಾಕು ಬಾರಿ ಕಟ್ಟಿ ಫೇಲಾಗಿ ಸುಸ್ತಾಗಿದ್ದ, ಅದಾದ್‌ಮ್ಯಾಗೆ

**ಸಿ. ಕೆ. ಎನ್ ರಾಜ**

ಬ್ಯಾಟೂಕೋಚಿಂಗ್ ಕ್ಲಾಸ್‌ಸೇರ್ದ. ಇನ್ಸ್‌ಪೆಟ್ರೂ ಆದ. ಅದ್ಹೆಂಗಾ ಈ ಮಡ್ಡೀಗೆ ಈ ಕೆಲ್ಸ ಸಿಕ್ತೂ ಅಂತ ನಾನು ತನಿಖೆ ಮಾಡ್ದಿ. ಇಚಾರ ಮಾಡ್ದಾಗ ಈ ನನ್ನ ಮಗ ಬಿ.ಎ. ಫಸ್ಟ್‌ಕ್ಲಾಸೂ ಅಂತ ತಿಳೀತು. ತಕ್ಷಣ ಅವ ಡಿಪಾರ್ಟ್‌ಮೆಂಟಿಗೆ ಕೊಟ್ಟಿದ್ದ ಮಾರ್ಕ್ಸ್‌ಕಾರ್ಡ್‌ನ ಪರೀಕ್ಷೆ ಮಾಡ್ದಿ. ನೋಡಿದ್ರೆ ಅವಾನೇ ಡಿಪಾರ್ಟ್‌ಮೆಂಟಿಗೆ ಖೋಟಾಮಾರ್ಕ್ಸ್‌ಕಾರ್ಡ್ ಕೊಟ್ಟು ಕೆಲ್ಸ ಗಿಟ್ಸವ್ನೇ. ಇಪ್ಪರಮ್ಯಾಗೆ ನಿಯತ್ತಿಲ್ಲದ ನನ್ನ ಮಗ ಖೋಟಾಮಾರ್ಕ್ಸ್‌ಕಾರ್ಡ್‌ನಿಂದ ಪಾಸಾಗಿದ್ದ ಐಕ್ಳನ್ನ ಅರೆಸ್ಟ್‌ಮಾಡವ್ನೇ... ಹೆಂಗದೆ ನೋಡಿದ್ಯಾ ಮರಿ ಇಂಡಿಯಾ ದಟ್ ಈಸ್ ಭಾರತ್ತೂ...ಬಾಕಿ ದೇಸ್ದೋರ್ಗೆ ಇವೆಲ್ಲಾ ತಿಳಿದ್ರೆ ನಮ್ಗೇನ್ ಇರ್ತೈತೋ ಕಿಮ್ಮತ್ತೂ... ಎಂತೆಂತೋರು ಏನೇನ್ ಮಾಡವ್ರೋ ಕರಾಮತ್ತು... ಏನೇನ್ ಆಗ್ಬುಟ್ಟವ್ರೋ... ಆ ಭಗವಂತ್ನೇ ಬಲ್ಲ... ಅಂದಂಗೇ ವಸಿ ನಿನ್ ಮಾರ್ಕ್ಸ್‌ಕಾರ್ಡ್‌ನೂ ನೋಡ್ಬೇಕು ನಾನು... ಮಡಗಿದ್ದೀಯಾ ಮನೆಯಾಗೆ? ಅಂತ ಪಾಪು ನನ್ನ ಕೇಳಿದಾಗ ನನ್ನ "ದಿಲ್" ಏಕೋ ಒಂದು ತರಹ "ಧಡಕ್" ಅಂತು.

●

# ಉಳಿತಾಯದ ದೀಪ



ಸಮೃದ್ಧ ಬದುಕಿಗೆ ನೆರವಾಗುವ ದೀಪ — ಉಳಿತಾಯ
ಕತ್ತಲ ದಿನಗಳಲ್ಲಿ ಬೆಳಕು ತೋರುವ ಹಣತೆ — ಕೂಡಿಟ್ಟ ಸಂಪತ್ತು
ನಾಳಿನ ಅನಿಶ್ಚಿತತೆಯನ್ನು ನೀಗಿಸುವ ಜ್ಯೋತಿ — ಇಂದು ಉಳಿಸಿದ ಹಣ

**ಕ್ರಮವಾಗಿ ಕೂಡಿಟ್ಟ ಸಂಪತ್ತು ಹಣತೆಯಲ್ಲಿ ಇರಿಸಿದ ದೀಪದಂತೆ**

**ಕತ್ತಲು ಸರ್ವ ಮಾರ್ಗದಿಂದ ದೂರ ಸರಿಯುವುದು,**
**ಉಳಿತಾಯದ ದೀಪದ ಬೆಳಕಿನಲ್ಲಿ ಬದುಕಿನ ದೀಪಾವಳಿಯನ್ನು ಸದಾಕಾಲ ಆಚರಿಸಬಹುದು.**




## ಸಿಂಡಿಕೇಟ್ ಬ್ಯಾಂಕ್

ಪ್ರಧಾನ ಕಚೇರಿ
**ಮಣಿಪಾಲ** (ಮೈಸೂರು ರಾಜ್ಯ)

**ಕೆ. ಕೆ. ಪೈ.**
ಮೆನೇಜಿಂಗ್ ಡೈರೆಕ್ಟರ್



**A Happy Deepavali To All**



FOR TASTY COOKING USE
**'RAVI' VANASPATI**

FOR CRISP AND DELICIOUS DISHES USE
**'BRINDAVAN' REFINED OIL**

TO MAKE CLOTHES WHITER AND BRIGHTER USE
**'R. H.' BAR SOAPS AND SOAP FLAKES**

MANUFACTURED BY :
## RAVI VEGETABLE OIL INDUSTRIES
**DAVANGERE**

ವಿಕ್ರಮ ಸಂವತ್ಸರ ೨೦೩೦-೨೦೩೧ ರ ಭವಿಷ್ಯ ಅರ್ಥಾತ್ ಶ್ರೀಮನ್ ನೃಪಶಾಲಿವಾಹನ ಶಕೆ ೧೮೯೫ ನೆಯ ಪ್ರಮಾಥಿ ಸಂವತ್ಸರದ ಕಾರ್ತಿಕ ಶುದ್ಧ ಪ್ರತಿಪದೆಯಿಂದ ೧೮೯೬ ನೆಯ 'ಆನಂದ ಸಂವತ್ಸರ'ದ ಆಶ್ವೀನ ಬಹುಳ ಅಮಾವಾಸ್ಯೆಯವರೆಗೆ ಅಂದರೆ ಕ್ರಿಸ್ತಶಕೆ ೧೯೭೩ ನೆಯ ಅಕ್ಟೋಬರ ೨೭ ರಿಂದ ೧೯೭೪ ಅಕ್ಟೋಬರ ೩೩ ರ ವರೆಗೆ ಅರ್ಥಾತ್ ಈ ದೀಪಾವಳಿಯಿಂದ ಮುಂದಿನ ದೀಪಾವಳಿಯ ವರೆಗಿನ ವರ್ಷಭವಿಷ್ಯ.

ಜ್ಯೋತಿಷಿ :
**ಎನ್. ಕೆ. ಜೋಗಳೇಗರ**
ಜ್ಯೋತಿಷ್ಯ ಕಾರ್ಯಾಲಯ
ರವಿವಾರ ಪೇಟೆ, ಧಾರವಾಡ - ೧
ದೂರವಾಣಿ : ೮೭೪೮






## ಮೇಷ

**ಈ ವರುಷವು ಈ ರಾಶಿಯವರಿಗೆ ಜೀವನದಲ್ಲಿಯೇ ಸುವರ್ಣಕಾಲವಾಗಿದ್ದು ಜೀವನದ ಎಲ್ಲ ದೃಷ್ಟಿಯಿಂದಲೂ ಅತ್ಯಂತ ಯಶೋದಾಯಕವೂ ಸುಖಪ್ರದವೂ ಆಗಿದೆ.**

ಸುಡುಗಾಳಿಯ ದಿನಗಳಲ್ಲಿ ಗಿಡ-ಮರಗಳು ಒಣಗುವಂತೆ ವಸಂತಮಾಸದಲ್ಲಿ ಮತ್ತೆ ಚಿಗಿತು ನಳನಳಿಸುವಂತೆ ಗ್ರಹಗಳು ಪ್ರತಿಕೂಲ ಇದ್ದಾಗ ಮಾನವನ ಜೀವನದಲ್ಲಿ ಸಂಕಟಗಳೂ, ಅನುಕೂಲವಾದಾಗ ಸುಖ ಸೌಭಾಗ್ಯಗಳೂ ಲಭಿಸುವಂತೆ ಈ ವರುಷದ ನಿಮ್ಮ ಗ್ರಹಗತಿಯನ್ನು ಅವಲೋಕಿಸಿದಾಗ ಕಳೆದ ವರುಷದ ಉತ್ತರಾರ್ಧ ಸಾಡೇಸಾತಿಯಿಂದ ಮುಕ್ತರಾಗಿ ಮೂರನೆಯ ಶನಿಯ ಶುಭಫಲವನ್ನು ಪಡೆಯುತ್ತಿರುವ ನೀವು ಈ ವರುಷದಲ್ಲಿಯೂ ಕೂಡ ಮೂರನೇ ಶನಿಯ ಕೃಪಾಕಟಾಕ್ಷಕ್ಕೆ ಒಳಗಾಗುವಿರಿ. ಅದೂ ಅಲ್ಲದೆ ೯-೨-೧೯೭೪ ರಂದು ಬರುವ ಹನ್ನೊಂದನೇ ಗುರುವಿನ ಶುಭಫಲವು ಕೂಡ ವರ್ಷಾದ್ಯಂತ ಇರುತ್ತದೆ. ಹೀಗೆ ಎರಡು ಪ್ರಬಲ ಗ್ರಹಗಳಾದ ಗುರು-ಶನಿಯರ ಅನುಗ್ರಹ ಇಡೀ ವರುಷವಿರುವದರಿಂದ ನೀವು ಈ ವರುಷ ಸುದೈವಿಗಳೇ. ಕಳೆದ ಅನೇಕ ವರುಷಗಳಿಂದ ನನೆಗುದಿಗೆ ಬಿದ್ದಿದ್ದ ಕಾರ್ಯ ಈ ವರುಷ ನೆರವೇರುವದರಿಂದ ಮನಸ್ಸು ಪ್ರಫುಲ್ಲಿತವಾಗುವದು. ನಿಮ್ಮ ಆರೋಗ್ಯ ವರುಷದ ಮುಕ್ಕಾಲು ಅವಧಿಯವರೆಗೆ ಉತ್ತಮವಿದ್ದಾಗ್ಯೂ ಚೈತ್ರದಿಂದ ಬರುವ ಅಷ್ಟಮ ರಾಹುವಿನ ಅನಿಷ್ಟತೆಯಿಂದ ಅಂದರೆ ಏಪ್ರಿಲ್ ೧೦ ರಿಂದ ಅಗಸ್ಟ ೧೫ ರ ಅವಧಿಯಲ್ಲಿ ಶಾರೀರಕ ಪೀಡೆ ಉಂಟಾಗಬಹುದಾಗಿದೆ. ನಿಮ್ಮ ಆರ್ಥಿಕಸ್ಥಿತಿಯು ಇಡೀ ವರುಷ ತೃಪ್ತಿಕರ ಇರುತ್ತದೆ. ೧೫-೧೨-೧೯೭೩ರಿಂದ ೧೫-೪-೧೯೭೪ ರ ವರೆಗೆ ಹಾಗೂ ಅಗಸ್ಟ ೧೫ ರಿಂದ ಅಕ್ಟೋಬರ ೧೫ ರ ವರೆಗಿನ ಕಾಲವು ನಿಮಗೆ ಆರ್ಥಿಕದೃಷ್ಟಿಯಿಂದ ಅನುಕೂಲ ಕಾಲವಿರುವದಲ್ಲದೇ ಈ ಅವಧಿಯಲ್ಲಿ ಸಟ್ಟಾ, ಲಾಟರಿ, ಬಹುಮಾನ, ಭಕ್ಷೀಸ, ಮೊದಲಾದ ಮೂಲದಿಂದ ಆಕಸ್ಮಿಕ ಧನಲಾಭವುಂಟು. ಕೋರ್ಟು ಕಚೇರಿಯ ವ್ಯಾಜ್ಯದಲ್ಲಿ ಈ ವರುಷ ಜಯಲಕ್ಷ್ಮಿ ನಿಮ್ಮ ಕೊರಳಿಗೆ ಮಾಲೆ ಹಾಕುವಳು.

ಈ ರಾಶಿಯ ನೌಕರವರ್ಗದವರಿಗೆ ಈ ವರುಷ ಶುಭದಾಯಕವಿದ್ದು ೧೫-೧೨-೧೯೭೩ ರಿಂದ ೧೫-೩-೧೯೭೪ ರ ಅವಧಿಯಲ್ಲಿ ಅಥವಾ ಜೂನ್ ೧೫ ರಿಂದ ಜುಲೈ ೧೫ ರ ಒಳಗೆ ಇಲ್ಲವೆ ಅಗಸ್ಟ ೧೫ ರಿಂದ ಅಕ್ಟೋಬರ ೧೫ ರ ಒಳಗಿನ ಅವಧಿಯಲ್ಲಿ ನೌಕರಿಯಲ್ಲಿ ಬಡತಿ, ಅನುಕೂಲ ಜಾಗೆಗೆ ಬದಲಿಯಾಗಬಹುದಾಗಿದೆ.

ಹಂಗಾಮಿ ನೌಕರದಾರರಿಗೆ ನೌಕರಿಯಲ್ಲಿ ಕಾಯಂ ಆಗುವಿಕೆ, ನಿರುದ್ಯೋಗಿ ಜನರಿಗೆ ನೌಕರಿ ಲಭಿಸುವಿಕೆ ಮೊದಲಾದ ಶುಭಘಟನೆಗಳು ಜರಗುವವು. ರಾಜ್ಯ ಮಟ್ಟದ, ರಾಷ್ಟ್ರಮಟ್ಟದ ಸ್ಪರ್ಧೆಗಳಲ್ಲಿ ಜಯಲಭಿಸಿ ಪ್ರಶಸ್ತಿ ಪದಕಗಳನ್ನು ಪಡೆಯುವಿರಿ. ಈ ರಾಶಿಯ ಕಾರಖಾನೆಯ ಕಾರ್ಮಿಕರಿಗೂ ಹಾಗು ಪ್ರವಾಸೀ ನೌಕರವರ್ಗದವರಿಗೂ ೧೫-೧೨-೧೯೭೩ ರಿಂದ ೧೫-೬-೧೯೭೪ ರ ಕಾಲವು ಪ್ರಗತಿದಾಯಕವಿದೆ. ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರಿಗೆ ಈ ವರ್ಷ ಅತ್ಯುತ್ತಮವಿದ್ದು, ದ್ವಿಗುಣ ಲಾಭ ಪಡೆಯುವರು. ಅದರಲ್ಲಿಯೂ ಪೂರ್ವಾರ್ಧದಲ್ಲಿ ಅಪಾರ ಲಾಭವಾಗುತ್ತದೆ. ಸಟ್ಟಾ, ಶೇರ. ಕಮೀಶನ, ವ್ಯಾಪಾರಸ್ಥರು ಫೆಬ್ರುವರಿ ೯ ರಿಂದ ಅಕ್ಟೋಬರ ೧೮ ರ ಅವಧಿಯಲ್ಲಿ ವಿಪುಲ ಹಣಗಳಿಸುವರು. ಈ ರಾಶಿಯ ಕೃಷಿಕವರ್ಗದವರಿಗೆ ಈ ವರ್ಷ ಲಾಭದಾಯಕವಿದ್ದು, ಹೊಸದಾಗಿ ಹೊಲ, ಮನೆ, ದನಕರುಗಳು, ಟ್ರಕ್, ಟ್ರ್ಯಾಕ್ಟರ್, ನೀರಾವರಿ ಪಂಪಸೆಟ್ಟಗಳನ್ನು ಕೊಳ್ಳುವ ಯೋಗವಿದೆ. ಈ ರಾಶಿಯ ಬುದ್ಧಿಜೀವಿಗಳಿಗೂ, ಸಾಹಿತಿ, ಕಲಾವಿದರಿಗೂ ಅವರ ಜೀವನದಲ್ಲಿಯೇ ಒಂದ ಅಪೂರ್ವ ಕಾಲವಾಗಿದ್ದು ಬಹುದಿನಗಳ ಅವರ ಆಶೆ-ಆಕಾಂಕ್ಷೆಗಳು ಈಡೇರುತ್ತವೆ. ಅಲ್ಲದೆ ಮಾನ, ಸನ್ಮಾನ, ಮನ್ನಣೆ ಪ್ರಶಸ್ತಿ-ಪದಕಗಳೂ ದೊರೆಯುವವು. ವಾಹನಕೊಳ್ಳುವಿಕೆ, ಪರದೇಶಪರ್ಯಟನ ಮೊದಲಾದ ಮಹತ್ವದ ಘಟನೆಗಳೂ ಈ ವರುಷದಲ್ಲಿ ಜರಗುವವು. ಚಲಚಿತ್ರ ನಾಟಕಗಳಿಗೆ ಸಂಬಂಧಿಸಿದ ಉದ್ಯೋಗಸ್ಥರಿಗೆ, ಗಿರಣಿ-ಕಾರಖಾನೆ, ಸಿನೆಮಾ ಮಾಲಕರಿಗೂ ಈ ವರುಷ ಪ್ರೋತ್ಸಾಹದಾಯಕವಿದೆ. ಈ ರಾಶಿಯ ಕಾರ್ಮಿಕ ವರ್ಗದವರಿಗೂ ಈ ವರುಷ ಪ್ರೋತ್ಸಾಹದಾಯಕವಿದೆ. ಪೂರ್ವಾರ್ಧವಂತೂ ಅವರಿಗ ಹೆಚ್ಚು ಅನುಕೂಲದಾಯಕವಿರುತ್ತದೆ. ಈ ರಾಶಿಯ ರಾಜಕೀಯ ಸಾಮಾಜಿಕ ಕಾರ್ಯಕರ್ತರಿಗೆ ಈ ವರುಷ ಅತ್ಯಂತ ಶುಭದಾಯಕವಿದ್ದು ಪ್ರತ್ಯಕ್ಷ ರಾಜಕೀಯದಲ್ಲಿ ಭಾಗ ವಹಿಸುವರಲ್ಲದೇ ಸ್ಥಾನಮಾನ ಅಧಿಕಾರ ಪಡೆಯಬಹುದಾಗಿದೆ. ಚುನಾವಣೆಗಳಲ್ಲಿಯೂ ಜಯ ಲಭಿಸುವುದು. ೧೮-೧೨-೧೯೭೩ ರಿಂದ ೧೫-೬-೧೯೭೪ ಹಾಗೂ ಅಗಸ್ಟ ೧೧ರಿಂದ ಅಕ್ಟೋಬರ ೧೮ ರ ಅವಧಿಯಲ್ಲಿ ಜರಗುವ ಯಾವುದೇ ಪ್ರಕಾರದ ಚುನಾವಣೆಗಳಲ್ಲಿ ಸ್ಪರ್ಧಿಸಿದರೆ ಜಯ ನಿಶ್ಚಿತವೆಂದೇ ತಿಳಿಯಬೇಕು.

ಈ ರಾಶಿಯ ವಧೂವರರಿಗೆ ಈ ವರುಷ ಕಂಕಣಬಲ ಕೂಡಿ ಬಂದಿರುವುದಲ್ಲದೇ ೮-೧೨-೧೯೭೩ ರಿಂದ ೧೫-೬-೧೯೭೪ ರ ಅವಧಿಯಲ್ಲಿ ವಿವಾಹ ಜರುಗಿ ವೈವಾಹಿಕ ಜೀವನ ಆನಂದಮಯವಾಗುವದು. ವಿವಾಹಿತ ಸ್ತ್ರೀ ಪುರುಷರಿಗೂ ಈ ವರ್ಷ ಪ್ರೋತ್ಸಾಹದಾಯಕವಾಗಿದ್ದು ಸ್ಥಾವರ ಆಸ್ತಿಯ ಸಂಪಾದನೆ, ತೀರ್ಥಯಾತ್ರಾ ಸಂದರ್ಶನ, ವಸ್ತು ವಡವೆ ಕೊಳ್ಳುವಿಕೆ, ವಾಹನಸೌಖ್ಯ ಮೊದಲಾದ ಶುಭಘಟನೆಗಳು ಜರ

ಗುವವಲ್ಲದೇ ತಪ್ಪುತಿಳುವಳಿಕೆಯಿಂದ ಒಡೆದು ಹೋಗಿದ್ದ ಕುಟುಂಬ ಮತ್ತೆ ಒಂದುಗೂಡಿ ಆಪ್ತೇಷ್ಟರಲ್ಲಿಯೂ, ಸ್ನೇಹಿತರಲ್ಲೂ, ನೆರೆಹೊರೆಯವರಲ್ಲಿಯೂ ಸ್ನೇಹ, ಪ್ರೀತಿ, ವಿಶ್ವಾಸ, ವರ್ಧಿಸುತ್ತದೆ.

ಈ ರಾಶಿಯ ಗರ್ಭಿಣಿಯರ ಹೆರಿಗೆ ಸುಖಪ್ರದವಾಗುತ್ತದಲ್ಲದೇ ಗಂಡು ಸಂತಾನವಾತ್ತದೆ. ಆದರೆ ಎಪ್ರಿಲ್ ೧೨ ರಿಂದ ಅಗಸ್ಟ ೧೫ ರೊಳಗೆ ಹೆರಿಗೆಯಾದರೆ ತುಸು ಕಷ್ಟಕರವಾಗುತ್ತದೆ.

ಈ ರಾಶಿಯ ವಿದ್ಯಾರ್ಥಿಗಳಿಗೆ ಈ ವರುಷ ಅತ್ಯುತ್ತಮವಿದ್ದು, ಅರ್ಧಕ್ಕೆ ನಿಂತಿದ್ದ ಶಿಕ್ಷಣ ಮತ್ತೆ, ಮುಂದುವರೆಯುವದು. ಪರೀಕ್ಷೆಯಲ್ಲಿಯಂತೂ ಖಂಡಿತ ತೇರ್ಗಡೆ ಆಗುವರಲ್ಲದೇ ದರ್ಜೆ, ಶ್ರೇಣಿ, ಪ್ರಶಸ್ತಿ, ಪದಕ ಲಭಿಸುವದು. ಸಂಶೋಧನೆ ಇಲ್ಲವೆ ಹೆಚ್ಚಿನ ಶಿಕ್ಷಣಕ್ಕಾಗಿ ವಿದೇಶ ಪ್ರವಾಸದ ಯೋಗವೂ ಉಂಟು. ಒಟ್ಟಿನಲ್ಲಿ ಈ ರಾಶಿಯವರಿಗೆ ಈ ವರುಷವೆಂದರೆ ಅವರ ಜೀವನದಲ್ಲಿಯೇ ಒಂದು ಅಪೂರ್ವ, ಸ್ಮರಣೀಯ ಕಾಲವಾಗಿದೆ. ಆದುದರಿಂದ ಇಂಥ ಅಮೂಲ್ಯ ಸುಸಂಧಿ ಕಳೆದುಕೊಳ್ಳದೇ ಕಾರ್ಯತತ್ಪರರಾಗಿರಿ: ಎಂಬುದೇ ಗ್ರಹಗಳ ಆದೇಶವಾಗಿದೆ.



## ವೃಷಭ

**ಈ ವರುಷ ಈ ರಾಶಿಯವರಿಗೆ ಎಲ್ಲ ವಿಷಯಗಳಲ್ಲಿ ಪ್ರಗತಿದಾಯಕವಾಗಿದೆ. ಅದರಲ್ಲಿಯೂ ಪೂರ್ವಾರ್ಧವು ಹೆಚ್ಚು ಅನುಕೂಲವಾಗಿದೆ.**

ಈ ವರುಷದ ನಿಮ್ಮ ಗ್ರಹಗತಿಯನ್ನು ಪರಿಶೀಲಿಸಲಾಗಿ ಸಾಡೇಸಾತಿಯ ಮುಕ್ಕಾಲು ಭಾಗ ಕಳೆದಿದೆ. ಅದರಲ್ಲಿಯೂ ಕೃತ್ತಿಕಾ ನಕ್ಷತ್ರದ ವೃಷಭ ರಾಶಿಯವರಂತೂ ಸಾಡೇಸಾತಿಯ ಅನಿಷ್ಟತೆಯಿಂದ ಮುಕ್ತರಾಗಿರುವರು ಎಂದು ತಿಳಿಸಲು ಸಂತೋಷವೆನಿಸುತ್ತದೆ. ಕಳೆದ ವರುಷ ಉಂಟಾಗಿದ್ದ ಶಾರೀರಕ ಪೀಡೆ ಕಡಿಮೆ ಆದರೂ ೧೫-೧೨-೧೯೭೩ ರಿಂದ ೧೪-೧-೧೯೭೪ ರ ವರೆಗೆ ಹಾಗೂ ಮೇ ೧೫ ರಿಂದ ಜುಲೈ ೧೫ ರ ಈ ಮೂರು ತಿಂಗಳ ಅವಧಿಯಲ್ಲಿ ತೊಂದರೆಯಾಗಬಹುದಾಗಿದೆಯಲ್ಲದೆ ಅಪಘಾತದ ಭಯವೂ ಉಂಟು. ಬರಬೇಕಾಗಿದ್ದ ಹಣ ಈ ವರುಷ ಬರುವದರಿಂದ ನಿಮ್ಮ ಆರ್ಥಿಕಸ್ಥಿತಿ ಹಿಡಿತದಲ್ಲಿರುತ್ತದೆ. ಜನೇವರಿ ೧೪ ರಿಂದ ಎಪ್ರಿಲ್ ೧೫ ರ ಅವಧಿಯಲ್ಲಿ ಆಕಸ್ಮಿಕ ಧನಪ್ರಾಪ್ತಿ ಇರುವುದಲ್ಲದೇ ಕಳೆದ ವರುಷ ಅರ್ಧಕ್ಕೆ ನಿಂತಿದ್ದ ಕಾರ್ಯಗಳೆಲ್ಲ ಈ ವರುಷ ಪೂರ್ತಿಯಾಗುವವು: ಆದರೆ ಎಪ್ರಿಲ್ ೧೬ ರಿಂದ ಜುಲೈ ೧೬ ರ ವರೆಗಿನ ಕಾಲ ಹಾಗೂ ಅಗಸ್ಟ ೧೫ ರಿಂದ ಅಕ್ಟೋಬರ ೧೮ ರ ಕಾಲ ಆರ್ಥಿಕ ದೃಷ್ಟಿಯಿಂದ ತುಂಬ ಪ್ರತಿಕೂಲವಿರುತ್ತದೆ. ಈ ಕಾಲದಲ್ಲಿ ಬರತಕ್ಕ ಹಣ ಸಮಯಕ್ಕೆ ಬಾರದೇ ಕೊಡತಕ್ಕ ಹಣಕ್ಕಾಗಿ ಸಾಕುಬೇಕಾಗುತ್ತದಲ್ಲದೇ ಆರ್ಥಿಕ ಅಡಚಣೆ ಪರಾಕಾಷ್ಠ ಮುಟ್ಟುತ್ತದೆ. ಅಲ್ಲದೇ ಸಾಲಗಾರರಿಂದ ಅವಮಾನಕರ ಪ್ರಸಂಗವನ್ನು ಎದುರಿಸಬೇಕಾಗುತ್ತದೆ. ಅಲ್ಲದೆ ಮನೆಯಲ್ಲಿ ಜರುಗಲಿರುವ ಮಂಗಲಕಾರ್ಯಕ್ಕಾಗಿ ಹೊಸ ಸಾಲಕ್ಕೆ ಮೊರೆ ಹೋಗುವ ಪ್ರಸಂಗವೂ ಇದೇ ಅವಧಿಯಲ್ಲಿ ಬರುತ್ತದೆ.

ಈ ರಾಶಿಯ ನೌಕರ ವರ್ಗದವರಿಗೆ ಈ ವರುಷ ಪ್ರಗತಿದಾಯಕವಿದ್ದು ಜನೇವರಿ ೧೪ ರಿಂದ ಎಪ್ರಿಲ್ ೧೨ ರ ಒಳಗೆ ಇಲ್ಲವೇ ಜುಲೈ ೧೫ ರಿಂದ ಅಗಸ್ಟ ೧೫ ರ ಒಳಗಿನ ಅವಧಿಯಲ್ಲಿ ಬಡತಿ ದೊರೆತು, ಇಚ್ಛಿತ ಸ್ಥಳಕ್ಕೆ ವರ್ಗವಾಗುವುದಲ್ಲದೇ ವರಿಷ್ಠರ ಸಹಾಯ, ಸಹಕಾರ ಸಾಕಷ್ಟು ಲಭಿಸುತ್ತದೆ. ಕಳೆದ ಕೆಲ ವರುಷಗಳಿಂದ ಉದ್ಯೋಗಕ್ಕಾಗಿ ಅಲೆದಾಡುತ್ತಿರುವ ನಿರುದ್ಯೋಗಿ ಯುವಕರಿಗೆ ಜನೇವರಿ ೪ ರಿಂದ ಜೂನ ೧೪ ರ ಈ ಅವಧಿಯಲ್ಲಿ ನಿಶ್ಚಿತವಾಗಿಯೂ ಉದ್ಯೋಗ ದೊರೆಯುವದು. ಹಂಗಾಮಿ ನೌಕರದಾರರಿಗೆ ಈ ವರುಷ ಅದೇ ನೌಕರಿಯಲ್ಲಿ ಕಾಯಂ ಆಗುವುದು. ಕಾರಖಾನೆಯ ಕಾರ್ಮಿಕರಿಗೂ, ಪ್ರವಾಸೀ ಕೆಲಸಗಾರರಿಗೂ ಪೂರ್ವಾರ್ಧವು ಪ್ರಗತಿದಾಯಕವಿದ್ದರೆ ಉತ್ತರಾರ್ಧವು ತಾಪದಾಯಕವಾಗಿದೆ. ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರಿಗೆ ಈ ವರುಷ ಪ್ರೋತ್ಸಾಹದಾಯಕವಾಗಿದೆ. ಹೊಸ ವ್ಯಾಪಾರವನ್ನು ಪ್ರಾರಂಭಿಸುವ ಯೋಗವಿದ್ದು, ಹೇರಳವಾಗಿ ಧನ ಸಂಪಾದಿಸುವರು. ಕಳೆದ ವರುಷ ಪ್ರಾರಂಭಿಸಿದ ಪಾಲುಗಾರಿಕೆಯ ವ್ಯವಹಾರದಲ್ಲಿ ಪ್ರಗತಿಯುಂಟು. ಸಟ್ಟಾ, ಶೋಕ, ಕಮೀಶನ, ಏಜನ್ಸಿ, ಹಂಚಿಕೆದಾರ ಮೊದಲಾದ ಉದ್ಯೋಗಸ್ಥರಿಗೆ ೧-೧೧-೧೯೭೩ ರಿಂದ ೭-೬-೧೯೭೪ರ ವರೆಗಿನ ಕಾಲವು ಲಾಭದಾಯಕವಿದ್ದು ಅಗಣಿತ ದ್ರವ್ಯ ಗಳಿಸುವರು. ಈ ರಾಶಿಯ ಕೃಷಿಕ ವರ್ಗದವರಿಗೂ ಕೂಡ ಈ ವರುಷ ಪ್ರಗತಿದಾಯಕವಿದೆ. ನಿರೀಕ್ಷೆಗಿಂತಲೂ ಹೆಚ್ಚು ಬೆಳೆ ಬಂದು ಸಾಲ ತೀರಿಸುವ ಸಾಮರ್ಥ್ಯ ಬರುವದು. ಅಲ್ಲದೇ ೨೮-೧೦ ೧೯೭೩ ರಿಂದ ೧೨-೪ ೧೯೭೪ರ ಅವಧಿಯಲ್ಲಿ ಹೊಸ ಜಾಗ, ಹೊಲ-ಮನೆ, ನೀರಾವರಿಯ ಉಪಕರಣಗಳು,ಟ್ರಕ್,ಟ್ರಾಕ್ಟರ ಮೊದಲಾದವುಗಳನ್ನು ಕೊಳ್ಳುವ ಯೋಗವೂ, ಸಾಮರ್ಥ್ಯವೂ ಬರುತ್ತದೆ. ಬುದ್ಧಿಜೀವಿ, ಸಾಹಿತಿ, ಕಲಾವಿದರಿಗೆ ಈ ವರುಷ ಸಮ್ಮಿಶ್ರ ಫಲವಿದೆ. ಪೂರ್ವಾರ್ಧವು ಪ್ರಗತಿದಾಯಕವಿದೆ. ಅಂದರೆ ೨೭-೧೦-೧೯೭೩ರಿಂದ ೧೨-೪-೧೯೭೪ ರ ಅವಧಿಯಲ್ಲಿ ಉದ್ಯೋಗದಲ್ಲಿ ಪ್ರಗತಿ, ಸ್ಥಿರತೆ, ಮನ್ನಣೆ, ಪ್ರಶಸ್ತಿ ಮೊದಲಾದ ಶುಭಘಟನೆಗಳು ಜರುಗಿದರೆ ಉತ್ತರಾರ್ಧದಲ್ಲಿ ಅಂದರೆ ೧೩-೪-೧೯೭೪ ರಿಂದ ವರ್ಷಾಂತ್ಯದ ವರೆಗಿನ ಕಾಲ ತೀರ ತಾಪದಾಯಕವಿದ್ದು ಹಣಕಾಸಿನ ಮುಗ್ಗಟ್ಟನ್ನು ಎದುರಿಸಬೇಕಾಗುವುದಲ್ಲದೆ ಅಪಮಾನಕರ ಪ್ರಸಂಗಗಳನ್ನು ಎದುರಿಸಬೇಕಾಗುತ್ತದೆ. ಕಾರಖಾನೆ, ಟಾಕೀಜ, ಚಾಳಿನ ಮಾಲಕರಿಗೆ ಪೂರ್ವಾರ್ಧವು ಪ್ರಗತಿದಾಯಕ.

ಈ ರಾಶಿಯ ವಧೂವರರಿಗೆ ಈ ವರುಷ ಬಾಸಿಂಗಬಲ ಕೂಡಿ ಬಂದಿದ್ದು ೨೭-೧೦-೧೯೭೩ ರಿಂದ ೧೫-೪-೧೯೭೪ ಒಳಗೆ ವಿವಾಹ ಜರುಗುವದಲ್ಲದೇ ವೈವಾಹಿಕ ಜೀವನ ಆನಂದಮಯವಾಗುತ್ತದೆ. ವಿವಾಹಿತ ಸ್ತ್ರೀ-ಪುರುಷರಿಗೆ ಏಕತ್ರ ಕುಟುಂಬದಲ್ಲಿದ್ದ ತಪ್ಪು ತಿಳುವಳಿಕೆ ವರುಷದ ಪೂರ್ವಾರ್ಧದಲ್ಲಿ ದೂರಾಗಿ ಮತ್ತೆ ಸಾಮರಸ್ಯ ಉಂಟಾಗುತ್ತದೆ. ಅಲ್ಲದೇ ಪರಸ್ಪರ ಹೆಚ್ಚು ಪ್ರೀತಿ ವಿಶ್ವಾಸಗಳಿಂದಿರುತ್ತಾರೆ. ಜನೇವರಿ ೧೪ ರಿಂದ ಎಪ್ರಿಲ್ ೧೫ ರ ಮೂರು ತಿಂಗಳ ಕಾಲದಲ್ಲಿ ಸ್ಥಾವರ ಇಸ್ಟೇಟ ಸಂಪಾದನೆ, ತೀರ್ಥಯಾತ್ರೆ ಸಂದರ್ಶನ, ವಿದೇಶ ಪ್ರವಾಸ ಕೈಕೊಳ್ಳುವ ಯೋಗವಿದೆ.

ಈ ರಾಶಿಯ ಗರ್ಭಿಣಿಯರಿಗೆ ಈ ವರುಷ ಅನುಕೂಲದಾಯಕವಿದೆ. ಹೆರಿಗೆ ಪೂರ್ವಾರ್ಧದಲ್ಲಿ ಜರುಗಿದರೆ ಸುಖಪ್ರದವೂ ಉತ್ತರಾರ್ಧದಲ್ಲಿ ಆದರೆ ಕಷ್ಟಪ್ರದವೂ ಆಗುತ್ತದೆ.

ಈ ರಾಶಿಯ ವಿದ್ಯಾರ್ಥಿಗಳಿಗೆ ಸಮ್ಮಿಶ್ರ ಫಲವಿದೆ. ಪೂರ್ವಾರ್ಧದಲ್ಲಿರುವ ನವಮ ಗುರುವಿನ ಮೂಲಕ ಶಿಕ್ಷಣದಲ್ಲಿ ತೊಂದರೆಯಾಗದೆ ನಿರಾಯಾಸವಾಗಿ ಈ ವರುಷ ದಾಟುತ್ತದೆ. ೨೭-೧೦-೧೯೭೩ ರಿಂಧ ೧೫-೪-೧೯೭೪ರಲ್ಲಿ ಜರುಗುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ಉತ್ತಮ ಶ್ರೇಣಿಯಲ್ಲಿ ತೇರ್ಗಡೆ ಆಗುವದಲ್ಲದೇ ವಿದ್ಯಾರ್ಥಿವೇತನವೂ, ಶಿಷ್ಯವೃತ್ತಿಯೂ ದೊರೆಯುವದಲ್ಲದೇ ಪ್ರಶಸ್ತಿ, ಪದಕವನ್ನೂ ಪಡೆಯುವರು. ಆದರೆ ಎಪ್ರಿಲ್ ೧೬ ರಿಂದ ವರ್ಷಾಂತ್ಯದವರೆಗೆ ಜರಗುವ ಪರೀಕ್ಷೆಗಳಿಗೆ ಕೊಡುವ ವಿದ್ಯಾರ್ಥಿಗಳ ಫಲಿತಾಂಶ ಕಠಿಣವಿರುತ್ತದೆ. ಅಲ್ಲದೆ ವಿದ್ಯಾರ್ಥಿವೇತನ, ಶಿಷ್ಯವೃತ್ತಿಗೆ ಎರವಾಗಬೇಕಾಗುತ್ತದೆ.

ಈ ರಾಶಿಯ ರಾಜಕೀಯ ಸಾಮಾಜಿಕ ಕಾರ್ಯಕರ್ತರಿಗೆ ಪ್ರೋತ್ಸಾಹದಾಯಕವಿರುತ್ತದೆ. ಇದುವರೆಗಿದ್ದ ಶತ್ರುಗಳು ಮಿತ್ರರಾಗಿ ಸಹಾಯ, ಸಹಕಾರವನ್ನೀಯುವರು. ಈ ವರುಷದಲ್ಲಿ ಜರುಗಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ ಜಯ ನಿಶ್ಚಿತ. ಅಲ್ಲದೇ ಅನೇಕ ಸಂಘ ಸಂಸ್ಥೆಗಳ ಪದಾಧಿಕಾರ ಪಡೆಯುವರಲ್ಲದೇ ಜಿಲ್ಲಾ ಮಟ್ಟದ, ರಾಜ್ಯ ಮಟ್ಟದ ಧುರೀಣರಾಗಿ ಜನಪ್ರಿಯತೆ ಗಳಿಸಬಲ್ಲರು.

ಕೋರ್ಟು ಕಚೇರಿಯ ಕೆಲಸದಲ್ಲಿ ಯಾವುದೇ ಪ್ರಕಾರದ ವ್ಯಾಜ್ಯಗಳಲ್ಲಿ ಈ ವರುಷ ಅನುಕೂಲವಿರುತ್ತದೆ. ನ್ಯಾಯ ನಿರ್ಣಯ ಪೂರ್ವಾರ್ಧದಲ್ಲಿ ಜರುಗಿದರೆ ಜಯಮಾಲೆ ನಿಮ್ಮ ಕೊರಳಿಗೆ, ಉತ್ತರಾರ್ಧದಲ್ಲಿ ನಿರ್ಣಯ ದೊರೆತರೆ ರಾಜಿ, ಸಂಧಾನದಿಂದ ಸಾಧ್ಯ. ಇಲ್ಲವಾದಲ್ಲಿ ಹಾನಿಗೊಳಗಾಗುವಿರಿ. ಒಟ್ಟಿನಲ್ಲಿ ಈ ರಾಶಿಯ ಎಲ್ಲ ವರ್ಗದವರಿಗೆ ಈ ವರುಷ ಪ್ರೋತ್ಸಾಹದಾಯಕವಾಗಿದ್ದು ರೂಪಾಯಿಗೆ ಎಂಟು ಆಣೆ ಶುಭ ಫಲವಿರುವದಲ್ಲದೆ, ಪೂರ್ವಾರ್ಧವು ಹೆಚ್ಚು ಅನುಕೂಲದಾಯಕವಾಗಿದೆ,



## ಮಿಥುನ

**ಈ ವರುಷ ಈ ರಾಶಿಯವರಿಗೆ ಮುಂಬರುವ ನವಮ ಗುರುವಿನ ಮೂಲಕ ಸಾಡೇಸಾತಿಯ ಪರಿಣಾಮ ಕಡಿಮೆಯಾಗುವದು.**

ಸಾಡೇಸಾತಿ ಹಾಗೂ ಅಷ್ಟಮ ಗುರುವಿನ ಅನಿಷ್ಟತೆಯಿಂದ ಕಳೆದ ವರುಷ ನಿಮ್ಮ ಜೀವನದ ಮೇಲೆ ಮುಸುಕಿದ್ದ ಕಾರ್ಮೋಡಗಳು ಈ ವರುಷ ಮಧ್ಯದಲ್ಲಿ ಬರುವ ನವಮ ಗುರುವಿನ ಮೂಲಕ ಚದರುವವಲ್ಲದೇ ನಿದ್ರಾರಹಿತವಾದ ಅನೇಕ

ಶಾತ್ರಿಗಳನ್ನು ಕಳೆವಂಥ ನೀವು ಈ ವರುಷ ಸುಖ–ಶಾಂತಿಯನ್ನು ಹೊಂದುವಿರಿ. ನಿಮ್ಮ ಆರೋಗ್ಯ ವರ್ಷವಿಡೀ ಉತ್ತಮವಿದ್ದಾಗ್ಯೂ, ಜನೇವರಿ ೧೪ ರಿಂದ ಫೆಬ್ರುವರಿ ೧೨ ರ ವರೆಗೆ ಹಾಗೂ ಮೇ ೧೫ ರಿಂದ ಜುಲೈ ೧೮ ರ ವರೆಗಿನ ಈ ಮೂರು ತಿಂಗಳ ಕಾಲ ಮಾತ್ರ ಶಾರೀರಕ ಕಿರುಕಳ ಪೀಡೆಯನ್ನು ಅನುಭವಿಸಬೇಕಾಗುತ್ತದೆ. ನಿಮ್ಮ ಆರ್ಥಿಕಸ್ಥಿತಿ ಈ ವರುಷ ಸುಧಾರಿಸುತ್ತವೆ, ಫೆಬ್ರುವರಿ ೧೪ರಿಂದ ಮೇ ೧೫ರ ವರೆಗಿನ ಅವಧಿಯಲ್ಲಿ ನಿರೀಕ್ಷಿಸಿದ ಮೂಲದಿಂದ ಹಣ ಸಂದಾಯವಾಗುವುದರಿಂದ ಸಾಲಗಾರರ ಕಾಟದಿಂದ ಮುಕ್ತರಾಗುವಿರಿ. ಆದರೆ ೨೬–೧೦–೧೯೭೩ ರಿಂದ ೧೫–೨–೧೯೭೪ ರ ಅವಧಿಯಲ್ಲಿ ಆದಾಯಕ್ಕಿಂತ ವೆಚ್ಚ ವಿಪರೀತ ಬೆಳೆದು ಸಾಲಗಾರರ ಉಪಟಳದಿಂದಾಗಿ ಮೊದಲೇ ಸೂಕ್ಷ್ಮಮತಿಗಳಾದ ನೀವು ಇನ್ನಷ್ಟು ಮಾನಸಿಕ ಅಸ್ವಸ್ಥತೆಯನ್ನು ಹೊಂದುವಿರಿ.'

ಕೋರ್ಟು–ಕಚೇರಿಯ ವ್ಯವಹಾರ ದಾವೆ ಫಿರ್ಯಾದಿಗಳ ವ್ಯಾಜ್ಯಗಳಲ್ಲಿ ಫೆಬ್ರುವರಿ ೧೨ರ ನಂತರ ಜಯ ಲಭಿಸುತ್ತದೆ. ಆದುದರಿಂದ ಅಲ್ಲಿಯ ವರೆಗೆ ಮುಂದೂಡುವದೇ ವಿಹಿತಕರವು. ಫೌಜದಾರಿ ಮೊಕದ್ದಮೆಗಳಿಗೆ ಉತ್ತರಾರ್ಧವು, ದಿವಾಣಿ ಮೊಕದ್ದಮೆಗಳಿಗೆ ಪೂರ್ವಾರ್ಧವು. ರಾಜಕೀಯ ಮೊಕದ್ದಮೆಗಳಿಗೆ ಮಧ್ಯಕಾಲವು ಅನುಕೂಲಕರವಾಗಿದೆ.

ಈ ರಾಶಿಯ ನೌಕರ ವರ್ಗದವರಿಗೆ ಈ ವರುಷದ ಮಧ್ಯದಿಂದ ಬರುವ ನವಮ ಗುರುವಿನ ಶುಭ ಫಲದ ಮೂಲಕ ಅನುಕೂಲ ಕಾಲ ಬರುತ್ತದೆ. ಕಳೆದ ವರುಷ ಉಂಟಾಗಿದ್ದ ವರಿಷ್ಠರ ಅವಕೃಪೆ ದೂರವಾಗುತ್ತದಲ್ಲದೇ ಫೆಬ್ರುವರಿ ೧೨ ರಿಂದ ಮೇ ೧೫, ಆಗಸ್ಟ ೧೫ ರಿಂದ ಸಪ್ಟಂಬರ ೧೫ ರ, ಅವಧಿಯಲ್ಲಿ ನಿರುದ್ಯೋಗಿಗಳಿಗೆ ಉದ್ಯೋಗ ಲಭಿಸುವಿಕೆ, ಹಂಗಾಮಿ ನೌಕರವರ್ಗದವರಿಗೆ ಕಾಯಂ ಆಗಿ ಅನುಕೂಲ ಜಾಗೆಗೆ ಬದಲಿಯೊಂದಿಗೆ ಬಡತಿ ದೊರೆಯುವ ಮೊದಲಾದ ಶುಭ ಫಲಗಳು ದೊರೆಯುವವು. ಕಾರಖಾನೆ, ಗಿರಣಿ, ಹಾಗೂ ಖಾಸಗೀ ಕೆಲಸಗಾರರಿಗೂ, ಕಾರ್ಮಿಕ ವರ್ಗದವರಿಗೂ, ಪ್ರವಾಸಿ ಕೆಲಸಗಾರರಿಗೆ ೧೫–೧೧-೭೩ ರಿಂದ ೧೫-೫-೭೪ ರ ವರೆಗಿನ ಕಾಲವು ಪ್ರಗತಿದಾಯಕವಿರುತ್ತದೆ. ಈ ರಾಶಿಯ ಕೃಷಿಕರಿಗೆ ಪೂರ್ವಾರ್ಧವು ಪ್ರಗತಿದಾಯಕವಿದ್ದು, ಒತ್ತಿ ಹಾಕಿದ್ದ ಹೊಲ ಮನೆಗಳನ್ನು ಬಿಡಿಸಿಕೊಳ್ಳುವರಲ್ಲದೇ ಸ್ವಂತ ಬೇಸಾಯದಲ್ಲಿ ಪ್ರಗತಿ ಲಭಿಸುವುದು. ೧೫–೧೧-೭೩ ರಿಂದ ೧೫–೫–೭೪ ರ ಅವಧಿಯಲ್ಲಿ ಕೃಷಿಗೆ ಬೇಕಾಗುವ ಉಪಕರಣ, ಯಂತ್ರ. ಮಶಿನರಿ, ಸಾಮುಗ್ರಿಗಳನ್ನು ಕೊಳ್ಳುವ ಸಾಮರ್ಥ್ಯ ಉಂಟಾಗುತ್ತದೆ. ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರು ಟಾಕೀಜ. ಕಾರಖಾನೆ, ಗಿರಣಿ, ಚಾಳಮಾಲಕ ವರ್ಗದವರಿಗೂ ಈ ವರುಷ ಪ್ರೋತ್ಸಾಹದಾಯಕವಾಗಿದೆ. ಕಳೆದ ವರುಷ ಕುಂಠಿತವಾಗಿದ್ದ ಪಾಲುಗಾರಿಕೆಯ ವ್ಯವಹಾರ ಮತ್ತೆ ಫೆಬ್ರುವರಿ ೧೫ ರ ಅವಧಿಯಲ್ಲಿ ಊರ್ಜಿತವಾಗುತ್ತದಲ್ಲದೆ ಸಟ್ಟಾ, ಥೋಕ, ಕಮಿಶನ್, ಏಜನ್ಸಿ ಹುಂಚಿಕೆವಾರಿಕೆ ಮೊದಲಾದ ಹೋಲಶೇಲ್, ವ್ಯಾಪಾರಸ್ಥರು ಚೈತ್ರದಿಂದ ಬರುವ ಷಷ್ಠಮ ರಾಹುವಿನ ಮೂಲಕ ಅಗಣಿತ ಹಣ ಸಂಪಾದಿಸುವರು. ಈ ರಾಶಿಯ ಬುದ್ಧಿಜೀವಿ, ಸಾಹಿತಿ, ಕಲಾವಿದರಿಗೆಲ್ಲ ಫೆಬ್ರುವರಿ ೧೫ ರಿಂದ ಅನುಕೂಲ ಕಾಲವಿರುತ್ತದೆ. ಅದರಲ್ಲಿಯೂ ಫೆಬ್ರುವರಿ ೧೫ ರಿಂದ ಮೇ ೧೫ ರ ವರೆಗೂ ಹಾಗೂ ಆಗಸ್ಟ ೧೫ ರಿಂದ ಸಪ್ಟಂಬರ ೧೫ ರ ನಾಲ್ಕು ತಿಂಗಳ ಕಾಲ ಒಳ್ಳೆ ಉತ್ಕೃಷ್ಟದ ಕಾಲವಿದ್ದು, ಈ ಅವಧಿಯಲ್ಲಿ ಉದ್ಯೋಗದಲ್ಲಿ ಪ್ರಗತಿ, ಸ್ಥಿರತೆ, ಸರಕಾರ ಹಾಗೂ ಸಂಘ, ಸಂಸ್ಥೆಗಳಿಂದ ಮಾನ ಸನ್ಮಾನ, ಪಡೆಯುವಿಕೆ, ಪ್ರಶಸ್ತಿಪದಕ ಬಿರಾದು–ಬಾವಲಿಗಳು ಲಭಿಸುವಿಕೆ, ಮೊದಲಾದ ಶುಭಘಟನೆಗಳು ಜರಗುವವು. ಆದರೆ ೨೬–೧೦–೭೩ ರಿಂದ ೧೪–೨–೭೪ ರ ವರೆಗಿನ ಕಾಲ ತೀವ್ರ ಪ್ರತಿಕೂಲವಿದ್ದು, ಈ ಕಾಲದಲ್ಲಿ ಉದ್ಯೋಗದಲ್ಲಿ ಹಾನಿ, ಆರ್ಥಿಕ ಚಿಂತೆ ಉಂಟಾಗಿ ಅನೇಕ ಅವಮಾನಕಾರಕ ಪ್ರಸಂಗಗಳನ್ನು ಎದುರಿಸಬೇಕಾಗುತ್ತದೆ.

ಈ ರಾಶಿಯ ವಿದ್ಯಾರ್ಥಿಗಳಿಗೆ ಈ ವರುಷ ಪ್ರೋತ್ಸಾಹದಾಯಕವಿರುತ್ತದಲ್ಲದೇ ಕಳೆದ ವರುಷದಿಂದ ಅರ್ಧಕ್ಕೆ ನಿಂತಿದ್ದ, ಶಿಕ್ಷಣ ಮತ್ತೆ ಮುಂದುವರಿಯುತ್ತದೆ. ಫೆಬ್ರುವರಿ ೧೫ ರಿಂದ ಮೇ ೧೫ ಮಧ್ಯ ಜರುಗುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ಉಚ್ಚಶ್ರೇಣಿಯಲ್ಲಿ ತೇರ್ಗಡೆ ಆಗಿ ಪ್ರಶಸ್ತಿಪದಕಗಳನ್ನು ಪಡೆಯುವರಲ್ಲದೇ ವಿದ್ಯಾರ್ಥಿವೇತನವನ್ನು, ಶಿಷ್ಯವೃತ್ತಿಯನ್ನು ಪಡೆಯುವರು. ಹೆಚ್ಚಿನ ಶಿಕ್ಷಣಕ್ಕಾಗಿ ಇಲ್ಲವೆ ಸಂಶೋಧನೆಗಾಗಿ ವಿದೇಶಪ್ರವಾಸದ ಯೋಗವು ಈ ವರ್ಷದಲ್ಲಿದೆ. ಈ ರಾಶಿಯ ರಾಜಕೀಯ ಸಾಮಾಜಿಕ ಕಾರ್ಯಕರ್ತರಿಗೆ ಈ ವರುಷ ಉತ್ಸಾಹದಾಯಕವಿದೆ. ಶತ್ರುಗಳು ಮಿತ್ರರಾಗುವರಲ್ಲದೇ ಸಲ್ಲದ ಆಪವಾದಗಳಿಗೆ ಗುರಿಯಾಗಿದ್ದ ನೀವು ಮಾರ್ಚ ೧೫ ರ ನಂತರ ದೋಷಮುಕ್ತರಾಗುವಿರಿ. ಅನೇಕ ಸಂಘಸಂಸ್ಥೆಗಳಿಗೆ ಪದಾಧಿಕಾರಿಗಳಾಗಿ ಕಳೆದುಕೊಂಡಿದ್ದ ಸ್ಥಾನಮಾನ ಪುನಃ ಪಡೆಯುವಿರಿ. ಫೆಬ್ರುವರಿ ೧೫ ರ ನಂತರ ಜರಗಲಿರುವ ಯಾವದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ ಅತ್ಯಧಿಕ ಮತಗಳಿಂದ ಆಯ್ಕೆ ಆಗುತ್ತದೆ.

ಕಳೆದ ಅನೇಕ ವರುಷಗಳಿಂದ ಪ್ರಯತ್ನಿಸುತ್ತಿರುವ ಈ ರಾಶಿಯ ವಧೂವರರಿಗೆ ಈ ವರುಷ ಬಾಶಿಂಗ ಬಲ ಕೂಡಿಬಂದಿರುವದಲ್ಲದೇ ಫೆಬ್ರುವರಿ ೧೫ ರಿಂದ ಜುಲೈ ೧೫ ರ ಅವಧಿಯಲ್ಲಿ ವಿವಾಹ ಜರುಗುತ್ತದೆ. ಈ ರಾಶಿಯ ವಿವಾಹಿತರಿಗೂ ಈ ವರುಷ ಉತ್ತಮವಿದ್ದು ಮಿಥ್ಯಾಪವಾದದಿಂದಲೂ ಗೃಹಕಲಹದಿಂದಲೂ ಕದಡಿದ ಮನೆಯ ವಾತಾವರಣ ತಿಳಿಯಾಗುವದಲ್ಲದೆ ಒಡೆದುಹೋದ ಏಕತ್ರ ಕುಟುಂಬ ಮತ್ತೆ ಒಂದುಗೂಡಿ ಪರಸ್ಪರ ವಿಶ್ವಾಸ, ಪ್ರೀತಿ ಕುದುರುತ್ತದೆ. ನವಮ ಗುರುವಿನ ಶುಭ ಫಲದಿಂದ ತೀರ್ಥಯಾತ್ರೆ ಸಂದರ್ಶನ, ಸ್ಥಾವರ ಇಸ್ಟೇಟ ಸಂಪಾದನೆ, ಬೆಲೆಯುಳ್ಳ ವಸ್ತು ಒಡವೆಗಳ ಖರೀದಿ, ಮೊದಲಾದ ಶುಭ ಸಂಗತಿಗಳು ಜರುಗುವವು.

ಈ ರಾಶಿಯ ಗರ್ಭವತಿಯವರಿಗೆ ಈ ವರುಷ ಸಮ್ಮಿಶ್ರ ಫಲವಿದೆ. ೨೬-೧೦-೭೩ ರಿಂದ ೧೫–೨–೭೪ ರ ಒಳಗೆ ಹಾಗೂ ಮೇ ೧೫ ರಿಂದ ಜುಲೈ ೧೫ ರ ಅವಧಿಯಲ್ಲಿ ಹೆರಿಗೆಯಾದರೆ ಅಂಥವರ ಪ್ರಸೂತಿಯು ಕಷ್ಟದಾಯಕವಾಗಿದ್ದು ಶಸ್ತ್ರಕ್ರಿಯೆ ಅನಿವಾರ್ಯವಾಗುತ್ತದೆ. ಆದರೆ ಫೆಬ್ರುವರಿ ೧೫ ರಿಂದ ಮೇ ೧೫ ರ ಒಳಗೆ ಹಾಗೂ ಜುಲೈ ೧೬ ರ ನಂತರ ಹೆರಿಗೆಯಾದರೆ ಸುಖಪ್ರಸವವಾಗುತ್ತದೆ.

ಒಟ್ಟಿನಲ್ಲಿ ಈ ರಾಶಿಯ ಎಲ್ಲ ವರ್ಗದವರಿಗೆ ಫೆಬ್ರುವರಿ ೫ ರ ನಂತರ ಅನುಕೂಲ ಕಾಲ ಬರುತ್ತದಲ್ಲದೆ ರೂಪಾಯಿಗೆ ೧೦ ಆಣೆ ಶುಭ ಫಲ ಈ ವರುಷ ದೊರೆಯುತ್ತದೆ. ಮೃಗಶಿರಾ ಕೊನೆಯ ಎರಡು ಚರಣದ ಮಿಥುನ ರಾಶಿಯವರಿಗೂ ಆರಿದ್ರಾ ನಕ್ಷತ್ರದವರಿಗೂ ಶುಭಫಲ ಹೆಚ್ಚು ಪ್ರಮಾಣದಲ್ಲಿದ್ದರೆ, ಪುನರ್ವಸು ನಕ್ಷತ್ರದ ಮಿಥುನ ರಾಶಿಯವರಿಗೆ ಕಡಿಮೆಪ್ರಮಾಣದ ಶುಭಫಲವಿದ್ದು ಅಶುಭಫಲವೇ ಹೆಚ್ಚಾಗಿರುತ್ತದೆ.



## ಕರ್ಕ

**ಈ ವರುಷ ಈ ರಾಶಿಯವರಿಗೆ ಸಾಡೇಸಾತಿ ಹಾಗೂ ಅಷ್ಟಮ ಗುರುವಿನ ಅನಿಷ್ಟತೆಯಿಂದ ಕೌಟುಂಬಿಕ ವಿರಸ. ಶಾರೀರಕ ಪೀಡೆ, ಮೊದಲಾದ ತೊಂದರೆಗಳ, ಮಾನಸಿಕ ಅಶಾಂತತೆಯ ಕಾಲವಿದಾಗಿದೆ.**

ಮೊದಲನೇ ಸಾಡೇಸಾತಿ ಹಾಗೂ ಫೆಬ್ರುವರಿ ೯ ರಂದು ಬರುವ ಅಷ್ಟಮ ಗುರುವಿನ ಅನಿಷ್ಟತೆ ಅಂದಬಳಿಕ ಕೇಳಬೇಕೆ ನಿಮ್ಮ ಪರಿಸ್ಥಿತಿ? ಪ್ರಾಮಾಣಿಕ, ಬುದ್ಧಿವಂತ, ಪ್ರತಿಷ್ಠಿತರೆಂದು ಕೀರ್ತಿ ಪಡೆದ ನಿಮ್ಮನ್ನು ಜನ ಈಗ ತಿರಸ್ಕಾರದಿಂದ ಕಾಣತೊಡಗುವರು. ಬದಲಾದ ಪರಿಸ್ಥಿತಿಯನ್ನು ಧೈರ್ಯದಿಂದ ಎದುರಿಸಬೇಕಲ್ಲದೇ ಹತಾಶರಾಗಬೇಡಿರಿ. ಪ್ರಾಣದೇವನನ್ನು, ಶ್ರೀ ಗುರುದತ್ತನನ್ನು ಭಜಿಸಿರಿ. ಎಲ್ಲವೂ ಸರಿಯಾಗುತ್ತದೆ. ಈ ರಾಶಿಯವರ ಆರೋಗ್ಯ ವರ್ಷವಿಡೀ ಚನ್ನಾಗಿರದು. ಅದರಲ್ಲಿಯೂ ಫೆಬ್ರುವರಿ ೧೨ರಿಂದ ಮಾರ್ಚ ೧೫ರ ವರೆಗ ಹಾಗೂ ಜೂನ್ ೧೫ರಿಂದ ಸಪ್ಟಂಬರ ೧೫ರ ವರೆಗಿನ ಅವಧಿಯಲ್ಲಿ ರೋಗ ಉಲ್ಬಣವಾಗುವದಲ್ಲದೇ ಸಂಶಯ ಪ್ರವೃತ್ತಿಯುವರಾದ ನೀವು ಆರೋಗ್ಯ ಸುಧಾರಿಸದೆಂಬ ಚಿಂತೆಯಲ್ಲಿಯೇ ಸದಾ ಇರುವಿರಿ, ಅಲ್ಲದೇ ಇದೇ ಅವಧಿಯಲ್ಲಿ ಅಪಘಾತದ ಭಯವೂ ಉಂಟು. ಆದುದರಿಂದ ಈ ಕಾಲದಲ್ಲಿ ಈ ರಾಶಿಯ ತಾಂತ್ರಿಕ ವರ್ಗದವರೂ, ವಾಹನ ಚಾಲಕರೂ ವಿಶೇಷ ಎಚ್ಚರಿಕೆಯಲ್ಲಿರುವುದು ಅವಶ್ಯ. ನಿಮ್ಮ ಆರ್ಥಿಕ ಸ್ಥಿತಿಯು ಈ ವರುಷ ಗಂಭೀರ ಸ್ವರೂಪ ತಾಳುವುದು. ಡಾಕ್ಟರ, ವಕೀಲರ ಬಿಲ್ಲುಗಳು ಹಾಗೂ ಅತಿಥಿಗಳ ಸತ್ಕಾರದಲ್ಲಿಯೇ ನಿಮ್ಮ ಹಣ ಖರ್ಚಾಗುವುದು. ಆದಾಯ ಅಲ್ಪ, ವೆಚ್ಚ, ವಿಪರೀತ, ಸಾಲಗಾರರ ಕಾಟದಿಂದಾಗಿ ಹೊಸ ಸಾಲಕ್ಕಾಗಿ ಪರದಾಟ. ಆದಾಗ್ಯೂ ೧೫–೧೨–೭೩ ರಿಂದ ೧೨–೨–೭೪ ರ ವರೆಗೆ ಹಾಗೂ ಮಾರ್ಚ ೧೫ರಿಂದ ಜೂನ್ ೧೫ರ ಅವಧಿಯಲ್ಲಿ ನಿರೀಕ್ಷಿಸಿದ ಮೂಲದಿಂದ ಹಣಕಾಸಿನ ಸಹಾಯ ಲಭಿಸುವುದರಿಂದ ಅವಮಾನದ ಪ್ರಸಂಗ ತಪ್ಪುವುದು. ಆದರೆ ಫೆಬ್ರುವರಿ ೧೩ರಿಂದ ಮಾರ್ಚ ೧೪ರ ಕಾಲ ಹಾಗೂ ಜೂನ ೧೬ರಿಂದ ಸಪ್ಟಂಬರ ೧೮ರ ವರೆಗಿನ ಅವಧಿಯಲ್ಲಿ ಆರ್ಥಿಕ ಸ್ಥಿತಿ ಗಂಭೀರ ಸ್ವರೂಪ ತಾಳಿ ನಿಮ್ಮ ಸತ್ವಪರೀಕ್ಷೆ ಆಗುವದಾದರೂ ಅದರಿಂದ ಪಾರಾಗುವಿರಿ.

ಈ ರಾಶಿಯ ನೌಕರ ವರ್ಗದವರಿಗೆ ಈ ವರುಷ ಪ್ರತಿಕೂಲವಿದೆ. ಪೂರ್ವಾರ್ಧಕ್ಕಿಂತ ಉತ್ತರಾರ್ಧದ ಕಾಲ ತೀರ ತಾಪದಾಯಕವಾಗಿದೆ. ಫೆಬ್ರುವರಿ ೧೨ ರಿಂದ ಮಾರ್ಚ ೧೫ರ ವರೆಗೆ, ಜೂನ ೧೬ ರಿಂದ ಆಗಸ್ಟ ೧೫ ರವರೆಗೆ ಹಾಗೂ ಅಕ್ಟೋಬರ ೧೮ ರಿಂವ ವರ್ಷಾಂತ್ಯದ ವರೆಗಿನ ಕಾಲವು ತೀರ ತಾಪದಾಯಕವಿರುವದರಿಂದ ಈ ಅವಧಿಯಲ್ಲಿ ಅನಪೇಕ್ಷಿತ ಸ್ಥಳಕ್ಕೆ ಬದಲಿ ಆಗುವುದಲ್ಲದೆ ವರಿಷ್ಠರಿಂದ ಅಸಹನೀಯ ಕಿರುಕುಳ ಉಂಟಾಗುವದರಿಂದ ನೌಕರಿಗೆ ರಾಜೀನಾಮೆ ನೀಡುವ ಪ್ರಸಂಗವೂ ಉಂಟು. ಆದರೆ ತಾಳ್ಮೆಯಿಂದ ಪರಿಸ್ಥಿತಿಯನ್ನು ಎದುರಿಸಿರಿ. ಪರಮಾತ್ಮನ ಕೃಪೆಯಿಂದ ಎಲ್ಲವೂ ಸರಿಯಾಗುತ್ತದೆ. ನಿರುದ್ಯೋಗಿಗಳಿಗೆ ಈ ವರುಷ ಚೆನ್ನಾಗಿರುವುದಿಲ್ಲ; ಆದರೆ ಡಿಶೆಂಬರ ೧೬ ರಿಂದ ಜನೇವರಿ ೧೪ ರ ವರೆಗೆ ಮತ್ತು ಮಾರ್ಚ ೧೫ ರಿಂದ ಜೂನ ೧೫ರ ವರೆಗಿನ ಕಾಲ ತುಸು ಉತ್ಸಾಹದಾಯಕವಾಗಿದ್ದು ನಿಮ್ಮ ಮನೋಭಿಲಾಷೆ ಕೆಲಮಟ್ಟಿಗೆ ಈಡೇರುವುದು. ಹಂಗಾಮಿ ನೌಕರಧಾರರಿಗೆ ಅಸ್ಥಿರ ಪರಿಸ್ಥಿತಿಯೇ ಮುಂದುವರಿಯುವದರಿಂದ ವರ್ಷವಿಡೀ ಚಿಂತೆಯಲ್ಲಿ ಕಳೆಯಬೇಕಾಗುತ್ತದೆ. ಬಾಹ್ಯ ಕೆಲಸಗಾರ, ಪ್ರವಾಸೀ ಕೆಲಸಗಾರ, ತಾಂತ್ರಿಕ ವರ್ಗದವರು, ಕಾರಖಾನೆ, ಗಿರಣಿ ಕಾರ್ಮಿಕವರ್ಗದವರಿಗೆಲ್ಲ. ಈ ವರುಷ ಪ್ರತಿಕೂಲವಿದ್ದಾಗ್ಯೂ ಪೂರ್ವಾರ್ಧ ಉತ್ತೇಜಕರವಾಗಿದ್ದರೆ ಉತ್ತರಾರ್ಧವು ಚಿಂತಾಜನಕವಾಗಿರುತ್ತದೆ. ಈ ರಾಶಿಯ ಕೃಷಿಕರಿಗೆ ಪೂರ್ವಾರ್ಧವು ಪ್ರಗತಿದಾಯಕವಿರುವದರಿಂದ ನಿರೀಕ್ಷಿಸಿದಷ್ಟು ಬೆಳೆ, ಪೀಕು, ಬರುತ್ತದೆ. ಆದರೆ ಉತ್ತರಾರ್ಧದಲ್ಲಿ ಅನೇಕ ಜಟಿಲ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದಲ್ಲದೆ ಅಜ್ಜ ನೂತದ್ದೆಲ್ಲ ಮೊಮ್ಮಗನ ಉಡದಾರಕ್ಕೆ ಎಂಬ ಹಾಗೆ ಪೂರ್ವಾರ್ಧದಲ್ಲಿ ಗಳಿಸಿದ್ದನ್ನು ಉತ್ತರಾರ್ಧದಲ್ಲಿ ಉಳಿಸುವದೇ ದುಸ್ಸಾಧ್ಯವಾಗುತ್ತದೆ. ಮುಂಬರುವ ಬೇಸಾಯವನ್ನು ಸಾಗಿಸುವದೇ ಕಠಿಣವಾಗಿ ಹೊಲ ಮನೆಗಳನ್ನು ಒತ್ತಿ ಹಾಕುವ ಪ್ರಸಂಗವೂ ಬರಬಹುದಾಗಿದೆ. ಈ ರಾಶಿಯ ಸ್ವತಂತ್ರ ವ್ಯಾಪಾರೋದ್ಯಮಿಗಳಿಗೆ ಉತ್ಸಾಹದಾಯಕವಾದ ವರ್ಷವಿದಾಗಿಲ್ಲ. ಸರಕಾರದ ನಿರ್ಬಂಧನೆಗಳನ್ನು ಎದುರಿಸಬೇಕಾಗುತ್ತದೆ. ಹೊಸ ಉದ್ಯಮಗಳನ್ನು ಆರಂಭಿಸಬೇಕೆಂಬ ವಿಚಾರ ಈ ವರುಷ ಬಿಟ್ಟುಕೊಡುವುದೇ ಹಿತಕರವು. ಠೋಕ ವ್ಯಾಪಾರಸ್ಥರಿಗೂ, ಕಮೀಶನ್ ಎಜೆಂಟರಿಗೂ, ಹಂಚಿಕೆದಾರರಿಗೂ, ಕಾರಖಾನೆ, ಗಿರಣಿ, ಚಾಳ, ಟಾಕೀಜ ಮಾಲಕ ವರ್ಗದವರಿಗೂ ನವಂಬರ ೧. ರಿಂದ ಜನೇವರಿ ೧೪ ರವರೆಗೆ ಹಾಗೂ ಮಾರ್ಚ ೧೫ರಿಂದ ಜೂನ ೧೫ರ ವರೆಗಿನ ಐದು ತಿಂಗಳಕಾಲ ಮಾತ್ರ ಉತ್ತೇಜಕವಿದ್ದು, ಮಿಕ್ಕ ಕಾಲ ನಿರುತ್ಸಾಹದಾಯಕವಿರುತ್ತದೆ. ಬುದ್ಧಿಜೀವಿ ಕಲಾವಿದ, ಲೇಖಕ, ಶಿಕ್ಷಕ ವರ್ಗದವರಿಗೆ ಈ ವರುಷ ಅತ್ಯಂತ ಪ್ರತಿಕೂಲವಿದೆ. ಉದ್ಯೋಗದಲ್ಲಿ ಚಟುವಟಿಕೆ ಇರದು. ಮಿತ್ರರು ಶತ್ರುಗಳಾಗುವದರಿಂದ ಮಿಥ್ಯಾಪವಾದಗಳನ್ನು ಎದುರಿಸಬೇಕಾಗುತ್ತದೆ. ನವಂಬರ ೧೫ ರಿಂದ ಜನೇವರಿ ೧೪ರವರೆಗೆ ಹಾಗೂ ಎಪ್ರಿಲ್ ೧೨ ರಿಂದ ಜೂನ ೧೫ರ ವರೆಗಿನ ಅವಧಿ ಮಾತ್ರ ಉತ್ತೇಜಕರವಾಗಿದೆ.

ಈ ರಾಶಿಯ ವಧೂವರರ ವಿವಾಹವು ಪೂರ್ವಾರ್ಧದಲ್ಲಿ ಜರುಗಿದರೆ ಮಾತ್ರ ತೊಂದರೆ ಕಡಿಮೆ. ಉತ್ತರಾರ್ಧದಲ್ಲಿ ಮದುವೆ ಗೊತ್ತಾದರೂ ಬಿಡುಗಡೆಯಾಗುವ ಸಂಭವ ಹೆಚ್ಚು. ಅಕ್ಟೋಬರ ೨೭ ರಿಂದ ಫೆಬ್ರುವರಿ ೧೨ರ ಒಳಗೆ ಇಲ್ಲವೇ ಮಾರ್ಚ ೧೫ ರಿಂದ ಜೂನ ೧೫ರ ಒಳಗಿನ ಕಾಲದಲ್ಲಿ ಕಂಕಣಬಲ ಕೂಡಿಬರುವದಲ್ಲದೆ, ವಿವಾಹ ಸಾಂಗಗೊಳ್ಳುತ್ತದೆ. ವಿವಾಹಿತರಿಗೆ ಈ ವರುಷ ಪ್ರತಿಕೂಲವಿದೆ. ಜೀವನದ ಜೋಕಾಲ್ಯಾಲೆಯಲ್ಲಿ ಸುಖದ ಸೋಪಾನ ಹತ್ತಿ ಕಷ್ಟಕಾರ್ಪಣ್ಯದ ಸುಳಿವೂ ಅರಿಯದಂತೆ ಸಂಸಾರದಲ್ಲಿ ರಸನಿಮಿಷಗಳನ್ನು ಅನಂತವಾಗಿ ಅನುಭವಿಸಿ ಮನೆಯೆಂದರೆ ಸ್ವರ್ಗ ಸಮಾನವೆಂದು ತಿಳಿದಿದ್ದ ನಿಮಗೆ ಈ ವರುಷ ಅದೇ ಮನೆಯು ಹರಿದು ತಿಂದಂತಿರುತ್ತದೆ. ನಿತ್ಯದ ಗೃಹಕಲಹದಿಂದ ಸ್ವರ್ಗದಂತಿದ್ದ ಮನೆಯು ಇಂದು ಸ್ಮಶಾನದಂತೆ ಗೋಚರವಾಗುತ್ತದೆ. ಏಕತ್ರಕುಟುಂಬ ಒಡೆದು ಹೋಗುತ್ತದೆ. ತಾಳ್ಮೆಯಿಂದ ಎಲ್ಲವನ್ನು ಎದುರಿಸಿರಿ.

ಈ ರಾಶಿಯ ಗರ್ಭಿಣಿಯರಿಗೆ ಅಷ್ಟಮ ಗುರುವಿನಿಂದಾಗಿ ಪ್ರತಿಕೂಲವಿದೆ. ಹೆರಿಗೆ ಪೂರ್ವಾರ್ಧದಲ್ಲಿ ಜರುಗಿದರೆ ಸುಖಪ್ರದವೂ ಉತ್ತರಾರ್ಧದಲ್ಲಿ ಜರುಗಿದರೆ ಕಷ್ಟಪ್ರದವೂ ಆಗುತ್ತದೆ.

ಈ ರಾಶಿಯ ವಿದ್ಯಾರ್ಥಿಗಳಿಗೆ ಈ ವರುಷ ತೀರ ಅನಿಷ್ಟದಾಯಕವಿದೆ. ಶಿಕ್ಷಣ ಮುಂದುವರಿಸುವದೇ ಕಷ್ಟವಾಗುತ್ತದೆ. ಅಕ್ಟೋಬರ ೨೭ ರಿಂದ ಫೆಬ್ರುವರಿ ೧೨ ರ ವರೆಗೆ ಹಾಗೂ ಮಾರ್ಚ ೧೫ ರಿಂದ ಜೂನ ೧೫ ರ ಒಳಗಿನ ಅವಧಿಯಲ್ಲಿ ಪರೀಕ್ಷೆಗೆ ಕಟ್ಟುವವರು ತೇರ್ಗಡೆ ಆಗುವರೇನೋ ನಿಜ; ಆದರೆ ದರ್ಜೆ, ಶ್ರೇಣಿ ಈ ವರುಷ ಪಡೆಯುವುದು ಕಷ್ಟದಾಯಕ. ಅದರೆ ಫೆಬ್ರುವರಿ ೧೨ ರಿಂದ ಮಾರ್ಚ ೧೫ ರ ಮಧ್ಯ ಹಾಗೂ ಜೂನ ೧೫ ರ ವರೆಗೆ ಜರುಗುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳ ಫಲಿತಾಂಶ ಸಂಶಯದಾಯಕ.

ಈ ರಾಶಿಯ ರಾಜಕೀಯ ಹಾಗೂ ಸಾಮಾಜಿಕ ಕಾರ್ಯಕರ್ತರಿಗೆ ಈ ವರುಷ ಪ್ರತಿಕೂಲವಾಗಿದೆ. ಸ್ಥಾನಮಾನದಿಂದ ಕೆಳಗಿಳಿಸಲ್ಪಡುವ ಸಂಭವವಿದೆ. ಮಿತ್ರರು ಶತ್ರುಗಳಾಗಿ ಅವಿಶ್ವಾಸ ವ್ಯಕ್ತಪಡಿಸುವದರಿಂದ ನೀವು ಅಧಿಕಾರ ಸ್ಥಾನದಿಂದ ಕೆಳಗಿಳಿಯಬೇಕಾಗುತ್ತದೆ. ಅಲ್ಲದೇ ಸಲ್ಲದ ಅಪವಾದಕ್ಕೆ ಗುರಿಯಾಗುತ್ತೀರಿ. ಚುನಾವಣೆಯ ಜಂಜಾಟದಿಂದ ಈ ವರುಷ ದೂರ ಉಳಿಯುವುದೇ ಹಿತಕರವು.

ದಾವೆ ಫಿರ್ಯಾದಿ ಮೊದಲಾದ ಕೋರ್ಟಿನ ವ್ಯವಹಾರ ಈ ವರುಷ ಕೈಕೊಳ್ಳದಿರುವದೇ ಹಿತಕರವು. ಫೌಜದಾರಿ ಹಾಗೂ ರಾಜಕೀಯ ದಾವೆಗಳಿಗಂತೂ ಈ ವರುಷ ಪ್ರತಿಕೂಲವಿದೆ. ಆದರೆ ದಿವಾಣಿ ವ್ಯಾಜ್ಯಗಳಿಗೆ ಮಾತ್ರ ಪೂರ್ವಾರ್ಧದಲ್ಲಿ ನಿರ್ಣಯ ದೊರೆತರೆ ಜಯ, ಉತ್ತರಾರ್ಧದಲ್ಲಿ ದೊರೆತರೆ ಅಪಯಶ ಉಂಟಾಗುತ್ತದೆ.

ಒಟ್ಟಿನಲ್ಲಿ ಈ ರಾಶಿಯವರಿಗೆ ಈ ವರುಷ ಚಿಂತಾದಾಯಕವಾದರೆ ಡಿಶೆಂಬರ ೧೫ ರಿಂದ ಜನೇವರಿ ೧೪ ವರೆಗಿನ ಹಾಗೂ ಮಾರ್ಚ ೧೫ ರಿಂದ ಜೂನ ೧೫ ರ ವರೆಗಿನ ನಾಲ್ಕು ತಿಂಗಳ ಕಾಲ ಮಾತ್ರ ಅನುಕೂಲ ಇರುವದರಿಂದ ಕಾಲು ಭಾಗ ಶುಭ ಫಲವೂ ಮುಕ್ಕಾಲು ಭಾಗ ಅಶುಭ ಫಲವೂ ದೊರೆಯುತ್ತದೆ. ಅದರಲ್ಲಿಯೂ ಪುನರ್ವಸು ಪುಷ್ಯದ ಕರ್ಕರಾಶಿಯವರಿಗೆ ಅಶುಭ ಫಲ ಹೆಚ್ಚಾಗಿದ್ದರೆ ಆಶ್ಲೇಷಾ ನಕ್ಷತ್ರದ ಕರ್ಕ ರಾಶಿಯವರಿಗೆ ಅಶುಭ ಫಲದ ಪ್ರಮಾಣ ಕಡಿಮೆಯಾಗಿದೆ,



## ಸಿಂಹ

**ಹನ್ನೊಂದನೇ ಶನಿ ಹಾಗೂ ಮುಂಬರುವ ಏಳನೆಯ ಗುರುವಿನ ಶುಭಫಲದ ಮೂಲಕ ಈ ವರುಷ ಈ ರಾಶಿಯವರ ಜೀವನದಲ್ಲಿಯೇ ಸುವರ್ಣಕಾಲವಾಗಿದ್ದು ಜೀವನದ ಎಲ್ಲ ದೃಷ್ಟಿಯಿಂದಲೂ ಅತ್ಯಂತ ಯಶೋದಾಯಕವಾಗಿದೆ.**

ಈ ವರುಷದ ನಿಮ್ಮ ಗ್ರಹಗತಿಯನ್ನು ಅವಲೋಕಿಸಿದಾಗ ಮೊದಲೇ ಹನ್ನೊಂದನೆಯ ಶನಿಯ ಕೃಪಾಕಟಾಕ್ಷಕ್ಕೆ ಪಾತ್ರರಾದ ನಿಮಗೆ ಫೆಬ್ರುವರಿ ೮ ರಿಂದ ಬರುವ ಸಪ್ತಮ ಗುರುವಿನ ಶುಭ ಫಲವೂ ದೊರೆಯುತ್ತದೆ. ಪ್ರಬಲ ಗ್ರಹಗಳಾದ ಗುರು–ಶನಿಯರಿಂದ ವರ್ಷವಿಡೀ ಶುಭಫಲವನ್ನು ಪಡೆಯುವ ನಿಮಗೆ ಈ ವರುಷವೆಂದರೆ ನಿಮ್ಮ ಜೀವನದಲ್ಲಿಯೇ ಅಪೂರ್ವ ಸ್ಮರಣೀಯ ಕಾಲವಿದಾಗಿದ್ದು ಕಳೆದ ಹಲವು ವರುಷಗಳಿಂದ ನೆನೆಗುದಿಗೆ ಬಿದ್ದ ಕಾರ್ಯಗಳೆಲ್ಲವೂ ಕೈಗೂಡುವುದರಿಂದ ನಿಮ್ಮ ಮನಸ್ಸು ಪ್ರಫುಲ್ಲಿತವಾಗುವುದು. ಜುಲೈ ೧೫ ರಿಂದ ಅಗಷ್ಟ ೧೫ ರ ವರೆಗಿನ ಒಂದು ತಿಂಗಳು ಹೊರತಾಗಿ ಉಳಿದ ಹನ್ನೊಂದು ತಿಂಗಳ ಕಾಲ ನಿಮ್ಮ ಆರೋಗ್ಯ ಉತ್ತಮವಿರುತ್ತದೆ. ಆರ್ಥಿಕದೃಷ್ಟಿಯಿಂದ ನೋಡಿದರೆ ಈ ವರುಷ ತೃಪ್ತಿದಾಯಕವಿರುವದಲ್ಲದೇ ಬರಬೇಕಾಗಿದ್ದ ಹಣ ಈ ವರುಷ ಬರುವುದಲ್ಲದೆ ಎಪ್ರಿಲ್ ೧೫ ರಿಂದ ಜುಲೈ ೧೪ ರ ವರೆಗಿನ ಅವಧಿಯಲ್ಲಿ ಲಾಟರಿ, ರೇಸು, ಸಟ್ಟಾ ಕಮೀಶನ, ವಾರಸಾ ಮೊದಲಾದ ಮೂಲದಿಂದ ಆಕಸ್ಮಿಕ ಧನಯೋಗ ಇರುವದಲ್ಲದೇ ವಾಹನಸೌಖ್ಯವೂ, ಪರದೇಶ ಪರ್ಯಟನೆಗಳಂಥ ಶುಭಘಟನೆಗಳೂ ಈ ವರುಷ ಜರಗುವವು.

ಕೋರ್ಟು ಕಚೇರಿಗಳ ವ್ಯವಹಾರದಲ್ಲಿ ಪ್ರಚಂಡ ಜಯ ಈ ವರುಷ ಲಭಿಸುವದಲ್ಲದೇ ಫೌಜದಾರಿ ಮೊಕದ್ದಮೆಗಳಲ್ಲಿ ಪೂರ್ವಾರ್ಧದಲ್ಲಿಯೂ, ರಾಜಕೀಯ ಮೊಕದ್ದಮೆಗಳಲ್ಲಿ ವರುಷದ ಮಧ್ಯಕಾಲದಲ್ಲಿಯೂ, ದಿವಾಣ ಮೊಕದ್ದಮೆಗಳಿಗೆ ಉತ್ತರಾರ್ಧದಲ್ಲಿಯೂ ಜಯ ಲಭಿಸಿ ಶತ್ರುಗಳು ಶರಣಾಗತರಾಗುವರು.

ಈ ರಾಶಿಯ ನೌಕರವರ್ಗದವರಿಗೆ ಈ ವರುಷ ಅತ್ಯಂತ ಯಶೋದಾಯಕವಾಗಿದೆ. ವರಿಷ್ಠರ ಕೃಪೆಗೆ ಪಾತ್ರರಾಗಿ ಜನೇವರಿ ೧೪ ರಿಂದ ಮಾರ್ಚ ೧೫, ಎಪ್ರಿಲ ೧೫ ರಿಂದ ಜುಲೈ ೧೫ ರ ಒಳಗೆ ಅನುಕೂಲ ಜಾಗೆಗೆ ಬದಲಿಯೊಂದಿಗೆ ಬಡತಿ, ಇಮ್ಮಡಿ ಬಡತಿ, ಅಥವಾ ಎರಡು ಹುದ್ದೆಗಳ ಕಾರ್ಯನಿರ್ವಹಣೆಯನ್ನು (ಡಬಲ ಚಾರ್ಜ) ಪಡೆಯುವ ಸುಯೋಗ ಈ ವರುಷ ಪ್ರಾಪ್ತಿಯಾಗುವುದು. ನಿರುದ್ಯೋಗಿಗಳಿಗೆ ಈ ವರುಷದ ಮಧ್ಯದಲ್ಲಿ ಅಂದರೆ ಜನೇವರಿ ೧೪ರಿಂದ ಜುಲೈ ೧೫ರ ವರೆಗಿನ ಕಾಲದಲ್ಲಿ ಉದ್ಯೋಗ ದೊರೆಯುವದು. ಹಂಗಾಮಿ ನೌಕರದಾರರಿಗೆ ಈ ವರುಷ ಕಾಯಂ ಆಗುವುದು. ಕಾರಖಾನೆ, ಗಿರಣಿ, ಕಾರ್ಮಿಕ ವರ್ಗದವರಿಗೂ, ಪ್ರವಾಸೀ ಕೆಲಸಗಾರರಿಗೂ ಈ ವರುಷ ಪ್ರಗತಿದಾಯಕವಾಗಿದೆ. ಅದರಲ್ಲಿಯೂ ಅಕ್ಟೋಬರ ೨೭ ರಿಂದ ಜುಲೈ ೧೫ರ ವರೆಗಿನ ಕಾಲ

ತಿರ ಲಾಭದಾಯಕವಿದೆ. ಈ ರಾಶಿಯ ಕೃಷಿಕ ವರ್ಗದವರಿಗೆ ಈ ವರ್ಷ ಪ್ರಗತಿದಾಯಕವಿದ್ದು ನಿರೀಕ್ಷೆಗಿಂತ ಅಧಿಕ ಬೆಳೆ ಬಂದು ಹಿಂದಿನ ಸಾಲ ತೀರಿಸುವರು ಅಲ್ಲದೇ ಹೊಸ ಜಾಗೆ, ಮನೆ, ಹೊಲಗಳನ್ನು, ಟ್ರಕ್–ಟ್ರಾಕ್ಟರ ಪಂಪಸೆಟ್ಟು, ದನಕರಗಳನ್ನು ಇವೇ ಮೊದಲಾದ ಬೇಸಾಯಕ್ಕೆ ಬೇಕಾಗುವ ಉಪಕರಣಗಳನ್ನು ಕೊಳ್ಳುವ ಯೋಗವೂ ಸಾಮರ್ಥ್ಯವೂ ಈ ವರುಷ ಲಭಿಸುತ್ತದೆ. ಬುದ್ಧಿಜೀವಿ, ಸಾಹಿತಿ, ಕಲಾವಿದರಿಗೆ ಕೂಡ ಅತ್ಯಂತ ಉತ್ಕೃಷ್ಟದ ವರುಷವಾಗಿದ್ದು, ಉದ್ಯೋಗದಲ್ಲಿ ಪ್ರಗತಿ ಸ್ಥಿರತೆ ಇರುವದಲ್ಲದೇ ಸರಕಾರ, ಸಂಘ–ಸಂಸ್ಥೆಗಳಿಂದ ಮಾನಸನ್ಮಾನ ಪ್ರಶಸ್ತಿ, ಪದಕಗಳು ಲಭಿಸುವುದಲ್ಲದೇ ವಿಪುಲ ದ್ರವ್ಯ ಲಾಭವೂ ಆಗುವುದು. ಈ ರಾಶಿಯ ಸ್ವತಂತ್ರ ಉದ್ಯೋಗಸ್ಥರಿಗೂ ಈ ವರುಷ ಪ್ರೋತ್ಸಾಹದಾಯಕವಾಗಿದೆ. ವ್ಯಾಪಾರಸ್ಥರು, ಟಾಕೀಜ, ಗಿರಣಿ, ಕಾರಖಾನೆ, ಚಾಳಮಾಲಕ ವರ್ಗದವರಿಗೂ ಈ ವರುಷ ಪ್ರೋತ್ಸಾಹದಾಯಕವಿದೆ. ಅಲ್ಲದೇ ಅಕ್ಟೋಬರ ೨೭ ರಿಂದ ಜುಲೈ ೧೫ ರ ವರೆಗಿನ ಕಾಲದಲ್ಲಿ ಹೊಸ ಉದ್ಯೋಗ ಪ್ರಾರಂಭಿಸುವಿಕೆ ಇಲ್ಲವೇ ಇದ್ದ ಉದ್ಯೋಗದ ಶಾಖೆಗಳನ್ನು ತೆರೆಯುವಿಕೆ ಮೊದಲಾದ ಪ್ರಗತಿದಾಯಕ ಘಟನೆಗಳು ಜರುಗುವವು. ಸಟ್ಟಾ, ರೋಕ, ಕಮೀಶನ್ ಎಜಂಟರು, ಹಂಚಿಕೆದಾರರಿಗೂ ಈ ವರುಷ ಪ್ರಗತಿದಾಯಕವಿರುತ್ತದೆ. ಅದರಲ್ಲಿಯೂ ಡಿಸೆಂಬರ ೧೫ ರಿಂದ ಜುಲೈ ೧೫ರ ವರೆಗಿನ ಈ ಏಳು ತಿಂಗಳ ಕಾಲವೆಂದರೆ ಅವರ ಜೀವನದಲ್ಲಿಯೇ ಅಪೂರ್ವಕಾಲವಾಗಿದ್ದು ಈ ಅವಧಿಯಲ್ಲಿ ಅವರು ಉದ್ಯೋಗದಲ್ಲಿ ಉನ್ನತಿಯನ್ನು ಪಡೆಯುವರು.

ಕಳೆದ ಅನೇಕ ವರುಷಗಳಿಂದ ಗೃಹಸ್ಥಾಶ್ರಮಕ್ಕಾಗಿ ಹಾತೊರೆಯುತ್ತಿರುವ ಈ ರಾಶಿಯ ವಧೂವರರಿಗೆ ಈ ವರುಷ ಕಂಕಣಬಲ ಕೂಡಿ ಬಂದಿರುವುದಲ್ಲದೇ ಡಿಸೆಂಬರ ೧೫ ರಿಂದ ಜುಲೈ ೧೫ ರ ಒಳಗೆ ವಿವಾಹ ಸಾಂಗವಾಗಿ ವೈವಾಹಿಕಜೀವನದ ಆನಂದಸಾಗರದಲ್ಲಿ ಪದಾರ್ಪಣೆಯನ್ನು ಮಾಡುವರು. ಈ ರಾಶಿಯ ವಿವಾಹಿತ ಸ್ತ್ರೀ ಪುರುಷರಿಗೂ, ಅವಿವಾಹಿತರಿಗೂ ಕೂಡ ಈ ವರುಷ ಪ್ರಗತಿದಾಯಕವಾಗಿದ್ದು ಒಡೆದು ಹೋಗಿದ್ದ ಏಕತ್ರ ಕುಟುಂಬ ಮತ್ತೆ ಒಂದುಗೂಡುವುದು. ಬೆಲೆಯುಳ್ಳ ವಸ್ತುವಡವೆಗಳನ್ನು ಕೊಳ್ಳುವ, ತೀರ್ಥಯಾತ್ರೆ, ಸಂದರ್ಶನ, ನೂತನ ಮನೆ ಪ್ರವೇಶಿಸುವ, ಮಂಗಲಕಾರ್ಯ ನೆರವೇರುವ ಮೊದಲಾದ ಶುಭ ಸಂಗತಿಗಳು ಈ ವರುಷ ಜರುಗುವವು.

ಈ ರಾಶಿಯ ಗರ್ಭವತಿಯರಿಗೆ ಈ ವರುಷ ಅನುಕೂಲವಾಗಿದೆ. ಹೆರಿಗೆಯು ಡಿಶೆಂಬರ ೧೫ ರಿಂದ ಮಾರ್ಚ ೧೫, ಎಪ್ರಿಲ್ ೧೨ ರಿಂದ ಜುಲೈ ೧೫ ರ ಕಾಲದಲ್ಲಿ ಆದರೆ ಸುಖಪ್ರದವಾಗುತ್ತದಲ್ಲದೆ ಪುತ್ರಸಂತಾನವಾಗುವದು. ಆದರೆ ಹೆರಿಗೆಯು ನವಂಬರ ೧೫ ರಿಂದ ಡಿಶೆಂಬರ ೧೬, ಮಾರ್ಚ ೧೫ರಿಂದ ಎಪ್ರಿಲ ೧೨, ಜುಲೈ ೧೫ ರಿಂದ ಅಗಷ್ಟ ೧೫ ರ ವರೆಗಿನ ಅವಧಿಯಲ್ಲಾದರೆ ಪ್ರಸೂತಿ ಸುಖಪ್ರದವಾಗದು.

ಈ ರಾಶಿಯ ರಾಜಕೀಯ ಸಾಮಾಜಿಕ ಕಾರ್ಯಕರ್ತರಿಗೂ ವಿಶೇಷ ಉತ್ಸಾಹದಾಯಕ ವರುಷವಿದಾಗಿದೆ. ಪ್ರತ್ಯಕ್ಷ ರಾಜಕೀಯದಲ್ಲಿ ಭಾಗವಹಿಸುವರಲ್ಲದೆ ಅನೇಕ ಸುಖ ಸಂಸ್ಥೆಗಳ ಪದಾಧಿಕಾರಿಗಳಾಗುವರು. ಗೌರವಾನ್ವಿತ ಸ್ಥಾನಮಾನ. ಅಧಿಕಾರ ಪಡೆದು ರಾಜಕೀಯದಲ್ಲಿ ಗಣ್ಯ ವ್ಯಕ್ತಿಗಳಾಗುವದರಲ್ಲಿ ಸಂಶಯವಿಲ್ಲ. ಈ ವರುಷದಲ್ಲಿ ಜರುಗಲಿರುವ ಯಾವದೇ ಚುನಾವಣೆಯಲ್ಲಿ ಸ್ಪರ್ಧಿಸಿದಲ್ಲಿ ಆಯ್ಕೆ ನಿಶ್ಚಿತವೆಂದೇ ತಿಳಿಯಬೇಕು. ಡಿಶಂಬರ ೧೫ ರಿಂದ ಮಾರ್ಚ ೧೫ ರ ಒಳಗೆ ಇಲ್ಲವೇ ಎಪ್ರಿಲ್ ೧೨ ರಿಂದ ಜುಲೈ ೧೫ ರ ಒಳಗಿನ ಈ ಅವಧಿಯಲ್ಲಿ ಜರುಗಬಹುದಾದ ಚುನಾವಣೆಗಳಲ್ಲಿ ಅತ್ಯಧಿಕ ಮತ ಪಡೆದು ಇಲ್ಲವೇ ಅವಿರೋಧ ಆಯ್ಕೆ ಆಗಬಹುದಾಗಿದೆ.

ಈ ರಾಶಿಯ ವಿದ್ಯಾರ್ಥಿಗಳಿಗೆ ಈ ವರುಷ ಅತೀವ ಪ್ರೋತ್ಸಾಹದಾಯಕವಿದೆಯಲ್ಲದೇ ಅರ್ಧಕ್ಕೆ ನಿಂತಿದ್ದ ಶಿಕ್ಷಣವು ಮತ್ತೆ ಮುಂದುವರಿಯುವದು. ಸ್ಪರ್ಧಾತ್ಮಕ ಪರೀಕ್ಷೆಗೂ ಖಾತೆಗಳ ಪರೀಕ್ಷೆಗೂ ಶಾಲೆ ಕಾಲೇಜುಗಳ, ವಿದ್ಯಾಮಂಡಳಗಳ ಪರೀಕ್ಷೆಗೂ ಈ ವರುಷ ಪ್ರೋತ್ಸಾಹದಾಯಕವಿದೆ. ಜನೇವರಿ ೧೪ ರಿಂದ ಮಾರ್ಚ ೧೫ ರ ಒಳಗೆ ಇಲ್ಲವೆ ಎಪ್ರಿಲ್ ೧೨ ರಿಂದ ಜುಲೈ ೧೫ರ ಅವಧಿಯಲ್ಲಿ ಜರಗುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ಉತ್ತಮ ಶ್ರೇಣಿಯಲ್ಲಿ ತೇರ್ಗಡೆ ಆಗುವರಲ್ಲದೇ ಪ್ರಶಸ್ತಿ ಪದಕಗಳನ್ನು ವಿದ್ಯಾರ್ಥಿ ವೇತನ, ಶಿಷ್ಯವೃತ್ತಿಗಳನ್ನು ಪಡೆಯುವರು. ಸಂಶೋಧನೆ ಇಲ್ಲವೆ ಹೆಚ್ಚಿನ ಶಿಕ್ಷಣಕ್ಕಾಗಿ ವಿದೇಶ ಪ್ರವಾಸದ ಯೋಗವೂ ಉಂಟು,

ಒಟ್ಟಿನಲ್ಲಿ ಈ ರಾಶಿಯ ಎಲ್ಲ ವರ್ಗದವರಿಗೆ ಈ ವರುಷವೆಂದರೆ ಜೀವನದಲ್ಲಿಯೇ ಸುವರ್ಣ ಕಾಲದ ವರುಷವಿದು ಅವರ ಎಲ್ಲ ಆಶೆ-ಆಕಾಂಕ್ಷೆಗಳು ಈಡೇರುತ್ತವೆ. ಅಲ್ಲದೇ ನೂರಕ್ಕೆ ನೂರರಷ್ಟು ಶುಭ ಫಲ ದೊರೆಯಬಹುದಾಗಿದೆ,



## ಕನ್ಯಾ

**ಈ ರಾಶಿಯವರಿಗೆ ಈ ವರುಷ ಉದ್ಯೋಗ ಆರ್ಥಿಕದಲ್ಲಿ ಉತ್ಸಾಹದಾಯಕವಾದರೆ ಕೌಟುಂಬಿಕ ಜೀವನದಲ್ಲಿ ನಿರುತ್ಸಾಹದಾಯಕವಾಗಿದೆ.**

ಈ ವರುಷದ ಗ್ರಹಗಳನ್ನು ಪರಾಮರ್ಶಿಸಿದಾಗ ಇದುವರೆಗೆ ಪಂಚಮ ಗುರುವಾಗಿ ಶುಭ ಫಲವನ್ನೀಯುತ್ತಿದ್ದ ಗುರುವು ಇದೇ ಸಂವತ್ಸರದ ಮಾಘಮಾಸದಿಂದ ಷಷ್ಠಮನಾಗುವದರಿಂದ ಶುಭ ಫಲದ ಪ್ರಮಾಣ ಕಡಿಮೆಯಾಗುವದು, ಆದರೆ ಈ ವರೆಗೆ ಚತುರ್ಥನಾದ




ಓಹ್ ಇವತ್ತು ದೀಪಾವಳಿ ಸಮಾರಂಭ, ಅಲ್ಲ ನಮ್ಮ ಪೂಜಾರಿಯ ಭೋಜನ ಸಮಾರಂಭ

ಅಶುಭ ಫಲ ಕೊಡುತ್ತಿದ್ದ ರಾಹು ನೂತನ ಸಂವತ್ಸರದ ಪ್ರಾರಂಭದಿಂದ ಅಂದರೆ ಚೈತ್ರದಿಂದ ತೃತೀಯನಾಗಿ ವರ್ಷವಿಡೀ ಶುಭಫಲವನ್ನು ಕೊಡುವನು. ಕಳೆದ ವರುಷದಿಂದಲೇ ಶುಭಫಲವನ್ನು ಕೊಡುತ್ತಿದ್ದ ದಶಮ ಶನಿಯು ವರ್ಷಾಂತ್ಯದ ವರೆಗೂ ಶುಭ ಫಲವನ್ನು ಕೊಡುವನು. ಹೀಗೆ ರಾಹು ಶನಿಯರು ಶುಭದಾಯಕರಿದ್ದು ಗುರುವು ಮಧ್ಯನಾಗಿರುವದರಿಂದ ನಿಮ್ಮ ಆರೋಗ್ಯ ವರ್ಷವಿಡೀ ಚೆನ್ನಾಗಿರುತ್ತದೆ. ಆದರೂ ಎಪ್ರಿಲ್ ೧೨ ರಿಂದ ಮೇ ೧೫ ಹಾಗೂ ಆಗಸ್ಟ ೧೫ ರಿಂದ ಸಪ್ಟೆಂಬರ ೧೬ ರ ವರೆಗಿನ ಅವಧಿಯಲ್ಲಿ ಮಾತ್ರ ಆರೋಗ್ಯ ಕೆಡಬಹುದಾಗಿದೆ. ಶನಿ-ರಾಹುಗಳು ಶುಭದಾಯಕರಿರುವದರಿಂದ ಈ ವರುಷ ನಿಮ್ಮ ಆರ್ಥಿಕ ಸ್ಥಿತಿ ಅತ್ಯಂತ ತೃಪ್ತಿಕರವಿರುತ್ತದೆ. ನವಂಬರ ೧೫ ರಿಂದ ಮಾರ್ಚ ೧೫ ಹಾಗೂ ಮೇ ೧೫ ರಿಂದ ಆಗಷ್ಟ ೧೫ ರ ವರೆಗಿನ ಕಾಲದಲ್ಲಿ ನಿರೀಕ್ಷಿಸಿದ ಮೂಲದಿಂದ ಧನಾಗಮನವಾಗುವದಲ್ಲದೇ ದತ್ತಕ, ವಾರಸಾ, ಲಾಟರಿ, ಭಕ್ಷೀಸ, ಬಹುಮಾನ ಕಮೀಶನ್, ಮೊದಲಾದ ರೀತಿಯಿಂದ ಆಕಸ್ಮಿಕವಾಗಿ ಅಗಣಿತ ದ್ರವ್ಯಪ್ರಾಪ್ತಿಯಾಗುವುದರಿಂದ ಹಿರಿದಿನ ಸಾಲವೆಲ್ಲ ತೀರಿಸಿ ಹೊಸದಾಗಿ ಸ್ಥಾವರ ಇಸ್ಟೇಟ ಸಂಪಾದಿಸುವಿರಿ. ಅಲ್ಲದೇ ವಾಹನ ಖರೀದಿಸುವದಾಗಲೀ, ತೀರ್ಥಯಾತ್ರಾ ಸಂದರ್ಶನವಾಗಲೀ, ಪರದೇಶ ಪರ್ಯಟನ ಮೊದಲಾದ ಶುಭ ಘಟನೆಗಳು ಇದೇ ಅವಧಿಯಲ್ಲಿ ಜರುಗುವವು.

ಕೋರ್ಟ ಕಚೇರಿಯ ವ್ಯವಹಾರದಲ್ಲಿ ಈ ವರುಷ ಜಯ ಲಭಿಸುತ್ತದೆ. ಅದರಲ್ಲಿಯೂ ದಿವಾಣಿ ವ್ಯಾಜ್ಯಗಳಿಗೆ ಈ ವರುಷದ ಪೂರ್ವಾರ್ಧದಲ್ಲಿಯೂ ಫೌಜದಾರಿ ಮೊಕದ್ದಮೆಗಳಿಗೆ ವರುಷದ ಮಧ್ಯಕಾಲದಲ್ಲಿಯೂ, ರಾಜಕೀಯ ವ್ಯಾಜ್ಯಗಳಿಗೆ ಉತ್ತರಾರ್ಧದಲ್ಲಿಯೂ ಜಯ ಲಭಿಸಿ ಶತ್ರುಗಳು ಶರಣಾಗತರಾಗುವರು.

ಈ ರಾಶಿಯ ನೌಕರ ವರ್ಗದವರಿಗೆ ಈ ವರುಷ ಪ್ರಗತಿದಾಯಕವಿದ್ದು ವರಿಷ್ಠರ ಸಹಾಯ,ಸಹಾನುಭೂತಿ ದೊರೆಯುವುದಲ್ಲದೆ ನವಂಬರ ೧೫ ರಿಂದ ಡಿಸೆಂಬರ ೧೬ ಹಾಗೂ ಫೆಬ್ರುವರಿ ೧೨ ರಿಂದ ಆಗಸ್ಟ ೧೫ ರ ಅವಧಿಯಲ್ಲಿ ಅನುಕೂಲ ಜಾಗೆಗೆ ಬದಲಿಯಾಗುವದಲ್ಲದೆ ಬಡತಿಯೂ ಲಭಿಸುತ್ತದೆ. ಕಳೆದ ಅನೇಕ ವರುಷಗಳಿಂದ ನಿರುದ್ಯೋಗಿಗಳಾಗಿ ಅಲೆದಾಡುತ್ತಿರುವವರಿಗೆ ಈ ವರುಷದ ಮಧ್ಯದಲ್ಲಿ ಉದ್ಯೋಗ ದೊರೆಯುವುದು. ಹಂಗಾಮಿ ನೌಕರ ವರ್ಗದವರಿಗೆ ಈ ವರುಷ ನೌಕರಿಯಲ್ಲಿ ಕಾಯಂ ಆಗುವುದು. ಗಿರಣಿ, ಕಾರಖಾನೆಯ ಕಾರ್ಮಿಕ ವರ್ಗದವರಿಗೂ, ಪ್ರವಾಸೀ ಕೆಲಸದವರಿಗೂ ಶನಿ-ರಾಹುಗಳು ಶುಭಫಲ ಕೊಡುವುದರಿಂದ ಈ ವರುಷದ ಉತ್ತರಾರ್ಧದಲ್ಲಿ ಉದ್ಯೋಗದಲ್ಲಿ ಸ್ಥಿರತೆ, ಪ್ರಗತಿ ಬಡತಿ ದೊರೆಯುವುದು. ಈ ರಾಶಿಯ ಬುದ್ಧಿಜೀವಿ, ಸಾಹಿತಿ, ಕಲಾವಿದರಿಗೆ ಷಷ್ಠಮ ಗುರು ಬರುವುದರಿಂದ ಈ ವರುಷ ಹೇಳಿಕೊಳ್ಳುವಂಥ ಪ್ರಗತಿದಾಯಕವಿರುವುದಿಲ್ಲವಾದರೂ ಅಕ್ಟೋಬರ ೨೬ ರಿಂದ ಡಿಶೆಂಬರ ೧೬ ಹಾಗೂ ಮೇ ೧೫ ರಿಂದ ಆಗಷ್ಟ ೧೬ ರ ವರೆಗಿನ ಕಾಲದಲ್ಲಿ ಉದ್ಯೋಗದಲ್ಲಿ ಉತ್ಕೃಷ್ಟವನ್ನು, ಪ್ರಶಸ್ತಿ ಪದಕಗಳನ್ನು ಪಡೆಯುವರು. ಈ ರಾಶಿಯ ಕೃಷಿಕ ವರ್ಗದವರಿಗೆ ಶನಿ-ರಾಹುಗಳು ಶುಭಫಲದಾಯಕರಿರುವುದರಿಂದ ಈ ವರುಷ ಅತ್ಯಂತ ಯಶೋದಾಯಕವಿರುತ್ತದೆ. ನಿರೀಕ್ಷೆಗಿಂತ ಅಧಿಕ ಬೆಳೆ ಬಂದು ಹಿಂದಿನ ಸಾಲಗಳೆಲ್ಲವೂ ತೀರುವದಲ್ಲದೇ ಹೊಸ ಹೊಲ ಮನೆಗಳನ್ನು ಬೇಸಾಯದ ಉಪಕರಣಗಳನ್ನು ಟ್ರಕ್-ಟ್ರ್ಯಾಕ್ಟರ, ಪಂಪಸೆಟ್ಟ ಮೊದಲಾದವುಗಳನ್ನು ಕೊಳ್ಳುವ ಇಲ್ಲವೇ ನವೀಕರಿಸುವ ಸಾಮರ್ಥ್ಯ ಬರುತ್ತದೆ. ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರಿಗೂ, ಟಾಕೀಜ, ಗಿರಣಿ, ಕಾರಖಾನೆ, ಚಾಳ ಮಾಲಕ ವರ್ಗದವರಿಗೂ, ಕಮೀಶನ್ ಎಜಂಟ, ಹಂಚಿಕೆದಾರರಿಗೂ,ಸಟ್ಟಾ ಹಾಗೂ ಠೋಕ ವ್ಯಾಪಾರಸ್ಥರಿಗೂ ಈ ವರುಷ ಪ್ರೋತ್ಸಾಹದಾಯಕವಿರುವದಲ್ಲದೇ ಅಕ್ಟೋಬರ ೨೬ ರಿಂದ ಮಾರ್ಚ ೧೫ ರ ಒಳಗೆ ಇಲ್ಲವೇ ಮೇ ೧೫ ರಿಂದ ಆಗಸ್ಟ ೧೫ ರ ಒಳಗಿನ ಅವಧಿಯಲ್ಲಿ ಹೊಸ ಉದ್ಯೋಗ ಪ್ರಾರಂಭಿಸುವಿಕೆ ಇಲ್ಲವೇ ಇದ್ದ ಉದ್ಯೋಗದಲ್ಲಿ ಹೊಸ ಶಾಖೆಗಳನ್ನು ತೆರೆಯುವಿಕೆ ಮೊದಲಾದ ಪ್ರಗತಿದಾಯಕ ಘಟನೆಗಳು ಜರಗುವವು.

ಈ ರಾಶಿಯ ವಧೂವರರಿಗೆ ಕಂಕಣಬಲ ಕೂಡಿಬಂದಿರುವುದಲ್ಲದೇ ಅಕ್ಟೋಬರ ೨೬ರಿಂದ ಎಪ್ರಿಲ ೧೨ ರ ಒಳಗೆ ಇಲ್ಲವೇ ಮೇ ೧೫ ರಿಂದ ಆಗಸ್ಟ ೧೫ ರ ಅವಧಿಯಲ್ಲಿ ಅನಾಯಾಸವಾಗಿ ವಿವಾಹ ಜರುಗುವದಾದರೆ ವಿವಾಹಿತರಿಗೆ ಈ ವರುಷ ಪ್ರತಿಕೂಲವಿದೆ. ಆರನೇ ಗುರುವಿನಿಂದಾಗಿ ಆಪ್ತೇಷ್ಟರಲ್ಲಿ ವಿರಸ, ಗೃಹಕಲಹದಿಂದಾಗಿ ಈ ವರುಷ ಮನಸ್ಸಿಗೆ ನೆಮ್ಮದಿ ದೊರೆಯದು.

ಅದರಲ್ಲಿಯೂ ಎಪ್ರಿಲ್ ೧೨ ರಿಂದ ಮೇ ೧೫ ಹಾಗೂ ಆಗಸ್ಟ ೧೫ ರಿಂದ ಅಕ್ಟೋಬರ ೧೮ ರವರೆಗಿನ ಈ ಮೂರು ತಿಂಗಳಲ್ಲಿ ಗೃಹಕಲಹ ಪರಾಕಾಷ್ಟ ಮುಟ್ಟಿ ಗೃಹನೆಮ್ಮದಿ ಕದಡುವುದು. ಆರ್ಥಿಕ ದೃಷ್ಟಿಯಿಂದ ಗೃಹಿಣಿಯರಿಗೆ ಈ ವರುಷ ಪ್ರಗತಿದಾಯಕವಿರುತ್ತದಲ್ಲದೇ ನವಂಬರ ೧೫ ರಿಂದ ಡಿಶೆಂಬರ ೧೬ ಹಾಗೂ ಫೆಬ್ರುವರಿ ೧೨ ರಿಂದ ಎಪ್ರಿಲ್ ೧೨, ಮೇ ೧೫ ರಿಂದ ಆಗಸ್ಟ ೧೫ ರ ವರೆಗಿನ ಕಾಲವು ಅತ್ಯಂತ ಶುಭದಾಯಕವಿದ್ದು ಈ ಕಾಲದಲ್ಲಿ ಬೆಲೆಯುಳ್ಳ ವಸ್ತುವಡವೆಗಳನ್ನು ಖರೀದಿಸುವಿಕೆ, ನೂತನ ಗೃಹಪ್ರವೇಶ, ತೀರ್ಥಯಾತ್ರಾ ಸಂದರ್ಶನ, ಮನೆಯಲ್ಲಿ ಮಂಗಲಕಾರ್ಯ ಜರಗುವಿಕೆ, ಮೊದಲಾದ ಶುಭ ಘಟನೆಗಳು ಜರುಗುವವು.

ಈ ರಾಶಿಯ ಗರ್ಭವತಿ ಸ್ತ್ರೀಯರಿಗೆ ಈ ವರುಷ ಸಮ್ಮಿಶ್ರ ಫಲವಿದೆ. ಎಪ್ರಿಲ್ ೧೨ ರಿಂದ ಮೇ ೧೫ ಹಾಗೂ ಆಗಸ್ಟ ೧೫ ರಿಂದ ಅಕ್ಟೋಬರ ೧೮ರ ವರೆಗಿನ ಮೂರು ತಿಂಗಳ ಕಾಲದಲ್ಲಿ ಹೆರಿಗೆ ತಾಪರೆ ತೊಂದರೆಯಾಗುತ್ತದೆ. ಮಿಕ್ಕ ಕಾಲದಲ್ಲಾದರೆ ಸುಖ ಪ್ರಸವವಾಗುತ್ತದೆ.

ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೆ ಸಮ್ಮಿಶ್ರ ಫಲವಿದೆ. ನವಂಬರ ೧೫ ರಿಂದ ಮಾರ್ಚ ೧೫ ಹಾಗೂ ಮೇ ೧೫ ರಿಂದ ಆಗಸ್ಟ ೧೫ ರವರೆಗಿನ ಕಾಲ ಪ್ರಗತಿದಾಯಕವಿದ್ದು ಮಾನ ಸನ್ಮಾನಹೊಂದುವರಲ್ಲದೇ ಗೌರವ ಸ್ಥಾನವನ್ನು ಪಡೆಯುವರು; ಆದರೆ ಎಪ್ರಿಲ್ ೧೨ ರಿಂದ ಮೇ ೧೫ ರ ಹಾಗೂ ಆಗಸ್ಟ ೧೫ ರಿಂದ ಅಕ್ಟೋಬರ ೧೮ ರ ವರೆಗಿನ ಕಾಲ ತೀರ ಪ್ರತಿಕೂಲವಾಗಿದ್ದು ಮಿತ್ರರೇ ಶತ್ರುಗಳಾಗುವರಲ್ಲದೇ ವಿಧಾನಸಭಾ ವಾದಕ್ಕೆ ಗುರಿಯಾಗಿ ಸ್ಥಾನಮಾನವನ್ನು ಕಳೆದುಕೊಳ್ಳುವರು. ನವಂಬರ ೧೫ ರಿಂದ ಮಾರ್ಚ ೧೫ ರ ವರೆಗಿನ ಹಾಗೂ ಮೇ ೧೫ ರಿಂದ ಆಗಸ್ಟ ೧೫ರ ಒಳಗಿನ ಈ ಏಳು ತಿಂಗಳ ಕಾಲದಲ್ಲಿ ನಡೆಯಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದಲ್ಲಿ ಜಯ ನಿಶ್ಚಿತ ಲಭಿಸುವುದು.

ಈ ರಾಶಿಯ ವಿದ್ಯಾರ್ಥಿಗಳಿಗೆ ಆರನೆಯ ಗುರುವಿನಿಂದಾಗಿ ಈ ವರುಷ ಹೇಳಿಕೊಳ್ಳುವಂಥ ಪ್ರೋತ್ಸಾಹದಾಯಕವಿರುವದಿಲ್ಲ. ಆರ್ಥಿಕ ದೃಷ್ಟಿಯಿಂದೇನೋ ಈ ವರುಷ ಪ್ರಗತಿದಾಯಕವಿದ್ದರೂ ಮನೆಯ ಕಲುಷಿತ ವಾತಾವರಣದಿಂದಲೂ, ಶಿಕ್ಷಕರ ಅವಕೃಪೆಯಿಂದಲೂ ಶಿಕ್ಷಣ ಮುಂದುವರಿಸುವದೇ ಕಠಿಣವಾಗುತ್ತದೆ. ಅಕ್ಟೋಬರ ೨೬ ರಿಂದ ಮಾರ್ಚ ೧೫ ರ ಒಳಗೆ ಜರುಗುವ ಪರೀಕ್ಷೆಗೆ ಕಟ್ಟುವವರು ನಿಶ್ಚಿತವಾಗಿಯೂ ತೇರ್ಗಡೆಯಾಗುವರಲ್ಲದೇ ಶ್ರೇಣಿಯನ್ನು ಪಡೆಯುವರು; ಆದರೆ ಮಾರ್ಚ ೧೫ರಿಂದ ಎಪ್ರಿಲ್ ೧೨ ಹಾಗೂ ಮೇ ೧೫ರಿಂದ ಆಗಸ್ಟ ೧೫ರ ವರೆಗೆ ಜರುಗುವ ಪರೀಕ್ಷೆಗೆ ಕಟ್ಟುವವರು ಸಾಮಾನ್ಯವರ್ಗದಲ್ಲಿ ತೇರ್ಗಡೆಯಾಗುವರು. ಎಪ್ರಿಲ್ ೧೨ರಿಂದ ಮೇ ೧೫ ಹಾಗೂ ಆಗಸ್ಟ ೧೫ರಿಂದ ವರ್ಷಾದ್ಯಂತ ಜರುಗಲಿರುವ ಪರೀಕ್ಷೆಗೆ ಕಟ್ಟುವವರ ಫಲಿತಾಂಶವನ್ನು ಹೇಳುವುದು ಕಠಿಣ.

ಒಟ್ಟಿನಲ್ಲಿ ಈ ರಾಶಿಯ ಬುದ್ಧಿಜೀವಿ, ಸಾಹಿತಿ, ಕಲಾವಿದ ವಿದ್ಯಾರ್ಥಿಗಳಿಗೂ, ಗೃಹಿಣಿಯರಿಗೂ ನಿರುತ್ಸಾಹದಾಯಕವಾಗಿದ್ದರೆ ಶ್ರಮಜೀವಿಗಳಿಗೂ, ಬಾಹ್ಯಕೆಲಸಗಾರರಿಗೂ, ಸ್ವತಂತ್ರ ಉದ್ಯೋಗಸ್ಥರಿಗೂ, ತಾಂತ್ರಿಕ ಕೆಲಸಗಾರರಿಗೂ, ಕೃಷಿಕರಿಗೂ, ರಾಜಕಾರಣಿಗಳಿಗೂ, ವಧೂವರರಿಗೂ ಉತ್ಸಾಹದಾಯಕವಾಗಿದೆ. ಇದರಂತೆ ಪ್ರಾಪಂಚಿಕ ದೃಷ್ಟಿಯಿಂದ ಪ್ರತಿಕೂಲವಿದ್ದರೆ ಆರ್ಥಿಕದೃಷ್ಟಿಯಿಂದ ಪ್ರಗತಿದಾಯಕವಿದ್ದು ಉತ್ತರಾ. ಹಸ್ತಾದವರಿಗೆ ಮುಕ್ಕಾಲುಭಾಗ ಶುಭಫಲವೂ ಚಿತ್ತಾದವರಿಗೆ ಅರ್ಧಭಾಗ ಶುಭಫಲವೂ ಇದೆ.



## ತುಲಾ

**ಈ ವರುಷ ಈ ರಾಶಿಯವರಿಗೆ ಆರ್ಥಿಕ, ಪ್ರಾಪಂಚಿಕ ಔದ್ಯೋಗಿಕ ದೃಷ್ಟಿಯಿಂದ ಪ್ರಗತಿದಾಯಕವಾಗಿದೆ.**

ಈ ವರುಷದ ನಿಮ್ಮ ಗ್ರಹಗತಿಯನ್ನು ಅವಲೋಕಿಸಲಾಗಿ ಶನಿಯಂತೂ ನವಮನಾಗಿ ಇಡೀ ವರುಷ ಶುಭದಾಯಕನಿದ್ದರೆ ಕಳೆದ ವರುಷದಿಂದ ಚತುರ್ಥನಾಗಿ ಅಶುಭಫಲವನ್ನು ಕೊಡುತ್ತಿದ್ದ "ಗುರುವು" ಈ ವರುಷದ ಫೆಬ್ರುವರಿ ಒಂಬತ್ತರಿಂದ ಪಂಚಮನಾಗಿ ವರ್ಷವಿಡೀ ಶುಭಫಲವನ್ನೇ ಕೊಡುವನು. ಗುರು-ಶನಿಯರ ಕೃಪಾಕಟಾಕ್ಷಕ್ಕೆ ಒಳಗಾದ ನಿಮಗೆ ಈ ವರುಷ ಪ್ರಗತಿದಾಯಕವಾಗಿದ್ದು, ಹಿಂದಿನ ಕಷ್ಟಕಾರ್ಪಣ್ಯಗಳೆಲ್ಲವೂ ದೂರಾಗುತ್ತವೆ, ಕಳೆದ ವರುಷದಿಂದ ಉಂಟಾ

ಗಿದ್ದ ಶಾರೀರಕ ಪೀಡೆ ಈ ವರುಷದಿಂದ ಕಡಿಮೆಯಾಗು ವದಲ್ಲದೇ ಸ್ವಜನ ವಿರೋಧದಿಂದ ಉಂಟಾಗಿದ್ದ ಮಾನಸಿಕ ತೊಂದರೆಯೂ ದೂರಾಗಿ ಮಾನಸಿಕ ನೆಮ್ಮದಿ ದೊರೆಯುತ್ತಿದ್ದಾಗ್ಯೂ ಜನೇವರಿ ೧೪ರಿಂದ ಫೆಬ್ರುವರಿ ೧೨, ಮೇ ೧೫ ರಿಂದ ಜೂನ ೧೫, ಸಪ್ಟಂಬರ ೧೬ ರಿಂದ ಅಕ್ಟೋಬರ ೧೫ರ ಒಳಗಿನ ಈ ಮೂರು ತಿಂಗಳ ಕಾಲ ಮಾತ್ರ ಕಿಂಚಿತ್ ಶಾರೀರಕ ಪೀಡೆ ಉಂಟಾ ಗುತ್ತದೆ. ನಿರೀಕ್ಷಿಸಿದ ಮೂಲದಿಂದ ಹಣ ಬರುವುದ ರಿಂದ ವರ್ಷವಿಡೀ ಆರ್ಥಿಕ ಸ್ಥಿತಿ ತೃಪ್ತಿಕರವಿರುವದ ಲ್ಲದೇ ಮಾರ್ಚ ೧೫ ರಿಂದ ಸಪ್ಟಂಬರ ೧೬ರವರೆಗಿನ ಈ ಆರು ತಿಂಗಳ ಕಾಲದಲ್ಲಿ ದತ್ತಕ, ವಾರ್ಸಾ, ಲಾಟರಿ, ಭಕ್ಷಿತ, ಬಹುಮಾನ, ಕಮೀಶನ್ಸ್ ಮೊದಲಾದ ಮೂಲದಿಂದ ಆಕಸ್ಮಿಕ ಧನಲಾಭವಾಗಿ ಅಗಣಿತ ದ್ರವ್ಯ ಸಂಪಾದಿಸುವಿರಿ.

ಕೋರ್ಟು ಕಚೇರಿಯ ವ್ಯಾಜ್ಯದಲ್ಲಿ ಈ ವರುಷ ಜಯ ನಿಶ್ಚಿತ. ಅದರಲ್ಲಿಯೂ ಫೌಜದಾರಿ ಹಾಗೂ ರಾಜಕೀಯ ವ್ಯಾಜ್ಯಗಳಿಗೆ ಈ ವರುಷದ ಮಧ್ಯ ಕಾಲ ದಲ್ಲಿ ದಿವಾಣಿವ್ಯಾಜ್ಯಗಳಿಗೆ ಉತ್ತರಾರ್ಧದಲ್ಲಿ ಜಯ ಲಭಿಸುತ್ತದೆ. ಆದರೆ ವರುಷದ ಪ್ರಾರಂಭದ ಮೂರು ತಿಂಗಳ ಕಾಲ ಯಾವುದೇ ಪ್ರಕಾರದ ವ್ಯಾಜ್ಯ ಗಳಲ್ಲಿ ಹಾನಿ ಇದೆ. ಆದುದರಿಂದ ಮೂರು ತಿಂಗಳ ವರೆಗೆ ವ್ಯಾಜ್ಯಗಳನ್ನು ಮುಂದೂಡುವುದೇ ಹಿತಕರವು.

ಈ ರಾಶಿಯ ನೌಕರವರ್ಗದವರಿಗೆ ಈ ವರುಷದ ಮಧ್ಯದಿಂದ ಕಾಲವು ಅನುಕೂಲವಿರುವದರಿಂದ ವರಿಷ್ಠರ ಸಹಾಯ, ಸಹಕಾರ ದೊರೆಯುವದಲ್ಲದೇ ಮಾರ್ಚ ೧೫ ರಿಂದ ಸಪ್ಟೆಂಬರ ೧೬ರವರೆಗಿನ ಅವಧಿ ಯಲ್ಲಿ ಅನುಕೂಲ ಜಾಗೆಗೆ ಬದಲಿಯಾಗುವದಲ್ಲದೆ ಬಡತಿಯೂ ದೊರೆಯುತ್ತದೆ. ಕಳೆದ ಅನೇಕ ವರುಷ ಗಳಿಂದ ಉದ್ಯೋಗದ ಬೇಟೆ ಆಡುತ್ತಿದ್ದ ನಿರು ದ್ಯೋಗಿ ಯುವಕರಿಗೆ ಈ ವರುಷದ ಮಧ್ಯದಲ್ಲಿ ಉದ್ಯೋಗ ಲಭಿಸುವದು. ಅರ್ಥಾತ್ ಫೆಬ್ರುವರಿ ೧೨ ರಿಂದ ಸಪ್ಟೆಂಬರ ೧೬ರೊಳಗೆ ಉದ್ಯೋಗ ದೊರೆಯು ವದು. ಹಂಗಾಮಿ ನೌಕರದಾರರಿಗೆ ಈ ವರುಷದ ಉತ್ತರಾರ್ಧದಲ್ಲಿ ಕಾಯಂ ಆಗುವದು. ಅಕ್ಟೋಬರ ೨೭ ರಿಂದ ಫೆಬ್ರುವರಿ ೨೭ರ ವರೆಗಿನ ನಾಲ್ಕು ತಿಂಗಳ ಕಾಲ ನೌಕರವರ್ಗದವರಿಗೆ ತೀರ ಪ್ರತಿಕೂಲವಿದ್ದು ಬೇಡವಾದ ಸ್ಥಳಕ್ಕೆ ಬದಲಿ, ವರಿಷ್ಠರ ಅಸಹಕಾರ ಮೊದಲಾದ ಅಶುಭ ಘಟನೆಗಳು ಜರಗುವವು. ಈ ರಾಶಿಯ ಗಿರಣಿ, ಕಾರಖಾನೆಯ ಕಾರ್ಮಿಕ ವರ್ಗದವ ರಿಗೂ, ಶ್ರಮಜೀವಿಗಳಿಗೂ, ಪ್ರವಾಸೀ ಕೆಲಸಗಾರರಿಗೂ ಈ ವರುಷ ಪ್ರಗತಿದಾಯಕವಿದೆ. ಅದರಲ್ಲಿಯೂ ಫೆಬ್ರುವರಿ ೧೫ ರಿಂದ ಸಪ್ಟೆಂಬರ ೧೬ರ ಒಳಗಿನ ಕಾಲ ಹೆಚ್ಚು ಅನುಕೂಲವಿದ್ದು ಈ ಕಾಲದಲ್ಲಿ ಅವರ ಬೇಡಿಕೆಗ ಳೆಲ್ಲ ಈಡೇರುವವು. ಈ ರಾಶಿಯ ಬುದ್ಧಿಜೀವಿ, ಸಾಹಿತಿ ಕಲಾವಿದರಿಗೆ, ಮುಂಬರುವ ಪಂಚಮ ಗುರುವಿನ ಶುಭಫಲದ ಮೂಲಕ ಉದ್ಯೋಗದಲ್ಲಿ ಪ್ರಗತಿ, ಸ್ಥಿರತೆ, ಮನ್ನಣೆ, ದೊರೆಯುವುದಲ್ಲದೇ ಅಕ್ಟೋಬರ ೨೭ ರಿಂದ ಜನೇವರಿ ೧೪ರ ಒಳಗೆ ಹಾಗೂ ಮಾರ್ಚ ೧೫ ರಿಂದ ಸಪ್ಟೆಂಬರ ೧೬ರ ಅವಧಿಯಲ್ಲಿ ಸರಕಾರ ಹಾಗೂ ಸಂಘ–ಸಂಸ್ಥೆಗಳಿಂದ ಪ್ರಶಸ್ತಿಪದಕ ಗಳನ್ನು, ದ್ರವ್ಯಲಾಭವನ್ನು ಪಡೆಯುವರಲ್ಲದೇ ವಿದೇಶ ಸಂಚಾರವನ್ನು ಕೈಕೊಳ್ಳುವರು. ಈ ರಾಶಿಯ ಕೃಷಿ ವರ್ಗದವರಿಗೆ ಈ ವರುಷ ಪ್ರಗತಿದಾಯಕವಿದೆ. ನಿರೀಕ್ಷಿಸಿದಕ್ಕಿಂತ ಅಧಿಕ ಬೆಳೆ ಬರುವುದರಿಂದ ಹಿಂದಿನ ವರುಷದ ಸಾಲ ತೀರಿಸುವರಲ್ಲದೇ ಒತ್ತಿ ಹಾಕಲ್ಪಟ್ಟ ಹೊಲ ಮನೆಗಳನ್ನು ಬಿಡಿಸಿಕೊಳ್ಳುವರು. ಬೇಸಾಯಿಕ್ಕೆ ಬೇಕಾಗುವ ದನಕರುಗಳು, ಟ್ರಾಕ್ಟರ, ಟ್ರಕ್, ಪಂಪಸೆಟ್ಟ ಮೊದಲಾದ ಉಪಕರಣಗಳನ್ನೂ ಹೊಸ ಜಾಗೆ, ಮನೆ ಗಳನ್ನು ಕೊಳ್ಳುವ ಯೋಗವೂ ಸಾಮರ್ಥ್ಯವೂ ಬರು ತ್ತದೆ. ಈ ರಾಶಿಯ ಸ್ವತಂತ್ರ ಉದ್ಯೋಗಸ್ಥರಿಗೂ ಉದ್ಯಮದಾರರಿಗೂ ಗಿರಣಿ, ಕಾರಖಾನೆ ಟಾಕೀಜ, ಚಾಳಿನ, ಮಾಲಕವರ್ಗದವರಿಗೂ, ಕಮೀಶನ ಏಜೆಂಟ ಹಂಚಿಕೆದಾರರಿಗೂ ಠೋಕ ವ್ಯಾಪಾರಸ್ಥರಿಗೂ, ಈ ವರುಷ ಪ್ರೋತ್ಸಾಹದಾಯಕವಾಗಿದೆ. ಅದರಲ್ಲಿಯೂ ಅಕ್ಟೋಬರ ೨೭ ರಿಂದ ಜನೇವರಿ ೧೪ರ ಒಳಗೆ ಹಾಗೂ ಮಾರ್ಚ ೧೫ ರಿಂದ ಸಪ್ಟೆಂಬರ ೧೬ ರ ಅವಧಿಯಲ್ಲಿ ಉದ್ಯೋಗದಲ್ಲಿ ಅಗಣಿತ ದ್ರವ್ಯ ಸಂಪಾ ದಿಸುವಿಕೆ ಹೊಸ ಉದ್ಯೋಗ ಪ್ರಾರಂಭಿಸುವಿಕೆ ಇಲ್ಲವೇ ಇದ್ದ ಉದ್ಯೋಗದಲ್ಲಿಯೇ ಹೊಸ ಶಾಖೆಗಳನ್ನು ತೆರೆ ಯುವ ಸಂಭವ ಹೆಚ್ಚು.

ಕಳೆದ ಅನೇಕ ವರುಷಗಳಿಂದ ಗೃಹಸ್ಥಾಶ್ರಮದ ಪ್ರವೇಶಕ್ಕಾಗಿ ಹಾತೊರೆಯುತ್ತಿರುವ ಈ ರಾಶಿಯ ವಧೂವರರಿಗೆ ಈ ವರುಷ ಅವರ ಮನೋರಥ ಈಡೇ ರುವುದು. ಅರ್ಥಾತ ಅವರ ಕಂಕಣಬಲ ಕೂಡಿ ಬಂದಿದ್ದು ನವಂಬರ ೧೫ ರಿಂದ ಜನೇವರಿ ೧೪ ರ ಒಳಗೆ ಇಲ್ಲವೇ ಫೆಬ್ರುವರಿ ೧೨ ರಿಂದ ಸಪ್ಟೆಂಬರ ೧೬ ರ ಒಳಗೆ ವಿವಾಹವಾಗುವುದು ನಿಶ್ಚಿತ. ಈ ರಾಶಿಯ ವಿವಾಹಿತರಿಗೂ, ಗೃಹಿಣಿಯರಿಗೂ ಈ ವರುಷ ಪ್ರಗತಿದಾಯಕವಿದೆ. ಒಡೆದು ಹೋಗಿದ್ದ ಏಕತ್ರ ಕುಟುಂಬ ಮತ್ತೆ ಒಂದಾಗುವದು. ಸ್ಮಶಾನ ದಂತೆ ಭಾಸವಾಗಿದ್ದ ಗೃಹ, ನಂದನವನದಂತೆ ಸುಖ ಸೌಭಾಗ್ಯಗಳಿಂದ ಕೂಡಿರುವುದು. ಅಪ್ತೇಷ್ಟರಲ್ಲಿಯ ತಪ್ಪು ತಿಳುವಳಿಕೆ ದೂರಾಗಿ ಪ್ರೀತಿವಿಶ್ವಾಸ ಮೊದಲಿ ನಂತೆ ಬೆಳೆಯುವುದಲ್ಲದೇ ಮಾರ್ಚದಿಂದ ಸಪ್ಟೆಂಬರ ವರೆಗಿನ ಆರು ತಿಂಗಳಲ್ಲಿ ಬೆಲೆಯುಳ್ಳ ವಸ್ತುಒಡವೆ ಗಳನ್ನು ಖರೀದಿಸುವರಲ್ಲದೇ ತೀರ್ಥಯಾತ್ರಾ ಸಂದರ್ಶನ ಸೌಖ್ಯ ಪಡೆಯುವರು.

ಈ ರಾಶಿಯ ಗರ್ಭಿಣಿ ಸ್ತ್ರೀಯರಿಗೆ ಪಂಚಮ ಗುರುವಿನ ಮೂಲಕ ಅನುಕೂಲವಿರುತ್ತದೆ: ಹೆರಿಗೆಯು ಅಕ್ಟೋಬರ ೨೭ ರಿಂದ ಫೆಬ್ರುವರಿ ೧೨ ರ ವರೆಗೆ ಆದರೆ ಕಷ್ಟ ಪ್ರಸೂತಿಯೂ ಫೆಬ್ರುವರಿ ೧೩ ರಿಂದ ವರ್ಷಾಂತ್ಯದ ವರೆಗೆ ಜರುಗಿದರೆ ಸುಖಪ್ರಸವವಾಗಿ ಪುತ್ರ ಸಂತಾನವಾಗುವದು.

ಈ ರಾಶಿಯ ರಾಜಕೀಯ ಹಾಗೂ ಸಾಮಾಜಿಕ ಕಾರ್ಯಕರ್ತರಿಗೆ ಪ್ರೋತ್ಸಾಹದಾಯಕವಾಗಿದೆ. ಜನ ಪ್ರಿಯತೆ ಹೆಚ್ಚುವುದಲ್ಲದೇ ಪಕ್ಷ, ಸಂಘ–ಸಂಸ್ಥೆಗಳ ಸಹಕಾರ ದೊರೆತು, ಅನೇಕ ಸಂಘ ಸಂಸ್ಥೆಗಳ ಪದಾಧಿ ಕಾರಿಗಳಾಗುವಿಕೆ ಗೌರವಾನ್ವಿತ ಸ್ಥಾನ ಪಡೆದು ರಾಜ ಕೀಯ ಗಣ್ಯ ವ್ಯಕ್ತಿಗಳಾಗುವುದರಲ್ಲಿ ಸಂದೇಹವಿಲ್ಲ. ಡಿಸೆಂಬರ ೧೫ ರಿಂದ ಜನೇವರಿ ೧೪ ಹಾಗೂ ಫೆಬ್ರುವರಿ ೧೨ ರಿಂದ ಸಪ್ಟೆಂಬರ ೧೬ ರ ಅವಧಿಯಲ್ಲಿ ಜರುಗಲಿ ರುವ ಯಾವದೇ ಚುನಾವಣೆಗಳಲ್ಲಿ ಪ್ರಚಂಡ ಮತ ಗಳಿಂದ ಇಲ್ಲವೇ ಅವಿರೋಧವಾಗಿ ಆರಿಸಿ ಬರುವ ರಲ್ಲದೇ ಶತ್ರುಗಳು ಶರಣಾಗತರಾಗುವರು.

ಈ ರಾಶಿಯ ವಿದ್ಯಾರ್ಥಿಗಳಿಗೆ ಪಂಚಮ ಗುರು ವಿನಿಂದಾಗಿ ಈ ವರುಷ ಪ್ರೋತ್ಸಾಹದಾಯಕವಾಗಿದೆ. ಕಳೆದ ವರುಷದಿಂದ ಕುಂಠಿತವಾಗಿದ್ದ ಶಿಕ್ಷಣ ಮತ್ತೆ ಮುಂದುವರೆಯುವುದು. ಫೆಬ್ರುವರಿ ೧೨ ರಿಂದ ಮೇ ೧೫ ರ ಒಳಗೆ ಹಾಗೂ ಜೂನ ೧೫ ರಿಂದ ಸಪ್ಟೆಂಬರ ೧೬ ಒಳಗಿನ ಅವಧಿಯಲ್ಲಿ ಜರುಗಲಿರುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ಅನಾಯಾಸವಾಗಿ ತೇರ್ಗಡೆ ಯಾಗುವರಲ್ಲದೇ ದರ್ಜೆ, ಶ್ರೇಣಿ, ಪ್ರಶಸ್ತಿ, ಪದಕ ಗಳನ್ನು ಪಡೆದು, ವಿದ್ಯಾರ್ಥಿವೇತನ, ಶಿಷ್ಯವೃತ್ತಿ, ಹೊಂದಿ ಹೆಚ್ಚಿನ ಶಿಕ್ಷಣಕ್ಕಾಗಿ ಇಲ್ಲವೇ ಸಂಶೋಧನೆ ಗಾಗಿ ವಿದೇಶ ಪ್ರವಾಸ ಕೈಗೊಳ್ಳುವ ಯೋಗವುಂಟು. ಅಕ್ಟೋಬರ ೨೭ ರಿಂದ ಫೆಬ್ರುವರಿ ೧೨ ರ ಒಳಗೆ ಹಾಗೂ ಮೇ ೧೫ ರಿಂದ ಜೂನ ೧೫ ರ ಅವಧಿಯಲ್ಲಿ ಜರುಗುವ ಪರೀಕ್ಷೆಗೆ ಕಟ್ಟುವವರು ಪ್ರಯಾಸದಿಂದ ತೇರ್ಗಡೆ ಆಗುವರು, ಆದರೆ ದರ್ಜೆ, ಶ್ರೇಣಿ ದೊರೆ ಯದು.

ಒಟ್ಟಿನಲ್ಲಿ ಈ ವರುಷ ಈ ರಾಶಿಯ ಬುದ್ಧಿ ಜೀವಿ, ಸಾಹಿತಿ, ಕಲಾವಿದ, ವಿದ್ಯಾರ್ಥಿ, ಶಿಕ್ಷಕ ವಧೂವರರಿಗೂ, ಗೃಹಿಣಿಯರಿಗೂ ಪ್ರಗತಿ ದಾಯಕವಿದೆ. ಆದರೆ ಶ್ರಮಜೀವಿಗಳಿಗೂ, ಬಾಹ್ಯಕೆಲಸ ಗಾರರಿಗೂ ಹೇಳಿಕೊಳ್ಳುವಷ್ಟು ಪ್ರಗತಿದಾಯಕವಿರುವ ದಿಲ್ಲ. ಇದರಂತೆ ಈ ರಾಶಿಯವರಿಗೆ ಈ ವರುಷ ಶಿಕ್ಷಣ ಪ್ರಾಪಂಚಿಕ ದೃಷ್ಟಿಯಿಂದ ಪ್ರೋತ್ಸಾಹ ದಾಯಕವಿದೆ. ಉದ್ಯೋಗ ಆರ್ಥಿಕದಲ್ಲಿ ನಿರೀಕ್ಷಿಸಿದ ಪ್ರಗತಿ ಇಲ್ಲ. ಚಿತ್ತಾ–ಸ್ವಾತಿ ನಕ್ಷತ್ರದ ತುಲಾ ರಾಶಿ ಯವರಿಗೆ ನೂರಕ್ಕೆ ೬೦ ರಷ್ಟು ಶುಭ ಫಲ ದೊರೆತರೆ ವಿಶಾಖ ನಕ್ಷತ್ರದ ತುಲಾ ರಾಶಿಯವರಿಗೆ ನೂರಕ್ಕೆ ೫೦ ರಷ್ಟು ಶುಭಫಲ ದೊರೆಯುವದು.



## ವೃಶ್ಚಿಕ

ಈ ರಾಶಿಯವರಿಗೆ ಈ ವರುಷ ಶನಿ ಅಷ್ಟಮನಿದ್ದು ಫೆಬ್ರುವರಿ ಒಂಬತ ರಿಂದ ಬರುವ ಚತುರ್ಥ ಗುರುವೂ ಕೂಡ ಅನಿಷ್ಟಫಲವನ್ನೇ ಕೊಡುವನಲ್ಲದೇ ಎಪ್ರಿಲನಿಂದ ಬರುವ ಜನ್ಮಸ್ಥ ರಾಹು ಕೂಡ ಅಶುಭದಾಯಕನೇ. ಹೀಗಾಗಿ ವರ್ಷವಿಡೀ ತೊಂದರೆಯನ್ನೇ ಎದುರಿಸಬೇಕಾಗು ತ್ತದೆ.

ಮೊದಲೇ ಅಷ್ಟಮ ಶನಿಯ ಅನಿಷ್ಟತೆಯನ್ನು ಎದುರಿಸುತ್ತಿರುವ ನೀವು ೯–೨–೧೯೬೪ ರಿಂದ ಬರುವ ಚತುರ್ಥ ಗುರುವಿನ ಅಶುಭ ಫಲವನ್ನೂ ಅನುಭವಿಸ ಬೇಕಾಗುತ್ತದೆ. ಏಪ್ರಿಲ್‌ದಿಂದ ಬರುವ ಜನ್ಮಸ್ಥ ರಾಹು ಕೂಡ ಅಶುಭದಾಯಕನೇ. ಹೀಗೆ ಅನೇಕ ಗ್ರಹಗಳ ಅವ ಕೃಪೆಗೆ ಪಾತ್ರರಾದ ನಿಮಗೆ ಈ ವರುಷವೆಂದರೆ ನಿಮ್ಮ ಜೀವನದ ಸತ್ವಪರೀಕ್ಷೆಯೇ ಆಗಿದೆ. ಧೈರ್ಯಶಾಲಿ ಗಳಾದ ನೀವು ಇಂಥ ಕಠಿಣ ಪರಿಸ್ಥಿತಿಯಿಂದ ಪಾರಾಗು ವಿರಿ. ಆದರೆ ಮಾತಿನಿಂದಲೇ ಶತ್ರುಗಳನ್ನು ನಿರ್ಮಾಣ ಮಾಡಿಕೊಳ್ಳುವ ನಿಮ್ಮ ಸ್ವಭಾವದಲ್ಲಿ ಮಾರ್ಪಾಟು ಮಾಡಿಕೊಳ್ಳಿರಿ. ಅಲ್ಲದೇ ಈ ಎಲ್ಲ ಸಂಕಟಗಳಿಂದ ಪಾರುಮಾಡಲು ಆ 'ವಿಘ್ನೇಶ'ನನ್ನು ಪೂಜಿಸಿ ಪ್ರಾರ್ಥಿಸಿರಿ.

ಈ ರಾಶಿಯವರ ಆರೋಗ್ಯ ವರುಷವಿಡೀ ಚೆನ್ನಾಗಿರದು. ಒಂದಿಲ್ಲೊಂದು ಕಿರುಕಳಪೀಡೆ ಉಪದ್ರವ ಇದ್ದೇ ಇರುವುದಲ್ಲದೇ ಅಕ್ಟೋಬರ ೨೭ ರಿಂದ ಜನವರಿ ೧೪, ಫೆಬ್ರುವರಿ ೧೫ ರಿಂದ ಮಾರ್ಚ ೧೫, ಜೂನ ೧೫ ರಿಂದ ಜುಲೈ ೧೫ರ ವರೆಗೆ ರೋಗ ಉಲ್ಬಣಿಸುವದಲ್ಲದೆ. ಅಪಘಾತದ ಭೀತಿಯೂ ಉಂಟು. ಆದುದರಿಂದ ಈ ಅವಧಿಯಲ್ಲಿ ವಾಹನ ಚಾಲಕರು, ತಾಂತ್ರಿಕ ಹಾಗೂ ಬಾಹ್ಯ ಕೆಲಸಗಾರರು, ವರ್ಕಶಾಪ, ಮಶೀನ ಮೊದಲಾದ ಮಶಿನರಿಗಳಲ್ಲಿ ಕಾರ್ಯ ಮಾಡುವವರು ವಿಶೇಷ ಎಚ್ಚರಿಕೆಯಲ್ಲಿರುವದು ಅವಶ್ಯ. ಆರ್ಥಿಕ ದೃಷ್ಟಿಯಿಂದ ನೋಡಿದರೆ ಈ ವರ್ಷ ತೀರ ತಾಪದಾಯಕವಾಗಿದೆ. ಡಾಕ್ಟರ್, ವಕೀಲರ ಬಿಲ್ಲುಗಳಿಗಾಗಿಯೆ ಮುಕ್ಕಾಲು ಆದಾಯ ಖರ್ಚಾಗುತ್ತದೆ. ಆದಾಯ ಅಲ್ಪ, ವೆಚ್ಚ ವಿಪರೀತ ಸಾಲಗಾರರ ಕಾಟ ಹೆಚ್ಚಿ ಹೊಸ ಸಾಲದ ಪರದಾಟದಲ್ಲಿಯೇ ವರುಷ ಕಳೆಯಬೇಕಾಗುತ್ತದೆ. ಆದಾಗ್ಯೂ ಜನೇವರಿ ೧೪ ರಿಂದ ಫೆಬ್ರುವರಿ ೧೨ ಹಾಗು ಏಪ್ರಿಲ್ ೧೫ ರಿಂದ ಮೇ ೧೫ ಹಾಗು ಅಗಷ್ಟ ೧೫ ರಿಂದ ಅಕ್ಟೋಬರ ೧೮ ರ ವರೆಗಿನ ಅವಧಿ ಇದ್ದುದರಲ್ಲಿಯೇ ಅನುಕೂಲವಿದೆ. ನಿರೀಕ್ಷಿಸಿದ ಮೂಲದಿಂದ ದ್ರವ್ಯಾನುಕೂಲತೆಯಾಗುವುದರಿಂದ ಅಪಮಾನದ ಪ್ರಸಂಗ ತಪ್ಪುವುದು; ಆದರೆ ಫೆಬ್ರುವರಿ ೧೨ ರಿಂದ ಮಾರ್ಚ ೧೫ ರ ವರೆಗೆ ಹಾಗೂ ಜೂನ ೧೫ ರಿಂದ ಅಗಷ್ಟ ೧೫ ರ ವರೆಗಿನ ಮೂರು ತಿಂಗಳ ಕಾಲ ಆರ್ಥಿಕ ಸ್ಥಿತಿಯು ಪರಾಕಾಷ್ಠೆ ಮುಟ್ಟಿ ನಿಮ್ಮ ಸತ್ವಪರೀಕ್ಷೆಯಾಗುವದಾದರೂ ಅದರಲ್ಲಿ ಜಯ ಗಳಿಸುವಿರಿ.

ಕೋರ್ಟು ಕಚೇರಿಯ ಯಾವುದೇ ಪ್ರಕಾರದ ವ್ಯಾಜ್ಯಗಳಿಗೆ ಈ ವರುಷ ಕೈಹಾಕದಿರುವುದೇ ಹಿತಕರವು. ಕೈಹಾಕಿದಲ್ಲಿ ಕೈಸುಟ್ಟುಕೊಳ್ಳುವಿರಿ. ದಾವೆ ದಾಖಲು ಮಾಡುವುದು, ಅನಿವಾರ್ಯವಿದ್ದಲ್ಲಿ ದಿವಾಣಿ ವ್ಯಾಜ್ಯಗಳಿಗೆ ಪೂರ್ವಾರ್ಧವೂ, ಫೌಜದಾರಿ ಹಾಗೂ ರಾಜಕೀಯ ವ್ಯಾಜ್ಯಗಳಿಗೆ ಉತ್ತರಾರ್ಧವೂ ಕೆಲಮಟ್ಟಿಗೆ ಅನುಕೂಲವಿದ್ದರೂ ಮುದ್ದತ ತೆಗೆದುಕೊಂಡು ಮುಂದೂಡುವುದೇ ಹಿತಕರವು.

ಈ ರಾಶಿಯ ನೌಕರ ವರ್ಗದವರಿಗೆ ಈ ವರುಷ ಪ್ರತಿಕೂಲವಾಗಿದೆ. ಮೇಲಾಧಿಕಾರಿಗಳ ಉಪದ್ರವಕ್ಕೆ ಬೇಸತ್ತು ಇಲ್ಲವೇ ಹಿಂಬಡತಿ ಮೂಲಕ ರಾಜೀನಾಮೆ ಕೊಡುವ ಪ್ರಸಂಗ ಬರಬಹುದು. ಜೀವನವೆಂದರೆ ಸುಖ-ದುಃಖಗಳ ಸಮ್ಮಿಶ್ರಣ. ದುಃಖದ ನಂತರ ಸುಖ ಬಂದೇ ಬರುತ್ತದೆ. ಅಶುಭಶ್ಯ ಕಾಲಹರಣ ಎಂಬಂತೆ ನೀವು ತಾಳ್ಮೆಯಿಂದ ಇದ್ದರೆ ಎಲ್ಲವೂ ಸರಿಯಾಗುತ್ತದೆ. ಈ ವರುಷದ ಫೆಬ್ರುವರಿ ೧೨ ರಿಂದ ಮಾರ್ಚ ೧೫ ರ ಒಳಗೆ ಹಾಗೂ ಜೂನ ೧೫ ರಿಂದ ಜುಲೈ ೧೫ ರ ವರೆಗಿನ ಈ ಎರಡು ತಿಂಗಳ ಅವಧಿಯಲ್ಲಿ ಅನಪೇಕ್ಷಿತ ಸ್ಥಳಕ್ಕೆ ಬದಲಿಯಾಗುವದಲ್ಲದೇ ವರಿಷ್ಠರಿಂದ ಅಸಹನೀಯ ಕಿರುಕುಳ ಉಂಟಾಗಬಹುದಾಗಿದೆ. ಆದರೆ ಜನೇವರಿ ೧೪ ರಿಂದ ಫೆಬ್ರುವರಿ ೧೨ ಹಾಗೂ ಏಪ್ರಿಲ್ ೧೨ ರಿಂದ ಮೇ ೧೫ ರ ವರೆಗೆ ಮತ್ತು ಅಗಸ್ಟ ೧೫ ರಿಂದ ಅಕ್ಟೋಬರ ೧೮ ರ ವರೆಗಿನ ಅವಧಿ ಇದ್ದುದರಲ್ಲಿಯೆ ಅನುಕೂಲಕರವಿದ್ದು ವರಿಷ್ಠರ ತಪ್ಪು ತಿಳುವಳಿಕೆ ದೂರಾಗಿ ಸಹಕಾರ ಕುದುರುವದರಲ್ಲಿ ಸಹಾಯವಾಗುವದು. ಈ ರಾಶಿಯ ನಿರುದ್ಯೋಗಿಗಳಿಗಂತೂ ಈ ವರುಷ ಅಸಹನೀಯ ವರುಷವಾಗಿದೆ ಎಂದೇ ಹೇಳಬಹುದಾದರೂ ವರುಷಾಂತ್ಯದಲ್ಲಿ ಅಂದರೆ ಜುಲೈ ೧೬ ರಿಂದ ಅಕ್ಟೋಬರ ೧೮ ರ ವರೆಗಿನ ಕಾಲ ತುಸು ಅನುಕೂಲವಾಗಿದೆ. ಹಂಗಾಮಿ ನೌಕರದಾರರ ತಲೆಯ ಮೇಲೆ ಖಡ್ಗಧಾರೆ ಯಾಗವಾಲೂ ತೂಗಾಡುತ್ತಿರುತ್ತದೆ. ಅರ್ಥಾತ್ ಅಸ್ಥಿರತೆಯಲ್ಲಿಯೇ ಇದೊಂದು ವರುಷ ಕಳೆಯಬೇಕಾಗುತ್ತದೆ. ಈ ರಾಶಿಯ ಬಾಹ್ಯ ಕೆಲಸಗಾರರಿಗೂ, ತಾಂತ್ರಿಕ ಕೆಲಸಗಾರರಿಗೂ, ಗಿರಣಿ-ಕಾರಖಾನೆಗಳ ಕಾರ್ಮಿಕ ವರ್ಗದವರಿಗೂ ಶನಿ-ರಾಹುಗಳು ಪ್ರತಿಕೂಲವಿರುವದರಿಂದ ಈ ವರುಷ ನಿರುತ್ಸಾಹದಾಯಕವಾಗಿದ್ದರೂ ಜನೇವರಿ ೧೪ ರಿಂದ ಫೆಬ್ರುವರಿ ೧೨ ರ ಒಳಗೆ ಹಾಗೂ ಜುಲೈ ೧೬ ರಿಂದ ಅಕ್ಟೋಬರ ೧೮ ರ ವರೆಗಿನ ಅವಧಿ ತುಸು ಅನುಕೂಲಕರ ಕಾಲ ಇರುವದರಿಂದ ಈ ಅವಧಿಯಲ್ಲಿ ಅವರ ಕೆಲ ಬೇಡಿಕೆಗಳು ಕೆಲಮಟ್ಟಿಗೆ ಈಡೇರುತ್ತವೆ, ಈ ರಾಶಿಯ ಕೃಷಿ ವರ್ಗದವರಿಗೆ ಈ ವರುಷ ನಿರುತ್ಸಾಹದಾಯಕವಾಗಿದೆ. ನಿರೀಕ್ಷಿಸಿದಷ್ಟು ಬೆಳೆ ಬಾರದಿರುವದರಿಂದ ಸಾಲ ಮಾಡುವ ಇಲ್ಲವೆ ಹೊಲ ಮನೆಗಳನ್ನು ಒತ್ತಿ ಹಾಕಬಹುದಾದ ಸಂದರ್ಭ ಒದಗಿ ಮುಂದಿನ ಬೇಸಾಯ ಸಾಗುಮಾಡುವುದೇ ದುಃಸಾಧ್ಯವಾಗುತ್ತದೆ. ಈ ರಾಶಿಯ ಬುದ್ಧಿಜೀವಿಗಳಿಗೂ, ಸಾಹಿತಿಗಳಿಗೂ, ಕಲಾವಿದರಿಗೂ, ಶಿಕ್ಷಕ ವರ್ಗದವರಿಗೂ, ಗುರುವು ಅಶುಭನಿರುವದರಿಂದ ಈ ವರುಷ ನಿರುತ್ಸಾಹದಾಯಕವಿರುತ್ತದೆ, ಉದ್ಯೋಗದಲ್ಲಿ ಚಟುವಟಿಕೆ ಕಂಡು ಬರುವುದಿಲ್ಲ. ಮಿತ್ರರೇ ಶತ್ರುಗಳಾಗುವುದರಿಂದ ಮಿಥ್ಯಾಪವಾದವನ್ನು ಎದುರಿಸಬೇಕಾಗುತ್ತದೆ. ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರಿಗೆ, ಉದ್ಯಮದಾರರಿಗೆ, ಕಮೀಶನ್ ಎಜಂಟರಿಗೆ, ಗಿರಣಿ, ಕಾರಖಾನೆ. ಚಾಳ ಟಾಕೀಜ, ಮಾಲಕ ವರ್ಗದವರಿಗೆ ಉತ್ಸಾಹದಾಯಕ ವರ್ಷವಿದಾಗಿಲ್ಲ. ಸರಕಾರದ ನಿರ್ಬಂಧನೆಗಳನ್ನು ಎದುರಿಸಬೇಕಾಗುತ್ತದೆ. ಹೊಸ ಉದ್ಯೋಗ, ಉದ್ಯಮಗಳನ್ನು ಪ್ರಾರಂಭಿಸಬೇಕೆಂಬ ವಿಚಾರ ಈ ವರುಷ ಕೈಬಿಡುವುದೇ ಹಿತಕರವು. ನವೆಂಬರ ೧೫ ರಿಂದ ಫೆಬ್ರುವರಿ ೧೨, ಹಾಗೂ ಜುಲೈ ೧೫ ರಿಂದ ಅಕ್ಟೋಬರ್ ೧೮ ರ ವರೆಗಿನ ಈ ಐದು ತಿಂಗಳ ಕಾಲ ಇದ್ದುದರಲ್ಲಿಯೇ ತುಸು ಅನುಕೂಲವಿರುತ್ತದೆ.

ಈ ರಾಶಿಯ ವಧೂವರರಿಗೆ ಪ್ರತಿಕೂಲವಿದೆ. ಮದುವೆ ನಿಶ್ಚಿತವಾಗಿದ್ದರೂ ಮುಂದೂಡಬಹುದಾಗಿದೆ. ಇಲ್ಲವೇ ಮುರಿಯಬಹುದಾಗಿದೆ. ಅದರಲ್ಲಿಯೂ ಫೆಬ್ರುವರಿ ೧೨ ರಿಂದ ಮಾರ್ಚ ೧೫ ಹಾಗು ಮೇ ೧೫ ರಿಂದ ಜುಲೈ ೧೫ ರ ವರೆಗಿನ ಕಾಲ ತೀರ ಪ್ರತಿಕೂಲವಿರುತ್ತದೆ. ಕಳೆದ ವರುಷ ನಿಶ್ಚಿತವಾಗಿದ್ದರೆ ನವೆಂಬರ ೧೫ ರಿಂದ ಫೆಬ್ರುವರಿ ೧೨ ರ ಒಳಗೆ ವಿವಾಹ ಜರುಗಿಸುವದುತ್ತಮ. ವಿವಾಹಿತ ಸ್ತ್ರೀ ಪುರುಷರಿಗೂ ಗೃಹಿಣಿಯರಿಗೂ ಈ ವರುಷ ಅಶಾಂತಿಯ ವರುಷವಾಗಿದೆ. ಪ್ರತಿನಿತ್ಯದ ಗೃಹಕಲಹದಿಂದಾಗಿ ನಿದ್ರಾರಹಿತವಾದ ಹಲವು ರಾತ್ರಿಯನ್ನು ಕಳೆಯಬೇಕಾಗುತ್ತದೆ. ಸ್ವರ್ಗದಂತಿರುವ ಮನೆಯು ಮಸಣದಂತೆ ಭಾಸವಾಗುತ್ತದೆ. ತಪ್ಪು ತಿಳುವಳಿಕೆಯಿಂದಲೂ, ಭಿನ್ನಾಭಿಪ್ರಾಯದಿಂದಲೂ ಏಕತ್ರ ಕುಟುಂಬ ಒಡೆದು ಹೋಗಬಹುದಾಗಿದೆ. ಅಕ್ಟೋಬರ ೨೭ ರಿಂದ ಜನೇವರಿ ೧೪, ಫೆಬ್ರುವರಿ ೧೨ ರಿಂದ ಮಾರ್ಚ ೧೫, ಜೂನ ೧೫ ರಿಂದ ಜುಲೈ ೧೫ ರ ವರೆಗಿನ ಕಾಲದಲ್ಲಿ ಗೃಹಕಲಹ ಪರಾಕಾಷ್ಠ ಮುಟ್ಟುತ್ತದೆ.

ಈ ರಾಶಿಯ ಗರ್ಭವತಿ ಸ್ತ್ರೀಯರ ಪ್ರಸವ ಕಷ್ಟವಾಗುವದಲ್ಲದೆ ಶಸ್ತ್ರಕ್ರಿಯೆ ಅನಿವಾರ್ಯವಾಗುತ್ತದೆ.

ಈ ರಾಶಿಯ ವಿದ್ಯಾರ್ಥಿಗಳಿಗೆ ತೀರ ಅನಿಷ್ಟದಾಯಕವಾಗಿದ್ದು ಶಿಕ್ಷಕರ ಅವಕೃಪೆಯಿಂದಾಗಲೀ ಮನೆಯಲ್ಲಿಯ ವಿಷಮ ವಾತಾವರಣದಿಂದಾಗಲೀ ಆರ್ಥಿಕ ಮುಗ್ಗಟ್ಟಿನಿಂದಾಗಲೀ ಶಿಕ್ಷಣ ಮುಂದುವರಿಸುವುದೇ ಕಷ್ಟದಾಯಕವಾಗುತ್ತದೆ. ಜನೇವರಿ ೧೪ ರಿಂದ ಫೆಬ್ರುವರಿ ೧೨ ಹಾಗೂ ಏಪ್ರಿಲ ೧೨ ರಿಂದ ಮೇ ೧೫ ರ ಈ ಎರಡು ತಿಂಗಳ ಕಾಲ ಮಾತ್ರ ಶಿಕ್ಷಣ ದೃಷ್ಟಿಯಿಂದ ಅನುಕೂಲವಾಗಿದ್ದು ಈ ಕಾಲದಲ್ಲಿ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿಗಳು ತೇರ್ಗಡೆ ಆಗುವರೇ ವಿನಃ ಶ್ರೇಣಿ ದೊರೆಯದು. ಮಿಕ್ಕ ಕಾಲದಲ್ಲಿ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿಗಳ ಫಲಿತಾಂಶ ಸಂಶಯದಾಯಕವು.

ಈ ರಾಶಿಯ ರಾಜಕೀಯ ಸಾಮಾಜಿಕ ಕಾರ್ಯಕರ್ತರಿಗೆ ಈ ವರುಷ ಚೆನ್ನಾಗಿರುವುದಿಲ್ಲ. ಚುನಾವಣೆ ಮೊದಲಾದ ಜಂಜಾಟದಿಂದ ದೂರ ಇರುವುದೇ ಹಿತಕರವು. ಮಿಥ್ಯಾಪವಾದದಿಂದ ಮಿತ್ರರು ಶತ್ರುಗಳಾಗಿ ಅವಿಶ್ವಾಸ ವ್ಯಕ್ತಪಡಿಸುವದರಿಂದ ಅಧಿಕಾರ ಸ್ಥಾನಮಾನಗಳಿಂದ ಕೆಳಗೆ ಇಳಿಯಬೇಕಾಗುತ್ತದೆ.

ಒಟ್ಟಿನಲ್ಲಿ ಈ ರಾಶಿಯ ಎಲ್ಲ ವರ್ಗದವರಿಗೂ ಎಲ್ಲ ದೃಷ್ಟಿಯಿಂದಲೂ ಅಶುಭದಾಯಕವಿದ್ದು ಚಿಂತಾದಾಯಕ ವರುಷವಾಗಿದೆ. ಅದರಲ್ಲಿಯೂ ವಿಶಾಖಾದ ಕೊನೆಯ ಚರಣದ ಹಾಗೂ ಅನುರಾಧದ ವೃಶ್ಚಿಕ ರಾಶಿಯವರಿಗೆ ಅಶುಭ ಪರಿಣಾಮ ಹೆಚ್ಚಾಗಿದ್ದರೆ ಜೇಷ್ಠಾದ ವೃಶ್ಚಿಕ ರಾಶಿಯವರಿಗೆ ಅಶುಭ ಫಲದ ಪ್ರಮಾಣ ಕಡಿಮೆ ಇರುತ್ತದೆ. ಅಕ್ಟೋಬರ ೨೭ ರಿಂದ ಜನೇವರಿ ೧೪ ರ ಒಳಗೆ ಹಾಗೂ ಫೆಬ್ರುವರಿ ೧೨ ರಿಂದ ಮಾರ್ಚ ೧೫ ರ ವರೆಗೆ ಹಾಗೂ ಜೂನ ೧೫ ರಿಂದ ಅಗಸ್ಟ ೧೫ ರ ವರೆಗಿನ ಕಾಲವು ತೀರ ತಾಪದಾಯಕವಾಗಿದ್ದು ಈ ಕಾಲದಲ್ಲಿ ನೂರಕ್ಕೆ ನೂರರಷ್ಟು ಅಶುಭಫಲವಿದ್ದರೆ ಮಿಕ್ಕ ಕಾಲದಲ್ಲಿ ಅರ್ಧದಷ್ಟು ಅಶುಭದಾಯಕವಿರುತ್ತದೆ. ವಿಘ್ನೇಶ್ವರನನ್ನು ಪ್ರಾರ್ಥಿಸಿ ಆತ ನಿಮ್ಮನ್ನು ಪಾರುಮಾಡಬಲ್ಲ.



## ಧನು

ಈ ವರುಷ ಈ ರಾಶಿಯ ಎಲ್ಲ ವರ್ಗದವರಿಗೂ ಎಲ್ಲ ದೃಷ್ಟಿಯಿಂದ ಯಾವ ಮಹತ್ವದ ಶುಭ- ಅಶುಭ ಘಟನೆಗಳೂ ಜರುಗದೇ ಯಥಾಪ್ರಕಾರ ಮೊದಲಿನಂತೆಯೇ ಮುಂದುವರಿಯುತ್ತದೆ.

ಈ ರಾಶಿಯವರ ಗ್ರಹಗತಿಯನ್ನು ಅವಲೋಕಿಸಲಾಗಿ ವರುಷವಿಡೀ ಶನಿಯು ವಿಳನೆಯವನಾಗಿರುವದರಿಂದ ಶುಭಫಲವನ್ನು ನೀಡಲಾರ. ಅದರಂತೆ ಅಶುಭಫಲವನ್ನೂ ಕೊಡಲಾರ. ಕಳೆದ ವರುಷದಿಂದ ದ್ವಿತೀಯವನಾಗಿ ಶುಭಫಲವನ್ನು ಕೊಡು

ತ್ರಿದ್ಧ ಗುರುವು ಈ ವರುಷದ ಫೆಬ್ರುವರಿ ೧೯ ರಿಂದ ತೃತೀಯನಾಗಿ ಬರುವುದರಿಂದ ಶುಭಫಲ ಕೊಡದಿದ್ದರೂ ಅ ಶು ಭ ಫ ಲ ವ ನ್ನು ಕೊಡುವದಿಲ್ಲ. ಹೀಗಾಗಿ ಈಗಿದ್ದ ಯಥಾಸ್ಥಿತಿಯೇ ಈ ವರುಷ ಮುಂದುವರಿಯಬಹುದಾಗಿದೆ. ಆರೋಗ್ಯದ ದೃಷ್ಟಿಯಿಂದ ನೋಡಿದರೆ ವರುಷವಿಡೀ ಚೆನ್ನಾಗಿದ್ದರೂ ಮಾರ್ಚ ೧೫ ರಿಂದ ಎಪ್ರಿಲ್ ೧೨ ರ ವರೆಗೆ ಹಾಗೂ ಜುಲೈ ೧೫ ರಿಂದ ಆಗಸ್ಟ ೧೫ ರ ವರೆಗಿನ ಕಾಲದಲ್ಲಿ ಮಾತ್ರ ಮುಂಬರುವ ಜನ್ಮಸ್ಥರಾಹುವಿಂದಾಗಿ ಶಾರೀರಕ ಪೀಡೆ ಉಂಟಾಗಬಹುದಾಗಿದೆ. ಆರ್ಥಿಕದೃಷ್ಟಿಯಿಂದ ನೋಡಿದರೆ ಈ ವರುಷ ಸಾಧಾರಣವಿದೆ. ಅಂದರೆ ಆಕಸ್ಮಿಕ ಧನಲಾಭ, ಅಗಣಿತ ಹಣ ಸಂಪಾದನೆ ಮೊದಲಾದ ಶುಭ ಘಟನೆಗಳೂ ಜರುಗುವುದಿಲ್ಲ. ಆರ್ಥಿಕ ಅಡಚಣಿ, ಸಾಲಕ್ಕೆ ಕೈಒಡ್ಡುವಿಕೆ ಸಾಲಗಾರರ ಕಾಟ ಮೊದಲಾದ ಅಹಿತಕಾರಕ ಪ್ರಸಂಗಗಳೂ ಎದುರಾಗದೆ ಆಯವ್ಯಯ ಬಾಯಿಗೂಡುತ್ತದೆ. ಅಕ್ಟೋಬರ ೧೬ ರಿಂದ ಮಾರ್ಚ ೧೫ ರ ವರೆಗೆ, ಮೇ ೧೫ ರಿಂದ ಜೂನ ೧೫ ರ ವರೆಗೆ ಹಾಗೂ ಆಗಸ್ಟ ೧೬ ರಿಂದ ವರ್ಷಾಂತ್ಯದ ವರೆಗಿನ ಕಾಲದಲ್ಲಿ ನಿರೀಕ್ಷಿಸಿದ ಮೂಲದಿಂದ ಬರಬೇಕಾಗಿದ್ದ ಹಣವು ಲಭಿಸುವುದರಿಂದ ಕಿಂಚಿತ್ ಹಣ ಉಳಿತಾಯವಾಗಿ ಹಣಕಾಸಿನ ಸ್ಥಿತಿ ಹತೋಟಿಯಲ್ಲಿರುತ್ತದೆ. ಆದರೆ ಮಾರ್ಚ ೧೫ ರಿಂದ ಮೇ ೧೫ ರ ವರೆಗೆ ಹಾಗೂ ಜುಲೈ ೧೫ ರಿಂದ ಆಗಸ್ಟ ೧೫ ರ ವರೆಗಿನ ಈ ಮೂರು ತಿಂಗಳ ಕಾಲಗಲ್ಲಿ ಖರ್ಚಿನ ಮುಖ ವಿಪರೀತ ಬೆಳೆದು ಅನಿವಾರ್ಯವಾಗಿ ಕೈಕೊಳ್ಳಬೇಕಾಗಿದ್ದ ದೂರಿನ ಪ್ರವಾಸ ಹಾಗೂ ಮನೆಯಲ್ಲಿ ಜರುಗಲಿರುವ ಮಂಗಲಕಾರ್ಯ ನಿಮಿತ್ತ ಹಿಂದೆ ಗಳಿಸಿದ್ದ, ಉಳಿಸಿದ್ದ ಹಣವೆಲ್ಲ ಖರ್ಚಾಗಿ ಜಮಾ ಖರ್ಚು ಬಾಯಿಗೂಡಂತ್ತದೆ.

ಕೋರ್ಟು ಕಚೇರಿಯ ಕೆಲಸದಲ್ಲಿಯಾಗಲೀ ದಾವೆ ಫಿರ್ಯಾದಿ ಮೊದಲಾದ ವ್ಯಾಜ್ಯದಲ್ಲಿ ಜಯ ದೊರೆತರೂ ನಿರೀಕ್ಷಿಸಿದ ಮಟ್ಟದಲ್ಲಿ ಲಾಭವಾಗದು. ಅಥವಾ ರಾಜಿಯಿಂದಲೇ ವ್ಯಾಜ್ಯ ಮುಗಿಯುತ್ತದೆ. ದಿವಾಣೀ ವ್ಯಾಜ್ಯಗಳಿಗೆ ವರುಷದ ಪೂರ್ವಾರ್ಧ ಫೌಜದಾರಿ ವ್ಯಾಜ್ಯಗಳಿಗೆ ಮಧ್ಯಮ ಕಾಲ ರಾಜಕೀಯ ಮೊಕದ್ದಮೆಗಳಿಗೆ ಉತ್ತರಾರ್ಧವು ಅನುಕೂಲವಿರುತ್ತದೆ.

ಈ ರಾಶಿಯ ನೌಕರವರ್ಗದವರಿಗೆ ಈ ವರುಷ ಮಿಶ್ರಿತ ಫಲವಿದೆ. ಅಕ್ಟೋಬರ ೨೬ ರಿಂದ ಮಾರ್ಚ ೧೫ ರವರೆಗೂ ಆಗಷ್ಟ ೧೫ ರಿಂದ ವರುಷಾಂತ್ಯದ ವರೆಗಿನ ಕಾಲ ಅನುಕೂಲ ಇದ್ದು ನೌಕರಿಯಲ್ಲಿ ಬಡತಿ, ನಿಚ್ಛಿತ ಸ್ಥಳಕ್ಕೆ ಬದಲಿ ವರಿಷ್ಠರ ಸಹಕಾರ ಲಭಿಸುವಿಕೆ ಮೊದಲಾದ ಶು ಭ ಘ ಟ ನೆ ಗ ಳು ಜರುಗಿದರೆ, ಈ ವರುಷದ ಮಧ್ಯದಲ್ಲಿ ಅಂದರೆ ಮಾರ್ಚ ೧೫ ರಿಂದ ಆಗಷ್ಟ ೧೫ ರವರೆಗಿನ ಕಾಲ ಪ್ರತಿಕೂಲವಿದ್ದು ಬೇಡಾದ ಸ್ಥಳಕ್ಕೆ ಬದಲಿ, ವರಿಷ್ಠರ ಅಸಹಕಾರಗಳಂಥ ಅಶುಭ ಘಟನೆಗಳು ಜರುಗುವವು. ಈ ರಾಶಿಯ ನಿರುದ್ಯೋಗಿಗಳಿಗೆ ಅಕ್ಟೋಬರ ೨೬ ರಿಂದ ಮಾರ್ಚ ೧೫ ರವರೆಗೆ ಇಲ್ಲವೇ ಆಗಷ್ಟ ೧೫ರ ನಂತರ ಉದ್ಯೋಗ ಲಭಿಸುವದು. ಹಂಗಾಮಿ ನೌಕರವರ್ಗದವರಿಗೆ ಅಸ್ಥಿರ ಪರಿಸ್ಥಿತಿಯೇ ಮುಂದುವರೆದರೂ ನೌಕರಿಗೆ ಧಕ್ಕೆಯಿಲ್ಲ. ಈ ರಾಶಿಯ ಬಾಹ್ಯ ಕೆಲಸಗಾರರಿಗೂ, ತಾಂತ್ರಿಕ ವರ್ಗದವರಿಗೂ, ಗಿರಣಿ, ಕಾರಖಾನೆಯ ಕಾರ್ಮಿಕರಿಗೂ, ಶ್ರಮಜೀವಿಗಳಿಗೂ ಈ ವರುಷ ಹೇಳಿಕೊಳ್ಳುವಂಥ ಪ್ರೋತ್ಸಾಹದಾಯಕವಾಗಿರುವದಿಲ್ಲ. ಆದರೂ ವರುಷದ ಪ್ರಾರಂಭದ ಮೂರು ತಿಂಗಳು ಹಾಗೂ ಕೊನೆಯ ಮೂರು ತಿಂಗಳು ಹೀಗೆ ಆರು ತಿಂಗಳ ಕಾಲ ಅನುಕೂಲವಿರುವದರಿಂದ ಅವರ ಕೆಲಬೇಡಿಕೆಗಳು ಮಾತ್ರ ಈಡೇರುತ್ತವೆ. ಈ ರಾಶಿಯ ಬುದ್ಧಿಜೀವಿ, ಸಾಹಿತಿ, ಕಲಾವಿದರಿಗೆಲ್ಲ ಈ ವರುಷ ಮಿಶ್ರಿತ ಫಲವಿದೆ. ಎರಡನೇ ಗುರು ಇರುವ ಕಾಲದವರೆಗೆ ಅಂದರೆ ಅಕ್ಟೋಬರ ೨೬ ರಿಂದ ಮಾರ್ಚ ೧೫ರವರೆಗೆ ಉದ್ಯೋಗದಲ್ಲಿ ಸ್ಥಿರತೆ ಪ್ರಗತಿ, ಮನ್ನಣೆ ದೊರೆಯುವದಲ್ಲದೇ ಸರಕಾರದಿಂದ ಸಂಘಸಂಸ್ಥೆಗಳಿಂದಲೂ ಪ್ರಶಸ್ತಿ, ಪದಕಗಳು ದೊರೆತು ಮಾನ ಸನ್ಮಾನ ಹೊಂದಿ ದ್ರವ್ಯಾನುಕೂಲತೆಯನ್ನು ಪಡೆಯುವರು; ಆದರೆ ಮಾರ್ಚ ೧೫ ರಿಂದ ಮೇ ೧೫ರ ವರೆಗೆ ಹಾಗೂ ಜೂನ ೧೫ ರಿಂದ ಆಗಷ್ಟ ೧೫ರ ವರೆಗೆ ಈ ನಾಲ್ಕು ತಿಂಗಳು ಕಾಲ ತೀರ ತಾಪದಾಯಕವಿದ್ದು ಉದ್ಯೋಗದಲ್ಲಿ ತೊಂದರೆಯನ್ನು, ಆರ್ಥಿಕ ಮುಗ್ಗಟ್ಟನ್ನು ಎದುರಿಸಬೇಕಾಗುತ್ತದೆ. ಈ ರಾಶಿಯ ಕೃಷಿಕ ವರ್ಗದವರಿಗೆ ಮಿಶ್ರಿತ ಫಲವಿದೆ. ಪೂರ್ವಾರ್ಧಕಾಲವು ಅನುಕೂಲವಿದ್ದು ನಿರೀಕ್ಷಿಸಿದ್ದಕ್ಕಿಂತ ಅಧಿಕ ಬೆಳೆ ಬರುವದರಿಂದ ಆರ್ಥಿಕ ಸ್ಥಿತಿ ಚೇತರಿಸಿಕೊಂಡು ಹೊಸ ಜಾಗೆ–ಮನೆ, ಹೊಲ ದನಕರುಗಳನ್ನು ಬೇಸಾಯದ ಉಪಕರಣಗಳನ್ನು ಕೊಳ್ಳುವುದಾಗಲೀ ನವೀಕರಣ ಮಾಡುವದಕ್ಕಾಗಲೀ ಸಾಲ ಮಾಡಬೇಕಾಗುತ್ತದೆ. ಆದರೆ ಮಾರ್ಚ ೧೫ ರಿಂದ ಮೇ ೧೫ರ ವರೆಗೆ ಹಾಗು ಜೂನ ೧೫ರಿಂದ ಆಗಷ್ಟ ೧೫ರ ವರೆಗೆ ಈ ನಾಲ್ಕು ತಿಂಗಳು ಕಾಲದಲ್ಲಿ ಸಾಲಗಾರ ಕಾಟ ಹೆಚ್ಚಾಗುವದರಿಂದ ಹೊಸ ಸಾಲಕ್ಕಾಗಿ ಪರದಾಡಬೇಕಾಗುತ್ತದೆ. ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರಿಗೂ, ಉದ್ಯಮದಾರರಿಗೂ, ಕಾರಖಾನೆ, ಗಿರಣಿ, ಟಾಕೀಜ, ಶಾಳೆಗಳ ಮಾಲಕ ವರ್ಗದವರಿಗೂ ವರುಷದ ಮೊದಲಿನ ನಾಲ್ಕು ತಿಂಗಳ ಕಾಲ ಹಾಗೂ ಕೊನೆಯ ಮೂರು ತಿಂಗಳ ಕಾಲ ಹೀಗೆ ಏಳು ತಿಂಗಳ ಕಾಲ ಅನುಕೂಲವಿದ್ದು ಅಗಣಿತ ದ್ರವ್ಯಗಳಿಸುವರು. ಆದರೆ ಮಧ್ಯದ ಐದು ತಿಂಗಳ ಕಾಲ ಅಂದರೆ ಮಾರ್ಚ ೧೫ ರಿಂದ ಆಗಷ್ಟ ೧೫ ರವರೆಗಿನ ಕಾಲ ತೀರ ಪ್ರತಿಕೂಲವಿದ್ದು, ಉದ್ಯೋಗದಲ್ಲಿ ತೊಂದರೆ ಉದ್ಭವಿಸುವದು, ಅಲ್ಲದೇ ಸರಕಾರದ ನಿರ್ಬಂಧನೆಗಳನ್ನು ಎದುರಿಸಬೇಕಾಗುತ್ತದೆ. ಸಟ್ಟಾ, ಲೋಕ ಕಮೀಶನ ಏಜೆಂಟ, ಹುಂಡೆದಾರರಿಗೆ ಈ ವರುಷ ಪ್ರೋತ್ಸಾಹದಾಯಕವಿದೆ. ಪೂರ್ವಾರ್ಧದಲ್ಲಿ ಗುರುವು, ಉತ್ತರಾರ್ಧದಲ್ಲಿ ಕುಜನೂ ಶುಭರಿರುವ ಕಾರಣ ಅಗಣಿತ ದ್ರವ್ಯ ಸಂಪಾದಿಸುವರು. ಆದರೆ ನವೆಂಬರ ೧೫ ರಿಂದ ಡಿಶೆಂಬರ ೧೫, ಮಾರ್ಚ ೧೫ ರಿಂದ ಎಪ್ರಿಲ್ ೧೨ ಜುಲೈ ೧೫ ರಿಂದ ಆಗಷ್ಟ ೧೫ರ ವರೆಗಿನ ಕಾಲ ಅಶುಭವಿದ್ದು ವ್ಯಾಪಾರ ಉದ್ಯೋಗದಲ್ಲಿ ಹಿನ್ನಡೆ, ಅಧಿಕ ಖರ್ಚು, ಸರಕಾರದ ನಿರ್ಬಂಧನೆಗಳನ್ನು ಎದುರಿಸಬೇಕಾಗುತ್ತದೆ.

ಈ ರಾಶಿಯ ವಧೂವರರಿಗೆ ಈ ವರುಷ ಕಂಕಣ ಬಲ ಕೂಡಿ ಬಂದಿರುವುದರಿಂದ ಅಕ್ಟೋಬರ ೨೬ರಿಂದ ಮಾರ್ಚ ೧೫ ಹಾಗೂ ಎಪ್ರಿಲ ೧೨ ರಿಂದ ಜುಲೈ ೧೫ರ ಒಳಗೆ ವಿವಾಹ ಜರಗುತ್ತದೆ. ಈ ರಾಶಿಯ ವಿವಾಹಿತರಿಗೂ, ಗೃಹಿಣಿಯರಿಗೂ ಮಿಶ್ರ




ಓ! ನನ್ನ ಹತ್ತಿರ ಬರಬೇಡ!

ಸೊತನ ಗೃಹಪ್ರವೇಶ ತೀರ್ಥಯಾತ್ರಾ ಸಂದರ್ಶನ ವಾಹನ ಸೌಖ್ಯ ಮನೆಯಲ್ಲಿ ಮಂಗಲಕಾರ್ಯ ಜರುಗುವಿಕೆ ಇವೇ ಮೊದಲಾದ ಶುಭ ಘಟನೆಗಳು ಜರಗುವವು.

ಈ ರಾಶಿಯ ಗರ್ಭವತಿ ಸ್ತ್ರೀಯರಿಗೆ ಈ ವರುಷ ಸುಖ ಪ್ರಸವವಿರುವದಾದರೂ ಡಿಶಂಬರ್ ೧೬ ರಿಂದ ಜನೆವರಿ ೧೪, ಎಪ್ರಿಲ್ ೧೨ ರಿಂದ ಮೇ ೧೫, ಜೂನ ೧೫ ರಿಂದ ಜುಲೈ ೧೬, ಅಗಷ್ಟ ೧೬ ರಿಂದ ಸಪ್ಟೆಂಬರ ೧೬ ರ ವರೆಗಿನ ಕಾಲದಲ್ಲಿ ಹೆರಿಗೆಯಾದರೆ ತೊಂದರೆಯಾಗಬಹುದಾಗಿದೆ.

ಈ ರಾಶಿಯ ವಿದ್ಯಾರ್ಥಿಗಳಿಗೆ ದ್ವಿತೀಯ ಗುರುವಿನ ಮೂಲಕ ಈ ವರ್ಷ ಪ್ರೋತ್ಸಾಹದಾಯಕವಿದೆ. ಕಳೆದ ವರುಷ ಕುಂಠಿತವಾಗಿದ್ದ ಶಿಕ್ಷಣ ಮತ್ತೆ ಮುಂದುವರೆಯುವುದು. ನವಂಬರ ೧೫ ರಿಂದ ಡಿಶಂಬರ ೧೬ ಹಾಗೂ ಫೆಬ್ರುವರಿ ೧೨ ರಿಂದ ಎಪ್ರಿಲ್ ೧೨, ಮೇ ೧೫ ರಿಂದ ಜುಲೈ ೧೬, ಸಪ್ಟೆಂಬರ ೧೬ ರಿಂದ ವರ್ಷಾಂತ್ಯದವರೆಗಿನ ಈ ಅವಧಿಯಲ್ಲಿ ಜರುಗಲಿರುವ ಯಾವುದೇ ಪರೀಕ್ಷೆಗೆ ಕಟ್ಟಲಿರುವ ವಿದ್ಯಾರ್ಥಿಗಳು ಅನಾಯಾಸವಾಗಿ ತೇರ್ಗಡೆಯಾಗುವರಲ್ಲದೆ ದರ್ಜೆ, ಶ್ರೇಣಿ, ಪ್ರಶಸ್ತಿ, ಪದಕ ದೊರೆತು ಶಿಷ್ಯವೃತ್ತಿ ವಿದ್ಯಾರ್ಥಿವೇತನ ಲಭಿಸುವದಲ್ಲದೆ ಹೆಚ್ಚಿನ ಶಿಕ್ಷಣ ಮುಂದುವರೆಸುವರು. ಹೆಚ್ಚಿನ ಶಿಕ್ಷಣಕ್ಕಾಗಿ ಇಲ್ಲವೇ ಸಂಶೋಧನೆಗಾಗಿ ವಿದೇಶ ಪ್ರವಾಸ ಕೈಕೊಳ್ಳುವ ಸುಯೋಗವು ಈ ವರುಷದಲ್ಲಿದೆ.

ಅನೇಕ ಗ್ರಹಗಳ ಬೆಂಬಲ ಪಡೆದ ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೆ ಈ ವರುಷವೆಂದರೆ ಅವರ ಜೀವನದಲ್ಲಿಯೇ ಸ್ಮರಣೀಯ ವರುಷವಾಗಿದ್ದು, ಪ್ರತ್ಯಕ್ಷ ರಾಜಕೀಯದಲ್ಲಿ ಭಾಗವಹಿಸಿ ಅನೇಕ ಸಂಘ ಸಂಸ್ಥೆಗಳ ಪದಾಧಿಕಾರ ಪಡೆಯುವರಲ್ಲದೇ ಗೌರವಾನ್ವಿತ ಸ್ಥಾನಮಾನ, ಅಧಿಕಾರ ಪಡೆಯುವಿಕೆ, ಜಿಲ್ಲೆಯ ರಾಜ್ಯದ ಗಣ್ಯ ವ್ಯಕ್ತಿಗಳಾಗುವುದರಲ್ಲಿ ಸಂದೇಹವಿಲ್ಲ. ಶತ್ರುಗಳೇ ಮಿತ್ರರಾಗುವದರಿಂದ ಈ ವರುಷದಲ್ಲಿ ಜರುಗಬಹುದಾಗಿದ್ದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೂ ಅವಿರೋಧ ಇಲ್ಲವೇ ಬಹುಮತ ಪಡೆದು ಆಯ್ಕೆಯಾಗುವರು.

ಒಟ್ಟಿನಲ್ಲಿ ಈ ರಾಶಿಯ ಎಲ್ಲ ವರ್ಗದವರಿಗೂ ಎಲ್ಲ ದೃಷ್ಟಿಯಿಂದಲೂ ಈ ವರುಷ ಉತ್ತಮವಾಗಿದೆ. ಇಂಥ ಸುವರ್ಣ ಕಾಲವಿರುವ ಸುಸಂಧಿ ಮೇಲಿಂದ ಮೇಲೆ ಬಾರದು. ಗಾಳಿ ಬಿಟ್ಟಾಗ ತೂರಿಕೋ ಎಂಬಂತೆ ಇಂಥ ಅಪೂರ್ವ ಸುಸಂಧಿಯನ್ನು ಕಳೆದುಕೊಳ್ಳದೇ ಕಾರ್ಯಮಗ್ನರಾಗಿರಿ ಎಂಬುದೇ ಈ ವರುಷದ ಗ್ರಹಗಳ ಸಂದೇಶವಾಗಿದೆ.



## ಕುಂಭ

**ಈ ರಾಶಿಯವರಿಗೆ ಈ ವರುಷ ಮಿಶ್ರ ಫಲವಿದೆಯಾದರೂ ಕಳೆದ ವರುಷದ ತೊಂದರೆಯ ಪ್ರಮಾಣ ಕಡಿಮೆಯಾಗುವುದು.**

ಈ ರಾಶಿಯವರ ಈ ವರುಷದ ಗ್ರಹಗತಿ ನೋಡಲಾಗಿ ಕಳೆದ ವರುಷದಿಂದ ಅಶುಭ ಫಲದಾಯಕನಾಗಿದ್ದ ಹನ್ನೆರಡನೇ ಗುರುವು ನಾಳಿನ ಫೆಬ್ರುವರಿ ೯ ರಿಂದ ಜನ್ಮಸ್ಥನಾಗಿ ಬರುವುದರಿಂದ ಅಶುಭ ಫಲ ಕಡಿಮೆಯಾದರೂ ಶುಭ ಫಲವನ್ನೇನೂ ಆತ ಕೊಡದೆ ಮಧ್ಯಮದಾಯಕನಾಗುತ್ತಾನೆ. ಎಪ್ರಿಲದಿಂದ ಬರುವ ದಶಮ ರಾಹು ಆರ್ಥಿಕ ದೃಷ್ಟಿಯಿಂದ ಶುಭದಾಯಕನಾಗಿರುತ್ತಾನೆ. ಕಳೆದ ವರುಷದಿಂದ ಪ್ರಾರಂಭವಾದ ಪಂಚಮ ಶನಿಯ ಅನಿಷ್ಟತೆಯು ಈ ವರುಷದಲ್ಲಿ ಇದ್ದಾಗ್ಯೂ ಉಗ್ರತೆಯ ಪ್ರಮಾಣ ಕಡಿಮೆಯಾಗಿರುತ್ತದೆ. ಹೀಗಾಗಿ ಈ ವರುಷ ಹೇಳಿಕೊಳ್ಳುವಷ್ಟು ಪ್ರಗತಿ ಇರದಾದರೂ ಕಳೆದ ವರುಷದಷ್ಟು ಪ್ರತಿಕೂಲ ಸನ್ನಿವೇಶ ಇರಲಾರದು. ಆರೋಗ್ಯ ದೃಷ್ಟಿಯಿಂದ ನೋಡಿದರೆ ಕಳೆದ ವರುಷದಷ್ಟು ತೊಂದರೆ ಇರದೆ ಸಾಧಾರಣವಾಗಿದ್ದ ಆರೋಗ್ಯ ಜನೇವರಿ ೧೪ ರಿಂದ ಫೆಬ್ರುವರಿ ೧೨, ಮೇ ೧೫ ರಿಂದ, ಜೂನ ೧೫ ಸಪ್ಟೆಂಬರ ೧೬ರಿಂದ ಅಕ್ಟೋಬರ ೧೮ ರ ವರೆಗಿನ ಈ ಮೂರು ತಿಂಗಳ ಕಾಲದಲ್ಲಿ ಆರೋಗ್ಯ ಕೆಡುವದಲ್ಲದೇ ಅಪಘಾತದ ಭಯವೂ ಉಂಟು; ಆದರೆ ವರುಷದ ಉಳಿದ ಒಂಬತ್ತು ತಿಂಗಳ ಕಾಲ ಉತ್ತಮವಿರುತ್ತದೆ. ಆರ್ಥಿಕ ದೃಷ್ಟಿಯಿಂದ ನೋಡಿದರೆ ಈ ವರುಷ ಹೇಳಿಕೊಳ್ಳುವಷ್ಟು ಉತ್ತಮವಿರದಾದರೂ ಕಳೆದ ವರುಷದಂತೆ ಸಾಲಗಾರರ ಕಾಟ, ಅಪಮಾನ ಪ್ರಸಂಗ, ಮೊದಲಾದ ಅಹಿತಕರ ಘಟನೆಗಳು ಜರಗುವದಿಲ್ಲ. ಅದರಂತೆ ಆಕಸ್ಮಿಕ ಧನಲಾಭ, ದ್ರವ್ಯ ಸಂಪಾದನೆ, ಉಳಿಸುವಿಕೆ, ಮೊದಲಾದ ಶುಭ ಘಟನೆಗಳು ಜರುಗುವು. ಅಕ್ಟೋಬರ ೨೭ ರಿಂದ ಜನೇವರಿ ೧೪, ಎಪ್ರಿಲ ೧೨ ರಿಂದ ಮೇ ೧೫, ಜುಲೈ ೧೫ ರಿಂದ ಸಪ್ಟೆಂಬರ ೧೬ ರ ವರೆಗಿನ ಅವಧಿಯಲ್ಲಿ ಬರತಕ್ಕ ಹಣ ಬರುವುದಲ್ಲದೇ ನಿರೀಕ್ಷಿಸಿದ ಮೂಲದಿಂದಲೂ ಹಣ ಬಂದು ಆರ್ಥಿಕ ಸ್ಥಿತಿ ಹಿಡಿತದಲ್ಲಿರುತ್ತದೆ, ಅದರಂತೆ ಜನೇವರಿ ೧೪ ರಿಂದ ಎಪ್ರಿಲ ೧೧, ಮೇ ೧೬ರಿಂದ ಜುಲೈ ೧೬, ಸಪ್ಟೆಂಬರ ೧೭ರಿಂದ ವರ್ಷಾದ್ಯಂತ್ಯದ ವರೆಗಿನ ಕಾಲದಲ್ಲಿ ಆದಾಯಕ್ಕಿಂತ ವೆಚ್ಚ ವಿಪರೀತ ಬೆಳೆಯುವದರಿಂದ ಆರ್ಥಿಕಸ್ಥಿತಿ ಗಂಭೀರ ಸ್ವರೂಪ ತಾಳಿ ನಿಮ್ಮ ಸತ್ವ ಪರೀಕ್ಷೆಯಾಗುತ್ತದೆಯಾದರೆ ಖಂಡಿತವಾಗಿಯೂ ಪಾರಾಗುವಿರಿ.

ಕೋರ್ಟು ಕಚೇರಿಗಳ ಕೆಲಸದಲ್ಲಿ ದಾವೆ ಫಿರ್ಯಾದಿ ವ್ಯಾಜ್ಯಗಳಿಗೆ ಈ ವರುಷ ಪ್ರಗತಿದಾಯಕವಿರುವದಿಲ್ಲ. ರಾಜಿ, ಸಂಧಾನ, ಮನೋಭಾವನೆಯಿಂದ ವರ್ತಿಸಿದರೆ ಹೆಚ್ಚು ಪ್ರಯೋಜನ. ದಾವೆ, ಫಿರ್ಯಾದಿಗಳು ಅನಿವಾರ್ಯವಿದ್ದಲ್ಲಿ ದಾಖಲು ಮಾಡಿ ಮುದ್ದತ ತೆಗೆದುಕೊಳ್ಳುತ್ತ ಹೋಗುವುದೇ ಹಿತಕರವು. ಮೊಕದ್ದಮೆಗಳ ಬಗೆಗೆ ವಿವರವಾಗಿ ಹೇಳಬೇಕೆಂದರೆ ಫೌಜದಾರಿ ಮೊಕದ್ದಮೆಗಳಿಗೆ ಪೂರ್ವಾರ್ಧವೂ, ರಾಜಕೀಯ ಹಾಗೂ ನೌಕರಿ ಮೊಕದ್ದಮೆಗಳಿಗೆ ಮಧ್ಯಮ ಕಾಲವೂ, ದಿವಾಣಿ ಮೊಕದ್ದಮೆಗಳಿಗೆ ಉತ್ತರಾರ್ಧವೂ ಅನುಕೂಲವಾಗಿರುವದು.

ಈ ರಾಶಿಯ ನೌಕರ ವರ್ಗದವರಿಗೆ ಈ ವರುಷ ಬಹಳ ವಿಚಿತ್ರವಿದೆ. ಹನ್ನೆರಡು ವರುಷಕ್ಕೆ ಒಮ್ಮೆ ಬರುವ ಜನ್ಮಸ್ಥ ಗುರುವಿನಿಂದಾಗಿ ನೌಕರಿಯಲ್ಲಿ ಸ್ಥಿರತೆ ಇರದು. ಖಾತೆ ಸಂಸ್ಥೆ, ಕಚೇರಿ, ಹುದ್ದೆ ಶಾಖೆ ದಫ್ತರಗಳು ಮೇಲಿಂದ ಮೇಲೆ ಬದಲಾಗುತ್ತವೆ. ಸಾಮಾನ್ಯವಾಗಿ ನೌಕರದಾರರಿಗೆ ಮೂರುವರುಷಕ್ಕೊಮ್ಮೆ ಬದಲಿ ಆಗುತ್ತದೆ. ಆದರೆ ಈ ವರುಷ ಜನ್ಮಸ್ಥ ಗುರುವಿನಿಂದಾಗಿ ಮೂರು ಸಾರೆ ಬದಲಿಯಾಗುತ್ತದೆ. ಗಂಟು ಮೂಟೆ ಕಟ್ಟಿಕೊಂಡು ಯಾವಾಗಲೂ ಸಿದ್ಧರಾಗಬೇಕಾಗುತ್ತದೆ. ಅಥವಾ ಈ ವರುಷ ತಿರುಗಾಟದ ಕಾಲವೇ ಆಗಿದೆ ಈ ರಾಶಿಯವರಿಗೆ. ಇನ್ನೊಂದು ವೈಶಿಷ್ಟ್ಯವೆಂದರೆ ಆಫೀಸಿಯೇಟಿಂಗ, ಇನ್ ಚಾರ್ಜ ಆರೇಜಮೆಂಟ ಹುದ್ದೆ ಹಂಗಾಮಿ ಕಛೇರಿಗಳಲ್ಲಿ ಕಾರ್ಯನಿರ್ವಹಿಸಬೇಕಾದ ಪ್ರಸಂಗಗಳು ಈ ವರುಷದಲ್ಲಿರುತ್ತವೆ. ಆದರೆ ಈ ವ್ಯವಸ್ಥೆಯು ಧನಿಷ್ಠಾದ ಕೊನೆಯ ಚರಣಗಳ ಹಾಗೂ ಶತತಾರಾದ ಕುಂಭ ರಾಶಿಯವರಿಗೆ ಅನುಕೂಲ, ಅಂದರೆ ಬಡತಿಯೊಂದಿಗೆ ಬದಲಿ ಅಥವಾ ಅನುಕೂಲ ಜಾಗೆಗೆ ಬದಲಿ ಆದರೆ ಶತತಾರಾದ ಕೊನೆಯ ಚರಣಗಳ ಹಾಗೂ ಪೂರ್ವಾಭಾದ್ರಪದ ಕುಂಭ ರಾಶಿಯವರಿಗೆ ಪ್ರತಿಕೂಲದಾಯಕ ಸ್ಥಳಕ್ಕೆ ಬದಲಿ ಆಗುತ್ತದೆ. ಈ ರಾಶಿಯ ನಿರುದ್ಯೋಗಿಗಳಿಗೆ ಈ ವರುಷ ಆಶಾದಾಯಕವಿದೆ. ಅನೇಕ ಕಡೆಗಳಿಂದ ಸಂದರ್ಶನಕ್ಕೆ ಕರೆ ಬರುತ್ತವೆ. ಅನೇಕರಿಂದ ನೇಮಣೂಕಿಯ ಆಜ್ಞೆ ಬರುತ್ತದೆ. ಯಾವ ನೌಕರಿಗೆ ಹೋದರೆ ಸರಿ ಹೋದೀತು ಎಂಬ ಚಿಂತೆ, ವರ್ಷಾಂತ್ಯದ ವರೆಗೂ ಇರುತ್ತದೆ. ಹಂಗಾಮಿ ನೌಕರದಾರರಿಗ ಈ ವರುಷ ಕೂಡ ಸ್ಥಿರತೆ ಇರುವದಿಲ್ಲ. ಈ ರಾಶಿಯ ಬಾಹ್ಯ ಕೆಲಸಗಾರ, ತಾಂತ್ರಿಕ ವರ್ಗ ಗಿರಣಿ, ಕಾರಖಾನೆಗಳ ಕಾರ್ಮಿಕ ವರ್ಗದವರಿಗೂ ಈ ವರುಷ ಶುಭ ರಾಹುವಿನ ಮೂಲಕ ಅನುಕೂಲವಿರುತ್ತದೆ. ಅವರ ಅನೇಕ ಬೇಡಿಕೆಗಳು ಈಡೇರುತ್ತವೆ. ಎಲ್ಲ ಬೇಡಿಕೆಗಾಗಿ ಒತ್ತಾಯ ಮಾಡದೇ ರಾಜಿ ಸಂಧಾನಮನೋಭಾವನೆ ಇರಿಸಿಕೊಳ್ಳುವುದೇ ಹಿತಕರವು. ಈ ರಾಶಿಯ ಬುದ್ಧಿಜೀವಿ, ಸಾಹಿತಿ, ಕಲಾವಿದರಿಗೆಲ್ಲ ಆರ್ಥಿಕ ದೃಷ್ಟಿಯಿಂದ ಪ್ರಗತಿದಾಯಕವಿದೆ. ಆದರೆ ಉದ್ಯೋಗದಲ್ಲಿ ಸ್ಥಿರತೆಯಿರದು. ಅಕ್ಟೋಬರ ೨೭ ರಿಂದ ಜನೇವರಿ ೧೪, ಮಾರ್ಚ ೧೫ರಿಂದ ಮೇ ೧೫ರ ವರೆಗೆ ಹಾಗೂ ಜುಲೈ ೧೫ರಿಂದ ಸಪ್ಟೆಂಬರ ೧೬ ರ ವರೆಗಿನ ಕಾಲದಲ್ಲಿ ಇವರಿಗೆ ಅನುಕೂಲವಿದ್ದು ಉದ್ಯೋಗದಲ್ಲಿ ಪ್ರಗತಿ, ಮನ್ನಣೆ ಪ್ರಶಸ್ತಿ, ಪದಕ ಲಭಿಸುವಿಕೆ ವಿದೇಶಸಂಚಾರ ಕೈಕೊಳ್ಳುವಿಕೆ ವಾಹನ ಸೌಖ್ಯ ದೊರೆಯುವಿಕೆ, ಮೊದಲಾದ ಶುಭ ಘಟನೆಗಳು ಜರುಗುವವು. ಈ ರಾಶಿಯ ಕೃಷಿಕವರ್ಗದವರಿಗೆ ಈ ವರುಷ ಪ್ರಗತಿದಾಯಕವಿದ್ದು ನಿರೀಕ್ಷೆಗಿಂತ ಅಧಿಕ ಬೆಳೆ ಬರುವದರಿಂದ ಕಳೆದ ವರುಷ ಉಂಟಾಗಿದ್ದ ಸಾಲ ತೀರಿಸುವರು. ಒತ್ತಿ ಇಟ್ಟ ಹೊಲ, ಮನೆ ಬಿಡಿಸಿಕೊಳ್ಳುವರಲ್ಲದೇ ಬೇಸಾಯಕ್ಕೆ ಬೇಕಾಗುವ ಉಪಕರಣಗಳನ್ನು ದನಕರುಗಳನ್ನು ಕೊಂಡುಕೊಳ್ಳುವ ಇಲ್ಲವೇ ನವೀಕರಿಸುವ ಸಾಮರ್ಥ್ಯ ಉಂಟಾಗುತ್ತದೆ. ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರಿಗೂ ಉದ್ಯಮದಾರರಿಗೂ ಗಿರಣಿ, ಕಾರಖಾನೆ, ಚಾಲ-ಟಾಕೀಜ, ಹೋಟೇಲ ಮೊದಲಾದ ಉದ್ಯೋಗಗಳ ಮಾಲಕ ವರ್ಗದವರಿಗೆ ಮಿಶ್ರ ಫಲವಿದೆ. ಉದ್ಯೋಗ ಹಾಗು ಆರ್ಥಿಕದೃಷ್ಟಿಯಿಂದ ಪ್ರಗತಿದಾಯಕವಿದ್ದರೆ ನೌಕರ ವರ್ಗದವರ ಸಮಸ್ಯೆಗಳನ್ನು ಸರಕಾರದ ನಿರ್ಬಂಧನೆಗಳನ್ನು ಎದುರಿಸಬೇಕಾಗುತ್ತದೆ. ಇದರಂತೆ ಪೂರ್ವಾರ್ಧವು ಪ್ರಗತಿದಾಯಕವಾದರೆ ಉತ್ತರಾರ್ಧವು ಪ್ರತಿಕೂಲವಿದೆ.

ಈ ರಾಶಿಯ ವಧೂವರರಿಗೆ ಈ ವರುಷ ಕಂಕಣಬಲ ಕೂಡಿ ಬಂದಿರುವದಲ್ಲದೇ ಅಕ್ಟೋಬರ ೨೭ರಿಂದ ಜನೇವರಿ ೧೪ ಹಾಗೂ ಫೆಬ್ರುವರಿ ೧೨ರಿಂದ ಜುಲೈ ೧೫ರ ವರೆಗಿನ ಅವಧಿಯಲ್ಲಿ ವಿವಾಹ ಜರುಗಿ ಗೃಹಸ್ಥಾಶ್ರಮವನ್ನು ಪ್ರವೇಶಿಸುವರು. ಈ ರಾಶಿಯ

ಗೃಹಿಣಿಯರು ಹಾಗು ವಿವಾಹಿತ ಸ್ತ್ರೀ ಪುರುಷರಿಗೆ ಈ ವರುಷ ಪ್ರಗತಿದಾಯಕವಿದೆ. ತಪ್ಪು ತಿಳುವಳಿಕೆಯಿಂದಲೂ ಚಾಡಿಯ ಪ್ರಭಾವದಿಂದಲೂ ಕಲುಷಿತಗೊಂಡ ಮನೆಯ ವಾತಾವರಣ ಈ ವರುಷ ತಿಳಿಗೊಳ್ಳುವದು. ವಿರಹ, ವಿರಸದ ತಾಪ ಕಡಿಮೆ ಆಗಿ ವಿಶ್ವಾಸ ಪ್ರೀತಿ ಕುದುರುತ್ತದೆ. ಆದರೆ ಏಕತ್ರ ಕುಟುಂಬಕ್ಕೆ ಮಾತ್ರ ಈ ವರುಷ ಅನುಕೂಲವಾಗಿಲ್ಲ. ಸ್ವಸಂತೋಷದ ನಿರ್ಣಯದಿಂದ ಕುಟುಂಬ ಪ್ರತ್ಯೇಕವಾಗಬಹುದಾಗಿದೆ. ಅಕ್ಟೋಬರ ೨೭ ರಿಂದ ಜನೇವರಿ ೧೪ ಹಾಗೂ ಫೆಬ್ರುವರಿ ೧೨ ರಿಂದ ಮೇ ೧೫ ರ ಅವಧಿಯಲ್ಲಿ ಬೆಲೆಯುಳ್ಳ ವಸ್ತು ಒಡವೆಗಳ ಖರೀದಿ ನೂತನ ಗೃಹ ಪ್ರವೇಶ ತೀರ್ಥಯಾತ್ರಾ ಸಂದರ್ಶನ ಮೊದಲಾದ ಶುಭ ಸಂಗತಿಗಳು ಜರುಗಬಹುದಾಗಿದೆ.

ಈ ರಾಶಿಯ ಗರ್ಭಿಣಿ ಸ್ತ್ರೀಯರಿಗೆ ಈ ವರುಷ ಮಿಶ್ರ ಫಲವಿದೆ. ಹೆರಿಗೆಯು ಅಕ್ಟೋಬರ ೨೭ ರಿಂದ ಜನೇವರಿ ೧೪ ಹಾಗೂ ಮಾರ್ಚ ೧೫ ರಿಂದ ಮೇ ೧೫ ಜುಲೈ ೧೫ ರಿಂದ ಸಪ್ಟೆಂಬರ ೧೬ ರ ವರೆಗಿನ ಅವಧಿಯಲ್ಲಿಯಾದರೆ ಸುಖಪ್ರಸವವೂ ಜನೇವರಿ ೧೪ ರಿಂದ ಮಾರ್ಚ ೧೫, ಮೇ ೧೫ ರಿಂದ ಜುಲೈ ೧೫ ಸಪ್ಟೆಂಬರ ೧೬ ರಿಂದ ಅಕ್ಟೋಬರ ೧೮ ರ ವರೆಗಿನ ಕಾಲದಲ್ಲಾದರೆ ಪ್ರಸೂತಿ ತೊಂದರೆಯಾಗುವದಲ್ಲದೆ ಶಸ್ತ್ರಕ್ರಿಯೆಗೆ ಒಳಗಾಗಬೇಕಾಗುತ್ತದೆ.

ಈ ರಾಶಿಯ ವಿದ್ಯಾರ್ಥಿಗಳಿಗೆ ಈ ವರುಷ ಪ್ರಗತಿದಾಯಕವಿದೆ. ಕಳೆದ ವರುಷ ಅರ್ಧಕ್ಕೆ ನಿಂತಿದ್ದ, ಕುಂಠಿತವಾಗಿದ್ದ ಶಿಕ್ಷಣ ಮತ್ತೆ ಮುಂದುವರೆಯುವದು. ಅಲ್ಲದೇ ಯಾವ ವಿದ್ಯಾರ್ಥಿಯ ಪರೀಕ್ಷೆಯು ಅಕ್ಟೋಬರ ೨೭ ರಿಂದ ಜನೆವರಿ ೧೬ ರ ವರೆಗೆ ಹಾಗೂ ಮಾರ್ಚ ೧೫ರಿಂದ ಮೇ ೧೫ರ ವರೆಗಿನ ಕಾಲದಲ್ಲಿ ಜರುಗುವುದೊ ಅಂಥ ವಿದ್ಯಾರ್ಥಿಗಳು ಅನಾಯಾಸವಾಗಿ ತೇರ್ಗಡೆ ಆಗುವರಲ್ಲದೇ ಉತ್ತಮದರ್ಜೆ, ಶ್ರೇಣಿ ದೊರೆಯುವುದಲ್ಲದೆ ಪ್ರಶಸ್ತಿ ಪದಕಗಳನ್ನು ಪಡೆದು ಹೆಚ್ಚಿನ ಶಿಕ್ಷಣವನ್ನು ಮುಂದುವರೆಸುವರು. ಹೆಚ್ಚಿನ ವ್ಯಾಸಂಗಕ್ಕಾಗಿ ವಿದೇಶ ಪ್ರವಾಸವನ್ನು ಕೈಕೊಳ್ಳುವರು. ಆದರೆ ಯಾವ ವಿದಾರ್ಥಿಯ ಪರೀಕ್ಷೆ ಜನೇವರಿ ೧೪ ರಿಂದ ಮಾರ್ಚ ೧೬ ರ ವರೆಗೆ ಹಾಗೂ ಮೇ ೧೫ ರಿಂದ ಜುಲೈ ೧೫ ರ ಅವಧಿಯಲ್ಲಿ ಜರುಗುವುದೋ ಅಂಥ ವಿದ್ಯಾರ್ಥಿಗಳು ತೇರ್ಗಡೆ ಆಗಲು ಹೆಣಗಾಡಬೇಕಾಗುತ್ತದೆ. ತೇರ್ಗಡೆ ಆದರೂ ಶ್ರೇಣಿ, ದರ್ಜೆ, ದೊರೆಯಲಾರದು.

ಈ ರಾಶಿಯ ರಾಜಕೀಯ ಸಾಮಾಜಿಕ ಕಾರ್ಯಕರ್ತರಿಗೆ ಈ ವರ್ಷ ಹೇಳಿಕೊಳ್ಳುವಷ್ಟು ಪ್ರಗತಿದಾಯಕವಿಲ್ಲದಿದ್ದರೂ ಕಳೆದ ವರುಷದಷ್ಟು ಪ್ರಖರವಾಗಿರುವದಿಲ್ಲ. ಅನೇಕ ಸಂಘ ಸಂಸ್ಥೆಗಳ ಪದಾಧಿಕಾರಿಕೆಗಾಗಿ ಹೆಣಗಾಡಬೇಕಾಗುತ್ತದೆ. ಸ್ಪರ್ಧಿಸಬೇಕಾಗುತ್ತದೆ. ಅತ್ಯಲ್ಪ ಮತದಿಂದ ಅಧಿಕಾರ ಪಡೆದರೂ ಅಧಿಕಾರ ಉಳಿಸಿಕೊಳ್ಳಲು ಶ್ರಮಿಸಬೇಕಾಗುತ್ತದೆ. ಕಳೆದುಕೊಂಡ ಜನಪ್ರಿಯತೆ ಮತ್ತೆ ಈ ವರುಷ ಗಳಿಸಬಲ್ಲಿರಿ. ಶತ್ರುಗಳು ಮಿತ್ರರಂತೆ ತೋರಿದರೂ ಸಂಪೂರ್ಣ ಸಹಕಾರ ದೊರೆಯದು. ಈ ವರುಷ ಜರುಗಬಹುದಾದ ಯಾವುದೇ ಚುನಾವಣೆಯಲ್ಲಿ ಯಶಸ್ಸೇನೋ ದೊರೆಯುವದು. ಆದರೆ ನಿಕರದ ಹೋರಾಟವನ್ನು ಎದುರಿಸಬೇಕಾಗುತ್ತದೆ. ಅಲ್ಲದೇ ಚುನಾವಣೆಯ ಮತಕ್ಷೇತ್ರದಲ್ಲಿ ಬದಲಾವಣೆಗಳಾಗುತ್ತವೆ, ಅತ್ಯಲ್ಪ ಮತದಿಂದ ಆಯ್ಕೆ ಆಗ... ...ದೆ.

ಒಟ್ಟಿನಲ್ಲಿ ಈ ರಾಶಿಯವರಿಗೆ ಈ ವರುಷ ಮಿಶ್ರ ಫಲವಿದ್ದು, ಆರೋಗ್ಯ ಆರ್ಥಿಕದಲ್ಲಿ ಪ್ರಗತಿದಾಯಕವಿದ್ದರೆ ಉದ್ಯೋಗದಲ್ಲಿ ಅಸ್ಥಿರತೆಯೂ ಇದ್ದು ಪ್ರಾಪಂಚಿಕ ಕೌಟುಂಬಿಕ ಜೀವನದಲ್ಲಿ ಕಳೆದ ವರುಷದ ಪ್ರಖರತೆ ಕಡಿಮೆ ಆಗಲಿದೆ. ಎಂಟು ಆಣೆ ಶುಭ ಫಲವಿದೆ. ಅದರಂತೆ ಧನಿಷ್ಠಾದ ಕೊನೆಯ ಚರಣಗಳ ಹಾಗೂ ಶತತಾರಾದ ಕುಂಭರಾಶಿಯವರಿಗೆ ಶುಭಫಲ ಹೆಚ್ಚಾಗಿದ್ದರೆ ಶತತಾರಾದ ಕೊನೆಯಚರಣಗಳ ಹಾಗೂ ಪೂರ್ವಾಭಾದ್ರಪದದ ಕುಂಭರಾಶಿಯವರಿಗೆ ಅಶುಭಫಲವೇ ಈ ವರುಷ ಹೆಚ್ಚಾಗಿರುತ್ತದೆ.



## ಮೀನ

**ಈ ರಾಶಿಯವರಿಗೆ ಮುಂಬರುವ ಹನ್ನೆರಡನೆಯ ಗುರುವಿನಿಂದಾಗಿ ಈ ವರುಷ ನಿರುತ್ಸಾಹದಾಯಕವಾಗಿದೆ.**

ಈ ರಾಶಿಯವರ ಈ ವರುಷದ ಗ್ರಹಗತಿ ಅವಲೋಕಿಸಲಾಗಿ ಮೊದಲೇ ಚತುರ್ಥ ಶನಿಯ ಅನಿಷ್ಟತೆಯಿಂದ ಬಳಲುತ್ತಿರುವ ನಿಮಗೆ ನಾಳಿನ ಫೆಬ್ರುವರಿ ೯ ರಿಂದ ಬರುವ ಹನ್ನೆರಡನೆಯ ಗುರುವಿನ ಅಶುಭಫಲದಿಂದ ಮತ್ತಷ್ಟು ತೊಂದರೆಗೊಳಗಾಗುವಿರಿ. ಇದಲ್ಲದೇ ಇದುವರೆಗೆ ದಶಮನಾಗಿ ಶುಭಫಲವನ್ನು ಕೊಡುತ್ತಿದ್ದ ರಾಹು ನಾಳಿನ ಚೈತ್ರದಿಂದ ನವಮನಾಗಿ ಮಧ್ಯಮನಾಗಿ ಮಧ್ಯಮ ಫಲದಾಯಕನಾಗಿರುತ್ತಾನೆ. ಗ್ರಹಗಳ ಸ್ಥಿತಿ ಹೀಗಿರುವದರಿಂದ ಈ ವರುಷ ನಿರುತ್ಸಾಹದಾಯಕವಾಗಿದೆ. ಆರೋಗ್ಯ ದೃಷ್ಟಿಯಿಂದ ನೋಡಿದರೆ ಇಡೀ ವರುಷ ಆರೋಗ್ಯ ಉತ್ತಮವಿದ್ದಾಗ್ಯೂ ಫೆಬ್ರುವರಿ ೧೨ ರಿಂದ ಎಪ್ರಿಲ ೧೨ ಜೂನ ೧೫ ರಿಂದ ಜುಲೈ ೧೫ ರ ಈ ಮೂರು ತಿಂಗಳ ಕಾಲದಲ್ಲಿ ಆರೋಗ್ಯ ಕೆಡುವುದಲ್ಲದೇ ಅಪಘಾತದ ಭಯವೂ ಉಂಟು. ಆರ್ಥಿಕ ದೃಷ್ಟಿಯಿಂದ ನೋಡಿದರೆ ಈ ವರುಷ ಏರಿಳಿತ ಬಹಳ. ಪೂರ್ವಾರ್ಧ ಪ್ರಗತಿದಾಯಕವಾದರೆ ಉತ್ತರಾರ್ಧವು ಪ್ರತಿಕೂಲವಿದೆ. ಅಕ್ಟೋಬರ ೨೭ ರಿಂದ ಫೆಬ್ರುವರಿ ೧೫, ಮೇ ೧೫ ರಿಂದ ಜೂನ ೧೫ ರ ವರೆಗಿನ ಈ ಕಾಲದಲ್ಲಿ ನಿರೀಕ್ಷಿತ ಮೂಲದಿಂದ ಹಣ ಬರುತ್ತದೆ. ದತ್ತಕ ವಾರಸಾ, ಬಹುಮಾನ, ಬಕ್ಷಿಸ. ಲಾಟರಿ ಮೊದಲಾದ ಆಕಸ್ಮಿಕ ಧನಲಾಭದ ಸುಯೋಗ ಉಂಟು. ಆದರೆ ಜೂನ ೧೫ ರಿಂದ ಅಗಷ್ಟ ೧೫ ರ ವರೆಗೆ ಮತ್ತು ಸಪ್ಟಂಬರ ೧೬ ರಿಂದ ವರುಷಾಂತ್ಯ ವರೆಗಿನ ಕಾಲ ತೀರ ತಾಪದಾಯಕವಿದ್ದು ಆದಾಯ. ಅಲ್ಪ ವೆಚ್ಚ ವಿಪರೀತ ಸಾಲಗಾರರ ಕಾಟ ಹೊಸ ಸಾಲಕ್ಕಾಗಿ ಪರದಾಟ ಮೊದಲಾದ ಅಹಿತಕಾರಕ ಸನ್ನಿವೇಶಗಳನ್ನು ಎದುರಿಸಬೇಕಾಗುತ್ತದೆ.

ಕೋರ್ಟು ಕಚೇರಿಯ ಕೆಲಸದಲ್ಲಿಯಾಗಲೀ ದಾವೆ ಫಿರ್ಯಾದಿ ಮೊದಲಾದ ವ್ಯಾಜ್ಯಗಳಲ್ಲಿ ಜಯ ದೊರೆತರೂ ನಿರೀಕ್ಷಿಸಿದ ಮಟ್ಟದಲ್ಲಿ ಲಾಭವಾಗದು. ರಾಜಿ ಸಂಧಾನ, ಮನೋಭಾವನೆಯೇ ತಾರಕವು. ...ಕರಿಯ ರಾಜಕೀಯ ಹಾಗೂ ದಿವಾಣಿ ಮೊಕದ್ದಮೆಗಳಲ್ಲಿ ಪೂರ್ವಾರ್ಧದಲ್ಲಿಯೂ, ಫೌಜದಾರಿ ಮೊಕದ್ದಮೆಗಳಿಗೆ ವರುಷದ ಉತ್ತರಾರ್ಧವೂ ಅನುಕೂಲವಾಗಿದೆ.

ಈ ರಾಶಿಯ ನೌಕರ ವರ್ಗದವರಿಗೆ ಈ ವರುಷ ಮಿಶ್ರಿತ ಫಲವಿದೆ. ಪೂರ್ವಾರ್ಧವು ಪ್ರಗತಿದಾಯಕವಾದರೆ ಉತ್ತರಾರ್ಧವು ತಾಪದಾಯಕವಾಗಿದೆ. ಅಕ್ಟೋಬರ ೨೭ ರಿಂದ ಫೆಬ್ರುವರಿ ೧೨, ಎಪ್ರಿಲ್ ೧೨ ರಿಂದ ಜೂನ ೧೫ ರ ವರೆಗಿನ ಅವಧಿಯಲ್ಲಿ ಅನುಕೂಲ ಜಾಗೆಗೆ ಬದಲಿಯಾಗಿ ಬಡತಿಯೂ ದೊರೆಯುವುದಲ್ಲದೇ ವರಿಷ್ಠರ ಸಹಾಯ ಸಹಕಾರ ದೊರೆಯುವದು. ಆದರೆ ಫೆಬ್ರುವರಿ ೧೨ ರಿಂದ ಎಪ್ರಿಲ ೧೨, ಜೂನ ೧೫ ರಿಂದ ಅಗಸ್ಟ ೧೫ ಹಾಗೂ ಸಪ್ಟಂಬರ ೧೬ ರಿಂದ ವರುಷಾಂತ್ಯ ವರೆಗಿನ ಕಾಲ ತೀರ ಪ್ರತಿಕೂಲವಾಗಿದ್ದು ಅನಪೇಕ್ಷಿತ ಸ್ಥಳಕ್ಕೆ ಬದಲಿ ವರಿಷ್ಠರ ಅಸಹನೀಯ ಕಿರುಕಳ ಹಿಂಬಡತಿ ಮೊದಲಾದ ಪ್ರತಿಕೂಲ ಸನ್ನಿವೇಶಗಳನ್ನು ಎದುರಿಸಬೇಕಾಗುತ್ತದೆ. ಅಧೀರರಾಗದೆ ವಿಘ್ನೇಶ್ವರನನ್ನು ಆರಾಧಿಸಿ, ಎಲ್ಲವೂ ಸರಿಯಾಗುತ್ತದೆ. ನಿರುದ್ಯೋಗಿಗಳಿಗೆ ಈ ವರುಷ ಮಿಶ್ರಿತ ಫಲವಿದ್ದರೂ ಪೂರ್ವಾರ್ಧದಲ್ಲಿಯೇ ಉದ್ಯೋಗ ದೊರೆಯುವದು. ಹಂಗಾಮಿ ನೌಕರದಾರರಿಗೆ ಅಕ್ಟೋಬರ ೧೭ ರಿಂದ ಫೆಬ್ರುವರಿ ೧೨ ರ ಒಳಗೆ ಉದ್ಯೋಗ ಕಾಯಂ ಆಗುವದು. ಗಿರಣಿ ಕಾರಖಾನೆಯ ಕಾರ್ಮಿಕ ವರ್ಗದವರಿಗೂ, ತಾಂತ್ರಿಕ ಕೆಲಸಗಾರರಿಗೂ, ಪ್ರವಾಸೀ ಕೆಲಸಗಾರರಿಗೂ ಈ ವರುಷ ಮಿಶ್ರಿತ ಫಲವಿದೆ. ಪೂರ್ವಾರ್ಧ ಪ್ರಗತಿದಾಯಕವಿದ್ದರೆ ಉತ್ತರಾರ್ಧವು ಪ್ರತಿಕೂಲವಿದೆ. ಅವರ ಬೇಡಿಕೆಗಳು ಪೂರ್ವಾರ್ಧದಲ್ಲಿ ಈಡೇರಿದರೆ ಉತ್ತರಾರ್ಧದಲ್ಲಿ ಹಿಂದೆ ತೆಗೆದುಕೊಳ್ಳುವರು. ಈ ರಾಶಿಯ ಕೃಷಿ ವರ್ಗದವರಿಗೆ ಈ ವರುಷ ಏರಿಳಿತ ಬಹಳ. ಪೂರ್ವಾರ್ಧದಲ್ಲಿ ನಿರೀಕ್ಷೆಗಿಂತ ಅಧಿಕ ಬೆಳೆ ಬಂದು ಆರ್ಥಿಕ ಸ್ಥಿತಿ ಚೇತರಿಸಿ ಬೇಸಾಯಕ್ಕೆ ಬೇಕಾಗಬಹುದಾದ ಉಪಕರಣಗಳನ್ನು, ದನಕರುಗಳನ್ನು ಖರೀದಿ ಮಾಡುವ ಸುಯೋಗ ಪ್ರಾಪ್ತಿ ಆಗುವದು. ಆದರೆ ಉತ್ತರಾರ್ಧ ತಾಪದಾಯಕವಾಗಿದ್ದು ಆರ್ಥಿಕ ಮುಗ್ಗಟ್ಟಿನಿಂದ ಬೇಸಾಯ ಮುಂದುವರೆಸುವುದೇ ಕಠಿಣವಾಗುತ್ತದೆ. ಹೊಲ ಮನೆಗಳನ್ನು ಒತ್ತಿ ಹಾಕುವ ಪ್ರಸಂಗ ಬರಬಹುದು. ಅಥವಾ ಅಧಿಕ ಬಡ್ಡಿ ಕೊಟ್ಟು ಸಾಲ ಮಾಡುವ ಸನ್ನಿವೇಶಗಳನ್ನು ಎದುರಿಸಬೇಕಾಗುತ್ತದೆ. ಈ ರಾಶಿಯ ಬುದ್ಧಿಜೀವಿ, ಸಾಹಿತಿ, ಕಲಾವಿದರಿಗೆ ಈ ವರುಷ ಮಿಶ್ರಿತ ಫಲವಿದೆ. ಅಕ್ಟೋಬರ ೨೭ ರಿಂದ ಫೆಬ್ರುವರಿ ೧೨ ರ ವರೆಗೆ ಹಾಗೂ ಎಪ್ರಿಲ ೧೨ ರಿಂದ ಜೂನ ೧೫ ರ ವರೆಗಿನ ಕಾಲ ಅನುಕೂಲವಿದ್ದು ಉದ್ಯೋಗದಲ್ಲಿ ಪ್ರಗತಿ ಸ್ಥಿರತೆ ಮನ್ನಣೆ ದೊರೆತು ಅನೇಕ ಸಂಘಸಂಸ್ಥೆಗಳಿಂದಲೂ ಸರಕಾರದಿಂದಲೂ ಪ್ರಶಸ್ತಿ ಪದಕಗಳು ಬಿರುದು ಬಾವಲಿಗಳನ್ನು ಪಡೆಯುವರಲ್ಲದೇ ದ್ರವ್ಯಾನುಕೂಲ ಆಗುತ್ತದೆ. ಆದರೆ ಫೆಬ್ರುವರಿ ೧೬ ರಿಂದ ಎಪ್ರಿಲ ೧೧ ವರೆಗೆ ಹಾಗೂ ಜೂನ ೧೫ ರಿಂದ ಆಗಸ್ಟ ೧೫ ವರೆಗಿನ ಈ ನಾಲ್ಕು ತಿಂಗಳ ಕಾಲ ತೀರ ಪ್ರತಿಕೂಲವಿದ್ದು ಉದ್ಯೋಗದಲ್ಲಿ ತೊಂದರೆಗಳು ಉದ್ಭವಿಸುವುದಲ್ಲದೇ ಶತ್ರುಗಳ ಕಾಟವನ್ನು, ಆರ್ಥಿಕ ಮುಗ್ಗಟನ್ನು ಎದುರಿಸಬೇಕಾಗುತ್ತದೆ. ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರು, ಕೋಶ ಕಮಿಶನ್ ಏಜಂಟರು, ಹಂಚಿಕೆದಾರರು. ಗಿರಣಿ ಕಾರಖಾನ

ಟಾಕೀಜ, ಹೋಟೇಲ ಉದ್ಯಮಿಂಗಳವರಿಗೆ ಈ ವರುಷ ನಿರುತ್ಸಾಹದಾಯಕವಾಗಿದೆ. ಅಕ್ಟೋಬರ ೨೭ ರಿಂದ ಫೆಬ್ರುವರಿ ೧೨ ರ ವರೆಗೆ ಎಪ್ರೀಲ ೧೨ ರಿಂದ ಜೂನ ೧೫ ರ ವರೆಗೆ ಆಗಸ್ಟ ೧೫ ರಿಂದ ಸಪ್ಟೆಂಬರ ೧೬ ರ ವರೆಗಿನ ಈ ಕಾಲ ಅನುಕೂಲವಿದ್ದು ಉದ್ಯೋಗದಲ್ಲಿ ಪ್ರಗತಿ ಆಗಿ ಕಿಂಚಿತ್ ಹಣಗಳಿಸಿ ಉಳಿಸುವರು. ಆದರೆ ಫೆಬ್ರುವರಿ ೧೨ರಿಂದ ಎಪ್ರಿಲ ೧೨ ರ ವರೆಗೆ, ಜೂನ ೧೫ ರಿಂದ ಅಗಸ್ಟ ೧೫ರ ವರೆಗೆ ಸಪ್ಟಂಬರ ೧೬ರಿಂದ ವರುಷಾದ್ಯಂತ್ಯದ ವರೆಗಿನ ಕಾಲ ತೀರ ತಾಪದಾಯಕವಿದ್ದು ಈ ಕಾಲದಲ್ಲಿ ಆರ್ಥಿಕ ಮುಗ್ಗಟ್ಟು, ನೌಕರದಾರರಿಗೆ ಸಮಸ್ಯೆಗಳೊಡನೆ ಸರಕಾರದ ನಿರ್ಬಂಧನೆಗಳನ್ನು ಎದುರಿಸಬೇಕಾಗುತ್ತದೆ.

ಈ ರಾಶಿಯ ವಧೂವರರಿಗೆ ಕಂಕಣ ಬಲ ಕೂಡಿ ಬಂದಿರುವದಲ್ಲದೇ ನವೆಂಬರ ೧೫ರಿಂದ ಫೆಬ್ರುವರಿ ೧೫ ಹಾಗೂ ಮಾರ್ಚ ೧೫ ರಿಂದ ಜೂನ ೧೫ರ ವರೆಗಿನ ಈ ಆರು ತಿಂಗಳ ಕಾಲದಲ್ಲಿ ವಿವಾಹ ಜರುಗಿ ಗೃಹಸ್ಥಾಶ್ರಮಿಗಳಾಗುವರು. ವಿವಾಹಿತ ಸ್ತ್ರೀ ಪುರುಷರು ಹಾಗೂ ಗೃಹಿಣಿಯರಿಗೂ ಹನ್ನೆರಡನೇ ಗುರುವಿನಿಂದಾಗಿ ಈ ವರುಷ ನಿರುತ್ಸಾಹವಿದೆ. ಆದರಲ್ಲಿಯೂ ಉತ್ತರಾರ್ಧವಂತೂ ತೀರ ತಾಪದಾಯಕವಾಗಿದೆ. ಅಪ್ತೇಷ್ಟರಲ್ಲಿಯ ಭಿನ್ನಾಭಿಪ್ರಾಯ ತಪ್ಪು ತಿಳುವಳಿಕೆಗಳ ಮೂಲಕ ಪ್ರತಿನಿತ್ಯದ ಗೃಹಕಲಹದಿಂದ ಅಸಮಾಧಾನವಾಗುತ್ತದೆ. ಮನೆಯೆಂದರೆ ಸ್ವರ್ಗ ಸಮಾನ ಎಂದು ತಿಳಿದಿದ್ದ ನಿಮಗೆ ಅದೇ ಮನೆಯು ಇಂದು ಹರಿದು ತಿನ್ನುವಂತಿರುತ್ತದೆ. ಏಕತ್ರ ಕುಟುಂಬ ಒಡೆದುಹೋಗಿ ಬೇರೆ ಆಗುತ್ತದೆ. ಇದ್ದುದರಲ್ಲಿಯೇ ಅಕ್ಟೋಬರ ೨೭ ರಿಂದ ಫೆಬ್ರುವರಿ ೧೨, ಮೇ ೧೫ ರಿಂದ ಜೂನ ೧೫ ರ ವರೆಗಿನ ಅವಧಿ ಅನುಕೂಲವಿರುವದರಿಂದ ಬೆಲೆಯುಳ್ಳ ವಸ್ತು, ಒಡವೆಗಳ ಖರೀದಿ ತೀರ್ಥಯಾತ್ರೆ, ಸಂದರ್ಶನ ನೂತನಗೃಹ ಪ್ರವೇಶ ಮೊದಲಾದ ಶುಭ ಘಟನೆಗಳು ಜರಗುವವು. ಆದರೆ ಫೆಬ್ರುವರಿ ೧೨ ರಿಂದ ಮೇ ೧೫, ಜೂನ ೧೫ ರಿಂದ ಅಗಷ್ಟ ೧೫, ಸಪ್ಟೆಂಬರ ೧೬ರಿಂದ ವರುಷಾಂತ್ಯದ ವರೆಗಿನ ಕಾಲ ತೀರ ತಾಪದಾಯಕವಾಗಿದ್ದು ಗೃಹಕಲಹ ಪರಾಕಾಷ್ಠೆ ಮುಟ್ಟುತ್ತದೆ.

ಈ ರಾಶಿಯ ವಿದ್ಯಾರ್ಥಿಗಳಿಗೆ ದ್ವಾದಶ ಗುರುವಿನಿಂದಾಗಿ ಈ ವರುಷ ನಿರುತ್ಸಾಹದಾಯಕವಾಗಿದೆ. ಅಕ್ಟೋಬರ ೨೭ ರಿಂದ ಫೆಬ್ರುವರಿ ೧೨ ರ ವರಗೆ ಜರುಗಲಿರುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ಅನಾಯಾಸವಾಗಿ ತೇರ್ಗಡೆಯಾಗುವರಲ್ಲದೇ ಶ್ರೇಣಿ, ದರ್ಜೆ ದೊರೆಯುವವು. ಆದರೆ ಪ್ರಶಸ್ತಿ, ಪದಕಗಳು ದೊರೆಯವು. ಆದರೆ ಮಾರ್ಚ ೧೫ ರಿಂದ ಜೂನ ೧೫ ರವರೆಗೆ ಜರುಗಲಿರುವ ಪರೀಕ್ಷೆಗ ಕಟ್ಟುವ ವಿದ್ಯಾರ್ಥಿಗಳು ಬಹು ಪರಿಶ್ರಮದಿಂದ ತೇರ್ಗಡೆಯಾಗುತ್ತಾರೆ. ಅದರಂತೆ ಫೆಬ್ರುವರಿ ೧೨ ರಿಂದ ಮಾರ್ಚ ೧೫ ಹಾಗೂ ಜೂನ ೧೫ರಿಂದ ವರುಷಾಂತ್ಯದ ವರೆಗೆ ಜರುಗಲಿರುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳ ಫಲಿತಾಂಶ ಸಂಶಯಾಸ್ಪದಾಯಕ. ಈ ರಾಶಿಯ ರಾಜಕೀಯ ಹಾಗೂ ಸಾಮಾಜಿಕ ಕಾರ್ಯಕರ್ತರಿಗೆ ಈ




ವರುಷ ನಿರುತ್ಸಾಹದಾಯಕವಾಗಿದೆ. ಪ್ರಾಮಾಣಿಕ, ಬುದ್ಧಿವಂತ ಪ್ರತಿಷ್ಠಿತರೆಂದು ಕೀರ್ತಿ ಪಡೆದ ನಿಮ್ಮನ್ನು ಜನ ಈಗ ತಿರಸ್ಕಾರದಿಂದ ಕಾಣತೊಡಗುವರು. ಬದಲಾದ ಪರಿಸ್ಥಿತಿಯನ್ನು ಧೈರ್ಯದಿಂದ ಎದುರಿಸಬೇಕಲ್ಲದೆ ಹತಾಶರಾಗಬೇಡಿರಿ. ನವಂಬರ ೧೫ ರಿಂದ ಫೆಬ್ರುವರಿ ೧೫, ಮೇ ೧೫ ರಿಂದ ಜೂನ ೧೫, ಅಗಸ್ಟ ೧೫ ರವರೆಗಿನ ಈ ಐದು ತಿಂಗಳ ಕಾಲ ನಿಮಗೆ ಇದ್ದುದದರಲ್ಲಿಯೇ ಅನುಕೂಲವಿದ್ದು ಈ ಕಾಲದಲ್ಲಿ ಜರುಗಲಿರುವ ಚುನಾವಣೆಗಳಲ್ಲಿ ಜಯ ಲಭಿಸುತ್ತದೆ. ಆದರೆ ಸ್ಪರ್ಧೆ ತುರಿಸಿನದಾಗಿದ್ದು ಅತ್ಯಲ್ಪ ಮತದಿಂದ ಆಯ್ಕೆ ಹಾಗೂ ಜನಪ್ರಿಯತೆ ಗಳಿಸಿ ಸ್ಥಾನಮಾನ ಪಡೆಯುವರು. ಆದರೆ ಫೆಬ್ರುವರಿ ೧೨ ರಿಂದ ಮೇ ೧೫ ಜೂನ ೧೫ ರಿಂದ ಅಗಸ್ಟ ೧೫, ಸಪ್ಟೆಂಬರ ೧೬ ರಿಂದ ವರ್ಷಾಂತ್ಯದವರೆಗಿನ ಕಾಲ ತೀರ ಪ್ರತಿಕೂಲವಿದ್ದು ಮಿತ್ರರೇ ಶತೃಗಳಾಗಿ ಅವಿಶ್ವಾಸ ವ್ಯಕ್ತಪಡಿಸುವದರಿಂದ ಸ್ಥಾನಮಾನ, ಅಧಿಕಾರದಿಂದ ಕೆಳಗಿಳಿಯಬೇಕಾಗುತ್ತದೆ. ಮಿಥ್ಯಾಪವಾದವನ್ನು ಎದುರಿಸಬೇಕಾಗುತ್ತದೆ. ಇದೇ ಸಮಯದಲ್ಲಿ ಚುನಾವಣೆಗಳು ಜರಗಿದರೆ ಸ್ಪರ್ಧೆಯಲ್ಲಿ ಭಾಗವಹಿಸದಿರುವದೇ ಹಿತಕರವು.

ಒಟ್ಟನಲ್ಲಿ ಈ ರಾಶಿಯ ಎಲ್ಲ ವರ್ಗದವರಿಗೂ ಈ ವರುಷ ನಿರುತ್ಸಾಹದಾಯಕವಾಗಿದ್ದು ಉದ್ಯೋಗ ಆರ್ಥಿಕದಲ್ಲಿ ತೊಂದರೆ ಕಡಿಮೆ; ಆದರೆ ಪ್ರಾಪಂಚಿಕ ಕೌಟುಂಬಿಕ ದೃಷ್ಟಿಯಿಂದ ತೀರ ತಾಪದಾಯಕವಾಗಿದೆ. ಪೂರ್ವಾರ್ಧದಲ್ಲಿ ತೊಂದರೆ ಕಡಿಮೆ ಇದ್ದು, ಶುಭ ಘಟನೆಗಳು ಹೆಚ್ಚಾಗಿ ಜರುಗಿದರೆ, ಉತ್ತರಾರ್ಧದಲ್ಲಿ ತೊಂದರೆಗಳು ಬಹಳ. ಅದರಂತೆ ಪೂರ್ವಾಭಾದ್ರಪದ ಕೊನೆಯ ಚರಣದ ಹಾಗೂ ಉತ್ತರಾಭಾದ್ರಪದ ಮೀನ ರಾಶಿಯವರಿಗೆ ಈ ವರುಷ ಹನ್ನೆರಡು ಆಣೆ ಅಶುಭ ಫಲ ನಾಲ್ಕು ಆಣೆ ಶುಭ ಫಲವಿದ್ದರೆ ರೇವತಿ ನಕ್ಷತ್ರದ ಮೀನ ರಾಶಿಯವರಿಗೆ ೮ ಆಣೆ ಶುಭ ಹಾಗು ೮ ಆಣೆ ಅಶುಭ ಫಲವೂ ದೊರೆಯುತ್ತದೆ.

—: ಶುಭಂಭವತು —

ಎಲ್ಲದೇಶ ಸಮಾಜಗಳಲ್ಲಿ ಹಲವೊಂದು ಶಿಷ್ಟಾಚಾರಗಳಿವೆ. ಶಿಷ್ಟಾಚಾರಗಳು ಮಾನವನಜೀವನ, ಚಟುವಟಿಕೆಗಳಲ್ಲಿ ಹಾಸು-ಹೊಕ್ಕಾಗಿವೆ. ಆದರೆ ಇವು ಒಮ್ಮೊಮ್ಮೆ ವಿಪರೀತಕ್ಕಿಟ್ಟುಕೊಂಡು ಕಷ್ಟಾಚಾರಗಳಾಗುವದುಂಟು.

ಟಿ. ಸುನಂದಮ್ಮ

# ಶಿ(ಕ)ಷ್ಟಾಚಾರ

ಮನುಷ್ಯನ ಜೀವನದಲ್ಲಿ ಹಲವಾರು ಪದ್ಧತಿಗಳು. ಅನೇಕ ಅಭ್ಯಾಸಗಳು ವೈವಿಧ್ಯಪೂರ್ಣ ಆಚಾರ ವಿಚಾರಗಳು—ಹಾಸುಹೊಕ್ಕಾಗಿ ಹೆಣೆದುಕೊಂಡಿವೆ: ಅವನ್ನು ಬಿಟ್ಟು ಬಾಳುವಂತಿಲ್ಲ, ಬದುಕುವಂತಿಲ್ಲ!

ಪದ್ಧತಿಗಳು ದ್ವಿಮುಖ ಉದ್ದೇಶದಿಂದ ರೂಢಿಗೆ ಬಂದಿವೆ ಎನ್ನುತ್ತಾಳೆ, ಕುಹಕಿ ಗೆಳತಿ! "ಹೊಸದಾಗಿ ಮದುವೆಯಾದವರು, ಶುಭಕಾರ್ಯ ನೆರವೇರಿಸಿದವರು, ಪ್ರಯಾಣಮಾಡುವವರು. ಹಿರಿಯರಿಗೆ ನೆಲಮುಟ್ಟಿ ನಮಸ್ಕರಿಸುತ್ತಾರಲ್ಲ—ಏಕೆ ಗೊತ್ತೆ?...ಮಣೆಯ ಮೇಲೆ ತಾಸೆರಡು ತಾಸು ಕೂತು ಜಡ್ಡುಕಟ್ಟಿರುವ ಕೈಕಾಲುಸೊಂಟ ಬೆನ್ನುಗಳಿಗೆ ವ್ಯಾಯಾಮ ಕೊಟ್ಟು ಸಡಿಲ ಮಾಡುವುದಕ್ಕಾಗಿ, ರೈಲಿನಲ್ಲೋ ಬಸ್ಸಿನಲ್ಲೋ ಗಂಟೆಗಟ್ಲೆ ಮುದುರಿ ಕೂತಿರುವವರ ಮುನ್ನೆಚ್ಚರಿಕೆ ಕಸರತ್ತಿಗಾಗಿ" ಎನ್ನುತ್ತಾಳೆ ಅವಳು!... "ಹಿಂದಿನ ಕಾಲದ ಹೆಂಗಸರಿಗೆ ಮಾತಿನ ಮುಂಚೆ ಅಳು ಬರುತ್ತಿತ್ತು: ಕಣ್ಣೀರಿನ ಸ್ಟಾಕ್ ಕಡಿಮೆ ಆದೀತೆನ್ನುವ ಭಯದಿಂದಲೇ ಆ ಮಡಿವಂತರು ಈರುಳ್ಳಿ ಹೆಚ್ಚುತ್ತಿರಲಿಲ್ಲ. ತಿನ್ನುತ್ತಿರಲಿಲ್ಲ"—ಎಂದವಳವಾದ!

ಅದೇನೇ ಇರಲಿ, ಈ ಪದ್ಧತಿಗಳ 'ಸಂಪ್ರದಾಯಗಳ, ಬಲೆ ನಮ್ಮ ಸುತ್ತ ಹರಡಿಕೊಂಡಿದೆ. ಇವುಗಳಲ್ಲಿ ಮುಖ್ಯವೆನಿಸಿದ್ದು ಶಿಷ್ಟಾಚಾರ; ನಾಗರೀಕತೆ ಹೆಚ್ಚಿದಂತೆ, ಮಾನವ ಮುನ್ನಡೆದಂತೆ. ಇದರ ಹರವು ವಿಸ್ತಾರವಾಗುತ್ತ ಹೋಗಿದೆ.

ನಮ್ಮ ಅಜ್ಜಅಜ್ಜಿಯರವರು ಆಗಂತುಕರ ಭೇಟಿಯಾದಾಗ ನಿಸ್ಸಂಕೋಚವಾಗಿ, "ನೀವು ಯಾವೂರಿನೋರು? ಎಲ್ಲಿಂದ ಬಂದಿರಿ?... ಇಲ್ಲಿ ಯಾರ ಮನೆಗೆ ಹೋಗಬೇಕು?" ಎಂದು ಕೇಳುತ್ತಿದ್ದರು: ಪುತ್ತೆರಡು ಘಳಿಗೆಯಲ್ಲೇ ಅವರ ಸಂತಾನ ಸಂಪತ್ತು ಸಂಸಾರಪುರಾಣ, ಬಂದಿರುವ ಕಾರಣ: ಎಲ್ಲದರ ತಪಶೀಲು ತೆಗೆದುಬಿಡುತ್ತಿದ್ದರು!... ಈಗ ಹಾಗೆ ಮಾಡಿದರೆ ಅಸಂಸ್ಕೃತರೆನಿಸಿಕೊಂಡೇವು.

ಒಂದೇ ಡಬ್ಬಿಯಲ್ಲಿ ಕೂತು ಪ್ರಯಾಣ ಮಾಡಿದ ಇಬ್ಬರು,ಮೂರು ದಿನಗಳ ನಂತರ ಕಡೆಯ ನಿಲ್ದಾಣ ಮುಟ್ಟಿದಾಗ ಅಪರಿಚಿತರಾಗೇ ಉಳಿದಿದ್ದರು!...ಕಾರಣ ಅವರಿಗೆ ಮೂರನೆಯವರಿಂದ ವಿಧ್ಯುಕ್ತ ಪರಿಚಯ ಕಾರ್ಯಕ್ರಮ ಆಗಿರಲಿಲ್ಲ! ಹಡಗು ಒಡೆದು ಎಲ್ಲರೂ ನೀರುಪಾಲಾದಾಗ ಸಣ್ಣ ದ್ವೀಪ ಮುಟ್ಟಿದ ಇಬ್ಬರು ನಾಲ್ಕನೆಯ ದಿನ ವಿಮಾನವೊಂದು ಅವರನ್ನು ಕರೆದೊಯ್ಯುವವರೆಗೂ ಮರದ ಬುಡದಲ್ಲಿ ಉತ್ತರ ದಕ್ಷಿಣಕ್ಕೆ ಮುಖ ಮಾಡಿ ಕೂತೇ ಇದ್ದರಂತೆ!...ಕಟ್ಟುಕತೆಯೇ ಇದ್ದೀತು. ಸತ್ಯವಾಗಿರುವ ಸಂಭವವೂ ಉಂಟು, ಅಂತೂ ಇವು ಆಂಗ್ಲ ಸಮಾಜದ ಶಿಷ್ಟಾಚಾರದ ಪರಮಾವಧಿಯ ನಿದರ್ಶನಗಳು.

ಈ ಪದ್ಧತಿ ಅಥವಾ ಜಾಡ್ಯ—ನಮಗೂ ಅಷ್ಟಿಷ್ಟು ಅಂಟಿಕೊಂಡಿದೆ. ಪರಿಚಯದಪೀಠಿಕೆ, ಸಭೆ ಸಮಾರಂಭ, ಮದುವೆ, ಶ್ರಾದ್ಧ, ಆರತಕ್ಷತೆ ಅಜ್ಜಿ ವೈಕುಂಠಯಾತ್ರೆ— ಎಲ್ಲ ಸಂದರ್ಭಗಳಲ್ಲೂ ಅವಶ್ಯಕ: ಅದು ಆಧುನಿಕ ಸಮಾಜದ ಶಿಷ್ಟಾಚಾರ... ಒಮ್ಮೊಮ್ಮೆ ಕಷ್ಟಾಚಾರ!

ಮದುಮಕ್ಕಳನ್ನು ನಾವು ನಿಜಕ್ಕೂ ಅನುತಪಿಸಬೇಕು. ಹಗಲೆಲ್ಲ ಕಂದಮ್ಮಗಳ ಕಿರಿಚಾಟ. ಪುರೋಹಿತರ ಮಂತ್ರಾರ್ಭಟ, ಓಲಗದ ಅಪಸ್ವರ, ನಂಟರ ಗಡಿಬಿಡಿ ಬೀಗರ ಸಿಡಿಸಿಡಿ ಕೇಳಿ ಸಹಿಸಿ ಹೋಮದ ಹೊಗೆ ಕುಡಿದು, ಸೋತಿರುತ್ತಾರೆ: ಸಂಜೆಗೆ ಆಕರ್ಷಕವಾಗಿ ಸೋಫವನ್ನೋ, ಗಿಲೀಟುಮೆತ್ತೆಕುರ್ಚಿಗಳನ್ನೋ ಹಾಕಿರುತ್ತಾರೆಯೇ ಹೊರತಾಗಿ, ಅದರಲ್ಲವರನ್ನು ಕೂಡಗೊಡುವುದಿಲ್ಲ. ಪರಿಚಯದ ಹಾವಳಿ, ಉತ್ತಿಷ್ಟ-ಉಪವಿಷ್ಟದ ಪ್ರಭಾವಳಿ!

ಮದುಮಗ, ತನ್ನ ಗೆಳೆಯರನ್ನು ಹೆಂಡತಿಗೆ ಪರಿಚಯ ಮಾಡಿಕೊಡಬೇಕು: ಮದುವಣಗಿತ್ತಿ ಅವಳ ಗೆಳತಿಯರನ್ನು ಪತಿರಾಯನಿಗೆ 'ಡಿಟೋ', ಇನ್ನು ಮಾವಯ್ಯನ ಬೆಂಚುಕಲ್ಲು ಪಿಂಚನಿ ಸ್ನೇಹಿತರು, ಅತ್ತೆಮ್ಮನ ಗುಳಿಕಟ್ಟೆ ಹಿತವಂತರು, ಅಜ್ಜಯ್ಯನ ಗೀತಾಪ್ರಸಂಗದ ಸಹ'ತೂಕಡಿಗರು ಅಜ್ಜಿಯ ಪುರಾಣಕಟೆ (ಹರಟೆ) ತಂಡ: ತಮ್ಮನ ನೀಳಕೇಶಿ 'ಭಮರ್ಸ್' ತಂಗಿಯ ಫ್ಯಾಷನ್ ಮಾಡಲ್ಸ್ ಗ್ಯಾಂಗು, ನಾದಿನಿಯ ನಂಟರು ಭಾವನಿಗೆ ಬೇಕಾದವರು—ಅನಂತವಾದ ಅಕ್ಷಯ ಪಾತ್ರೆ. ಈ ಪರಿಚಯದ ಯಾತ್ರೆ!

ಅಷ್ಟಕ್ಕೂ, ಎಷ್ಟುಮಂದಿಯ ಹೆಸರಾದರೂ ನಂತರದಲ್ಲಿ ಆ ದಂಪತಿಗಳಿಗೆ ನೆನಪಿದ್ದೀತು? ಅವ ದಿಣ್ಣೇಮನೆ ಸಣ್ಣಯ್ಯನಾದರೇನು ದೊಡ್ಡೂರಿನ ದಡ್ಡಪ್ಪನಾದರೇನು? ಗಜಲಕ್ಷ್ಮಮ್ಮನೋ ವನಗೌರಮ್ಮನೋ ಅತ್ತೆ, ತಂದು ಮುಂದೆನಿಲ್ಲಿಸಿದ ಆ ಭಾರಿ ಹೆಂಗಸು ವಧುವಿಗೆ ಆಕೆಯ ಹೆಸರಿನಿಂದ ಏನಾಗಬೇಕಾಗಿದೆ? ಮಂತ್ರಿಯ ಮಗಳ ಭಾವನ ಚಿಕ್ಕಪ್ಪನ ಮಗ ವರನ ಕೈಕುಲುಕಿದಾಗ ದೊರೆತದ್ದು, ಬೆರಳುಗಳ ಉಳುಕೊಂದೇ ತಾನೆ?

ಸಭೆ, ಸಮಾರಂಭಗಳಲ್ಲಿನ ಮೊದಲ ಕಾರ್ಯಕ್ರಮ ಅಂದಿನ ಮುಖ್ಯ ಅತಿಥಿಗಳ, ಅಧ್ಯಕ್ಷರ, ಇತ್ಯಾದಿ ಇತ್ಯಾದಿಗಳ ಪರಿಚಯ: ಉದ್ಘಾಟಕರು, ಉಪನ್ಯಾಸಕಾರರು, ಮುಕ್ತಾಯ ಮಾಡುವವರು ಇವರೇ ಆ 'ಇತ್ಯಾದಿ'ಗಳು ಇವರೆಲ್ಲರ ಪರಿಚಯ, ಸಾಧನೆಬೋಧನೆಗಳ ಪಠಣ ಪರಿಸಮಾಪ್ತಿಯಾಗುವುದರಲ್ಲಿ ಸಭಿಕರ ಆಕಳಿಕೆ ತೂಕಡಿಕೆ ತುದಿಹಂತ ಮುಟ್ಟಿರುತ್ತದೆ.

ಪಾಪದ ಆ ಸಂಚಾಲಕ ತಾನೇ ಪರಿಪೂರ್ಣನೇ? ಕಾರ್ಯಕ್ರಮ ನಡೆಸುವ ಹೊಣೆಗಾರಿಕೆ, ಪಾತ್ರವಹಿಸುವವರು ಇದ್ದಕ್ಕಿದ್ದಂತೆ ನುಣುಚಿಕೊಳ್ಳುವಿಕೆ: ಕಡೆಗೆ ಕಂಗಾಲಾಗಿ ಆತುರದಲ್ಲಿ ಅಲ್ಲಲ್ಲಿ ಹೆಸರು ಕೇಳಿದ ದೊಡ್ಡ ಮನುಷ್ಯ'ರನ್ನು ಆಹ್ವಾನಿಸಿ ಕೈತೊಳೆದುಕೊಂಡಿರುತ್ತಾನೆ. ವೇದಿಕೆಯ ಮೇಲೆ ನಿಂತಾಗ, ಪರಿಚಯದ ಪ್ರವರ ಘೋಷ ತನ್ನದೇ ಎಂದು ಅರಿವಾದಾಗ, ಸಮಯ

ಸಿಂಧಂವಾಗಿಅವರ ಬಗ್ಗೆ ತಿಳಿದಿದ್ದ, ಕಿವಿಗೆ ಬಿದ್ದ, ಚೂರು ಪಾರುವಿಷಯಗಳನ್ನೇ ಅದಲು ಬದಲು ಮಾಡಿ ಹೇಳಿ ಮುಗಿಸುತ್ತಾನೆ. ಪರಿಣಾಮ...ಮಾಡದೇ ಇದ್ದ ಸಮಾಜ ಸೇವೆ, ಬರೆಯದೇ ಇದ್ದ ಪುಸ್ತಕ, ಪಡೆಯದೇ ಇದ್ದ ಪ್ರಶಸ್ತಿ, ಇಲ್ಲದೇ ಇದ್ದ ಉನ್ನತ ಉದ್ಯೋಗ, ಹೋಗದೇ ಇದ್ದ ವಿದೇಶಯಾನ ಯಾರು ಯಾರಿಗೋ ಅಂಟಿಸುತ್ತಾನೆ!...ಒಮ್ಮೊಮ್ಮೆ ದಸರಾ ಬೊಂಬೆಗಳಂತೆ ಸಾಲುಗಟ್ಟಿ ಕೂತಿರುವವರ ಮುಖದ ನೆನಪು ಮಾತ್ರ ಉಳಿದಿದ್ದು ಹೆಸರು ಮರೆತು ಅವರ ಪರಿಚಯದ ಸರತಿ ಬಂದಾಗ, "ಇವರು ಇಂದಿನ ಮೊದಲ ಭಾಷಣಕಾರರು ಶ್ರೀ... ಶ್ರೀಮಾನ್... (ಪಿಸುದನಿಯಲ್ಲಿ ತಮ್ಮ ಹೆಸರು?...(ಬಲಭದ್ರಯ್ಯ).. ಹಾಂ... ಶ್ರೀಮಾನ್ ಬಲಭದ್ರಯ್ಯನವರು"–ಎಂದು ಪುನಃ ಪ್ರಸಾರ ಮಾಡುವುದೂ ಉಂಟು.

ಅಂದೊಂದು ದಿನ, ಹಲವಾರು ಸಂಘಸಂಸ್ಥೆಗಳ ಪ್ರತಿನಿಧಿಗಳ ಸಭೆ ಕರೆಯಲಾಗಿತ್ತು. ಪರಿಚಯ ಪಟು ಒಬ್ಬೊಬ್ಬರನ್ನಾಗಿ ಇಂಟ್ರಡ್ಯೂಸ್ ಮಾಡುತ್ತ "ಇವರು ಅಶಕ್ತ ಬಾಲಕ ಸಂಘದ ಅಧ್ಯಕ್ಷರು, ಇವರು ಸೇವಾಶ್ರಮದ ಸಂಚಾಲಕಿ. ಇವರು ಅನಾಥ ಶಿಶುಪಾಲನಾಲಯದ ಕಾರ್ಯದರ್ಶಿ...ಅವರು ಕಿವುಡು ಮೂಗು, ಮಂಗ್ಗುಲಲ್ಲಿರುವಾಕೆ ಅಂಗವಿಕಲರು"– ಎನ್ನುತ್ತ ಹೇಳಿಕೆಯನ್ನು ಹ್ರಸ್ವಗೊಳಿಸಿದಾಗ, ಸಿಟ್ಟಿಗೆದ್ದ ಆ ಎರಡು ಸಂಸ್ಥೆಯ ಪ್ರತಿನಿಧಿಗಳನ್ನು ಸಮಾಧಾನಪಡಿಸಲು, ಮತ್ತೆರಡು ಕಪ್ಪು ಕಾಫಿ ಕುಡಿಸಬೇಕಾಯಿತು!

ಪರಸ್ಪರ ಹೆಸರು ತಿಳಿಯದೆ ಪರಿಚಯ ಬೆಳೆಯುವುದೂ ಉಂಟು. ಡಾಕ್ಟರ ಶಾಪ್ಪಿನ ಒಡನಾಡಿಗಳು, ಸಹಬಸ್ಸಿಗೆ, ಸಕ್ಕರೆ, ಸೀಮೆಎಣ್ಣೆ 'ಕ್ಯೂ' ಗೆಳೆತನ ರೇಷನ್ ರಾಮಾಯಣದ ಜತೆಗೋಳಾಟಿಗ–ಇಂಥವರು. ವೈದ್ಯರ ಕನ್ಸಲ್ಟಿಂಗ್ ರೂಮಿನಲ್ಲಿ ಪ್ರತಿನಿತ್ಯ ಕಾದು ಕೂತು. ತಮ್ಮತಮ್ಮ ರೋಗಪುರಾಣ ಅದರ ಗುಣಾವಗುಣಗಳ ಅಧ್ಯಾಯಗಳ ಪರಸ್ಪರ ವಿಚಾರವಿನಿಮಯ ಮಾಡಿಕೊಂಡಿದ್ದ ಇಬ್ಬರು ಮದುವೇಮನೆಯಲ್ಲೋ ಶುಭಕ...ಲ್ಲೋ ಭೇಟಿಯಾದಾಗಿನ ಅವರ ಸಂಭಾಷಣೆ ಹೀಗಿರಬಹುದು–

"ಹಿಹಿ...ಚೆನ್ನಾಗಿದೀರಾ? ನಿಮ್ಮ ಗ್ಯಾಸ್ಟ್ರಿಕ್ ಅಲ್ಸರ್ ಗುಣವಾಯ್ತೇ?

"...ಪರವಾಗಿಲ್ಲ. ಅಂದ ಹಾಗೇ, ನಿಮ್ಮ ಅರ್ಥೈಟಿಸ್ ಏನನ್ನುತ್ತೆ?"

× × ×



ಸಂತಾಪಸೂಚನೆ ಶಿಷ್ಟಾಚಾರದ ಇನ್ನೊಂದು ಮುಖ. ನೆಂಟರು ಇಷ್ಟರು ನಿಧನರಾದಾಗ ಅವರಲ್ಲಿಗೆ ಹೋಗಿ ಸಹಾನುಭೂತಿ ತೋರಿಸಬೇಕು. ಹೀಗೆ ಮಾಡುವವರಲ್ಲಿ ಎಷ್ಟು ಮಂದಿಯ ಸಹಾನುಭೂತಿಯಲ್ಲಿ ಹಾರ್ದಿಕತೆ ಇರುತ್ತೋ? ವರ್ಷಾನುಗಟ್ಟಲೆ ಅವರ ಮನೆ ಹೊಸ್ತಿಲು ಸಹ ತುಳಿಯದಿದ್ದವರು ಬಾರದ ಕಣ್ಣೀರು ತರಿಸಿಕೊಂಡು ಕರ್ಚೀಫನ್ನೋ ಸೀರೆಯ ಸೆರಗನ್ನೋ ಕಣ್ಣಿಗೆ ಹಚ್ಚುವ ಸಂಭವವೇ ಹೆಚ್ಚು!

ಮೊನ್ನೆ ನಮ್ಮ ಬಡಾವಣೆಯಲ್ಲಿ ಒಬ್ಬಾತ ಸತ್ತರು. ಅವರ ಪಕ್ಕದ ಮನೆಯೊಡೆಯ ಮೃತ ಶರೀರದೆದುರು ನಿಂತು, ಬಿಕ್ಕಿ ಬಿಕ್ಕಿ ಅತ್ತರು; ನಾಲ್ಕು ಕೈಚೌಕ ನೆನೆಸಿದರು. ಮೂಗಿನ ತುದಿಯನ್ನು ಹಣ್ಣುಮೆಣಸಿನಕಾಯಿ ಮಾಡಿಕೊಂಡರು. ಕಣ್ಣುಗಳಿಗೆ ಕಳಿತ ಟೊಮೇಟೋ ರಂಗು ಬರಿಸಿದರು! ನಿಜಕ್ಕೂ ಆಶ್ಚರ್ಯವಾಗಿ ನಾನಂದೆ,

"ನೆರೆಹೊರೆ ಅಂದರೆ ಹೀಗಿರಬೇಕು. ಪಾಪ, ಈತನಿಗೆ ಪಕ್ಕದ ಮನೆಯಾತನ ಮೇಲೆ ಅದೆಷ್ಟು ಪ್ರೀತಿ, ಅದೇನು ಮಮತೆ?"

"ಪ್ರೀತಿ ಎಲ್ಲಿ ಬಂತ್ರೀ? ನನ್ನ ಕಾರ್ಡನಲ್ಲಿ ನನ್ನದೇ ಲೆಖ್ಖದಲ್ಲಿ ಸೊಸೈಟೀಲಿ ಹತ್ತು ಕಿಲೋ ಅಕ್ಕಿ ನಾಲ್ಕು ಕಿಲೋ ಸಕ್ಕರೆ ಕೊಡ್ಸಿದೀನಿ ಈತನಿಗೆ: ನಮ್ಮ ಹುಡುಗ ಮೂರು ಗಂಟೆ 'ಕ್ಯೂ' ನಿಂತು ಆರು ಲೀಟರ್ ಸೀಮೆಎಣ್ಣೆ ಬೇರೆ ತಂದ್ಕೊಟ್ಟಿದಾನೆ ಬೆಳಗ್ಗೆ ತಾನೇ. ಈತ ಹೀಗೆ 'ದಿಢೀರ್' ಅಂತ ಕಣ್ಮುಚ್ಚಿಬಿಟ್ನಲ್ಲ. ಅದರದೆಲ್ಲ ದುಡ್ಡು ಹೋಯ್ತಲ್ಲ ಅಂತ ಕಣ್ರೀ ನಾನು ಅಳ್ತಿರೋದು" –ನನ್ನ ಮಾತು ಕಿವಿಗೆ ಬಿದ್ದಾಗ ಆತ ಕೊಟ್ಟ ಉತ್ತರ.

ರಾಯರ ದೂರದ ನೆಂಟರೊಬ್ಬರ ತಂದೆ-ತಾಯಿ ಇಬ್ಬರೂ ತೀರ ವೃದ್ಧರು. ಅವರ ಮನೆಯಲ್ಲಿ ಮೃತ್ಯು ಸಂಭವಿಸಿತೆನ್ನುವ ಸುದ್ದಿ ಅದು ಹೇಗೋ ಕಿವಿಗೆ ಬಿದ್ದಾಗ ರಾಯರು, ಶಿಷ್ಟಾಚಾರದಂತೆ ಸಂತಾಪ ಸೂಚಿಸಲು ಹೋದರು. ನಂತರ ನೆನಪಾಯ್ತು, ಮುದುಕಿಯೋ ಮುದುಕನೋ ಸತ್ತಿರುವುದು ಎಂದು ತನಗೆ ತಿಳಿಯದೆನ್ನುವುದು, "...ವಯಸ್ಸಿನಲ್ಲಿ ಹಿರಿಯರಾದ ಮುದುಕರೇ ಮೊದಲು ಭೂಮಿಗೆ 'ಗುಡ್‌ಬೈ' ಹೇಳುವುದು ಸ್ವಾಭಾವಿಕ ಎನ್ನುವ ನಿರ್ಧಾರಕ್ಕೆ ಬಂದು, ಮುಖವನ್ನು ಬಲವಂತದಿಂದ ಸಪ್ಪಗೆ ಮಾಡಿಕೊಂಡು "ತ್ಸುತ್ಸುತ್ಸು! ಎಂಥಾ ಅನ್ಯಾಯ ಆಯ್ತಪ್ಪ, ಧರ್ಮರಾಯನಂಥಾ ನಿಮ್ತಂದೆ ತೀರಿಕೊಂಡದ್ದು?" ಎನ್ನುತ್ತಿರುವಾಗ ಕೈಕೋಲಿನ 'ಟೊಕ ಟೊಕ' ಸದ್ದಿನೊಂದಿಗೆ ಮುದುಕರು ಒಳಹೊಕ್ಕಾಗ, ರಾಯರ ಪರಿಸ್ಥಿತಿ...!

ಸಾಮಾನ್ಯ ಮನುಷ್ಯನಿಗಾಗಿ ಸಂತಾಪಸೂಚನೆಗೆ ಮನೆಯಮಿತಿ; ಹೆಸರಾಂತವರಿಗೆ ಸಾರ್ವಜನಿಕ ಸಂತಾಪ! ಇಂತಹ ಸಭೆಗಳಲ್ಲಿ ಮಾತನಾಡುವವರು– ಕೆಲವರು ಅವರನ್ನು ಬಲ್ಲವರಾದರೆ, ಮತ್ತುಳಿದವರು 'ಯುದ್ಧಕಾಲೇ ಶಸ್ತ್ರಾಭ್ಯಾಸಃ' ಎನ್ನುವಂತೆ– ಮೃತರ ಬಗ್ಗೆ ಅಲ್ಲಿಲ್ಲಿ ಮಾಹಿತಿ ಶೇಖರಿಸಿ ಪಾಠ ಒಪ್ಪಿಸುವರು. ಅನೇಕ ವೇಳೆ ಅವು ಉತ್ಪ್ರೇಕ್ಷೆಯ ಗಡಿದಾಟಿ, ದಿವಂಗತರ ಬಗ್ಗೆ ಮಾತನಾಡುತ್ತಿದ್ದಾರೋ ಅಥವಾ ಮತ್ತಿನ್ನಾರನ್ನಾದರೂ ಉದ್ದೇಶಿಸಿಯೋ ಎಂದು ಅನುಮಾನ ಬರುವುದೂ ಶಕ್ಯ!

ಅಂತ್ಯಕ್ರಿಯೆಯ ಸಂದರ್ಭದಲ್ಲಿ ಮೃತರ ಬಗೆಗೆ ನಾಲ್ಕು ಮಾತನಾಡುವುದು ಪಾಶ್ಚಾತ್ಯ ದೇಶಗಳ

ಶಿಷ್ಟಾಚಾರ; ಆಗ ಸಾಮಾನ್ಯವಾಗಿ ಅವರ ಗುಣಗಾನ ನಡೆಯುತ್ತದೆ. ಒಮ್ಮೆ ಒಂದು ಫ್ಯೂನರಲ್ ನಡೆಯುತ್ತಿತ್ತು. ಪಾದರಿ ಉಚ್ಚಸ್ವರದಲ್ಲಿ ಆರಂಭಿಸಿದ: "ಈತ ಬಹಳ ಉದಾರಿ, ದಾನಶೂರ, ಧರ್ಮಭೀರು, ಬಡವರ ಬಂಧು...!" ಮೃತನ ಪತ್ನಿ ಮಧ್ಯ ಬಾಯಿ ಹಾಕಿ "ಫಾದರ್! ನೀವು ನನ್ನ ಗಂಡನ್ನಲ್ಲ, ಬೇರೆ ಯಾರನ್ನೋ ಹೂಳುತ್ತಿರಬೇಕು" ಎಂದು ಕೂಗಿದಳಂತೆ.

× × ×

ಏಗಡನೆಯುವರಲ್ಲಿಗೆ ಹೋದಾಗ ಅತಿಥಿ ಊಟವೂ ಕಾಫೀ ತಿಂಡಿ ತೆಗೆದುಕೊಳ್ಳಲು ಪ್ರಾರಂಭಿಸಿದ



ನಂತರ ಆತಿಥೇಯ ತೆಗೆದುಕೊಳ್ಳಬೇಕೆನ್ನುವುದು ಶಿಷ್ಟಾಚಾರದ ನಿಯಮ; ಅಂತೆಯೇ ಅವರಾಗಿ ಎದ್ದು ಮನೆಗೆ ಹೊರಡುವ ಮುನ್ನ, ಅವರನ್ನು ಹೊರಡಿಸಬಾರದೆನ್ನುವುದೂ ಇನ್ನೊಂದು ನಿಯಮ.

ನಮ್ಮ ಪ್ರೊಫೆಸರ್ ಪುರುಷೋತ್ತಮರೂ ಸಹೋದ್ಯೋಗಿ ಸಂಪಂಗಿಯವರೂ ಕಲೆತಾಗಿನ ಘಟನೆಗಳು ಮನೋರಂಜಕ. ಒಮ್ಮೆ, ಯಾರು ಅತಿಥಿ, ಯಾರು ಆತಿಥೇಯ ಎನ್ನುವುದನ್ನು ಇಬ್ಬರೂ ಮರೆತು ತಿಂಡಿ ತಿನಸಿನ ಮೇಜಿನ ಮುಂದೆ ಎರಡು ತಾಸು ಕೂತಿದ್ದರಂತೆ, ಕೈ ಕಟ್ಟಿಕೊಂಡು......ಮತ್ತೊಮ್ಮೆ, ಮಾತಾಡಿ ಆಡಿಸೋತು ಕಡೆಗೆ ತೂಕಡಿಕೆ ತಡೆಯಲಾರದೆ ಸಂಪಂಗಿಯವರು ಸಂಕೋಚಪಡುತ್ತಾ, "ರಾತ್ರಿ ಬಹಳ ವಾಯ್ತು; ಹಿಹಿ...ಇನ್ನು ನೀವು ಮನೆಗೆ ಹೋಗಿ ಮಿ. ಪುರುಷೋತ್ತಮ್" ಎಂದರು. "ಇದೇ ನನ ಮನೆ!" ಪುರುಷೋತ್ತಮರು ಹಾಗೆಂದಾಗಲೇ ಸಂಪಂಗಿಯವರಿಗೆ ಅರಿವಾದದ್ದು—ತಾನೇ ಪ್ರೊಫೆಸರ್ ಪುರುಷೋತ್ತಮರ ಮನೆಗೆ ಬಂದಿದ್ದೇನೆಂದು!

ಶಿಷ್ಟಾಚಾರ ಹಲವೊಮ್ಮೆ ಕಷ್ಟಾಚಾರವಾಗಿ ಪರಿಣಮಿಸಬಹುದು. ಶ್ವೇತಭವನದಲ್ಲಿ ನಡೆದ ಒಂದು ಘಟನೆ ಹೀಗಾಯ್ತು: ... ಮೆಕ್ಸಿಕೋದ ಅಧ್ಯಕ್ಷ ಮೇಟ್ಯೋಸರು ಅಮೇರಿಕದ ಅತಿಥಿಯಾಗಿ ಆಗಮಿಸಿದ್ದಾಗ, ಅಮೇರಿಕದ ಅಧ್ಯಕ್ಷ ಕೆನಡಿಯವರ ಕೈಗಡಿಯಾರದ ಬಗ್ಗೆ ಮೇಟ್ಯೋಸರ ಪತ್ನಿ ಮೆಚ್ಚುಗೆ ಸೂಚಿಸಿದಳು; ಕೆನಡಿಯವರು ತಕ್ಷಣ ಅದನ್ನು ಬಿಚ್ಚಿ ಆಕೆಗೆ ನೀಡಿದರು. ಪ್ರಶ್ನಾರ್ಥವಾಗಿ ಆ ದಂಪತಿಗಳು ಅವರತ್ತ ನೋಡಿದಾಗ, "ಅತಿಥಿಗಳು ಮೆಚ್ಚಿದ್ದನ್ನು ಅವರಿಗೇ ಉಡುಗೊರೆ ಕೊಡುವುದು ನಮ್ಮ ಶಿಷ್ಟಾಚಾರ" ಎಂದರವರು!

ಭೋಜನಕೂಟ ನಡೆಯುತ್ತಿದ್ದಷ್ಟು ಕಾಲವೂ ಮೆಕ್ಸಿಕೋದ ಅಧ್ಯಕ್ಷರು ಜಾಕ್ವೆಲಿನ್ ಕೆನೆಡಿಯವರನ್ನು ಒಂದೇಸಮನೆ ಮೆಚ್ಚುಗೆ ದೃಷ್ಟಿಯಿಂದ ನೋಡುತ್ತಿದ್ದುದನ್ನು ಕಂಡ ಅಮೇರಿಕೆಯ ಅಧ್ಯಕ್ಷರು ನಸುನಗುತ್ತ ನುಡಿದರು, "ಮೇಡಂ! ದಯವಿಟ್ಟು ನನ್ನ ಗಡಿಯಾರ ಹಿಂದಿರುಗಿಸಿರಿ; ನನ್ನ ಹೆಂಡತಿಯನ್ನು ನಾನು...ಕಳೆದುಕೊಳ್ಳಲಾರೆ!"

× × ×

ಅಭಿನಂದನೆ. ಶಿಷ್ಟಾಚಾರದ ಮತ್ತೊಂದು ಶಾಖೆ; ಮದುವೆಯಾದಾಗ, ಮೇಲಿನ ತರಗತಿಗೆ ಏರಿದಾಗ, ಪ್ರಮೋಷನ್ ಸಿಕ್ಕಿದಾಗ, ಪ್ರಶಸ್ತಿ ದೊರೆತಾಗ, ಆಟದಲ್ಲಿ ಗೆದ್ದಾಗ ಲಾಟರಿ ಬಿದ್ದಾಗ, ಚುನಾವಣೆ ಜಯಿಸಿದಾಗ, ಸ್ಪರ್ಧೆ ಗೆದ್ದಾಗ, ಪುತ್ರೋತ್ಸವ ಆದಾಗ, ನವಗೃಹಕ್ಕೆ ಹೊಕ್ಕಾಗ—ಎಲ್ಲ ಸಂತಸದ ಸಮಯಗಳಲ್ಲೂ ಅಭಿನಂದಿಸುವುದು ರೂಢಿ.

ಮನಸಾರೆ ಅಭಿನಂದಿಸುವವರು ನೂರಕ್ಕೆ ಐವತ್ತು ಮಂದಿಯಾದರೆ, ಬಾಗಿಲ ಸಂದಿಗೆ ಬೆರಳು ಸಿಕ್ಕಿ ಹಾಕಿಕೊಂಡು ನಗುವವರಂತೆ ಬೂಟಾಟಿಕೆಯ ಶಿಷ್ಟಾಚಾರ ನಡೆಸುವವರು ಮತ್ತಿನ್ನೈವತ್ತು ಮಂದಿ: ಠೇವಣಾತಿ ಕಳೆದುಕೊಂಡ ಉಮೇದುವಾರ ಜಯಶಾಲಿಯನ್ನು ಅಭಿನಂದಿಸುವುದು, ಆಟದಲ್ಲಿ ಸೋತವ ಎದುರಾಳಿಯ ಕೈಕುಲುಕುವುದು, ಸೂಪರ್‌ಸೀಡ್ ಮಾಡಿಸಿಕೊಂಡವ ಬಡ್ತಿಪಡೆದವನಿಗೆ ದಂತಪಂಕ್ತಿ ಪ್ರದರ್ಶಿಸುವುದು,—ಬಾಯಿನಲ್ಲಿರುವ ಬೇವಿನಕಾಯನ್ನು 'ಕಲ್ಲುಸಕ್ಕರೆ' ಎಂದಂತೆ!

ಪರಸ್ಪರಭೇಟಿಯಾದಾಗ, ಒಬ್ಬರನ್ನೊಬ್ಬರು 'ಗ್ರೀಟ್' ಮಾಡುವುದು ಶಿಷ್ಟಾಚಾರ; ಇದರ ಆಚರಣೆ ಬೇರೆಬೇರೆ ರಾಷ್ಟ್ರಗಳಲ್ಲಿ, ಬೇರೆಬೇರೆ ಜನಾಂಗದಲ್ಲಿ, ವಿಭಿನ್ನವಾಗಿರುತ್ತವೆ. ಮೂಗಿಗೆ ಮೂಗು ಉಜ್ಜುವುದು, ಢಿಕ್ಕಿ ಹೊಡೆದುಕೊಳ್ಳುವುದು, ಆಲಂಗಿಸುವುದು, ಕೈಕುಲುಕುವುದು, ಕೈಜೋಡಿಸುವುದು—ವಿವಿಧ ರೀತಿಯ ನಮನ!

ನಶ್ಯನಾಸಿಕವೋ, ನೆಗಡಿಮೂಗೋ ಆದರೆ, ಉಜ್ಜುವ ಪರಿಪಾಠದಲ್ಲಿ ಆಪತ್ತು; ಢಿಕ್ಕಿಹೊಡೆಯುವ ಸ್ಪೀಡ್‌ನಲ್ಲಿ ಹೆಚ್ಚುಕಡಿಮೆ ಆದರೆ ಹಣೆಡುಬ್ಬು ಮೂಡುವ 'ಡೇಂಜರು'; ಕೈಕುಲುಕುವಾಗ ಬಲಿಷ್ಠ ಮುಷ್ಟಿಯೊಳಕ್ಕೆ ಸಿಕ್ಕಿಹಾಕಿಕೊಂಡ ಸಣಕಲು ಕೈನ ಮೂಳೆ 'ಕ್ರ್ಯಾಕ್' ಆಗುವ ಸಾಧ್ಯತೆ!...ಇನ್ನೊಂದು ಮೂಗಿನ ವಾಸನೆ ನಮ್ಮ ಮೂಗಿಗೆ ಹೋಗದು, ಅವರ ನೆಗಡಿ ನಮಗೆ ವರ್ಗವಾಗದು. ಮತ್ತೊಬ್ಬರ ಕೈಕೊಳೆ ನಮ್ಮ ಕೈಗೆ ಅಂಟಿಕೊಳ್ಳದು, ನಮ್ಮದೇ ಎರಡು ಕೈಗಳನ್ನು ಜೋಡಿಸಿ ನಮಸ್ಕರಿಸುವ ಪದ್ಧತಿ, ಎಲ್ಲಕ್ಕಿಂತಲೂ ಒಳಿತು ಎನ್ನಿಸುತ್ತದೆ!

ಶಿಷ್ಟಾಚಾರದ ವಿಷಯವಾಗಿ ಹೇಳುವುದು ಇನ್ನೂ ಎಷ್ಟೋ; ಆದರೆ ಪುಟಸಂಖ್ಯೆಯ ಮಿತಿ ಮೀರದಿರುವುದೂ ಶಿಷ್ಟಾಚಾರ ತಾನೇ? ●



ಶ್ರೀನಿವಾಸ ಉಡುಪ

# ಗುಮಾಸ್ತೆ



**ತಾಲೂಕುಕಚೇರಿಯಲ್ಲಿ ಗುಮಾಸ್ತೆಯಾಗಿದ್ದ ಆಕೆ ಬಡ ರೈತರನ್ನು ಹಿಂಸಿಸಿ ಲಂಚವನ್ನು ಸ್ವೀಕರಿಸುತ್ತಿದ್ದಳು. ಅವಳ ಸಹೋದ್ಯೋಗಿಗಳು ಅವಳನ್ನು ಕಂಡು ಹೆದರುತ್ತಿದ್ದರು. ಆಕೆಗೆ ವರ್ಗವಾದಾಗ ಎಲ್ಲರೂ ಪೀಡೆ ತೊಲಗಿತೆಂದರು. ಆದರೆ ಆಕೆಯ ಜೀವನದಲ್ಲೂ ಪರಿವರ್ತನದ ಗಳಿಗೆ ಬಂದಿತು.**

ಪ್ರೇಮಾ ಹಾಸಿಗೆ ಮತ್ತು ಚಿಕ್ಕಬ್ಯಾಗ್ ಹಿಡಿದುಕೊಂಡು ಬೀಳುತ್ತಿದ್ದ ಸೆರಗನ್ನು ಎಳೆದು ಕುತ್ತಿಗೆಗೆ ಬಿಗಿಯಾಗಿ ಹೊದ್ದು ಬಸ್‌ನಿಲ್ದಾಣಕ್ಕೆ ನಡೆದು ಬಂದಳು. ಅವಳಿಗೆ ಏನಿಲ್ಲವೆಂದರೂ ಇಪ್ಪತ್ತೆಂಟು ವರ್ಷ ತುಂಬಿದೆ ಎಂದು ಯಾರುಬೇಕಾದರೂ ಹೇಳಬಹುದಿತ್ತು. ಕೆನ್ನೆಯ ಎರಡು ಭಾಗಗಳಲ್ಲೂ ಸಣ್ಣದಾಗಿ ಸುಕ್ಕು ಕಟ್ಟಿದ್ದವು. ಬಡಕಲಾದ ದೇಹ. ಅವಳು ನಡೆಯುವಾಗ ಸೊಂಟ ಬಾಗುತ್ತಿತ್ತು, ಬೆನ್ನು ಬಗ್ಗಿ

ತ್ತಿತ್ತು. ಹಿಂದಿನಿಂದ ದೂರದಲ್ಲಿ ನೋಡಿದವರು ಅವಳನ್ನು ಮುದುಕಿ ಎಂದೇ ತಿಳಿಯುವಂತೆ ಇತ್ತು ಸುಮಳ ನಡಿಗೆ. ಬಸ್‌ನಿಲ್ದಾಣದಲ್ಲಿ ಹಾಸಿಗೆ ಇಟ್ಟು ಬ್ಯಾಗನ್ನು ಹಾಸಿಗೆಗೆ ಒರಗಿಸಿ, ಸೊಂಟದಿಂದ ಕರವಸ್ತ್ರ ತೆಗೆದು ಮುಖದಲ್ಲಿ ಅಗಾಧವಾಗಿ ಬೆವರಿದ್ದನ್ನು ಒರಸಲಾರಂಭಿಸಿದಳು. ಕತ್ತೆತ್ತಿ ದೂರದವರೆಗೂ ನೋಡಿದಳು. ಕಿವಿಯನ್ನು ಚುರುಕುಮಾಡಿ ಶಬ್ದ ಆಲೈಸಿದಳು. ಊಹುಂ ಬಸ್ಸು ಬರುವ ಶಬ್ದ ಕಾಣಲೂ ಇಲ್ಲ. ಕೇಳಲೂ ಇಲ್ಲ. ಸುತ್ತಲೂ ನೋಡಿದಳು. ಒಂದಿಬ್ಬರು ಅದೇ ಬಸ್ಸಿಗೆ ಕಾಯುತ್ತಿದ್ದರು. ಅವರಲ್ಲಿ ಒಬ್ಬ ಪ್ರಾಯದವ ಬೀಡಿ ಸೇದುತ್ತಿದ್ದ. ಇನ್ನೊಬ್ಬ ಮುದುಕ ಬೆಳೆದ ಗಡ್ಡ ತುರಿಸುತ್ತಿದ್ದ. ಅವನ ಮುಖದಲ್ಲಿ ಯೋಚನೆ ತುಂಬಿತ್ತು. ಪ್ರಾಯದವನ ಕಣ್ಣುಗಳು ಅವಳನ್ನು ತಿನ್ನುವಂತೆ ನೋಡುತ್ತಿದ್ದವು. ಅವಳು ಸೀರೆಸೆರಗನ್ನು ಸಡಿಲಮಾಡಿದಳು. ಎದೆಯ ಭಾಗ ಸರಿಯಾಯಿತು ಎಂದುಕೊಂಡಳು. ತಲೆಕೂದಲುಗಳನ್ನು ಸರಿಮಾಡಿಕೊಂಡಳು. ಕಾಲೆತ್ತರದವರೆಗೆ ಸುಕ್ಕುಕಟ್ಟಿದ ಸೀರೆಯನ್ನು ಎಳೆದು ಸರಿಮಾಡಿಕೊಂಡಳು. ದೂರದಲ್ಲಿ ಬಸ್ಸು ಬಂದಂತಾಗಿ ಸರಸರ ಹಾಸಿಗೆ, ಬ್ಯಾಗ್ ತೆಗೆದುಕೊಂಡು ಸಿದ್ಧಳಾದಳು. ಆದರೆ ಸ್ವಲ್ಪಹೊತ್ತಿನಲ್ಲಿ ಅವಳೆದುರು ಬಾಳೆಕಾಯಿಗಳನ್ನು ತುಂಬಿಸಿಕೊಂಡಿದ್ದ ಸಿದ್ದಾಪುರದ ಕಾಮ್ತಿ ಅವರ ವ್ಯಾನ್ ಹಾದುಹೋಯಿತು. ವ್ಯಾನಿನ ಹಿಂದೆ ಬಾಳೆಕಾಯಿಯ ಮೇಲೆ ಕಾಲುಚಾಚಿ ಕುಳಿತಿದ್ದ ಕಂಡಕ್ಟರ್ ಕಿಣಿ, ಅವಳನ್ನು ನೋಡಿ ಸಿಳ್ಳೆಹಾಕಿ ಕಣ್ಣು ಮಿಟುಕಿಸಿದ. ಸಿಟ್ಟು ತಟ್ಟನೆ ಅವಳಿಗೆ ಬಂದು ಮುಖ ಕೆಂಪಾಯಿತು. ತುಟಿ ಅಗಲಿಸಿ, ಕಿಣಿ ಕಡೆಗೆ ಉಗಿಯಬೇಕೆನ್ನುವಾಗ ವ್ಯಾನ್ ಬಹಳ ದೂರ ಓಡಿಹೋಗಿ ಬಿಡ್ತು. ಸಿಟ್ನಲ್ಲಿ ಅವಳು ಹಲ್ಲುಕಚ್ಚಿಕೊಂಡಳು. ಕುರ್ಚಿಯಲ್ಲಿ ಹಾಯಾಗಿ ಕುಳಿತು ವಾರ ಪತ್ರಿಕೆಯಲ್ಲಿ ಬಂದ ಲೈಂಗಿಕಪುಟದ ಪ್ರಶ್ನೆ ಉತ್ತರ ಓದುತ್ತಿದ್ದಾಗ ದೊಡ್ಡಮನೆ ರೈತಬಂದು ಪಾಣಿ ದಾಖಲೆ ಸಿದ್ಧವಾಯ್ತೆ? ಅಂದಾಗ ರೇಗಿ, ನಿಮಗೆ ಬೇರೆ ಕೆಲಸ ವಿಲ್ಲವೆ?" ಎಂದು ಕೇಳಿದಾಗ ಅಂದು ರೇಗಿದ್ದಕ್ಕೂ ಈಗ ಕಿಣೀಮೇಲೆ ರೇಗಿದ್ದಕ್ಕೂ ಹೋಲಿಕೆ ಇದೆ ಅನ್ನಿಸಿದಾಗ ಅವಳ ಸಿಟ್ಟಿನ ಪವರ್ ಹೆಚ್ಚಾಗತೊಡಗಿತು. ಕಪೋಲಗಳು ಕಪ್ಪಲ್ಲೇ ಕೆಂಪುಬಣ್ಣದೆಡೆಗೆ ತಿರುಗಿತು. ಹತ್ತುಸಲ ದೊಡ್ಡಮನೆ ಹೆಗ್ಡೆ– ಪಾಣಿದಾಖಲೆಗೆ ಅವಳ ಹತ್ತಿರ ಬಂದಿದ್ದ. ಅವನಿಗೆ ಅರ್ಜೆಂಟಾಗಿ ವಂದಾನೆ ಸೊಸೈಟಿಯಿಂದ 'ಬೆಳೆ ಸಾಲ' ಬೇಕಾಗಿತ್ತು. ಅದಕ್ಕಾಗಿ ಆತ ಸಿದ್ದಾಪುರದ ಕಚೇರಿಯ ಪಹಣಿ ದಾಖಲೆಗಾಗಿ ಅರ್ಜಿ ಗುಜರಾಯಿಸಿದ್ದು. 'ಗ್ರಾಮ ಕರಣಿಕನಿಂದ ಹಣಕಿತ್ತು, ವಿಳ್ಯದೆಲೆ, ಅಡಿಕೆ, ಮಗೆ ಸೌತೆಕಾಯಿ ಕಿತ್ತು ದಾಖಲಾತಿ ಹೊತ್ತು ಅದನ್ನು ಕಛೇರಿಯ ಆ ಭಾಗದ ಗುಮಾಸ್ತೆ ಸುಮಳಿಗೆ ಕೊಟ್ಟಿದ್ದ. ಯಾವಾಗ ಬಂದರೂ ಅವಳು ಅವನ ಮೇಲೆ ರೇಗಿ "ಮಾಡಿ ಕಳಿಸುತ್ತೇನೆ ಹೋಗ್ರಿ" ಮೇಜಿನ ಮುಂದ ನಿಲ್ಲಬೇಡ್ರಿ, ಹೆಂಗಸೆದುರು ನಿಂತು ನೋಡಲು ನಿಮಗ ನಾಚಿಕೆ ಆಗೋಲ್ಲೇನ್ರಿ' ಎಷ್ಟು ಸಲ ಅವಳು ಹೆಗ್ಡೆಯನ್ನು ಕಾಯಿಸಿ ಬರೀಕೈಲಿ ಕಳಿಸಲಿಲ್ಲ? ಕೊನೆಗೆ ಹೆಗ್ಡೆ ಐದರ ಒಂದು ನೋಟನ್ನು ಥಕ್ಕನೆ ಕೈಯಲ್ಲಿ ಮಡಚಿ 'ಅಂ...ಹುಂ...ಇಗಾ...ಅಂದು' ಬಾಯಿ ತೊದಲಿಸಿ, ಕಣ್ಣು ಕುಣಿಸಿ ಕೈ ನೀಡಿದಾಗ, ಅವಳು ಸಂತೋಷದಿಂದ ಮೇಜಿನ ಡ್ರಾ ಎಳೆದಿದ್ದಳು. ಹೆಗ್ಡೆಯ ಮಡಚಿದ ನೋಟು ಡ್ರಾ ಒಳಗೆ ಬಿದ್ದಾಗ ಡ್ರಾ ಮುಚ್ಚಿ ಅತ್ತ ಇತ್ತ ನೋಡಿ ನೋಟನ್ನು ಎಳೆದು ಕುಪ್ಪಸದೊಳಕ್ಕೆ ತುರುಕಿದ್ದಳು. ಸ್ವಲ್ಪ ಹೊತ್ತಿನಲ್ಲಿ ಪಾಣಿದಾಖಲೆಗ ಏನೇನು ಬರೆಯಬೇಕೋ ಎಲ್ಲಾ ಬರೆದು, ಶಿರಸ್ತೆದಾರರ ಹತ್ತಿರ ನಡೆದು ಅವರ ಮೇಜಿನಮುಂದೆ ವಿಧೇಯಳಾಗಿ ನಿಂತಾಗ "ಏನು ಸುಮಾ?" ಎಂದರು ಆಗ 'ಇದೊಂದು ಸಹಿಯಾಗಬೇಕಿತ್ತು' 'ಇಟ್ಟು ಹೋಗಿ, ಜವಾನನ ಹತ್ತಿರ ಕಳಿಸಬಾರದಿತ್ತೆ?' ಅಂದ ಶಿರಸ್ತೇದಾರನ ಮೇಲೆ ರೇಗಿ 'ಸಹಿ ಹಾಕಿ, ಇಲ್ದೆ ಇದ್ರೆ ಟ್ರೇ ಒಳಗೆ ಕೊಳೆಸಿ ನನಗೇನು?" ಎಂದು ಶಿರಸ್ತೇದಾರನ ಮುಖದ ಮೇಲೆ ಹೊಡೆದಂತೆ ಹೇಳಿ ತನ್ನ ಕೋಣೆಗೆ ಬಂದು ಕುಳಿತಿದ್ದಳು. ಹೆಗ್ಡೆ ಅವಳ ಮೇಜನ್ನು ಬಿಟ್ಟು ಶಿರಸ್ತೇದಾರನ ಮೇಜಿನ ಬಳಿ ಹೋದ. ಅವಳು ಮತ್ತೆ ಕರ್ಮವೀರ ಬಿಚ್ಚಿ ಓದತೊಡಗಿದಳು. ಅವಳ ಸಾಲಿನಲ್ಲಿ ಕೊನೆಯಲ್ಲ ಕುಳಿತಿದ್ದ ಕುಡಿಮೀಸೆ ಯುವಕ "ಹೆಂಗಸರೇ ಹಣಕ್ಕೆ ಬಾಯಿಬಿಟ್ಟರೆ, ರೈತರು ಇನ್ನು ಮುಂದೆ ಹೇಗೆ ಕೆಲಸ ಮಾಡ್ಕೊತಾರೊ?" ಅಂದದ್ದು ಕೇಳಿ ಅವಳು ರೇಗಲಾರದೆ ಕಿಡಿಗಣ್ಣಿನಿಂದ ಅವನನ್ನು ನೋಡಿದ್ದು ತಟ್ಟನೆ ನೆನಪಾಗಿ ಇಂಥ ಕಛೇರಿ, ಇಷ್ಟುಸುಖ ಮುಂದಿನ ಕಛೇರಿಯಲ್ಲಿ ಸಿಕ್ಕಲು ಸಾಧ್ಯವೆ? ಅಂದುಕೊಂಡಾಗ ಕುಮಟದ ಕೆಂಪುಬಸ್ಸು ಬಂತು.

ಹಾಸಿಗೆ, ಚಿಕ್ಕಬ್ಯಾಗ್ ಹಿಡಿದು ಸರಸರ ಬಸ್ಸಿನ ಹತ್ತಿರ ಹೋದಾಗ ಸಾಲುಗಟ್ಟಿ ದುಬುದುಬು, ಸಾಮಾನು ಸಹಿತ ಬಸ್‌ನಿಂದ ಇಳಿಯುವ ಪ್ರಯಾಣಿಕರನ್ನು ನೋಡಿದಳು. ತನ್ನ ಮುಂದೆ, ಹಿಂದೆ ನಿಂತ ಜನಗಳ ಗುಂಪನ್ನು ನೋಡಿದಳು. ಅವಳಿಗೆ ಭಯವಾಯಿತು. ಮೊದಲು ಕುಮಟಕ್ಕೆ ಬೇಕಾದಷ್ಟು ಬಸ್ಸುಗಳನ್ನು ಎಸ್.ಟಿ. ಅವರು ಓಡಿಸುತ್ತಿದ್ದರು. ಡೀಸಲ್ ಪೆಟ್ರೋಲ್‌ಗಳ ಅಭಾವ ಆದಮೇಲ ಶಿರ್ಶಿಯಿಂದ ಬಂದ ಕಂಟ್ರೋಲರ್ ಬಾಳಿಗ ಕುಮಟಕ್ಕೆ ಬೆಳಗ್ಗೆ ಹನ್ನೊಂದಕ್ಕೆ ಒಂದೇ ಬಸ್ಸು ಬಿಡುತ್ತಿದ್ದ. ಸಿಕ್ಕಾಪಟ್ಟೆ ಪ್ರಯಾಣಿಕರು. ಬೇಡಕಣಿ, ಬಿಳಗಿ, ಇಟಗಿ, ವಂದಾನೆ, ದೊಡ್ಡಮನೆ ಹಾಗೆ ಹತ್ತಿಪ್ಪತ್ತು ಹಳ್ಳಿಗಳಿಗೆ ಹೋಗುವ ಪ್ರಯಾಣಿಕರು. 'ಈದಿನ ಸೀಟ್ ಸಿಗದಿದ್ದರೆ ಹೇಗೆ?' ಎಂಬ ಭಯ ಅವಳಲ್ಲಿ ಹುಟ್ಟಿದಾಗ ಹಿಂದಿನಿಂದ ಗಂಡಸೊಬ್ಬ ಅವಳ ಬೆನ್ನಿಗೆ ಕೈ ತಾಗಿಸಿದಾಗ ಅವಳು ತಿರುಗಿದಳು. ಆದರೆ ಬಹಳಷ್ಟು ಹೆಂಗಸರು, ಗಂಡಸರು ಗುಂಪು ಜೋರಾಗಿದ್ದರಿಂದ ಅವಳು ಏನೂ ಮಾಡಲಾಗದೆ ಒಂದು ಘಳಿಗೆ ಮರದ ಕೊರಡಾದಳು. ಏನೋ ಕಷ್ಟಪಟ್ಟು ಅವಳು ಬಸ್ಸು ಏರಿದಾಗ ಕುಳಿತುಕೊಳ್ಳಲು ಸ್ಥಳಸಿಗದೆ ಕಾಲಡಿಗ ಬೆಡ್‌ಹಾಕಿ. ಕೈಲಿ ಚಿಕ್ಕಬ್ಯಾಗ್ ಹಿಡಿದು ಕಬ್ಬಿಣದ ಸರಳು ಹಿಡಿದು ನಿಂತಾಗ ಮೈಯೆಲ್ಲಾ ಬೆವರಿ ಬಿಸಿ ಕಾರತೊಡಗಿತು. ಒಮ್ಮೆ ಹಿಂದೆ ಮುಂದೆ, ಅಕ್ಕಪಕ್ಕ ನೋಡಿದಾಗ ಹಿಂಡು ಹಿಂಡು ಜನ ಬಸ್ಸೇರಿದ್ದು ಕಂಡು 'ಹೇಗಪ್ಪ ನಿಂತು ಕುಮಟಕ್ಕೆ ಹೋಗೋದು' ಅನ್ನಿಸಿತು. ಕಂಡಕ್ಟರ್ ಬಂದಾಗ ಕುಪ್ಪಸದೊಳಕ್ಕೆ ಕೈಹಾಕಿ ಪರ್ಸ್ ತೆಗೆದು ಅವನು ಕೊಟ್ಟ ಟಿಕೆಟ್ ಪಡೆದು ಹಣ ಕೊಟ್ಟಳು. ಕಂಡಕ್ಟರ್ ಚಿಲ್ಲರೆಯನ್ನು ಅವಳ ಕೈಮುಟ್ಟಿ ಕೊಟ್ಟು ಹಲ್ಲು ಕಿರಿದಾಗ ಅವಳ ಮುಖ ಕೋಪದಿಂದ ಕುದಿಯಿತು. 'ಛೇ ಈ ಬಸ್ನಲ್ಲಿ ಈ ಗಂಡಸರ ನೂಕು ನುಗ್ಗಲಲ್ಲಿ ಹೇಗೆ ಕುಮಟದವರೆಗೆ ಹೋಗೋದು ಹೋಗದೇ ಬಿಟ್ಟರೆ ಇಂದೇ ಕೆಲಸಕ್ಕೆ ಹಾಜರಾಗಬೇಕು. ಇಲ್ದೆ ಇದ್ರೆ ಅಪಾಯ! ಸರ್ಕಾರಿ ಕೆಲಸಕೆ ಬೆಂಕಿ ಬೀಳ್ಲಿ. ಒಂದೂರಲ್ಲಿ ನಾಲ್ಕುದಿನ ಹಾಯಾಗಿ ಇರೋಹಾಗಿಲ್ಲ. ಒಂದುಮನೆಯಲ್ಲಿ ಪರ್ಮಾನೆಂಟ್ಟಾಗಿ ಇರುವಹಾಗಿಲ್ಲ. ಒಳ್ಳೆ ಗುಮಾಸ್ತೆಯಾಗಿಬಿಟ್ಟೆ ನಾನು. ಅಂದುಕೊಂಡಾಗ ಅವಳಿಗೆ ಸೊಂಟ ನೋವಾಗಲಾರಂಭಿಸಿ– ನೆಟ್ಟಗೆ ನಿಂತು ಸೊಂಟ ಉಜ್ಜಲಾರಂಭಿಸಿದಳು.

ಬಹಳ ಹೊತ್ತು ಬಸ್ಸು ಹಾಗೆ ನಿಂತಾಗ ಸೆಕೆ ಜಾಸ್ತಿಯಾಗಿ ಕಾಲುಸೋತು ಬಂದಾಗ ಅಯ್ಯಪ್ಪ ಅಂದಳು. ಪಕ್ಕದಲ್ಲೇ ಇದ್ದ ಒಬ್ಬ ಇನ್ನೊಬ್ಬನಿಗಂದ "ಪಾಪ ನಿಲ್ಲೋಕೆ ಆಗೋಲ್ಲವೋ ಏನೋ ನಾನು ಎದ್ದು ಅವಳಿಗೆ ಕುಳಿತುಕೊಳ್ಳಲು ಅವಕಾಶ ಮಾಡಿಕೊಡ್ತೆ?" "ನಿಂಗೆ ಬುದ್ಧಿಲ್ಲ ಮಾಣಿ, ಅವಳು ನಿಂತೇ ಸಾಯ್ಲಿ ಗುಮಾಸ್ತೆ. ಅವಳು ಒಂದು ಸಾರಿನೂ ಒಬ್ಬರಿಗೆ ಕೆಲಸ ಮಾಡಿಕೊಟ್ಟಿಲ್ಲ. ಅವಳಿಗೆ ಉಪಕಾರ ಮಾಡೋದೂ ಒಂದೇ, ಹಾವನ್ನು ಮನೇಲಿ ಬಿಟ್ಕೋಳೋದೂ ಒಂದೆ" ಅಂದ ಹೆಗ್ಡೆ ಮಾತು ಕೇಳಿಸಿದಾಗ ಅವಳು ಉರಿದುಬಿದ್ದಳು. ಬಸ್ಸು ಇದ್ದಕ್ಕಿದ್ದ ಹಾಗೆ ಬುಸುಗುಟ್ಟಲಾರಂಭಿಸಿ, ಟಣ್ ಟಣ್ ಶಬ್ದ ಕಂಡಕ್ಟರನಿಂದ ಬಂದ ಮೇಲೆ ಡ್ರೈವರ್ ಸಾಹೇಬ ಸ್ಟೇರಿಂಗ್ ಹಿಡಿದು ಬಸ್ಸು ಬಿಟ್ಟ. ಇದ್ದಕ್ಕಿದ್ದಂತೆ ಬಸ್ಸು ಓಡಿ ಒಂದು ಕಡೆ ಜಂಪ ಆದಾಗ ಅವಳು ಮುಂದಿದ್ದವನ ಬೆನ್ನಿಗೆ ತಾಗಿಕೊಂಡು ಬಿದ್ದಳು. ಅವನು ಅವಳನ್ನು ಎತ್ತತೊಡಗಿದಾಗ ಸುಮಾ ಅವನನ್ನು ನೋಡಿದಳು. ಒಳ್ಳೇ ಕರಿ ಟೊಣೆಯ, ನಾಯ್ಕರ ಜಾತಿಯವ ಅಂತ ನಿರ್ಧರಿಸಿ ಸರಿಯಾಗಿ ನಿಂತು ಸೆರಗು ಸರಿಮಾಡಿಕೊಂಡಳು. ಅಬ್ಬಾ ಇಂಥ ಕುರೂಪಿ ನಾನು ನೋಡೇ ಇಲ್ಲ. ಬೀಡಿ ಗಬ್ಬು ವಾಸನೆ ಅಸಹ್ಯ ಎಂದು ಅವಳು ಸರಳನ್ನು ಬಲವಾಗಿ ಹಿಡಿದಳು. ಇದ್ದಕ್ಕಿದ್ದ ಹಾಗೆ ಬೇಡಕಣಿ ಹತ್ತಿರ ಬಸ್ಸು ನಿಂತು ಜನ ಇಳಿದಾಗ ಒಬ್ಬ "ನಮಸ್ಕಾರರಿ...!" ಅಂದ. ಸುಮ ಅವನನ್ನು ನೆನಸಿ ಈತ ತಾಲೂಕ'ಬೋರ್ಡ್ ಸದಸ್ಯನಾದ ಪಶುಪತಿ ಹೆಗ್ಡೆ ಷೆ. ಅಂದಾಗ ಮತ್ತೆ ಬಸ್ಸು ಹೊರಟಿತು.

ಅಬ್ಬಾ ತಾನು ಮೊಟ್ಟ ಮೊದಲು ಸಿದ್ದಾಪುರದ ಕಛೇರಿಗೆ ಕೆಲಸಕ್ಕೆ ಬಂದದ್ದು ಇಂದ ಮಾಡುವಾಗ ಅಷ್ಟಿಷ್ಟು ಹಣ ಸಂಪಾದಿಸಿದ್ದು 'ಗ'ಯನ್ನು ಮಾಡುವಾಗ ಚೆನ್ನಾಗಿಯೇ ಸಂಪಾದನೆ ಮಾಡಿಕೊಂಡದ್ದು, ಇದ್ದ ಅಧಿಕಾರಿ ವರ್ಗವಾಗಿ ಹೊಸಅಧಿಕಾರಿ ಮಾಮದ್ ಗೌಸ್ ಬಂದಾಗ ಅವನಿಗೆ ಗದರಿಸಿ, ಕಣ್ಣು ಕುಣಿಸಿ 'ಗ' ಇಂದ ದರಕಾಸ್ತು ವಿಭಾಗಕ್ಕೆ ಗುಮಾಸ್ತೆಯಾಗಿ ಹೋಗಿದ್ದು, ಅನಂತರ ತನ್ನೆದುರಿಗೆ ಕೆಲಸಕ್ಕಾಗಿ ಬಂದ ರೈತರಿಗೆ ತಾನು ರೇಗಿರೇಗಿ ಮಾತಾಡಿದ್ದು, ಹತ್ತಿರಕ್ಕೆ ಅವರನ್ನು ಬಿಟ್ಟುಕೊಳ್ಳದೆ ಚೆನ್ನಾಗಿ ಉತ್ಪತ್ತಿ ಹೆಚ್ಚಿಸಿಕೊಂಡದ್ದು, ಇದ್ದದ್ದು ಇಲ್ಲದ್ದು ತಕರಾರು ಹಾಕಿ ಕೆಲವು ಸಮಯ ಮುಖ್ಯವಾದ ವರದಿಗಳಿದ್ದ, ಹಾಳೆಗಳನ್ನು ಹರಿದು ನಾಶಮಾಡಿ ಸಂಪಾದಿಸಿದ್ದು, ನೆನೆಸಿದಾಗ ತಾನು ಇಷ್ಟುಕೆಟ್ಟವಳಾಗಿ ಬಿಟ್ಟನೆ? ಅನ್ನಿಸಿ ಅವಳು ಭಯದಿಂದ ಬೆವರಲಾರಂಭಿಸಿದಳು. ನಾನೇನು ಮಹಾ? ನನ್ನ ಜೊತೆ ಕೆಲಸಗಾರರೂ ಎಷ್ಟು ರೈತರಿಂದ ವಸೂಲಿ ಮಾಡಿಕೊಳ್ಳುತ್ತಿರಲಿಲ್ಲ! ಸದಾ ಕಾಫಿಗಾಗಿ ತಿರುಗುತ್ತಿರಲಿಲ್ಲ. ಅವರೂ ಸಹ ನನ್ನ ಹಾಗೆ ಕುಳಿತು ಕೆಲಸ ಮಾಡುತ್ತಿದ್ದರೆ? ಸುತ್ತಲೂ ಇಂಥವರೇ. ನಾನು ಹೆಣ್ಣಾದರೇನಾಯಿತು. ನನಗೂ ಆಶೆಗಳಿಲ್ಲವೆ? ಮನೆ ಇಲ್ಲವೆ? ಹಣ ಬೇಡವೆ? ಅದಕ್ಕಾಗಿ ನಾನು ರೈತರನ್ನು ಸತಾಯಿಸುತ್ತಿದ್ದೆ. ಕೆಲಸ

# ముద్దు ఢాం ఎందిత్తు!

















ಮಾಡಿಕೊಳ್ಳಲು ಬಂದವರಿಗೆ ಐದಾರು ಸಲ ಓಡಾಡಿಸಿ ಫೈಲು ತೆಗೆದು ಇಟ್ಟು ತಿಕಲಾಟ ಹಾಕಿ ಕಾನೂನನ್ನು ಚಲಾಯಿಸಿ ಶಿರಸ್ತೇದಾರರು, ಸಾಹೇಬರೂ ಹೇಳಿದಾಗಲೂ ಸಾಧ್ಯವಾಗದಂತೆ ನೋಟ ಹಾಕುತ್ತಿದ್ದುದು ಇದರಿಂದ ತಾನೆ ಅಷ್ಟಿಷ್ಟು ಮಗ ಒಡವೆ ಮಾಡಿಕೊಳ್ಳಲು ಸಾಧ್ಯವಾಗಿದ್ದುದು ಮುಂದೆ ಮದುವೆಯಾಗಲು ವರದಕ್ಷಿಣೆ ಖರ್ಚಿಗೆ ಒಂದಿಷ್ಟು ಬ್ಯಾಂಕಿನಲ್ಲಿ ಡಿಪಾಜಿಟ್ಟು ಮಾಡಿದ್ದು ಎಲ್ಲ ನೆನಪಾಯಿತು.

ಆಫೀಸಿನಲ್ಲಿ ಎಲ್ಲರೂ ನನಗ ರೌಡಿ ಅನ್ನುತ್ತಿದ್ದರೆ ಕೆಲಸಕ್ಕೆ ಬಂದವರು ಇವಳು ರಾಕ್ಷಸಿ ಅನ್ನುತ್ತಿದ್ದರು ಸಾಹೇಬರು. ಶಿರಸ್ತೇದಾರರೂ ನನ ಬಾಯಿಗೆ ಹೆದರುತ್ತಿದ್ದುದು ಹಿಂದಿನಿಂದ 'ಹೆಣ್ಣಾಗಿ ಅವಳನ್ನು ಹದ್ದುಬಸ್ತಾಗಿ ಇಡಲು ಅಸಾಧ್ಯ ಎನ್ನುತ್ತಿದ್ದುದು ಕೇಳಿದಾಗ ನಾನು ಹೀಗೇನೆ ಇಲ್ಲದಿದ್ದರೆ ಸಾಲಮಾಡಿ ಮುಷಿಷವೆ ಮಾಡಿ ಇರಬೇಕು. ಅಷ್ಟೇ. ಒಂದುದಿನವೂ ಆಫೀಸಿನಲ್ಲಿ ಜಗಳ ಮಾಡದೆ ಇರಲು ಸಾಧ್ಯವಾಗದೇ ಕೊನೆ ಕೊನೆಗೆ ನನ್ನ ಹತ್ತಿರ ಅಕ್ಕಪಕ್ಕದ ಅಧಿಕಾರಿಗಳು ಜವಾನರೂ ಮಾತೇ ಆಡುತ್ತಿರಲಿಲ್ಲ.

ಗಕ್ಕನೆ ಬಸ್ಸು ನಿಂತಾಗ ಅವಳು ಪಕಪಕ ನೋಡಿದಳು. ಕೆಲವು ಜನರು ಬಸ್ಸಿನಿಂದ ಇಳಿದರು. ಕೆಲವು ಜನರು ಬಸ್ಸನ್ನು ಹತ್ತಿದರು. ಇದೇ ಸಮಯದಲ್ಲಿ ಸುಮಾ ಖಾಲಿಯಾದ ಜಾಗದಲ್ಲಿ ಕುಳಿತು ಅಯ್ಯಪ್ಪ ಎಂದು ಕೈ ನೆಟ್ಟಿಗೆ ಮುರಿದಳು. ಕಾಲುಗಳನ್ನು ಅಗಲಿಸಿದಳು. ಬಸ್ಸು ಹೊರಡುವಾಗ ಇದು ಯಾವ ಊರೋ ಎಂದಳು. ಪಕ್ಕದಲ್ಲಿ ಆಗ, ತಾನೆ ಬಂದು ಕುಳಿತ ವಂದಾನೆ ಅಂಚೆಮನೆ ಮಾಸ್ತರಿಣಿ ಪಾರ್ವತಿಬಾಯಿ 'ವಂದಾನೆ' ಇದು ಎನ್ನಲು ಸರಿ ಅಂದಳು.

ಬಸ್ಸು ಓಡಲಾರಂಭಿಸಿತು. ಅವಳ ನೆನಪಿನ ಚಕ್ರ ಹಿಂದಕ್ಕೋಡಿತು. ತಾನು ಮಹಾಕಷ್ಟಪಟ್ಟು ವಿದ್ಯಾಭ್ಯಾಸ ಮುಗಿಸಿದಾಗ ಮನೆಯಲ್ಲಿ ತಂದೆತಾಯಿ, ವಯಸ್ಸಾಗಿ, ತಂಗಿ ತಮ್ಮಂದಿರು ಎಲ್ಲಾ ವಿದ್ಯಾಭ್ಯಾಸ ಮಾಡುವವರಾಗಿ ಉತ್ಪತ್ತಿ ಇಲ್ಲದೆ ಮನೆಯಲ್ಲಿ ಬಡತನ ಉಪವಾಸಗಳು ಪ್ರಾರಂಭವಾದವು. ಅವರಿವರನ್ನು ಹಿಡಿದು ಅರ್ಜಿಗಳ ಮೇಲೆ ಅರ್ಜಿಗಳನ್ನು ಗುಜರಾಯಿಸಿ ಅಂತೂ ಸಿದ್ದಾಪುರದ ಕಛೇರಿಯಲ್ಲಿ ಗುಮಾಸ್ತಳಾಗಿ ಹಾಜರಾಗಿ ಅಪ್ಪನ ಜ್ಯೋತಿಷ್ಯದಿಂದ ಮಾಟಮಂತ್ರಗಳಿಂದ ಬರುವ ಹಣ ಹಾಲಿನಖರ್ಚಿಗೂ ಸಾಕಾಗದೆ ತನ್ನ ದುಡಿಮೆಯಿಂದ ಮನೆಯಲ್ಲಿ ಸ್ವಲ್ಪ ಉಪವಾಸಗಳು ಮುಕ್ತಾಯಗೊಂಡವು. ಪುಸ್ತಕಕ್ಕೆ ಹಣ ಫೀಜಿಗೆ ಹಣ, ಸಾಮಾನಿಗೆ ಹಣ, ಬಟ್ಟೆಗಳಿಗೆ ಹಣ ಇತ್ಯಾದಿಗಳಿಗೆ ಮನೆಯಲ್ಲಿ ಬೇಡಿಕೆ ಜಾಸ್ತಿ ಆದಾಗ ತಾನು ರೈತರಿಗೆ ಕೆಲಸಕ್ಕೆ ಬಂದವರಿಗೆ ಕಿರುಕುಳ ಕೊಟ್ಟು ಹಣ ಸಂಪಾದನೆಯ ದಾರಿ ಮಾಡಿಕೊಂಡೆ. ಸುಮಾ ಯೋಚಿಸುತ್ತಿದ್ದಾಗ ಹಿಂಬದಿ ಕುಳಿತ ಯುವಕನೊಬ್ಬ ಕೈ ಬೆರಳುಗಳನ್ನು ಕುತ್ತಿಗೆಗೆ ಒತ್ತುತ್ತಿದ್ದುದು ಗಮನಿಸಿ ಹಿಂತಿರುಗಿ ಕೆಂಗಣ್ಣು ಬಿಟ್ಟಾಗ ಯುವಕ ತಲೆತಗ್ಗಿಸಿದ. ನಿತ್ಯ ರಿಕಾರ್ಡುಗಳನ್ನು ನೋಡಬೇಕಾದರೆ ಮಾಮೂಲು ಬರಲೇಬೇಕೆಂತ ಸಮಯವೆಲ್ಲ ಪತ್ರಿಕೆ, ಕಥೆಪುಸ್ತಕ ಓದುವ ನೆಪದಲ್ಲಿ ಕಾಲಕಳೆಯುತ್ತಿದ್ದ ತನಗೆ ಹಣ ಬರಲಾರಂಭಿಸಿದಾಗ ಆಸೆ ಹೆಚ್ಚಾಗಲಾರಂಭಿಸಿತು. ಕೆಲಸ ನಿಧಾನವಾಗಲಾರಂಭಿಸಿತು. ಕೋಪ ದಬ್ಬಾಳಿಕೆ ಹೆಚ್ಚಾದವು. ಸ್ಟೀಲ್ ಪಾತ್ರೆಗಳು [illegible]ನಗಳು, ಒಡವೆಗಳು ಬ್ಯಾಂಕಿನಲ್ಲಿ ಡಿಪಾಜಿಟ ಆಗಲುತೊಡಗಿದ್ದನ್ನು ನೆನೆಸಿದಾಗ ಸುಮಾಳ ಮುಖ ನಗುವಿನಿಂದ ಅರಳಿತು. ತುಟಿಗಳಲ್ಲಿ ನಗು ಹುಟ್ಟಿ ಬೆಳೆಯಲಾರಂಭಿಸಿತು. ಇದ್ದಕ್ಕಿದ್ದಂತೆ ಬಸ್ಸು ನಿಂತಾಗ ಎಲ್ಲರೂ ಕಂಗಾಲಾದರು. ಸುಮಾ ಸುತ್ತಲೂ ನೋಡಿದಳು. ದೊಡ್ಡಮನೆ ಭಯಂಕರಅರಣ್ಯ ಅಲ್ಲಲ್ಲಿ ಕಾಡುಪ್ರಾಣಿಗಳ ಕೂಗು. ಡ್ರೈವರ್ ಬಸ್ಸು ಕೆಟ್ಟು ಹೋಗಿದೆ, ರಿಪೇರಿ ಮಾಡಲು ಅಸಾಧ್ಯ ಎಂದಾಗ ಬುಡುಬುಡು ಬಸ್ಸಿನಿಂದ ಜನ ಇಳಿದರು. ಡ್ರೈವರ್, ಕಂಡೆಕ್ಟರ್ ಬಸ್ಸಿನ ಸುತ್ತಲೂ ಪರೀಕ್ಷಿಸಿ ಸಿರ್ಸಿಯಿಂದ ಮೆಕ್ಯಾನಿಕ್ ಬರಬೇಕು. ಅಲ್ಲಿಯವರೆಗೆ ಬಸ್ಸು ಇಲ್ಲೆ ಎಂದಾಗ ಮುದುಕರೊಬ್ಬರು ಗಾಬರಿಯಾದರು. ಪ್ರಯಾಣಿಕರೆಲ್ಲ ಕಂಗಾಲಾದರು. ಅಣ್ಣಾವ್ರೆ ಮೆಕ್ಯಾನಿಕ್ ಕರೆತರಲು ಸಿರ್ಸಿಗೆ ಹೋಗುವುದು ಹೇಗೆ? ಕಂಡೆಕ್ಟರ್ ಅಂದ. 'ಯಾವುದಾದರೂ ಲಾರಿ ಬಂದಾವು. ಅದರಲ್ಲಿ ನೀನು ಸಿದ್ದಾಪುರದವರೆಗೆ ಹೋಗಿ ಅಲ್ಲಿಂದ ಸಿರ್ಸಿಗೆ ಹೋಗು ಎಂದ. ಉದ್ದಮುಖದವನು, ದೊಡ್ಡಮನೆಗೆ ಎಷ್ಟುದೂರ? ಅಂದ. ಪೇಟಸುತ್ತಿ ಎಲೆ ಅಡಿಕೆ ಕವಳ ಜಗಿಯುತ್ತಿದ್ದ ಹೆಗ್ಡೆ ಅವರು ಹೇಳಿದರು. 'ಎರಡು ಮೈಲಿ ಇದೆ.' ಕೆಲವರು ರಸ್ತೆಯ ಮೇಲೆ ಕುಳಿತರು, ಕೆಲವರು ಏನೇನೋ ಡ್ರೈವರ್, ಕಂಡೆಕ್ಟರ್‌ಗಳಿಗೆ ಬೈಯಲಾರಂಭಿಸಿದರು. ಒಬ್ಬ 'ಎಸ್. ಟಿ. ಬಸ್ ಹೀಗೆ' ಅಂದ.

"ಕೆಟ್ಟ ಬಸ್ಸು ರಿಪೇರಿ ಆಗುವುದುಯಾವಾಗ?" ಸುಮ ಬಹುಮತ್ತಗೆ ಡ್ರೈವರ್‌ಸಾಹೇಬನ ಹತ್ತಿರ ಹೋಗಿ ಕೇಳಿದಳು. "ಹೇಗ ಹೇಳುವುದು ಮೆಕ್ಯಾನಿಕ್ ಬಂದು ಕೆಟ್ಟಭಾಗ ಗುರ್ತಿಸಿ ಸರಿ ಮಾಡಿದಮೇಲೆ" ಅಂದ. "ಯಾಕೆ?" ಕಂಡಕ್ಟರ್ ಸುಮಳ ಹತ್ತಿರ ಬಂದು ಕೇಳಿದ. "ನಾನು ಈ ದಿನವೇ ಕುಮಟಕ್ಕೆ ಹೋಗಬೇಕಾಗಿತ್ತು. ಸಿದ್ದಾಪುರದಿಂದ ನನಗೆ ಕುಮಟಕ್ಕೆ ವರ್ಗವಾಗಿದೆ. ಸಿದ್ದಾಪುರದಲ್ಲೇ ಉಳಿಯಲು ಮಾಡಿದ ಪ್ರಯತ್ನಕ್ಕಾಗಿ ಏಳುದಿನಗಳು ಖರ್ಚಾದವು. ಈವತ್ತು ಹೊಸಕಛೇರಿಯಲ್ಲಿ ನಾನು ಕೆಲಸಕ್ಕೆ ಹಾಜರಾಗದಿದ್ದರೆ ಈಗಿನ ಕಾನೂನ ಪ್ರಕಾರ ತುಂಬಾ ತೊಂದರೆಯಾಗುತ್ತದೆ." ಹಾಗೆ ಅವಳು ಹೇಳಿ ಮುಗಿಸುವಾಗ ಕಣ್ಣಲ್ಲಿ ನೀರು ಬರಲಾರಂಭಿಸಿತು. "ಪಾಪ ಪಾಪ ನೀವು ನಿನ್ನೆನೇ ಹೊರಟಿದ್ದರೆ ಆಗುತ್ತಿತ್ತು" ಎಂದಮೇಲೆ ಕಂಡಕ್ಟರನ ನಗೆ ಅವಳಿಗೇನು ಅನ್ನಿಸಲಿಲ್ಲ. "ಈದಿನ ಬೆಳಗಿನ ಬಸ್ಸಿಗೆ ಹೊರಡಬೇಕೆಂದು ಬಂದೆ. ಆದರೆ ಈಗ ಬೆಳಗ್ಗೆ ಬಸ್ಸೂ ಇಲ್ಲವಂತೆ" ಎಂದಾಗ ಅವಳು ತುಂಬಾ ಸುಸ್ತಾದಳು. ಡ್ರೈವರ ಬಸ್ಸಿನ ಮುಂದೆ ನಿಂತು ಬುಸುಬುಸು ಬೀಡಿ ಎಳೆಯುತ್ತಿದ್ದ. ಕಂಡೆಕ್ಟರ್ ಅವನ ಹತ್ತಿರ ಹೋದ. ಹತ್ತಾರು ಪ್ರಯಾಣಿಕರು ಹತ್ತಾರು ಮಾತುಗಳನ್ನು ಆಡಿಕೊಳ್ಳುತ್ತಿದ್ದರು. ಇದ್ದಕಿದ್ದ ಹಾಗೆ ಡ್ರೈವರ್ ಶರ್ಟ ಬಿಚ್ಚಿದ. ಬಸ್ಸು ಹತ್ತಿ ಒಂದು ಸೀಟು ಎಳೆದ. ಕಂಡೆಕ್ಟರ್ ಟೂಲ್ಸನ ಬಾಕ್ಸ್ ಬಿಚ್ಚಿ ಕೆಲವೊಂದು ಸಾಮಾನುಗಳನ್ನು ತೆಗೆದುಕೊಂಡು ಬಸ್ಸಿಳಿದ. ಬಸ್ಸಡಿ ಇಂಜನ್ ಕೆಳಗೆ ಸೀಟ್ ಹಾಕಿ ಡ್ರೈವರ್ ಅಂಗಾತನಾಗಿ ಮಲಗಿದ, ಕಂಡೆಕ್ಟರ್ ಅವನ ಜೊತೆಗೆ ಸೇರಿದ ಪ್ರಯಾಣಿಕರೂ, ಸುತ್ತುವರಿದು ನಿಂತರು. ನಾನು ಸಹ ಇಂಜನ್ ಹತ್ತಿರ ಹೋದೆ. ಕೆಟ್ಟಭಾಗ ತಿಳಿಯಲು. ಅವರು ಕೆಲಸ ಶುರುಮಾಡಿದರು. ಸ್ವಲ್ಪ ಹೊತ್ತಿನ ಮೇಲೆ ಕಂಡೆಕ್ಟರ್ ಹೊರಬಂದಾಗ ಅವಳು ಕೇಳಿದಳು "ಈಗ ಬಸ್ಸು ಸರಿಯಾಗಬಹುದೆ?" "ಹೇಗ ಹೇಳುವುದು, ಈಗಷ್ಟೆ ಸರಿಪಡಿಸಲು ಶುರುಮಾಡಿದ್ದೇವೆ. ಸ್ಕ್ರೂ ಎಲ್ಲಾ ಬಿಚ್ಚಿಯಾಗಿದೆ. ಒಳಗೆ ಏನು ತೊಂದರೆ ಇದೆ ನೋಡಬೇಕಾಗಿದೆ." ಕಂಡೆಕ್ಟರ್ ಮತ್ತೆ ಬಸ್ಸಿನಡಿ ತೂರಿದ.

ಆಕೆ ಮತ್ತೆ ತನ್ನ ನೆನಪನ್ನು ಕೆದಕಿದಳು. 'ನಾನು ಸಹಾ ಕಛೇರಿಗೆ ಸೇರಿದಾಗ ಓಡುತ್ತಿದ್ದ ಬಸ್ಸಿನಂತೆ ನನ್ನ ಮನಸ್ಸು ಚೊಕ್ಕವಾಗಿತ್ತು. ಕೆಲಸದಲ್ಲಿ ಶ್ರದ್ಧೆ, ಸರಳತೆ, ಸಮಾಧಾನತ ಇತ್ತು. ಆದರೆ ಈಗ ತಾನು ಕೆಟ್ಟುಹೋದ ಬಸ್ಸಂತಾಗಿದ್ದೇನೆ. ಎಷ್ಟು ಜನರಿಗೆ ಕೆಲಸಕ್ಕೆ ಸತಾಯಿಸಿದ್ದೇನೆ. ಆಗುವ ಕೆಲಸವನ್ನು ಹಣ ಬರಲಿಲ್ಲವೆಂದು, ಆಗದಂತೆ ಮಾಡಿದ್ದೇನೆ. ಸಹೋದ್ಯೋಗಿಗಳ ಮೇಲೆ, ಜವಾನರ ಮೇಲೆ, ಅಧಿಕಾರಿಗಳ ಮೇಲೆ ರಾಕ್ಷಸಿಯಂತೆ ಕೂಗಿದ್ದೇನೆ. ಇದಕ್ಕೆ ಕಾರಣ ಹಣ, ಸುಖ ಎರಡಕ್ಕಾಗಿ ತಾನೆ? ಆದರೆ ಸುಖವಾಗಿರಲು ಈ ಹಾಳುಆಸೆ ಈ ಹಾಳುಬುದ್ಧಿ ಬಿಡಲೇ ಇಲ್ಲ. ಕಛೇರಿಯಿಂದ ವರ್ಗವಾದ ದಿನ ಅಲ್ಲೇ ನನ್ನನ್ನು ಉಳಿಸಲು ಯಾರೂ ಶಿಫಾರಸ್ಸು ಮಾಡಲು ಮುಂದಾಗಲಿಲ್ಲ. ಹಿಂದಿನಿಂದ ಎಲ್ಲರೂ ಇನ್ಮೇಲಾದರೂ ಆಫೀಸು ಶಾಂತವಾಗಿದ್ದೀತು. ಈ ಹಾಳು ರಾಕ್ಷಸಿ ತೊಲಗುತ್ತಾಳಲ್ಲ' ಅಂದರಲ್ಲ. ಶಿರಸ್ತೇದಾರ ನನ್ನ ಅರ್ಜಿ ತೆಗೆದುಕೊಳ್ಳಲೇ ಇಲ್ಲವಲ್ಲ. ವರ್ಗಮಾಡಿದ ಆಫೀಸರನ್ನು ಕಂಡಾಗ ಗಳಗಳ ಅತ್ತು ಕಷ್ಟಹೇಳಿಕೊಂಡರೂ ನಿನಗೆ 'ನಿಜವಾಗಿ ಕಷ್ಟವಾದರೆ ಕೆಲಸ ಬಿಟ್ಟು ಮದುವೆಯಾಗಿ ಸುಖವಾಗಿರಬಾರದೆ' ಅಂದರಲ್ಲ. ಅಂದುಕೊಂಡಳು. ಡ್ರೈವರ್ ದಮ್ಮುಕಟ್ಟಿ ಕುತ್ತಿಗೆ ನೀಡಿ ಕೈ ಬಗ್ಗಿಸಿ ಮಲಗಿ ಕಷ್ಟಪಟ್ಟು ಕೆಲಸಮಾಡುತ್ತಿದ್ದ. ಎಷ್ಟೋ ಸಾರಿ ಅವನ ಬಾಯಿಗೆ ಬಸ್ಸಿನ ಡೀಸಲ್ ಎಣ್ಣೆ ಬಿದ್ದಾಗ ಪಿಸಪಿಸ ಕುತ್ತಿಗೆ ತಿರುಗಿಸಿ ಉಗಿದಾಗ ಕಂಡಕ್ಟರ್ ಆ ಕೆಲಸಕ್ಕೆ ಕೈಹಾಕಿ ಇಂಜನ್ ಪೈಪನ್ನು ಉರುಪಲು ಮುಂದಾಗುತ್ತಾನೆ. ಪ್ರಯಾಣಿಕನೊಬ್ಬ ನನ್ನ ಕಚೇರಿಯಲ್ಲಿ ಕಿರುಕುಳಕೊಡುವ ಅಧಿಕಾರಿಯನ್ನು ಹೀನಾಮಾನವಾಗಿ ಬೈಯುತ್ತಿದ್ದ. ಹೊಸದಾಗಿ ಮದುವೆಯಾದ ಹೆಗ್ಡೆ ಅವನ ಹೆಂಡತಿ ಇಬ್ಬರೂ ಮರದಬುಡದಲ್ಲಿ ನಿಂತು ಒಬ್ಬರಿಗೊಬ್ಬರುನೋಡಿ ಆನಂದ ಪಡುತ್ತಿದ್ದರು. 'ಥೂ' ಇನ್ಮುಂದೆ ಕಚೇರಿಯಲ್ಲಿ ಏನು ಯಾರಿಗೂ ಯಾವಾಗಲೂ ತೊಂದರೆ ಮಾಡದೆ ತನ್ನ ಪಾಲಿನ ಕೆಲಸ ಆ ದಿನವೇ ಮಾಡಿ ಮುಗಿಸಬೇಕು. ಯಾರಿಂದಲೂ ಏನನ್ನೂ ಬಯಸಬಾರದು. ಏನೂ ಹಣ ತೆಗೆದುಕೊಳ್ಳಬಾರದು. ಸಂಬಳದ ಹಣದಲ್ಲಿಯೇ ಹಾಯಾಗಿ ಇರಲು ಕಲಿಯಬೇಕು ಎಂದು ಅವಳು ನಿರ್ಧರಿಸಿಕೊಂಡಳು.

"ಅಣ್ಣಾವ್ರೇ ಪೈಪಲ್ಲಿ ಕಸ ಸಿಕ್ಕಿತ್ತು. ಅದಕ್ಕಾಗಿ ಡೀಸಲ್ ಬರದೇ ಬಸ್ಸು ಓಡದೇ ನಿಂತದ್ದು?" ಕಂಡೆಕ್ಟರ್ ಸಂತೋಷದಿಂದ ಕೂಗಿಕೊಂಡ. 'ಅದೇ ಅನುಮಾನ ನನಗೂ ಬಂದದ್ದು ಗ್ಯಾರೇಜಿನಲ್ಲಿ ಬಸ್ಸು ನಿಲ್ಲಿಸಿದಾಗ ಹಾಳಾದ ಮೆಕ್ಯಾನಿಕ ಇವೆಲ್ಲಾ ಪರೀಕ್ಷೆ ಮಾಡೋದೆ ಇಲ್ಲ. ಅವನಿಗೇನು ಮಧ್ಯದಾರಿಯಲ್ಲಿ ತೊಂದರೆ ಪಡೋವರು ನಾವು ತಾನೆ." ಡ್ರೈವರ್ ಈಗ ಕೆಲಸದಲ್ಲಿ ಚುರುಕಾದ. ಸುಮಾಳಿಗೆ ಈಗ ಸ್ವಲ್ಪ ಧೈರ್ಯವಾಯಿತು. ಬಸ್ಸು ಸರಿಯಾದರೆ ಡ್ರೈವರ್ ಸ್ಪೀಡಾಗಿ ಬಿಟ್ಟರೆ ಕಾಲಕ್ಕೆ ಸರಿಯಾಗಿ ಈಗಲೂ ಕುಮಟಾಕ್ಕೆ ಹೋಗಿ ಮುಟ್ಟಬಹುದು.' ಆ ದಿನ ಲಾರಿ ಟೈರಿಗಾಗಿ ಅರ್ಜಿ ತಂದು, ನಮ್ಮ ಸಾಹೇಬರಿಂದ ಶಿಫಾರಸ್ಸು ಮಾಡಿಸಿಕೊಂಡು, ಕಾರವಾರದ ಕಲೆಕ್ಟರ್ ಅವರ [illegible]ವಿಗೆ ಹೋಗಲು ಕೊನೆಬಸ್ಸು ಇನ್ನು ಸ್ವಲ್ಪ ಹೊತ್ತಿಗೆ

ಹೊರಡುತ್ತೆ. ಬೇಗ ಕಾಗದ ಕೊಡಿ ಎಂದು ಬಂದ ಕಂಟ್ರಾಕ್ಟರ ಪೈ ಅವಳೆದುರು ಕಾಣಿಸಿಕೊಂಡ. ಅವನು ಕೊಡುವ ಮಾಮೂಲು ಕೊಡದಿದ್ದರಿಂದ ಅವಳು ಕೊನೆಗೂ ಆತನಿಗೆ ಆ ಕಾಗದ ಕೊಡದೆ ಅವನಿಂದ ಹಣ ಬಂದ ಮೇಲೆ ಕಾಗದ ಕೊಟ್ಟಳು. ಮಾರನೇದಿನ ಆತ ಬೈದುಕೊಂಡು ಕಾರವಾರಕ್ಕೆ ಹೋದ ಸಮಾಚಾರ ಜವಾನ ತೇಜನಿಂದ ತಿಳಿದಿದ್ದು ತಟ್ಟನೆ ಅವಳಿಗೆ ನೆನಪಾಗಿ ಕೊನೆಬಸ್ಸು ತಪ್ಪಿದರೆ ಕಟ್ಟುಹೋದರ ಎಷ್ಟು ಕಷ್ಟವಾಗುತ್ತೆ ಅನ್ನಿಸಿದಾಗ ಸುಮಾ ಸಪ್ಪೆಯಾದಳು. "ಛೇ... ಇನ್ಮುಂದೆ ಇಂಥ ತೊಂದರೆ ಉದ್ದೇಶ ಪೂರಕವಾಗಿ ತನ್ನಿಂದ ಆಗಬಾರದು. ಕಂಟ್ರಾಕ್ಟರ್ ಪೈಗೆ ಏನು ತೊಂದರೆ ಆತ್ತೋ ಏನೋ? ಇಡೀ ದಿನವೆಲ್ಲ ನನಗೆ ಶಪಿಸಿದನೋ ಏನೋ? ಅಂದಾಗ ತಾನು ತುಂಬಾ ಕೆಟ್ಟವಳು ಆಗಿಬಿಟ್ಟದ್ದೇನೆ. ಬಸ್ಸಿನ ಕೆಲಸ ನಡೆಯುತ್ತಲೇ ಇತ್ತು. ಕೆಟ್ಟ ಬಸ್ಸು ರಿಪೇರಿಯಾಗಿ ಓಡಲು ಸಿದವಾಗಿ ಓಡಲೇಬಹುದು. ಸೇರಬೇಕಾದ ಕುಮಟವನ್ನು ತಲುಪಲೇಬಹುದು. ಆದರೆ ತಾನು ಸರಿಯಾಗಲು ಸಾಧ್ಯವೆ? ಸಾರ್ವಜನಿಕರಿಗೆ ಗುಮಾಸ್ತೆಯಾಗಿ ಮನಸ್ಸು ನೋಯ್ಸದೇ ತನ್ನ ಕೆಲಸ ಖುಷಿಯಾಗಿ ಮಾಡಲು ಸಾಧ್ಯವೆ? ಎಂದಿಗೂ ತಾನು ಸರಿಯ[illegible]ನೆ? ಈ ಮತ್ಸರ ಈ ಕೋಪ, ಈ ಆಸೆ ತನ್ನನ್ನು ಒಳ್ಳೆಯಹೆಣ್ಣಾಗಿ ಮಾಡಲೂ ಆಗುವುದಿಲ್ಲವೇನೋ? ಇದ್ದಕ್ಕಿದ್ದಂತೆ ಸುಮಾಳಿಗೆ ಆರುತಿಂಗಳ ಕೆಳಗೆ ಒಂದುಮಧ್ಯಾಹ್ನ ನಡೆದ ವಿಚಾರ ನೆನಪಾಯಿತು. ಕ್ಯಾದಗಿ ರೈತರಿಬ್ಬರಲ್ಲಿ, ಸೊಪ್ಪಿನ ಗುಡ್ಡಕ್ಕಾಗಿ ದೊಡ್ಡ ಹೊಡೆದಾಟವಾಗಿತ್ತು. ಸರಕಾರಿ ಖಾತೆಯಲ್ಲಿದ್ದ ಆ ಸೊಪ್ಪಿನ ಗುಡ್ಡವನ್ನು ಶಂಕರ ಹೆಗಡೆ ತನ್ನ ಪಕ್ಕದ ಗುಮಾಸ್ತನಿಗೆ ಹಣ ಸುರಿದು ಅಧಿಕಾರಿಗೆ ಬೇಕು ಬೇಕಾದ್ದು ಒದಗಿಸಿ ತನ್ನ ಹೆಸರಿಗೆ ಮಾಡಿಕೊಂಡಿದ್ದ. ಆದರೆ ಗೇಣಿ ತೋಟ ಮಾಡುತ್ತಿದ್ದ ಹುಲಿಯನ ಅನುಭವದಲ್ಲಿ ಆ ಗುಡ್ಡ ಇದ್ದು ಅದು ತನಗೆ ಆಗಬೇಕಾದದ್ದೆಂದು ಅವನು ತನ್ನ ಕಚೇರಿಗೆ ಅರ್ಜಿ ಸಲ್ಲಿಸಿದ್ದ. ಅದು ಕೋರ್ಟಿಗೆ ಹೋಗಿ ಶಂಕರ ಹೆಗ್ಡೆಗೆ ಅದರ ನಕಲು ಬೇಕಾದಾಗ, ಅಧಿಕಾರಿಯನ್ನು ಒಳಗೆ ಹಾಕಿ ನನ್ನ ಹತ್ತಿರ ಬಂದಿದ್ದ. ಆ ರಿಕಾರ್ಡ ನಾನೇ ನೋಡುತ್ತಿದ್ದೆ. ಶಂಕರ ಹೆಗಡೆ ಸ್ವಲ್ಪ ಪುಢಾರಿ, ನನ್ನ ಹತ್ತಿರ ಜಂಭ ತೋರಿಸಿದ, ಗದರಿಸಿದ. ಕೈ ಬೆಚ್ಚಗೆ ಮಾಡದೇ ಕೈಕೊಡಲಾರಂಭಿಸಿದ. ಹುಲಿಯ ಮನೆಗೆ ಬಂದು ತನಗೆ ಅಡ್ಡ ಬಿದ್ದು ಮಗೇಸೌತೆ, ಅನಾನಸ್ಸು ಕೊಟ್ಟು ಅದರ ಮೇಲೆ ಸ್ವಲ್ಪ ಹಣ ಇಟ್ಟು "ನನ್ನ ಕಾಪಾಡಿ ಅಮ್ಮ" ಅಂದಿದ್ದ. ತನಗೆ ಹುಲಿಯನ ಮೇಲೆ ಕರುಣೆ ಏನೊ ಇರಲಿಲ್ಲ. ಆದರೆ ಶಂಕರ ಹೆಗಡೆಯ ಅಹಂಕಾರಕ್ಕೆ ಕೈ ಕೊಡಲು ಮುಖ್ಯವಾದ ದಾಖಲೆ ನಾಶಮಾಡಿ ಹುಲಿಯನಿಗೆ ಅನುಕೂಲವಾಗುವಂತೆ ರಿಕಾರ್ಡ ಬರೆದು ಸಾಹೇಬರು ರಜೆ ಹೋದಾಗ ಶಿರಸ್ತೇದಾರರಿಂದ ಸಹಿ ಮಾಡಿಸಿ ಕೋರ್ಟಿಗ ಕಳಿಸಿದಾಗ ಶಂಕರ ಹೆಗಡೆಯ ಮುಖ ನೋಡಬೇಕಾಗಿತ್ತು. ಅದೇ ತನ್ನ ಸ್ಥಳ ಬದಲಾವಣೆಗೆ ಕಾರಣವಾಯ್ತು ಏನೋ? ಕಾರವಾರದಿಂದ ಶಂಕರ ಹೆಗಡೆ ಬೆಂಗಳೂರ ವರೆಗೂ ತಿರುಗಿ ಅಧಿಕಾರಿಗಳ ಕಿವಿ ತಿರುಗಿಸಿ ತನಗೆ ಈ ತೊಂದರೆ ಮಾಡಿದನೋ ಏನೋ? ಎಷ್ಟೋದಿನ ಆತ ಆಫೀಸಿಗೆ ಬಂದು, ಅಕ್ಕ ಪಕ್ಕದವರೊಡನೆ ತನಗೆ ಛೀಮಾರಿ ಹಾಕಿದ್ದು ಕಡಿಮೆಯೇನು? ಕೊನೆಗೊಂದು ದಿನ ಪೋಲೀಸನವರ ಸಹಾಯ ತಾನು ಪಡೆಯಬೇಕಾಗುತ್ತೆ ಅಂದಾಗ ನಾಯಿಯಂತೆ ಬಾಲ ಮುದುರಿಸಿ ಹೆಗಡೆ ಮರೆಯಾಗಿದ್ದ. ನೀವು ಈ ಕೆಲಸ ಮಾಡಬಾರದಿತ್ತು, ಹೆಗಡೆ ದೊಡ್ಡ ಪ್ರಭಾವಶಾಲಿ ನಿಮ್ಮ ಕೆಲಸಕ್ಕೆ ತೊಂದರೆ ಬಂದೀತು ಶಿರಸ್ತೇದಾರರು ನಗುತ್ತಲೇ ತನಗೆ ಹೇಳಿದ್ದರು. ನನ್ನ ಕೋಪ ನೆತ್ತಿಗೇರಿ, ನನ್ನ "ಅವನು ಏನ ಮಾಡ್ತಾನರಿ" ತಲೆ ತಗ್ಗಿಸಿ ಕೆಲಸದಲ್ಲಿ ಮಗ್ನಳಾಗಿದ್ದೆ. ಆ ಮೇಲೆ ಸ್ವಲ್ಪ ದಿನ ಹೆಗಡೆ ಏನು ಮಾಡಿಯಾನು ಎಂದು ಹೆದರಿ ಎಚ್ಚರಿಕೆಯಿಂದ ಇದ್ದೆ. ಆಮೇಲೆ ಮತ್ತೆ ಮೊದಲಿನಂತೆ ಆಗಿತ್ತು... ಬಸ್ಸು ಬುರುಗುಟ್ಟಿತು. ಜನ ಒಬ್ಬೊಬ್ಬರಾಗಿ ನಗುಮುಖ ಹೊತ್ತು ಬಸ್ಸು

ಪ್ರೇಯಸಿ ನಾನು ನಿನ್ನ ಜೊತೆ ಮಾತನಾಡುವಾಗ ನನ್ನ ಕೈಕಾಲುಗಳು ನಡುಗುತ್ತವೆ. ಅದ್ದರಿಂದ ಬರೀ ನಿನ್ನ ಪ್ರೀತಿಸುತ್ತೇನೆ ಪ್ರೇಮಪತ್ರದಲ್ಲೇ!

ನಿರ್ದೇಶಕ: ಇನ್ನೇನು ನೀವು [illegible]ಗಾಳ್ಕೆ ಹಾವು ಬುಸ್ಸೆಂದು ಬರುತ್ತೆ. ನಿಮ್ಮನ್ನು ಕಚ್ಚುತ್ತೆ ಅಂದೆ. ಅಷ್ಟು ಮಾತ್ರಕ್ಕೆ ಮೂರ್ಛೆ ಹೋಗಿದ್ದಾರೆ ಈ ನಾಯಕರು.

ವಿರಲಾರಂಭಿಸಿದರು. ಡ್ರೈವರ್ 'ಎಲ್ಲ ಸರಿಯಾಯಿತು' ಅಂದಾಗ ಅವಳು ಹರ್ಷಿತಳಾಗಿ ಬಸ್ಸು ಹತ್ತಿ ಕುಳಿತಳು. ಡ್ರೈವರ್ ಕಂಡಕ್ಟರ ಬಸ್ಸು ಹತ್ತಿ ವೇಸ್ಟ ತೆಗೆದೂ ಕೈ ಮೈ ಒರಸಿ ತಮ್ಮ ಜಾಗಕ್ಕೆ ಬಂದರು. ಬಸ್ಸು ಬಿಡಲು ಅವಳ ಭಯದ ನಾಶವಾಯಿತು. ಇದ್ದಕ್ಕಿದಂತೆ ಬಸ್ಸು ಡಾಮರು ರಸ್ತೆಯ ಮೇಲೆ ಓಡಿದಾಗ ಸುಮ ಅಂದುಕೊಂಡಳು. ತನ್ನಿಂದ ಈ ವರೆಗೆ ಎಷ್ಟು ಜನ ತೊಂದರೆ ಪಟ್ಟರೊ ಎಷ್ಟು ಜನ ಏನೇನು ಕಷ್ಟ ಅನುಭವಿಸಿದರೋ ಥಲಕ್ಕಾಗಿ ಹುಲಿಯಣನಿಗೆ ಮಾಡಿದ ಪುಟ್ಟ ಸಹಾಯ ಈಗ ತಾನು ಕುಮಟ ಸೇರಲು ಕಾರಣವಾಯ್ತೋ ಏನೋ ಅಪ್ಪ ತನ್ನ ಮದುವೆಗೆ ಏನೇನೂ ಪ್ರಯತ್ನ ಪಡದೇ ತಾನು ಸಂಪಾದಿಸಿದ ಉತ್ಪತ್ತಿ ತಿನ್ನಲು ಮುಂದಾದ್ದು, ದಿನ ತಾನು ಮಾಡಿದ ಕಚೇರಿ ಸಾಹಸಗಳನ್ನು ಹೇಳಿದಾಗ ಇನ್ನಷ್ಟು ತನ್ನನ್ನು ಹುರಿದುಂಬಿಸುತ್ತಿದ್ದುದು. ಇದಕ್ಕಾಗಿ ಇರಬೇಕು. ತನಗೆ ಸಿಕ್ಕ ಒಳ್ಳೆಯಅವಕಾಶ ತಾನು ಬೇಕಾಗಿ ಕೆಡಸಿಕೊಂಡು ಬಿಟ್ಟೆನಲ್ಲ. ಸುಮಾಳಿಗೆ ತುಂಬಾ ದುಃಖವಾಯಿತು: ಇದ್ದಕ್ಕಿದ್ದಂತೆ ಬಸ್ಸು ನಿಂತಿತು. ಕಂಡಕ್ಟರ್ 'ದೊಡ್ಡಮನೆ' ಅಂತ ಕೂಗಿದ. ಜನ ಬುಡುಬುಡು ಇಳಿದರು. ಅರ್ಧ ಬಸ್ಸು ಖಾಲಿಯಾಯಿತು. ದೊಡ್ಡ ಬಿಳಿಟೊಪ್ಪಿಗೆ ಹಾಕಿಕೊಂಡ ಕಮ್ತಿ ಒಬ್ಬ ಆರೇಳು ಹಲಸಿನಕಾಯಿ ಹೊತ್ತು ಬಸ್ಸು ಒಳಗೆ ಹಾಕುವಾಗ ಕಂಡಕ್ಟರ ಕಿಡಿ ಕಣ್ಣಿನಿಂದ ಅವನನ್ನು ತರಾಟೆಗೆ ತೆಗೆದುಕೊಂಡ. "ಇದೇನು ಬಸ್ಸೋ ಅಥವಾ ಲಾರಿನ್ನೋ ಮೇಲೆ ಹತ್ತಿ ಹಲಸಿನಕಾಯಿ ಇಡ." "ಇಲ್ಲೇ ಮುಂದಿನ ಹಳ್ಳೀಲಿ ನಾನು ಇಳಿಯೋನೋ" ಕಂಡಕ್ಟರನಿಗೂ ಅವನಿಗೂ ಜಗಳ.

ಬೇಗ ಬಸ್ಸು ಓಡಬಾರದೆ? ಸುಮಳಿಗೆ ಕುತೂಹಲ ಜೊತಗೆ ಈ ಜಗಳ, ಈ ಬಸ್ಸು ನಿಂತಿದ್ದರಿಂದ ಬೇಸರ ಸೇರಿಕೊಂಡಿತು. ಬಸ್ಸು ಹೊರಟ ಮೇಲೆ ಸುಮಾಳಿಗೆ ಮತ್ತೆ ಯೋಚನೆ ಪ್ರಾರಂಭ. "ಕೆಲಸಕ್ಕೆ ಸೇರಿದ ಮರುವರುಷ ಹೆಡ್‌ಕ್ಲಾರ್ಕ ಕನ್ನಯ್ಯ ಸದಾ ತನ್ನಹಸಿದ ಕಣ್ಣಿಂದ ನೋಡಿದ್ದು, ಕೆಲಸ ಬರದೇ ಅವನ ಹೇಳಿದ್ದಕ್ಕೆಲ್ಲ ತಾನುಸಿಟ್ಟಾಗದೇ ಇದ್ದದು ಎಷ್ಟೊ ಸಂಜೆ ತಾವಿಬ್ಬರೇ ಕೆಲಸ ಮಾಡುತ್ತಾ ಆಫೀಸಿನಲ್ಲಿ ಉಳಿದಿದ್ದು ಕನ್ನಯ್ಯ ಕೆಲಸದಮಧ್ಯೆ ತನ್ನ ಕೈಹಿಡಿದು ಮೈಮುಟ್ಟಿದ್ದು ತನಗೂ ಬಿಸಿರಕ್ತ, ಪ್ರಾಯದ ಪ್ರವಾಹ ತಾನು ಏನೂ ಆಗದೇ ಅವನಿಗೆ ಪ್ರಚೋದನೆಗೆ ಎಡೆ ಮಾಡಿಕೊಟ್ಟದ್ದು, ಒಂದೆರಡು ತಿಂಗಳಲ್ಲೇ ಕನ್ನಯ್ಯ ತನ್ನನ್ನು ಒಳಗೆ ಹಾಕಿಕೊಂಡಿದ್ದು, ತಾನು ಅವನು ಯಾರಿಗೂ ಗೊತ್ತಾಗದಂತೆ ಸಿರ್ಸಿಗೆ ಹೋಗಿ ಭಟ್ಟರ ಲಾಡ್ಜಿಂಗನಲ್ಲಿ ಉಳಿದದ್ದು. ಮಳೆಗಾಲದಲ್ಲಿ ಮಳೆ ಸುರಿದಂತೆ ನಾನು ಅವನ ಜತೆಗೆ ಸುಖಪಟ್ಟದ್ದು. ಹೀಗೆ ಕನ್ನಯ್ಯ 'ನಾನು ಸಿರ್ಸಿಗೆ ಮೂರು ನಾಲ್ಕು ಬಾರಿ ಹೋಗಿದ್ದು, ಸಿದ್ದಾಪುರದ ಜನ ನಮ್ಮ ಮೇಲ ಮಾತಾಡಿದಾಗ ತಾನು ದಬಾಯಿಸಿ ವಾರಿ ಆಗಿದ್ದು ಇದ್ದಕ್ಕಿದ್ದಂತೆ ಕನ್ನಯ್ಯ ಕಾರವಾರಕ್ಕೆ ವರ್ಗ ಮಾಡಿಸಿಕೊಂಡದ್ದು-ಆಮೇಲೆ ಎಷ್ಟೋದಿನ ಅವನನ್ನು ತಾನು ನೆನೆಸಿದ್ದು ಸುಮಾಳ ದೇಹ ಬಿಸಿಯಾಗತೊಡಗಿತು. ಬಸ್ಸು ವೇಗವಾಗಿ ಓಡುತ್ತಿತ್ತು. ಡ್ರೈವರ ಒಂದೇ ಸಮ ಹಲ್ಲುಮಟ್ಟೆ ಗಿರಿದು ಸ್ಟೇರಿಂಗ್ ತಿರುಗುಸುತ್ತಿದ್ದ. ಇದ್ದಕ್ಕಿದ್ದಂತ ಬಸ್ ಜಂಪಾಗಿ ಬಿದ್ದು. ಸುಮಾ ಸೀಟನಿಂದ ದಬ್ಬಿ ಬಿದ್ದಾಗ ಉದ್ದ ಸೀಟಿನಲ್ಲಿ ಕುಳಿತಿದ್ದ ಹೆಗಡೆ ಮೈಗೆ ಸಿಕ್ಕುಕೊಂಡಳು. ಇದ್ದಕ್ಕಿದಂತೆ ಕನ್ನಯ್ಯನ ಮೈ ಆಕೆಗೆ ನೆನಪಾಗಿ ಮುಖದಲ್ಲಿ ಸಂತೋಷ ಚಿಗುರಿತು. 'ಹಾಳಾದ್ದು ಏನು ಎಷ್ಟು ಗಳೋ" ಡ್ರೈವರ ಗೊಣಗಿ ಬಸ್ಸುಬಿಟ್ಟ. ಸುಮ ಹೆಗಡೆಯನ್ನು ಕಿರಿಹಿಡಿದು ನೋಡಿದಳು, ಆತ ಅವಳನ್ನೇ ನೋಡುತ್ತಿದ್ದ. ಈ ಸಾರಿ ಕುಮಟದಲ್ಲಿ ಮನೆ ಮಾಡಿದ ಮೇಲೆ ತಂದೆತಾಯಿಗಳು ಏನೇ ಹೇಳಲಿ, ಕೆಲಸದಲ್ಲಿರುವವನೊಬ್ಬನನ್ನು ಮರುಳು ಮಾಡಿ ಮದುವೆಯಾಗಿ ಬಿಡಬೇಕು. ಹೀಗೆ ಇನ್ನು ಉಳಿಯೋಕೆ ಸಾಧ ವಾಗೋದಿಲ್ಲ". ಸುಮ ತುಟಿ ಒರಸಿಕೊಂಡಳು.

ಬಸ್ಸು ಓಡುತ್ತಿದ್ದಾಗ ಕಂಡಕ್ಟರ ಟ್ರಿಪ್‌ಸೀಟ ಎಣಿಸತೊಡಗಿದಾಗ ಸುಮಳಿಗೆ ಅನ್ನಿಸಿತು, ಕುಮಟದ ಹತ್ತಿರ ತಾವು ಬರುತ್ತಿದ್ದೇವೆ. ಬಸ್ಸಿನ ಕಂಡಿಯಲ್ಲಿ ತಲೆ ಚಾಚಿ ದೂರದೂರ ನೋಡಿದಳು. ಮನೆಗಳ ತುದಿ, ವಿದ್ಯುದ್ದೀಪಗಳ ತಲೆ ಕಾಣಿಸಿದಾಗ ಕುಮಟ ಮುಟ್ಟುತ್ತಿದ್ದೇನೆ. ಸುಮ ಅಂದುಕೊಂಡಳು.

ಕುಮಟಾ ಗೇಟಿಗೆ ಬಸ್ಸು ಬಂದಾಗ ಚಿಕ್ಕಗಾಗಿ ನಿಂತಿತು. ನಿಮ್ಮ ಉಪಕಾರ ದೊಡ್ಡದು ಡ್ರೈವರ್ ಸಾಹೇಬರೇ...ಮೆಕಾನಿಕ್ ಬರೋವರಗೆ ದಾರಿಯಲ್ಲಿ ಬಸ್ಸು ನಿಲ್ಲಿಸಿ ನಮ್ಮನ್ನೆಲ್ಲ ಕೊಳೆಸಲಿಲ್ಲ. ನೀವೇನಿಂತು ಬಸ್ಸು ಸರಿ ಮಾಡಿದ್ರಿ ನೋಡಿ." ಉದ್ದನೇ ಮೀಸೆ ಬಿಟ್ಟ ವ್ಯಕ್ತಿ ಹೇಳಿ ಡ್ರೈವರನಿಗೆ ಕೈಜೋಡಿಸಿದಾಗ ಸುಮಕೂಡ ಕುಳಿತಲ್ಲೇ ಎರಡು ಕೈ ಸೇರಿಸಿ ಡ್ರೈವರನಿಗೆ ವಂದಿಸಿದಳು. "ನಿಂತ ಬಸ್ಸು ಓಡಬೇಕಾದರೆ ಕೆಟ್ಟಭಾಗ ಗುರ್ತಿಸಬೇಕು. ಯಂತ್ರವಾದ ಈ ಬಸ್ಸು ಕಡೋದು ಸ್ವಾಭಾವಿಕ. ಈ ಭಾಗ ಗುರ್ತಿಸಿ ಸರಿ ಮಾಡೋ ಬಗ್ಗೆ ಕುತೂಹಲವಿರುವ ಡ್ರೈವರ್ ಯಾವಾಗಲೂ ಬಸ್ಸು, ರಸ್ತೆಮೇಲೆ ನಿಲ್ಲಿಸೋಲ್ಲ." ಡ್ರೈವರನ ಮಾತುಗಳು ಸ್ಪಷ್ಟವಾಗಿ ಸುಮಳ ಕಿವಿಗೆ ಕೇಳಿಸಿದವು. 'ತಾನು ಒಂದು ಯಂತ್ರದಂತೆ ಇರುವ ಬಸ್ಸು. ತಾನೀಗ ಗುಮಾಸ್ತೆಯಾಗಿ ಪೂರ್ತಿಕೆಟ್ಟು ಹೋಗಿದ್ದೇನೆ. ತಾನು ಸರಿಯಾದರೆ ತನ್ನ ಕೆಲಸ ಮಾಡಿಕೊಂಡು ಹೋದರೆ ಓಡುವಬಸ್ಸಿಗೆ ತಾನು ಹೋಲಿಕೆಯಾಗುತ್ತೇನೆ. ಈ ಬಸ್ಸನ್ನು ಈ ಡ್ರೈವರ್ ಸರಿಮಾಡಿ ಓಡಿಸಿದ. ತಾನು ಈ ಬಸ್ಸಿನಂತೆ ಚಲಿಸುತ್ತಿರಬೇಕು. ಸುಮಳು ತುಂಬಾ ದೃಢನಿರ್ಧಾರದಿಂದ ಡ್ರೈವರನಕಡೆಗೆ ನೋಡುತ್ತಾ ನಿಶ್ಚಯಿಸಿಕೊಂಡಳು. ತಾನು ಸರಿಯಾದ ವೇಳೆ ಕಛೇರಿಗೆ ಹೋಗಿ ಕೆಲಸದ ವೇಳೆಯಲ್ಲಿ ತನ್ನ ಪಾಲಿಗೆ ಬಂದ ಕೆಲಸ ಮಾಡಿದರೆ, ತನ್ನೊಡನೆ ವ್ಯವಹರಿಸುವ, ಎಲ್ಲರೊಡನೆ ನಯವಾಗಿ ಮಾತಾಡಿ ವ್ಯವಹರಿಸಿದರೆ ತಾನು ದೇವತೆಯಾಗುತ್ತೇನೆ. ತನ್ನಷ್ಟು ಒಳ್ಳೆಯವರು ಯಾರೂ ಇರೋಲ್ಲ. ಸುಮಳಿಗೆ ಈಗ ತುಂಬಾ ಹಿತವೆನ್ನಿಸಿತು. ಅವಳಲ್ಲಿ ಉಲ್ಲಾಸ ಚಿಗುರಿ ಹೆಮ್ಮರವಾಯ್ತು.

ಬಸ್‌ನಿಲ್ದಾಣದಲ್ಲಿ ಬಸ್ಸುನಿಂತಾಗ, ಸುಮ್ಮ ಸರಸರ ಇಳಿದು ಸಾಮಾನು ತೆಗೆದುಕೊಂಡು ಕಛೇರಿ ವಿಚಾರಿಸಿಕೊಂಡು ಕಛೇರಿಗೆ ಹೋದಾಗ ಘಂಟೆ ಐದರ ಮೇಲೆ ಐದುನಿಮಿಷಗಳಾಗಿತ್ತು. ಅವಳ ಎದೆ ಹೊಡದುಕೊಳ್ಳಲಾರಂಭಿಸಿತು. ಶಿರಸ್ತೇದಾರರು ತಮ್ಮ ಹತ್ತಿರ ನಿಂತ ಸುಮಳನ್ನು ವಿಚಾರಿಸಿ, ವಿಷಯ ಕೇಳಿಹೇಳಿದರು. "ಪರ್ವಾಗಿಲ್ಲ ಡ್ಯೂಟಿ ರಿಪೋರ್ಟ ಕೊಡಿ, ಈ ದಿನದಿಂದಲೇ ಕೆಲಸಕ್ಕೆ ತೆಗೆದುಕೊಳ್ಳೋಣ. ಹಾಜರಿಪುಸ್ತಕದಲ್ಲಿ ಹೆಸರುಬರೆದು ಸಹಿಹಾಕಿ." "ತುಂಬಾ ಉಪಕಾರವಾಯ್ತು ಸಾರ್" ಸುಮಳು ನಡುಗುತ್ತಿದ್ದಳು. "ಮನುಷ್ಯರಾದ ಮೇಲೆ ಒಬ್ಬರಿಗೊಬ್ಬರು ಉಪಕಾರ ಮಾಡಬೇಕು. ಹೆಂಗಸರಾದ ನೀವು ಉಪಕಾರ ಮಾಡೋದರಲ್ಲಿ ಒಂದು ತೂಕ ನಮಗಿಂತ ಜಾಸ್ತಿ." ಶಿರಸ್ತೇದಾರರು ಮುಗುಳು ನಕ್ಕರು. ಸುಮ ಡ್ಯೂಟಿ ರಿಪೋರ್ಟಕೊಟ್ಟು ಹಾಜರಿ ಬುಕ್ಕಲ್ಲಿ ಹೆಸರುಬರೆಸಿ ಸಹಿಮಾಡಿದಾಗ 'ಉಶ್ಯಪ್ಪ' ಅಂದುಕೊಂಡಳು. "ನೀವು ದರಕಾಸ್ತು ವಿಭಾಗ ನೋಡಿಕೊಳ್ಳಿ" ಶಿರಸ್ತೇದಾರರು ಅವಳುಕೊಟ್ಟ ಡ್ಯೂಟಿ ರಿಪೋರ್ಟ ಮೇಲೆ ಬರೆದು ಹೇಳಿದರು. ಜವಾನ ಸುಮಳು ಕೆಲಸಮಾಡುವ ಜಾಗ ತೋರಿಸಿದ. ಇನ್ನೊಬ್ಬ ಗುಮಾಸ್ತ ಅವಳಿಗೆ ಆ ವಿಭಾಗದ ಛಾರ್ಜು ವಹಿಸಿಕೊಟ್ಟ. ಶಿರಸ್ತೇದಾರರು ಅವಳ ಹತ್ತಿರ ಬಂದುನಿಂತು ಹೇಳಿದರು. "ನೀವು ಬೇರೆ ವ್ಯವಸ್ಥೆ ಮಾಡಿಕೊಳ್ಳುವವರೆಗೂ ನಮ್ಮಲ್ಲಿ ಇರಿ. ನನಗೂ ನಿಮ್ಮಷ್ಟೇ ವಯಸ್ಸಿನ ಮಗಳಿದ್ದಾಳೆ." "ತುಂಬಾ ಉಪಕಾರವಾಯ್ತು ಸಾರ್" ಸುಮ ತುಂಬಾ ಮೃದುಧ್ವನಿಯಲ್ಲಿ ಹೇಳಿದಾಗ ಕುಳಿತಲ್ಲಿಂದ ಎದ್ದು ನಿಂತಿದ್ದಳು. "ನಾನು ಮನೆಗೆ ಹೋಗುವಾಗ ಕರೀತಿನಿ. ಕೆಲಸ ಇಷ್ಟ ವಿದ್ದರೆ ಶುರುಮಾಡಿ" ಶಿರಸ್ತೇದಾರರು ಹೋದ ಮೇಲೆ ಸುಮ ಕುಳಿತಳು. ಸೊಂಟದಿಂದ ಕರವಸ್ತ್ರ ತೆಗೆದು ಮುಖ ಒರೆಸಿಕೊಂಡಳು. ಅವಳು ಫೈಲ್ ಒಂದನ್ನು

## ಬೆಡಗುಗಾತಿ !



ಬಳ್ಳಿ ಚಿಗುರಿನ ಕೆರದವಳೆ
ಅಮೃತ ಒಸರುತ್ತಿರುವ ನಲ್ದುಟಿಯವಳೆ
ಚಿಗರೆಗಣ್ಣಿನ ಬೆಡಗುಗಾತಿ
ನೀನೆನಗೆ ಸದಾ ಶರಣಾಗು!

— ಪಂಚಾಕ್ಷರಿ ಹಿರೇಮಠ

ತೆಗೆದು ನೋಡಲಾರಂಭಿಸಿದಳು. ಮಾದಹುಡ ಎಂಬುವನ ದರಕಾಸ್ತು ರಿಕಾರ್ಡ ಆದಾಗಿದ್ದು, ಕೊನೆ ಹಂತಕ್ಕೆ ಬಂದಿದ್ದನ್ನು ಸುಮ ನೋಡಿದಾಗ ಅವಳ ಮೇಜಿನ ಎದುರು ಒಬ್ಬ ಇಪ್ಪತ್ತೆಂಟು ವರ್ಷದ ಹಳ್ಳಿ ಯುವಕ ನಿಂತಿದ್ದ. ಅವನನ್ನು ನೋಡಿದಾಗ ಸುಮಳಿಗೆ ಸಿಟ್ಟುಬಂತು. "ಯಾರಪ್ಪ ನೀನು?" ಗದರಿಸುವ ಧ್ವನಿಯಲ್ಲಿ ಕೇಳಿದಾಗ "ನಾನು ಮಾದ ಹುಡ್ಗ ಹಳ್ಳಿಯುವ. ನನ್ನ ದರಕಾಸ್ತ ರಿಕಾರ್ಡ ನಿಮ್ಮ ಹತ್ತಿರ ಐತೆ. ಸಾಗುವಳಿ ಚೀಟಿ ಕೊಡಿಸ್ತೀರಾ?" "ಹೋಗಪ್ಪ ಹೋಗು ನಾನು ಇನ್ನೂ ಬಂದು ಈ ಆಫೀಸಿನ ರಿವಾಜೇ ತಿಳಿದಿಲ್ಲ. ಆಗಲೇ ಸಾಗುವಳಿ ಚೀಟಿ ಕೊಡಬೇಕಂತೆ. ಹೋಗು ಸಾಧ್ಯವಿಲ್ಲ" ಸುಮ ಹೇಳಿದಾಗ ಆತ ತಲೆತಗ್ಗಿಸಿ ಹೊರಗೆ ಹೋದ. ಸುಮ ಅವನನ್ನು ನೋಡಿದಳು. ಅವನ ಸೋತ ಮುಖ ನೋಡಿದಳು, ಈತ, ಮಾಮೂಲು ಕೊಟ್ಟಿದ್ದರೆ, ಈ ದಿನದ ಬಸ್ ಛಾರ್ಜಾದರೂ ಆಗುತ್ತಿತ್ತು. ಅಂದುಕೊಂಡಾಗ ಬಸ್ಸು ಕೆಟ್ಟದ್ದು, ಸರಿಯಾದದ್ದು ನೆನಪಾಯ್ತು. ಛೇ...ತಾನು ಸರಿಯಾಗಿದ್ದು ಇಷ್ಟೇನೇ ಅನ್ನಿಸಿತು. ಸೀದಾ ಮಾದರ ಹುಡುಗನ ದರಕಾಸ್ತು ಫೈಲ್ ಮಗುಚಿ ಮಗುಚಿ ನೋಡಿದಳು. ಎಲಾ ಸರಿಯಾಗಿತ್ತು. ಪಿಜನ್‌ಹೋಲ್ ಬಾಗಿಲು ತೆಗೆದು ಸಾಗುವಳಿ ಚೀಟಿ ಫಾರ್ಮು ತೆಗೆದು ಅದನ್ನು ಬರೆದು ಮುಗಿಸಿ ಫೈಲಿನ ಜೊತೆಗೆ ತೆಗೆದುಕೊಂಡು ಸುಮಳು ಶಿರಸ್ತೇದಾರರ ಹತ್ತಿರ ಹೋದಾಗ "ಒಳ್ಳೆಯದು" ಶಿರಸ್ತೇದಾರರು ನಕ್ಕು, ಫೈಲ್ ನೋಡಿ, ಸಾಗುವಳಿ ಚೀಟಿ ತೆಗೆದುಕೊಂಡು ಸಾಹೇಬರ ಕೋಣೆಗೆ ಹೋದರು. ಸುಮ ಕುರ್ಚಿಯಲ್ಲಿ ಕುಳಿತು ಜವಾನನ್ನು ಕರೆದು, ಮಾದ ಹುಡುಗನ್ನ ಬರಮಾಡಿಕೊಂಡಳು. ಮಾದಹುಡುಗ—ತಾನು ಆ ಜಮೀನಿಗಾಗಿ ಖರ್ಚು ಮಾಡಿದ್ದು, ಓಡಾಡಿದ್ದು ಎಲಾ ಮುಗಿದು ಸಾಗುವಳಿ ಚೀಟಿ ಕೈಗೆ ಬರುವಾಗ ಆ ವಿಭಾಗದ ಗುಮಾಸ್ತ ವರ್ಗವಾಗಿ ಹೋಗಿದ್ದು ಇನ್ನು ತನ್ನಿಂದ ಏನು ಕೊಡಲೂ ಸಾಧ್ಯವಿಲ್ಲದ್ದು. ಈಗ ಊರಿಗೆ ಹೋಗಲು ಬಸ್ಸು ಛಾರ್ಜ್ ಸಹಾ ಇಲ್ಲದ ಕಂಗಾಲಾಗಿದ್ದು ಹೇಳಿ ಗಳಗಳ ಅತ್ತ. ಶಿರಸ್ತೇದಾರರು ಸಾಗುವಳಿ ಚೀಟಿ ಮತ್ತು ಫೈಲನ್ನು ಅವಳ ಮೇಜಿನಮೇಲಿಟ್ಟು "ಸಾಹೇಬರು ನಿಮ್ಮ ಕೆಲಸದವೇಗಕ್ಕೆ ಶ್ರದ್ಧೆಗೆ ಮೆಚ್ಚಿಗೆ ಸೂಚಿಸಿದರು. ನಿಮ್ಮಂತವರಿಂದ ಈ ಕಛೇರಿ ಸೊಬಗು ಹೆಚ್ಚುತ್ತದೆ." "ಥ್ಯಾಂಕ್ಸ್" ಅಂದು ಹೊರಟಾಗ ಮಾದ ಹುಡುಗನಿಂದ ಸಹಿಮಾಡಿಸಿ ಸಾಗುವಳಿ ಚೀಟಿಕೊಟ್ಟು ಬಸ್‌ಛಾರ್ಜಿಗೆ ಹತ್ತು ರೂಪಾಯಿ ಪರ್ಸಿನಿಂದ ತೆಗೆದು ಅವನಿಗೆ ಸುಮಾ ಕೊಟ್ಟಾಗ "ನೀವು ದೇವತೆ ಅಮ್ಮಾವ್ರೆ ಇದನ್ನು ಹಿಂತಿರುಗಿಸುತ್ತೇನೆ. ನಿಮಗೆ ಒಳ್ಳೆಯದಾಗಲಿ." ಅಂದಾಗ ಏನು ಬೇಡ. "ಸಾಗುವಳಿ ಚೆನ್ನಾಗಿ ಮಾಡಪ್ಪ" ಅಂದಾಗ ಸುಮಾಳ ಮನಸ್ಸು ಅರಳಿತು.

●

# ನೆನಪು

ಎಲ್ಲಿ ಎಲ್ಲಿ ಹೋದರು

ಯಜ್ಞಶಾಲೆಯ ಅಗ್ನಿಸಾಕ್ಷಿ ಒದರಿದ್ದ
ಸಹನಾವವತು ಕವಿಗಳು
ಲಂಬಕರ್ಣ ಶ್ರೋತೃಗಳು ಮತ್ತವರ
ಅಗಲಗಲ ಕಣ್ಣು ರವಿಗಳು
ಮಧುವಾತಾ ಕೋಗಿಲೆಗಳು
ಸವಿತೃಭರ್ಗಕ್ಕೆ ಮನಹಚ್ಚಿ ಕೂತವರು
ಋತಂ ವದಿಷ್ಯಾಮಿ ಸ್ಲೋಗನ್ನು ಕೊಟ್ಟವರು
ಮಾಂಸಖಂಡಕ್ಕಿಂತ ಕೋಳಿವಾತ್ಯವೆತ್ತುವ
ಲೋಕೋದ್ಧಾರಕ ಸ್ಮೃತಿಸೂತ್ರಕಾರರು
ತಾರಕಮಂತ್ರ ದ್ರಷ್ಟಾರರು
ಸ್ವರ್ಗದ ಸೀಟು ರಿಝರ್ವ ಮಾಡಿಸಿ ನಿಚ್ಚಣಿಕೆ ಹಚ್ಚಿದವರು

ಎಲ್ಲಿ ಹೋದರು

ದಂತಕತೆ ತಳಪಾಯ ಮೇಲೆ ದಿಗಂತದೀಪ್ತಿಯ
ತ್ರೈಲೋಕಸೌಧ ಮೆರೆಯಿಸಿದ ವಿಶ್ವಕರ್ಮರು
ಬಾರಿಬಾರಿಗೆ ಭಗವಂತನ ಕರೆದು ಭೂಮಿಗೆ
ಪಲ್ಲಕ್ಕಿ ಮೆರವಣಿಗೆ ತೆಗೆದು ಸನಾದಿಯೂದಿದವರು
ಹೃದಯಾರಣ್ಯದ ಮೃಗಬೇಟೆಯಾಡಲು
ತಾಲೀಮು ಕೊಟ್ಟ ಪರಿವ್ರಾಜಕ ಕಿರಾತಪುಂಗವರು
ಭಜಗೋವಿಂದಂ ತಾಳಕುಟ್ಟಿ ಕಿವಿ ಹಿಂಡಿದವರು
ಕೈಲಾಸಕ್ಕೆ ಕಾಯಕದ ಏಣಿಯಾನಿಸಿದವ
ಡೋಂಟ್ ಟಚ್ ಮೀ ನಾಟಕ್ಯುಂ ವಿಷ ಪಲ್ಲಟಸಲು
ಸೂಜಿ ಚುಚ್ಚಿದವರು ಚಿಕಿತ್ಸೆ ಮೆಚ್ಚಿದವರು

ಎಲ್ಲಿ ಹೋದರು

ಎಂದು ಚಿಂತಿಸಿ ಚಿಂತಿಸಿ
ಬೆಳಿಗ್ಗಿನ ಪೇಪರೋದಿದಾಗ
ಹರಿಜನ ಹತ್ಯಾಕಾಂಡ ಅಧಿಕಾರಿಗಳ ಮಧುವನಕಾಂಡ
ವೇಶ್ಯಾಸೆರೆಯಲ್ಲಿ ವಂಚಿತಬಾಲೆಯರ ತಂಡ
ಕಿಸೆಗಳ್ಳ ಹಾರಿಸಿದ್ದು ಪಾಲೀಶು ಕುಡಿದು ಸತ್ತದ್ದು
ಇತ್ತಂಡ ಹೊಡೆದಾಡಿದ್ದು ಪೋಲೀಸು ಕಣ್ಣುಮುಚ್ಚಿದ್ದು
ಹರಿಶ್ಚಂದ್ರ ಮುಸಗು ಮುಟ್ಟಿದ್ದು ಪುಢಾರಿ ವಚನ [illegible]ದ್ದು
ಪರನಾರಿ ಪರಪುರುಷ ಸೇರಿದ್ದು, ಕೈ ಬೆಚ್ಚಗೆ ಮಾಡಿದ್ದು.
ಇತ್ಯಾದಿ ಇವೆಲ್ಲ
ಹೋದವರ ನೆನಪನ್ನೂ ಅಳಿಸಿಬಿಟ್ಟವು.

ಕೊನೇ ಬಸ್ಸು ತಪ್ಪಿ ಮರಳಿದಂತಾಯ್ತು
ದಂಡಕಾರಣ್ಯದಲ್ಲಿ.

—ಅರವಿಂದ ನಾಡಕರ್ಣಿ




## ಕಿರುಕಾದಂಬರಿ

ಕುದುರೆಗಾಡಿ ಅಚ್ಚುಕಟ್ಟಾದ ಮನೆಯೊಂದರ ಮುಂದೆ ಬಂದು ನಿಂತಿತು. ಗಾಡಿಯಿಂದ ಇಳಿದು ಮನೆಯೊಳಗೆ ಕಾಲಿಡುತ್ತಿರುವಂತೆಯೇ ರಾಯರು ಕೂಗಿದರು.

"ಮೋಹನ, ಇಲ್ಲಿ ನೋಡು. ನಿನ್ನ ಹೆಂಡತಿ ಬಂದಾಳೆ."

ಸುಮಾರು ಹತ್ತುವರ್ಷದ ಹುಡುಗ ಅವರ ಧ್ವನಿ ಕೇಳುತ್ತಲೇ ಮನೆಯೊಳಗಿಂದ ಓಡಿಬಂದ, ಬಂದವರನ್ನು ಕಂಡು ಕಣ್ಣರಳಿಸಿ, "ಯಾರು? ಓ ಜಲಜ! ಅಜ್ಜೀ, ಏ ಅಜ್ಜೀ ನಾನ್ಣ–ಜಲಜಾನ್ನ ಮತ್ತು ಅತ್ಯಾನ್ನ ಕರಕೊಂಡು ಬಂದ" ಎನ್ನುತ್ತ ಅಡಿಗೆಯಮನೆಯ ಕಡೆಗೆ ಧಾವಿಸಿದ.

ಅವನ ಕೂಗನ್ನು ಕೇಳಿ ಶಾರದಾಬಾಯಿ "ಹುಚ್ಚೀಹೇಳಿ ನನ್ನನ್ನು ಕಾಡಿಸಬೇಡ" ಎನ್ನುತ್ತಲೇ ಪಡಸಾಲೆಗೆಬಂದು ನೋಡಿದರೆ, ಅಲ್ಲಿ ನಿಜವಾಗಿ ಮಗಳು ಮತ್ತುಮೊಮ್ಮಗಳನ್ನು ಕಂಡು ಆನಂದಪಟ್ಟರು.

ಪದ್ಮ ಹೋದವಳೇ ತಾಯಿಯ ಕಾಲಿಗೆರಗಿದಳು. ಶಾರದಾಬಾಯಿ ಮಗಳನ್ನು ಕೈಹಿಡಿದೆಬ್ಬಿಸಿ, "ಬಂದೆಯಾ ಕಂದ! ಎಷ್ಟು ಸೊರಗಿದ್ದೀಯವ್ವಾ" ಎಂದು ನುಡಿದು, "ನಾನಾ ಎಲ್ಲಿದ್ದಾನೆ?" ಎಂದು ಕೇಳಿದರು. ಅಷ್ಟರಲ್ಲಿ ನಾರಾಯಣರಾಯರು,

"ಇಲ್ಲಿಯೇ ಇದ್ದೀನವ್ವ. ಟಾಂಗಾದವನಿಗೆ ರೊಕ್ಕ ಕೊಟ್ಟು ಬಂದೆ" ಎನ್ನುತ್ತ ಒಳಗೆ ಬಂದರು.

"ನಡೆಯಿರಿ, ಒಳಗೆ ನಡೆಯಿರಿ. ಕಾಲು ತೊಳೆದುಕೊ ಪದ್ಮ, ಯಾವಾಗ ಹೊರಟಿದ್ದಿರೋ ಹಸಿದಿರಬಹುದು. ಬಾಮ್ಮ ಜಲಜಾ" ಎಂದು ಮೊಮ್ಮಗಳನ್ನು ಬಗಲಲ್ಲಿ ಕೂಡಿಸಿಕೊಂಡು ಒಳಗೆ ನಡೆದರು.



"ಶಾಮಿ ಎಲ್ಲಿದ್ದಾನೋ ಮೋಹನ?" ರಾಯರು ಕೋಟು ತೆಗೆಯುತ್ತ ಕೇಳಿದರು. ಆದರೆ ಅವರಿಗೆ ಉತ್ತರ ಹೇಳಲು ಮೋಹನ ಅಲ್ಲಿರಲಿಲ್ಲ. ಅತ್ತೆಯ ಜೊತೆಗೆ ಆಗಲೇ ಒಳಗೆ ಓಡಿದ್ದ.

ಮೋಹನ ನಾರಾಯಣರಾಯರ ಹಿರಿಯ ಮಗ, ಶಾಮಿ ಅವನಿಗಿಂತ ಮೂರು ವರ್ಷಕ್ಕೆ ಕಿರಿಯವ. ಅವನ ಹೆಸರು ಏನು ಎಂದು ಇದ್ದರೂ ಹೆಣ್ಣು ಮಕ್ಕಳ ಮೇಲೆ ತುಂಬ ಪ್ರೀತಿಯಿದ್ದ ರಾಯರು ಅವನನ್ನು 'ಶಾಮೀ' ಎಂದೇ ಕರೆಯುತ್ತಿದ್ದರು.

ಸ್ಥೂಲಕಾಯದ ರಾಯರಿಗೆ ಟ್ರೇನಿನ ಪ್ರವಾಸ ಸಾಕಷ್ಟು ಆಯಾಸ ಮಾಡಿದ್ದಿತು. ಮೊದಲೇ ದಣಿದ ದೇಹಕ್ಕೆ ಸಾಂಗಲಿಯ ಬಿಸಿಲು– ಅದೂ ಮೇ ತಿಂಗಳ ಬಿಸಿಲು– ಇನ್ನಷ್ಟು ಅಸ್ವಾಸ್ಥ್ಯವನ್ನು ಉಂಟು ಮಾಡಿತ್ತು. ಅಂತೆಯೇ ಅವರು ಬಟ್ಟೆ ಬದಲಿಸಿ ಆರಾಮ ಖುರ್ಚಿಯೊಂದರಲ್ಲಿ ಒರಗಿಕೊಂಡು ಗಾಳಿ ಬೀಸಿಕೊಳ್ಳತೊಡಗಿದರು.

× × × ×

ಬೆಳಗಾಂವಿಯ ಹತ್ತಿರದ ಶಹಾಪೂರವು ಸಾಂಗಲಿ ಸಂಸ್ಥಾನದ ಪಟ್ಟಣವಾಗಿತ್ತು. ನಾರಾಯಣರಾಯರು ಶಹಾಪೂರದ ನಾಯಕ ಮನೆತನದವರು. ಅವರು ಸಾಂಗಲಿ ಸಂಸ್ಥಾನದ ವಿದ್ಯಾಖಾತೆಯಲ್ಲಿ ಡೆಪ್ಯೂಟಿ ಇನ್‌ಸ್ಪೆಕ್ಟರರಾಗಿದ್ದರು. ಅಚ್ಚಕನ್ನಡಿಗರಾದ ನಾರಾಯಣರಾಯರು ಈ ಮರಾಠಿ ಸಂಸ್ಥಾನದಲ್ಲಿ ಇಂಥ ಅಧಿಕಾರಕ್ಕೆ ಹೇಗೆ ಬಂದರೆಂದು ಅನೇಕರು ಆಚ್ಚರಿ ಪಡುತ್ತಿದ್ದರು. ಆದರೂ ಅವರ ಕಾರ್ಯಕೌಶಲ್ಯ ಮತ್ತು ಕರ್ತವ್ಯದಕ್ಷತೆಗಳನ್ನು ಸಂಸ್ಥಾನಿಕರಂತೆ ಜನರೂ ಮೆಚ್ಚಿದ್ದರು.

ಇಂಥ ಉಚ್ಚ ಅಧಿಕಾರದಲ್ಲಿದ್ದರೂ ರಾಯರ ಕೌಟುಂಬಿಕ ಜೀವನವು ತುಂಬು ಜೀವನವಾಗಿರಲಿಲ್ಲ, ಚಿಕ್ಕಂದಿನಲ್ಲಿಯೇ ಅವರ ತಂದೆ ತೀರಿಕೊಂಡಿದ್ದರು. ತಾಯಿ, ತಂಗಿ ಮತ್ತು ಅವರು ಬಡತನದಲ್ಲಿಯೇ ಕಾಲ ಕಳೆಯಬೇಕಾಗಿತ್ತು. ಹೊಲದಿಂದ ಬರುವ ಅಲ್ಪಸ್ವಲ್ಪ ಉತ್ಪನ್ನ ಹೊಟ್ಟೆಗೆ ಸಾಲುವಂತಿದ್ದರೂ ಕಾಲೇಜಿನ ಖರ್ಚು ನಡೆಯುತ್ತಿರಲಿಲ್ಲ. ದೊರೆಯುತ್ತಿದ್ದ ವಿದ್ಯಾರ್ಥಿವೇತನವು ಫೀ-ಪುಸ್ತಕಗಳಿಗೆ ಸಾಲುತ್ತಿರಲಿಲ್ಲ. ಇಂಥ ಪರಿಸ್ಥಿತಿಯಲ್ಲಿಯೇ ನಾರಾಯಣ ಬಿ. ಎ. ಪರೀಕ್ಷೆಯಲ್ಲಿ ಒಂದನೆಯ ತರಗತಿ ದೊರಕಿಸಿದುದು ಎಲ್ಲರಿಗೂ ಆನಂದವನ್ನುಂಟು ಮಾಡಿತ್ತು.

ಮುಂದೆ ರಮೆ ನಾರಾಯಣರಾಯರ ಜೀವನದಲ್ಲಿ ಕಾಲಿರಿಸುವಾಗ ಸುಖವನ್ನು ಸಂಗಡ ಕರೆದುಕೊಂಡು ಬಂದಳೆಂದೇ ಹೇಳಬೇಕು. ಆದರೆ ಆ ಸುಖ ಬಹಳ ದಿವಸ ಉಳಿಯಲಿಲ್ಲ. ಮದುವೆಯಾದ ನಾಲ್ಕು ವರ್ಷಗಳಲ್ಲಿ ರಮಾ ಎರಡು ಗಂಡುಮಕ್ಕಳನ್ನು ಹೆತ್ತು ಕಣ್ಣುಮುಚ್ಚಿದ್ದಳು.

ಹೆಂಡತಿಯ ಸಾವು ರಾಯರಿಗೆ ದೊಡ್ಡ ಆಘಾತವನ್ನೇ ಉಂಟುಮಾಡಿತು, ಮಗನಿಗೆ ಎರಡನೆಯ

ಮದುವೆ ಮಾಡಬೇಕೆಂದು ಶಾರದಾಬಾಯಿಯ ಆಸೆ. ಆದರೆ ರಾಯರು ಒಪ್ಪಲೇ ಇಲ್ಲ. ಆ ಬೀಗರು ಸತ್ತು ಹೋಗಿ ಏಳೆಂಟು ವರ್ಷಗಳಾಗಿವೆ. ರಾಯರು ಇನ್ನೂ ಒಬ್ಬಂಟಿಗರಾಗಿಯೇ ಇದ್ದಾರೆ.

ರಾಯರಿಗೆ ಇರುವವಳು ಒಬ್ಬಳೇ ತಂಗಿ, ಪದ್ಮ. ಅವಳ ಲಗ್ನವನ್ನು ರಾಯರು ಸಾಕಷ್ಟು ಚೆನ್ನಾಗಿಯೇ ಮಾಡಿದ್ದರು. ಪದ್ಮಳ ಗಂಡ ಬೆಳಗಾವಿಯ ಮಾಧ್ಯಮಿಕ ಶಾಲೆಯೊಂದರಲ್ಲಿ ಶಿಕ್ಷಕ. ವೆಂಕಣ್ಣ ಪದ್ಮಳಿಗೆ ಅನುರೂಪ ಪತಿ. ಇಬ್ಬರೂ ಅನ್ಯೋನ್ಯವಾಗಿ ಪ್ರೀತಿಯಿಂದ ಸಂಸಾರ ಮಾಡಿಕೊಂಡಿದ್ದಾರೆ. ಮುದ್ದು ಜಲಜಾಕ್ಷಿ ಅವರ ಬಾಳಬಳ್ಳಿಗೆ ಬಿಟ್ಟಿರುವ ಮೊದಲ ಹೂವು. ಪದ್ಮ ಈಗ ಮತ್ತೆ ತಾಯಾಗಲಿದ್ದಾಳೆ. ತನ್ನ ಗಂಡ ಮತ್ತು ಅತ್ತೆ ಬಹುದಿನಗಳಿಂದ ಬಯಸುತ್ತಿರುವ ಗಂಡುಮಗನಿಗಾಗಿ ಅವಳೂ ಎದುರು ನೋಡುತ್ತಿದ್ದಾಳೆ.

× × ×

ಪದ್ಮ ಸಾಂಗಲಿಗೆ ಬಂದು ಎಂಟುಹತ್ತು ದಿನಗಳಲ್ಲಿ ಅವಳ ಪ್ರಕೃತಿ ಸ್ವಲ್ಪ ಸುಧಾರಿಸಿತು. ಬೆಳಗಾವಿಯಲ್ಲಿದ್ದಾಗ ಬಹಳೇ ಅಶಕ್ತಳಾಗಿದ್ದಳು. ಹಸಿವೆಯೇ ಆಗುತ್ತಿರಲಿಲ್ಲ. ಉಂಡ ಸ್ವಲ್ಪ ಅನ್ನವೂ ಪಚನವಾಗುತ್ತಿರಲಿಲ್ಲ. ಗೌರತ್ತೆ ಸೊಸೆಯ 'ಬಯಕೆ'ಗಳನರಿತುಕೊಂಡು ದಿನಾಲು ಒಂದೊಂದು ತಿನಿಸು ಮಾಡುತ್ತಿದ್ದರು. ಆದರೆ ಪದ್ಮಳಿಗೆ ಯಾವುದೂ ರುಚಿಸುತ್ತಿರಲಿಲ್ಲ. ಅತ್ತೆಯವರ ಮನಸ್ಸನ್ನು ನೋಯಿಸಲಾರದೆ ಏನಾದರೂ ತುಸು ತಿನ್ನುವಳು, ಆದರೆ ಮುಂದೆ ಸ್ವಲ್ಪವೇಳೆಯಲ್ಲಿಯೇ ಎಲ್ಲವೂ ವಾಂತಿಯಾಗಿ ಹೋಗುತ್ತಿತ್ತು. ಎಷ್ಟು ಔಷಧ ಕುಡಿದರೂ ಹೆಚ್ಚಿನ ಪ್ರಯೋಜನವಾಗುತ್ತಿರಲಿಲ್ಲ. ಅಂತೆಯೇ ಹವೆಯಾದರೂ ಬದಲಾದಂತಾಯಿತೆಂದು ಪದ್ಮಳನ್ನು ಕರೆಯಲಿಕ್ಕೆ ಬಂದ ಅಣ್ಣನ ಜೊತೆಗೆ ಗೌರತ್ತೆ ಸಂತೋಷದಿಂದ ಸಾಂಗಲಿಗೆ ಕಳಿಸಿದ್ದರು.

ಬಹುಶಃ ಸಾಂಗಲಿಯ ಹವೆ ಪದ್ಮಳಿಗೆ ಹಿತಕರವಾಯಿತು. ಅದು ಬೇಕು, ಇದು ಬೇಕು ಎಂದು ಹೇಳಿ ತಾಯಿಯ ಕಡೆಯಿಂದ ಮಾಡಿಸಿಕೊಂಡು ತಿನ್ನುತ್ತಿದ್ದಳು. ಶಾರದಾಬಾಯಿ ದಿನಾಲು ಏನಾದರೊಂದು ಹೊಸ ರುಚಿಯಾದ ಅಡಿಗೆ ಮಾಡಿ ಮಗಳಿಗೆ ಬಡಿಸುತ್ತಿದ್ದರು. ಮಗಳ ಬಯಕೆ ಯಾವುದೂ ಉಳಿಯಬಾರದೆಂದು ಅವರ ಆಸೆ. ತಮ್ಮ ಕೈ ಅಡಿಗೆ ರುಚಿಯಾಗಲಿಕ್ಕಿಲ್ಲವೆಂದು ತಿಳಿದು, ಆಗಾಗ ನೆರೆಮನೆಯವರಿಂದ ಕೂಡ ಉಪ್ಪಿನಕಾಯಿ ಹಪ್ಪಳ ಮೊದಲಾದವುಗಳನ್ನು ಇಸಿದುಕೊಂಡು ಬರುವರು. ನಾರಾಯಣರಾಯರು ಕಚೇರಿಯಿಂದ ಬರುವಾಗ ಮಕ್ಕಳ ನೆಪ ಮಾಡಿ ಏನಾದರೂ ತಿಂಡಿ ತರುತ್ತಿದ್ದರು.

"ಇದೇನೋ ನಾನಣ್ಣಾ?" ಎಂದು ಪದ್ಮ ಕೇಳಿದರೆ, "ಆ ರಾಮದಾಸ ಹಲವಾಯಿ ಇದ್ದಾನಲ್ಲ, ಅವನ ಗಂಧರ್ವ ಚಿವಡಾ! ಸಾಂಗಲಿಗೆ ಬಂದು ಅವನ ಚಿವಡಾ ತಿನ್ನದೆ ಹೋಗುವರೇನು?" ಎನ್ನುತ್ತಿದ್ದರು. ಇನ್ನೊಂದು ದಿವಸ "ಇಲ್ನೋಡು ಪದ್ದಕ್ಕಾ, ಸ್ಟೇಶನ್‌ರೋಡಿನಲ್ಲಿ ಮೊನ್ನೆಮೊನ್ನೆ ಆರಂಭವಾಗಿದೆಯಲ್ಲ. ಆ ಮಂಗಳೂರು ಕೆಫೆಯಲ್ಲಿ ಮೈಸೂರಪಾಕ ಮತ್ತು ಇಡ್ಲಿ ಬಹಳೇ ಚೆನ್ನಾಗಿ ಮಾಡುತಾರಂತೆ. ಮನೆಗೇ ತರಿಸಲೋ ಅಥವಾ ಅಲ್ಲಿಯೇ ಹೋಗೋಣವೊ?" ಎನ್ನುವರು.

ಮತ್ತೊಂದು ದಿವಸ ಕಚೇರಿಯಿಂದ ಬರುವಂತೆಯೇ "ಅವ್ವಾ, ಈ ಹೊತ್ತು ಅಡಿಗೆ ಬೇಗ ಆಗಲಿ" ಎಂದು ತಾಯಿಗೆ ಹೇಳುವರು. ಪದ್ಮ ಯಾಕೆ ಎಂದು ಕೇಳಿದರೆ, ಜೇಬಿನಲ್ಲಿಂದ ತಿಕೀಟುಗಳನ್ನು ತೆಗೆಯುತ್ತ, "ನೋಡು ಕೃಷ್ಣ ಥಿಯೇಟರಿನಲ್ಲಿ ಶಕುಂತಲಾ ಇದೆ. ರಿಝರ್ವ ಮಾಡಿಸಿ ತರಿಸಿದ್ದೇನೆ" ಎನ್ನುತ್ತಿದ್ದರು. ಪದ್ಮ ಒಲ್ಲೆ ಎಂದು ರಾಗ ತೆಗೆಯುತ್ತಿದ್ದಳು. ಶಾರದಾಬಾಯಿ "ಶಾಮಿಗೆ ನಿದ್ದೆ ತಡೆಯುವದಿಲ್ಲ. ನಾನು ಅವನನ್ನು ಮನೆಯಲ್ಲಿ ಮಲಗಿಸಿಕೊಳ್ಳುತ್ತೇನೆ. ನೀವು ಹೋಗಿ ಬರ್ರಿ" ಎಂದರೆ, ಶಾಮ ಸುಮ್ಮನಿರುತ್ತಾನೆಯೆ? ತನಗೆ ಸಿನೇಮ ಬಿಡುವವರೆಗೆ ನಿದ್ದೆಯೇ ಬರುವುದಿಲ್ಲ, ಒಂದು ವೇಳೆ ಮಲಗಿದರೆ ಇನ್ನೊಮ್ಮೆ ಎಂದೂ ಕರೆದುಕೊಂಡು ಹೋಗುವದೂ ಬೇಡಾ ಎಂದು ಹಟ ಹಿಡಿದು ನಾನಣ್ಣನನ್ನು ಒಪ್ಪಿಸಿಯೇ ಬಿಡುತ್ತಿದ್ದನು.

ಎಲ್ಲರೂ ನದಿಯ ಕಡೆ ತಿರುಗಾಡಲು ಹೋದುದೂ ಅನೇಕ ಸಲ ಉಂಟು. ಚಂದ್ರನ ಬೆಳಕಿನಲ್ಲಿ ಹೊಳೆಯುವ ಕೃಷ್ಣೆಯ ನೀರು. ಶಾಂತ ಗಂಭೀರವಾದ ಆ ವಾತಾವರಣ, ಸಾಯಂಕಾಲದ ವಾಯುವಿಹಾರಕ್ಕೆ ಬಂದ ಗೆಳೆಯರ ಗುಂಪು, ನಲ್ಲ-ನಲ್ಲೆಯರ ಜೋಡಿಗಳು, ಗಣಪನ ಗುಡಿಯಲ್ಲಿಂದ ಆಗಾಗ ಗಾಳಿಯಲ್ಲಿ ತೀರ ಮಂದವಾಗಿ ತೇಲಿ ಬರುವ ಗಂಟೆಯ ನಿನಾದ-ಇವೆಲ್ಲ ಪದ್ಮಳನ್ನು ಹರ್ಷಪುಲಕಿತಳನ್ನಾಗಿ ಮಾಡುತ್ತಿದ್ದುವು. ಇಂಥ ಕ್ಷಣದಲ್ಲಿ ಅವಳ ಮನಸ್ಸು ಗಂಡನ ಕಡೆಗೆ ಓಡುತ್ತಿತ್ತು. ಅವನ ಜೊತೆಗೆ ತಾನು ಕಳೆದ ರಸನಿಮಿಷಗಳ ನೆನಪು ಹುಟ್ಟುತ್ತಿತ್ತು. ಆಗ ಅವಳು ಎಲ್ಲವನ್ನು ಮರೆತು ಕುಳಿತುಬಿಡುತ್ತಿದ್ದಳು.

ಹೀಗೆ ಸಾಂಗಲಿಯಲ್ಲಿ ಪದ್ಮ ಕಳೆದ ಇಪ್ಪತ್ತು ದಿನಗಳು ನಿಮಿಷಗಳಾಗಿ ಅವಳಿಗೆ ಕಂಡವು. ಸಾಂಗಲಿಯ ಹವೆ ಅವಳ ಪ್ರಕೃತಿಯನ್ನು ಸುಧಾರಿಸಿದರೆ, ತಾಯಿಯ ಮತ್ತು ಅಣ್ಣನ ವಾತ್ಸಲ್ಯ ಅವಳ ಮನಸ್ಸನ್ನು ಹಿಗ್ಗಿಸಿ ಅರಳಿಸಿತು.

ಅದರಂತೆ ಜಲಜಾಕ್ಷಿ ಕೂಡ ಸಾಂಗಲಿಯ ವಾತಾವರಣದಲ್ಲಿ ಒಂದಾಗಿ ಹೋದಳು. ಬೆಳಗಾವಿಯ ಮನೆಯಲ್ಲಿ ಇರುವವರೇ ನಾಲ್ಕು ಜನ. ಗೌರತ್ತೆ ಮನೆಗೆಲಸ ಪುರಾಣ, ಪುಣ್ಯಕಥೆ ಇವುಗಳಲ್ಲಿಯೇ ಮಗ್ನರಾಗಿರುತ್ತಿದ್ದರು. ತಂದೆಗೆ ಶಾಲೆ-ವಾಚನಾಲಯ-ಪೇಟೆ ಇವು ಮುಗಿದು ವೇಳೆ ದೊರೆತಾಗ ಮಗಳ ಲಲ್ಲೆಗೆ ಅವಕಾಶ. ಇನ್ನು ಪದ್ದಕ್ಕನಂತೂ ಇತ್ತೀಚೆ ತನ್ನ ಅಸ್ವಸ್ಥತೆಯಲ್ಲಿ ಹಣ್ಣಾಗಿ ಹೋಗಿದ್ದಳು. ಆದರೆ ನೆರೆಮನೆಯ ಕುಸುಮಾ ಎಂದರೆ ಜಲಜಳ ಪುಟ್ಟಹೃದಯ ಹಿಗ್ಗಿ ಕುಣಿಯುತ್ತಿತ್ತು. ದಿನದ ಬಹಳ ವೇಳೆ ಅವಳ ಜೊತೆಗೆ ಆಟವಾಡುವುದರಲ್ಲಿಯೇ ಕಳೆಯುತ್ತಿತ್ತು. ಆದರೆ ಅವಳೊಂದಿಗೆ ಸದಾಕಾಲ ಇರಲಿಕ್ಕೆಶಕ್ಯವೂ ಇರಲಿಲ್ಲ. ಕುಸುಮಾ ಜಲಜಳಿಗಿಂತ ಸಾಕಷ್ಟು ದೊಡ್ಡವಳಾಗಿದ್ದಳು. ಅವಳಿಗೆ ಜಲಜಳ ಜೊತೆಗೆ ಆಟವಾಡಲು ಸೇರುತ್ತಿದ್ದರೂ ಶಾಲೆಯೊಂದಿದೆಯಲ್ಲ. ಅದನ್ನು ಹೇಗೆ ತಪ್ಪಿಸುವದು? ಒಂದು ವೇಳೆ ಶಾಲೆ ತಪ್ಪಿಸಬಹುದು; ಆದರೆ ತಾಯಿಯ ಹೊಡೆತ ತಪ್ಪಿಸಬಹುದೇ? ಆಗ ಜಲಜಾಕ್ಷಿ ತಾನೂ ಅವಳ ಜೊತೆಗೆ ಶಾಲೆಗೇ ಏಕೆ ಹೋಗಬಾರದು? ಎಂದರೆ, ಪದ್ದಕ್ಕ "ಈ ವರ್ಷ ಬೇಡ, ಮುಂದಿನ ವರ್ಷ ಹೋಗು" ಎನ್ನುತ್ತಿದ್ದಳು.

ಆದರೆ ಸಾಂಗಲಿಯಲ್ಲಿ ಹಾಗಲ್ಲ. ನಾನಣ್ಣಮಾಮಾ ಅವಳಿಗೆ ಬಹಳೇ ಪ್ರೀತಿ ಮಾಡುತ್ತಾರೆ, ದಿನಾಲು ತಿನ್ನಲು ಹೊಸ ಹೊಸ ತಿನಿಸು ಸಿಗುತ್ತದೆ. ಆಡಲಿಕ್ಕೆ ಮೋಹನ, ಶಾಮ ಇದ್ದಾರೆ. ಅವರಂತೂ ತನ್ನ ಜೊತೆಯನ್ನು ಬಿಟ್ಟು ಎಲ್ಲಿಯೂ ಹೋಗುವದಿಲ್ಲ. ಅವರು ತನ್ನ ಸಲುವಾಗಿ ಶಾಲೆ ಸಹಿತ ಬಿಟ್ಟಿದ್ದಾರೆ. (ಅದು ಬೇಸಿಗೆಯ ಬಿಡುವಿನ ದಿನ ಎಂದು ಅವಳಿಗೇನು ಗೊತ್ತು!) ಮೋಹನ ಹಾಗೆಯೇ ಹೇಳ್ಲಿಲ್ಲವೇ ಆದಿವಸ "ನೀನು ಇಲ್ಲಿ ಇರುವಷ್ಟು ದಿವಸ ನಾನು ಶಾಲೆಗೇ ಹೋಗುವದಿಲ್ಲ, ಜಲೀ" ಎಂದು. ಮೋಹನ ಬಹಳ ಒಳ್ಳೆಯವನು. ಚಂದಚಂದವಾದ ಕಥೆಗಳನ್ನು ಹೇಳುವನು, ಅವನ ಹತ್ತಿರ ತರತರದ ಆಟದ ಸಾಮಾನುಗಳೂ ಅವೆ. ಹಾ. ಆ ದುರ್ಬೀನಂತೂ ಬಹಳ ಮಜಾ. ಬೆಳಗಾವಿಯಲ್ಲಿ ಅದು ಯಾರ ಹತ್ತಿರವೂ ಇಲ್ಲ. ಅದರೊಳಗಿಂದ ನೋಡುವ ಗೊಂಬೆಗಳೆಷ್ಟು ಚಂದವಾಗಿವೆ! ...ಆದರೆ ಆ ದುರ್ಬೀನಿನಿಂದಲೇ ಅಲ್ಲವೇನು, ಕೆಟ್ಟ ಮೋನ್ಯಾ ಮೊನ್ನೆ ತನ್ನ ಕೈ ಸುಟ್ಟದ್ದು. ಆಗ ಅಜ್ಜಿ ಅವನಿಗೆ ಹೇಗೆ ಬೈದಳು!...ಪಾಪ. ಅವನೇನೂ ಬೇಕಂತಲೇ ಹಾಗೆ ಮಾಡಿದನೇ? ಆಟದಲ್ಲಿ ತನ್ನ ಕೈ ಸುಟ್ಟಿತು...

ಅಂದು ಮಧ್ಯಾಹ್ನ ಅವರು ಮನೆಯ ಎದುರಿನ ಕೈತೋಟದಲ್ಲಿದ್ದ ಪೇರಲ ಗಿಡದ ಕೆಳಗೆ ಆಟವಾಡುತ್ತಿದ್ದರು. ಮೋಹನನ ಹತ್ತಿರ ಆಟದ ಹಳೆಯ ದುರ್ಬೀನೊಂದು ಇದ್ದಿತು. ಅದರಲ್ಲಿಂದ ಗೊಂಬೆಗಳನ್ನು ನೋಡುವದೆಂದರೆ ಜಲಜಳಿಗೆ ಅಪಾರ ಆನಂದ. ನೋಡಿದ ಚಿತ್ರಗಳನ್ನೇ ಸಾವಿರದ ಒಂದನೆಯ ಸಲ ನೋಡಿ ನೋಡಿ ಮೋಹನನಿಗೆ ಬೇಸರ ಬಂದಿತ್ತು.

"ಜಲೀ, ಇಲ್ಲಿ ನೋಡು ಒಂದು ಮಜಾ ಮಾಡುತ್ತೇನೆ" ಎಂದು ಮೋಹನ ಅವಳ ಕೈಯನ್ನು ಬಿಸಿಲಲ್ಲಿ ಹಿಡಿದು ಅದರ ಮೇಲೆ ದುರ್ಬೀನು ಹಿಡಿದನು. ದುರ್ಬೀನಿನೊಳಗಿಂದ ಹಾಯ್ದುಬಂದ ಸೂರ್ಯನ ಕಿರಣಗಳು ಕ್ಷಣ ಹೊತ್ತಿನಲ್ಲಿ ಆ ಪುಟ್ಟ ಕೈಗೆ ಚುರುಕು ಕೊಟ್ಟವು.

"ಹೋಗೋ, ಕೈ ಉರೀತದ, ನಾವೊಲ್ಲೆ" ಎಂದು ಜಲಜಾಕ್ಷಿ ತನ್ನ ಕೈ ಕೊಸರಿಕೊಂಡರೂ ಮೋಹನ ಅವಳ ಕೈಯನ್ನು ಬಲವಾಗಿ ಹಿಡಿದು ತನ್ನ ಕಾಯಕವನ್ನು ಮುಂದುವರೆಯಿಸಿದನು. ಕೊನೆಗೆ ಕೈ ಸುಟ್ಟು ಅವಳು ಚೀರಿ ಅಳತೊಡಗಿದಳು. ಅದನ್ನು ಕಂಡು ಮೋಹನನಿಗೆ ತಡೆಯಲಾರದ ನಗು.

"ಹಂಗ ಆಗಬೇಕು. ಕೈ ಸುಡಬೇಕು, ನೀ ಅಳಬೇಕು. ನಾ ನಗಬೇಕು" ಎಂದು ನಗುತ್ತ ಕುಣಿಯತೊಡಗಿದನು. ಜಲಜೆಯ ಅಳು ಇನ್ನೂ ಹೆಚ್ಚಾಯಿತು. ಅದನ್ನು ನೋಡುತ್ತಿದ್ದ ಶಾಮನಿಗೆ ಮೊದಲು ನಗು ಬಂದರೂ, ಜಲಜಾಕ್ಷಿಯ ಅಳುವನ್ನು ಕಂಡು ಗಾಬರಿಯಾಯಿತು. ಅಣ್ಣನ ಮೇಲೆ ಸಿಟ್ಟೂ ಬಂದಿತು. ಓಡಿ ಹೋಗಿ ಅಜ್ಜಿಗೆ ಹೇಳಿದ. ಶಾರದಾಬಾಯಿಯವರು "ಏನು ಮಾಡಿದೆಯೋ ಮೋನ್ಯಾ ಕೂಸಿಗೆ?" ಎನ್ನುತ್ತ ಬಂದು ಮೋಹನನ ಕಿವಿಯನ್ನು ಚೆನ್ನಾಗಿ ಹಿಂಡಿದರು. ಆತ "ಅಯ್ಯೋ" ಎಂದು ಕಿರುಚಿದ. ಅವ ಕೆಂಪಾದ ಕಿವಿಯನ್ನು ನೋಡಿ ಜಲಜಾಕ್ಷಿ ಒಮ್ಮೆಲೇ ನಕ್ಕುಬಿಟ್ಟಳು.

"ಹ್ಯಾಂಗ ಆತು? ಹಾಂಗs ಆಗಬೇಕು" ಎಂದು ಶಾಮ ಅಣ್ಣನಿಗೆ ಅಣಕಿಸಿದನು. ಮೋಹನನ ಸಿಟ್ಟು ಅವನ ಮುಖದಲ್ಲಿ ಒಡೆದು ಕಂಡಿತು. ಆದರೆ ಆತ ಏನೂ ಮಾಡಲಾರದವನಾಗಿದ್ದ. ದುರದುರನೆ ಅವರಿಬ್ಬರನ್ನು ನೋಡುತ್ತಿದ್ದ.

"ಅದೇನು; ಅವರನ್ನು ತಿನ್ನುವವರಂತೆ ನೋಡು ತ್ತೀಯೋ? ಸ್ವಲ್ಪೂ ದಯಾಮಾಯಾ ಇಲ್ಲ" ಎಂದು ಹೇಳಿ ಶಾರದಜ್ಜಿ ಜಲಜಾಕ್ಷಿಯನ್ನು ಒಳಗೆ ಕರೆದು ಕೊಂಡು ಹೋದರು.

ಅರ್ಧತಾಸಿನ ನಂತರ ಜಲಜಾಕ್ಷಿ ಮನೆಯ ಹಿಂಬ ದಿಯ ಕಟ್ಟೆಯ ಮೇಲೆ ಚಕ್ಕುಲಿ ತಿನ್ನುತ್ತ ಒಬ್ಬಳೇ ಕುಳಿತುಕೊಂಡಿದ್ದಳು. ಮೋಹನನಿಗೆ ಅದು ಸಿಕ್ಕಿರಲಿಲ್ಲ. ಅಜ್ಜಿ ಕೊಡಲಿಕ್ಕೆ ಬಂದಿದ್ದರೂ, ಅವನು ತನ್ನ ಕೋಪ ಇಳಿಯುವವರೆಗೆ ಇಸಿದುಕೊಳ್ಳುತ್ತಿರಲಿಲ್ಲ.

ಜಲಜಾಕ್ಷಿ ಒಬ್ಬಳೇ ಇರುವುದನ್ನು ಕಂಡು ಮೋಹನ ಸಾವಕಾಶವಾಗಿ ಬಂದು ಅವಳ ಹತ್ತಿರ ಕುಳಿತುಕೊಂಡ. ಜಲಜಾಕ್ಷಿ ಮಾತ್ರ ಒಂದು ಮಾತನ್ನೂ ಆಡಲಿಲ್ಲ, ಅವನು ತನ್ನ ಬೆನ್ನಲ್ಲಿ ಒಂದು ಗುದ್ದು ಕೊಟ್ಟು ತನ್ನ ಚಕ್ಕುಲಿಯನ್ನು ಎಲ್ಲಿ ಕಸಿದುಕೊಂಡು ಓಡುವನೊ ಎಂದು ಅವಳು ಹೆದರಿದಳು. ಆ ಭೀತಿಯಿಂದ ಜಲಜಾಕ್ಷಿಯ ದೃಷ್ಟಿ ಆತನ ಹಾವಭಾವಗಳ ಕಡೆಗೆ ಆಗಾಗ ಚಲಿಸುತ್ತಲೇ ಇತ್ತು. ಅದರ ಜೊತೆಗೆ ಅವಳ ಕೈಯಲ್ಲಿದ್ದ ಚಕ್ಕುಲಿಯ ಮೇಲಿನ ಹಿಡಿತವೂ ತುಸು ಬಿಗಿಯಾಯಿತು.

ಒಂದೆರಡು ನಿಮಿಷ ಇಬ್ಬರೂ ಮೌನವಾಗಿಯೇ ಇದ್ದರು. ಆ ಮೇಲೆ ಜಲಜಾಕ್ಷಿಯ ಬದಿಗೆ ತುಸು ಸರಿದು ಕುಳಿತ. ಜಲಜಾಕ್ಷಿ ದೂರ ಸರಿಯತೊಡಗಿ ದಳು.

"ಯಾಕೆ ಜಲಜಾ, ಅಂಜಿದೇನು?"

ಜಲಜಾಕ್ಷಿ ನಿಜವಾಗಿಯೂ ಹೆದರಿದ್ದಳು. ಆದರೆ ಹಾಗೆ ಒಪ್ಪಿಕೊಳ್ಳಲಿಲ್ಲ. ಅವಳು ಏನೂ ಉತ್ತರವನ್ನೇ ಕೊಡಲಿಲ್ಲ. ಅವನಿಗೆ ಇನ್ನೂ ಹೆಚ್ಚಿನ ಧೈರ್ಯ ಬಂದಂತಾಯಿತು.

"ನಾನೇನು ನಿನ್ನ ಚಕ್ಕುಲಿ ಕಸಕೋತೇನೆಂದು ತಿಳಿದಿ ಯೇನು? ಅದೇನು ಅಂಥಾ ದೊಡ್ಡದು? ಛಿಸ್!" ಎಂದು ಮುಖ ಡೊಂಕು ಮಾಡಿ ತೋರಿಸಿದ.

"ಯಾರಿಗೆ ಗೊತ್ತು, ನೀಯೇನು ಮಾಡತೀ ಅನ್ನೋದು?... ಮತ್ತ ಇದೀಗ ಅಜ್ಜಿ ಹೇಳಿದಳಲ್ಲ ನಿನಗ ದಯಾ ಮಾಯಾ ಏನೂ ಇಲ್ಲಂತ."

"ಆಕಿಯೇನು ಹಂಗ ಹೇಳ್ತಿರತಾಳೆ! ಆದರ ನಾನು ಎಂದಾದರೂ ನಿನ್ನ ಪಾಲಾ ಘೂ ಬಿಟ್ಟೇ ನೇನು ಹೇಳಲಾ."

"ಹಂಗಾದರ ಇದೇ ಈಗ ನನ್ನ ಕೈ ಸುಟ್ಟಿಯಲ್ಲ?" ಜಲಜಾಕ್ಷಿ ಮತ್ತೆ ತನ್ನ ಕೈಯ ಕಡೆಗೆ ನೋಡಿ ಕೊಂಡಳು.

"ಆದರ ನಾನೇನು ಬೇಕಂತ ನಿನ್ನ ಕೈಯನ್ನ ಸುಟ್ಟೇ ನೇನು? ಆಟದಾಗ..."

"ಆದರೇನಾತು? ಆಟದಾಗ ಅಷ್ಟು ಕೈ ಸುಡತಾರೇನಪಾ? ನನ್ನ ಕೈ ನೋಡು. ಇನ್ನೂ ಉರೀಲಿಕ್ಕೆ ಹತ್ತೇದ" ಜಲಜಾಕ್ಷಿ ಸುಟ್ಟು ಕೆಂಪಾದ ಗಾಯದ ಮೇಲೆ ಊದಿಕೊಂಡಳು. ನಿಜವಾಗಿಯೂ ಕೆಂಪು ಕೆಂಪಾದ ಗಾಯವನ್ನು ನೋಡಿ ಮೋಹನನ ಮುಖವೂ ಬಾಡಿತು.

"ಇಲ, ಜಲಜಾ ಇನ್ನೊಮ್ಮೆ ಹಂಗ ಮಾಡೂದಿಲ್ಲ, ಮಾಡಿದರ ದೇವರಾಣಿ" ಮೋಹನ ದೈನ್ಯದಿಂದ ಬೇಡಿಕೊಂಡ.

"ಹೋಗೋ. ಹಾಗನ್ನಬಾರದು. ಬಿಟ್ಟೆತನ್ನು ಲಗೂನ. ಇಲ್ಲದಿದ್ದರ ಅಜ್ಜಿಗೆ ಹೇಳತೇನು"

"ಬಿಟ್ಟೆತು, ಬಿಟ್ಟೆತು"

ಆಗ ಜಲಜಾಕ್ಷಿ ತಾನಾಗಿಯೇ ಅವನ ಸಮೀಪಕ್ಕೆ ಸರಿದು ಕುಳಿತಿದ್ದಳು; ಅಷ್ಟೇ ಅಲ್ಲ ತನ್ನಲ್ಲಿದ್ದ ಚಕ್ಕುಲಿ ಯಲ್ಲಿ ಅವನಿಗೂ ಪಾಲು ಕೊಟ್ಟಿದ್ದಳು.

ಹೀಗೆ ಆಟದಲ್ಲಿ ಮಗ್ನನಾಗಿದ್ದ ಜಲಜಾಕ್ಷಿಗೆ "ಅದೆಷ್ಟು ಬೇಗ ರಾತ್ರಿಯಾಗಿ ಬಿಡುತ್ತದಲ್ಲ" ಎಂದೆನಿ ಸುತ್ತಿತ್ತು. ಸಾಂಗಲಿಯಲ್ಲಿ ಕಳೆದ ಇಪ್ಪತ್ತು ದಿನಗಳ ಕಲ್ಪನೆಯೇ ಅವಳಿಗೆ ಬಂದಿರಲಿಲ್ಲ,

"ಬೆಳಗಾವಿಯಿಂದ ಪತ್ರ ಬಂದಿದೆ ನೋಡು ನೀನು ಎಂದು ಬರುತ್ತೀ ಅಂತ ಕೇಳಿದ್ದಾರೆ" ಎಂದು ಪದ್ಮಾ ಮಗಳಿಗೆ ಕೇಳುತ್ತಿದ್ದಳು. ಆದರೆ ಈ ಮಗಳು "ನಾವು ಇಲ್ಲಿಯೇ ಯಾಕೆ ಇರಬಾರದು?" ಎಂದು ಯೋಚಿಸುತ್ತಿದ್ದಳು!

ಪ್ರತಿ ರವಿವಾರ ನಾರಾಯಣರಾಯರ ಕಚೇರಿ ಗೇನೋ ಬಿಡುವು ಇರುತ್ತಿತ್ತು. ಆದರೆ ರಾಯರಿಗೆ ಮಾತ್ರ ಬಿಡುವಿಲ್ಲ. ರವಿವಾರವೇ ಇರಲಿ ಅಥವಾ ಉಳಿದ ಸೂಟಿಯ ದಿನಗಳೇ ಇರಲಿ, ಅವರು ಆಫೀಸಿಗೆ ತಪ್ಪದೇ ಹೋಗುತ್ತಲೇ ಇರುತ್ತಿದ್ದರು. ಅಷ್ಟು ಕೆಲ ಸದ ಭಾರವೂ ಇರುತ್ತಿತ್ತು. ಆದರೆ ಆ ರವಿವಾರ ರಾಯರು ಆಫೀಸಿಗೆ ಹೋಗಿರಲಿಲ್ಲ. ಊಟವಾದ ಮೇಲೆ ನಡುಮನೆಯಲ್ಲಿ ಅಣ್ಣತಂಗಿ ಏನೋ ಹರಟುತ್ತ ಕುಳಿತಿದ್ದರು.

"ನಾನು ಇಲ್ಲಿ ಇದ್ದಷ್ಟು ದಿನ ನಿನ್ನ ಕೆಲಸಕ್ಕೆ ಅಡಚಣೆಯೇ ನೋಡು" ಪದ್ಮ ಏನೋ ಮಾತು ಬಂದು ನುಡಿದಳು.

"ಅದೇಕೆ" ರಾಯರು ಕೇಳಿದರು.

"ಈ ದಿನ ಕಚೇರಿಗೆ ಹೋಗಲಿಲ್ಲವಲ ?"

"ಹಾಗೇನೂ ಇಲ್ಲ. ಇಂದು ನನಗೂ ಅದೇಕೋ ಬೇಸರವೂ ಬಂದಿತ್ತು. ಅಂತೇ ಹೋಗಲಿಲ್ಲ."

"ಏನೇ ಅಂದರೂ, ನಾನಣ್ಣಾ ನೀನು ನನಗೆ ಬಹಳ ಮಾಡುತ್ತೀಯಪ್ಪಾ"

"ನಾನೇನು ಅಂಥದು ಮಾಡಿದ್ದೇನೆ?"

"ಇನ್ನೂ ಏನು ಹೆಚ್ಚಿಗೆ ಬೇಕು? ಇಷ್ಟು ಅಂತಃ ಕರಣದಿಂದ ನೋಡುತ್ತಿ..."

"ಇದ್ದಿರಬಹುದು ಬಿಡು. ಆ ಮಾತೇಕೀಗ?"

"ಯಾಕೂ ಇಲ್ಲ. ಇದೇ ಪ್ರೀತಿ ಕಡೆತನಕ ಉಳೀಬೇಕು."

"ಪದ್ದಕ್ಕ, ಹೀಗೇಕೆ ಹುಚ್ಚಿಯಂತೆ ಮಾತಾಡುತ್ತಿ? ಅದರಲ್ಲಿ ಸಂಶಯವೇನು?"

"ಛೇ ಇಲ್ಲ. ಏನೋ ಮಾತು ಬಂತು; ಅಂದೆ, ಅಷ್ಟೇ."

ಎರಡು ನಿಮಿಷ ಇಬ್ಬರೂ ಮೌನವಾಗಿದ್ದರು. ನಾರಾಯಣರಾಯರು ಕಿಡಕಿಯಲ್ಲಿಂದ ಹೊರಗೆ ನೋಡುತ್ತಿದ್ದರು. ಮಧ್ಯಾಹ್ನದ ಬಿಸಿಲು ರಣರಣ ಹೊಡೆಯುತ್ತಿತ್ತು. ನೆರೆಮನೆಯ ಹಿತ್ತಲಿನಲ್ಲಿದ್ದ ನಳದ ನೀರು ತೀರ ಸಣ್ಣ ಧಾರೆಯಾಗಿ ಬೀಳುತ್ತಲಿತ್ತು. ನಳದ ಕೆಳಗೆ ನೀರು ತುಂಬಲಿಕ್ಕೆ ಇಟ್ಟಿದ್ದ ಕೊಡ ಮಾತ್ರ ತುಂಬ ದೊಡ್ಡದಾಗಿತ್ತು.

"ನಾನಣ್ಣಾ"

ರಾಯರ ದೃಷ್ಟಿ ತಂಗಿಯ ಕಡೆಗೆ ಹೊರಳಿತು. "ಯಾಕೆ?" ಎಂದು ಕೇಳುವಂತಿತ್ತು ಅವರ ನೋಟ.

"......"

"ಯಾಕೆ ಪದ್ಮ ?"

ಪದ್ಮಳ ಮುಖದಿಂದ ನಿಟ್ಟುಸಿರು ಸುಯ್ದಿತು.

"ಪದ್ದಕ್ಕ" ರಾಯರು ಗಾಬರಿಯಾಗಿದ್ದರು.

"ಏನೂ ಇಲ್ಲ. ನಿನ್ನ ಸೊಸೆಯದೇ ನನಗೆ ಚಿಂತೆಯಾಗಿದೆ."

"ಯಾಕೆ? ಚಿಂತೆ ಯಾಕೆ?"

"ಅವಳು ನಿನ್ನ ಸೊಸೆ..."

"ಹೌದು. ಅದಕ್ಕೆ?"

"ಅದು ಕೇವಲ ಚೇಷ್ಟೆಯೋ ಅಥವಾ..."

ನಾರಾಯಣರಾಯರ ಮುಖದಲ್ಲಿ ಮುಗುಳುನಗೆ ಮೂಡಿತು. ಜಲಜಾಕ್ಷಿ ಹುಟ್ಟಿದಾಗಿನಿಂದಲೇ ಅವಳು ಮೋಹನನ ಹೆಂಡತಿಯೆಂದು ಎಲ್ಲರೂ ಕರೆದಿದ್ದರು. ಅದು ಉಳಿದವರಿಗೆ ಚೇಷ್ಟೆಯಮಾತಾಗಿದ್ದರೂ, ಹಾಗೆಯೇ ಯಾಕೆ ಆಗಬಾರದೆಂದು ಪದ್ಮ, ನಾರಾಯಣ ರಾಯರು ಅನೇಕ ಸಲ ಅಂದುಕೊಂಡಿದ್ದರು. ಪದ್ಮ ಗಂಡನ ಮುಂದೂ ಈ ಮಾತು ಕೇಳಿದಾಗ ವೆಂಕಣ್ಣನೂ "ಹಾಗೆ ಆಗಲಿ, ಯಾರು ಬೇಡ ಎಂದವರು" ಎಂದು ನುಡಿದಿದ್ದ. ಅದನ್ನೆಲ್ಲ ನೆನೆದರು ರಾಯರು. ತಂಗಿಯ ಮಾತು ಕೇಳಿ ಅವರಿಗೆ ನಗೆ ಬಂದಿತ್ತು.

"ಓಹೋ. ಅದಕ್ಕೇಕಿಷ್ಟು ವಿಚಾರ? ಚೇಷ್ಟೆ ಯಾಕೆ? ನಿಜವಾಗಿಯೂ ಮಾಡೋಣ"

"ನಾಳೆ ಮೋಹನ ಅವಳನ್ನು ಒಪ್ಪಬಹುದೆ?" ಪದ್ಮಾ ನಡುವೆ ಕೇಳಿದಳು.

ನಾರಾಯಣರಾಯರು ಈಗ ಗಟ್ಟಿಯಾಗಿಯೇ ನಕ್ಕರು.

"ಅವನು ಒಪ್ಪದೇ ಏನು, ಅವನ ಅಪ್ಪನೇ ಒಪ್ಪಿರುವಾಗ? ನಾಳೆ ಈ ಜಗಳಗಂಟನನ್ನು ನೀವೇ ಒಪ್ಪುತ್ತಿರೋ ಇಲ್ಲವೊ ಎಂದು ನನಗೆ ಸಂದೇಹ." ಪದ್ಮಳ ಮುಖ ಹಿಗ್ಗಿ ಅಗಲವಾಯಿತು.

"ಅದಿರಲಿ ಬಿಡು. ಆದರೆ ಈ ಮಾತು ನಿನಗೆ ಈಗ ಯಾಕೆ ನೆನಪಾಯಿತು?" ಅಣ್ಣ ಕೇಳಿದರು.

"ಯಾಕೊ!... ನನಗೆ ಒಮ್ಮೊಮ್ಮೆ ಬಹಳೇ ಹೆದರಿಕೆಯಾಗುತ್ತದೆ."

"ಎಲ್ಲಾ ಬಿಟ್ಟು ಹೆದರಿಕೆ ಯಾಕೆ..." ಮಾತನ್ನು ಅರ್ಧಕ್ಕೇ ನಿಲ್ಲಿಸಿ ರಾಯರು ಹಾಗೆಯೇ ಎದ್ದು ಹೊರಗೆ ಧಾವಿಸಿದರು.

ಹೊರಗೆ ಅಂಗಳದಲ್ಲಿ ಆಡುತ್ತಿದ್ದ ಹುಡುಗರು, ನಾನಣ್ಣನ್ನ ನಾ ಮೊದಲ ಮುಟ್ಟತೀನಿ, ನಾ ಮೊದಲ ಮುಟ್ಟತೀನಿ–ಎನ್ನುತ್ತಾ ಒಳಗೆ ಓಡಿ ಬರುತ್ತಿದ್ದರು. ಓಡುವ ಭರದಲ್ಲಿ ಜಲಜಾಕ್ಷಿ ಹೊಸ್ತಿಲು ಎಡವಿ ನೆಲಕ್ಕು ರುಳಿದ್ದಳು. ಬಿದ್ದ ರಭಸಕ್ಕೆ ಮೊಣಕಾಲು ಕಿತ್ತಿ ರಕ್ತ ಬರತೊಡಗಿತ್ತು. ಪೆಟ್ಟೇನೂ ಹೆಚ್ಚಾಗಿರಲಿಲ್ಲ. ರಾಯರು ಹೋಗಿ ಅವಳನ್ನು ಎತ್ತಿಕೊಂಡು ಬಂದರು.

"ಮೋನ್ಯಾ ಕೆಡವಿದ. ಆಃ ಆsss" ಎಂದು ಅವಳು ಮಾಮಾನ ಹೆಗಲ ಮೇಲೆ ಮುಖವಿಟ್ಟು ಅಳತೊಡ ಗಿದಳು.

"ಒಳ್ಳೇದು. ಅವನಿಗೆ ಒಂದು ತುಂಟ ಹೆಂಡ್ತಿನ್ನ ಗಂಟು ಹಾಕೋಣ. ಹ" ಎಂದು ರಮಿಸುತ್ತ ರಾಯರು ಅವಳನ್ನು ಕರೆದುಕೊಂಡು ಒಳಗೆ ಬಂದರು.








"ಅಲ್ಲಯ್ಯಾ! ಮಾತಿಗೊಮ್ಮೆ ಗಾಂಧಿ ಲಾಠೀ ಏಟು ತಿಂದಿದಾರೆ. ಲಾಠೀ ಏಟು ತಿಂದಿದಾರೆ ಅಂತೀಯಲ್ಲಾ. ಮೊನ್ನೆ ನಾನೂ ಸಿನೇಮಾ ನೋಡೋಕ್ಕೆ ಹೋದಾಗ ಲಾಠಿ ತಿಂದಿದೀನಿ."

"ಎಷ್ಟು ಚೀರುತ್ತೀಯೆ? ಎಲ್ಲಿ ಪೆಟ್ಟು ಹತ್ತಿದೆ ನೋಡೋಣ" ಎನ್ನುತ್ತ ಪದ್ಮಾ ಅವಳನ್ನು ಕರೆದು ಕೊಂಡಳು.

ರಾಯರು Burnol ತಂದು ರಕ್ತ ಬಂದಲ್ಲಿ ಹಚ್ಚಬೇಕೆಂದು, ಅವಳ ಪರಕರವನ್ನು ಮೇಲೆ ಸರಿಸಿದರು. ಅವಳ ತೊಡೆಯನ್ನು ನೋಡುತ್ತಲೇ ನಾನಣ್ಣ ಬೆಚ್ಚಿಬಿದ್ದರು.!

"ಪದ್ಮಾ, ಇದೇನು?"

ರಾಯರು ತಂಗಿಯನ್ನು ನೋಡಿದರು. ಅವಳ ಮುಖ ಕಳೆಗುಂದಿತ್ತು.

"ಇದೇನು ಸುಟ್ಟಕಲೆಯೋ ...... ಅಥವಾ?" ರಾಯರು ಕೇಳಿದರು.

ಪದ್ಮಳಿಗೆ ಅದೇನೆಂದು ನಿಶ್ಚಿತವಾಗಿ ಗೊತ್ತಿರಲಿಲ್ಲ. ಜಲಜಾಕ್ಷಿಯ ಮೊಳಕಾಲು ಹತ್ತಿರ ಒಂದು ದುಡ್ಡಿನಷ್ಟು ಸ್ಥಳದಲ್ಲಿ ತೊನ್ನಿನಂಥ ಬಿಳಿಯಕಲೆಯೊಂದಿದ್ದಿತು. ಅದೇನೆಂದು ಬೇರೆ ಯಾರಾದರೂ ಕೇಳಿದ್ದರೆ 'ಸುಟ್ಟಗಾಯ' ಎಂದು ಹೇಳಬಹುದಿತ್ತು. ಆದರೆ ನಾನಣ್ಣನ ಮುಂದೆ ಏನು ಹೇಳುವುದು!

"ಹೀಗಾಗಿ ಎಷ್ಟು ದಿನವಾಯ್ತು?"

"ಈಗ ಒಂದು ವರ್ಷವಾಗುತ್ತ ಬಂತು. ಅವರು ಡಾಕ್ಟರರಿಗೆ ತೋರಿಸಿದ್ದಾರೆ. ಅವರು ಏನೋ ಮಲಮು ಕೊಟ್ಟರು. ಅದರಿಂದ ಏನೂ ಕಡಿಮೆಯಾಗಿಲ್ಲ. ಸಾವಕಾಶವಾಗಿ ಬೆಳೆಯುತ್ತಲೇ ನಡೆದಿದೆ. ನನ್ನ ಹಣೇಬರಹ."

ಒಂದು ನಿಮಿಷ ತಡೆದು ರಾಯರು, "ನನ್ನ ಮುಂದೆಯೂ ಹೇಳಬಾರದೇ?" ಎಂದು ಕೇಳಿದರು.

"ಇಲ್ಲ ನಾನಣ್ಣಾ, ಯಾರ ಮುಂದೆಯೂ ಹೇಳಬೇಡವೆಂದು ಅವರು ಅಂದಿರುವರು. ಅವರು ಜಲೀನ್ನ ಯಾರಲ್ಲಿಯೂ ಕಳಿಸುವದೂ ಇಲ್ಲ. ನಿಜವಾಗಿ ಹೇಳಬೇಕೆಂದರೆ, ಮೊನ್ನೆ ನನ್ನ ಇಲ್ಲಿ ಕಳಿಸುವದೂ ಅವರಿಗೆ ಅಷ್ಟು ಒಪ್ಪಿಗೆಯಿರಲಿಲ್ಲ" ಎಂದು ಪದ್ಮ ದೈನ್ಯದಿಂದ ಗೋಗರೆದು ಹೇಳಿದಳು.

"ಹೂಂ"ಎಂದು ರಾಯರು ನಿಟ್ಟುಸಿರುಬಿಟ್ಟರು.

ಅಷ್ಟರಲ್ಲಿ "ಏನೋ ಅದು?" ಎನ್ನುತ್ತ ಹಿತ್ತಲಲ್ಲಿದ್ದ ಶಾರದಾಬಾಯಿರು ಒಳಗೆ ಬಂದರು. "ಕೂಸಿಗೆ ಪೆಟ್ಟು ಬಹಳ ಹತ್ತಿತೇನು? ಅವ್ವಾ ತಾಯಿ, ಈ ಹುಡುಗ ಏನು ಖೋಡಿಯಾದನವ್ವ."

ಪದ್ಮ ಒಮ್ಮೆ ಅಣ್ಣನ ಕಡೆಗೆ, ಒಮ್ಮೆ ತಾಯಿಯ ಕಡೆಗೆ ಟಕಮಕ ನೋಡುತ್ತಿದ್ದಳು.

"ಏನಿಲ್ಲ, ಮಲಮು ಹಚ್ಚೇನಿ." ರಾಯರು ನುಡಿದರು.

"ಪೆಟ್ಟು ಬಹಳ ಹತ್ತಿತೇನು?" ಅಜ್ಜಿ ಕೇಳಿದರು.

ಆಗಲೇ ನಿಂತುಹೋಗಿದ್ದ ಜಲಜಾಕ್ಷಿಯ ಅಳುವಿಕೆ ಅಜ್ಜಿಯ ಈ ಮಾತಿನಿಂದ ಮತ್ತೆ ಆರಂಭವಾಯಿತು.

"ಏನೂ ಇಲ್ಲ. ನಿನ್ನ ಮೊಮ್ಮಗಳ ರಂಭಾಟವೇ ಬಹಳ." ಎಂದು ರಾಯರು ನಗುತ್ತ ನುಡಿದರು.

- ೨ -

ವೆಂಕಣ್ಣ ಅದೇ ಆಗ ಬಂದ ಬೀಗನ ಪತ್ರದ ವಿಷಯವನ್ನೇ ಮೆಲಕು ಹಾಕುತ್ತ ಕುಳಿತಿದ್ದ. ಆ ಪತ್ರವು ಅವನು ದಿನಾಲು ನಿರೀಕ್ಷಿಸುತ್ತಿದ್ದ ಸುದ್ದಿಯನ್ನೇ ತಂದಿತ್ತು. ಸಾಂಗಲಿಯಿಂದ ಅಂದು ನಾರಾಯಣರಾಯರು ತನ್ನ ಹೆಂಡತಿಯನ್ನೂ ಮಗಳನ್ನೂ ಕರೆದುಕೊಂಡು ಬರಲಿದ್ದರು. ವೆಂಕಣ್ಣ ಆ ಪತ್ರವನ್ನು ಓದಿ, ಅದರಲ್ಲಿಯ ಮುಖ್ಯ ಸಮಾಚಾರವನ್ನು ಗೌರತ್ತೆಯವರಿಗೆ ಆಗಲೇ ತಿಳಿಸಿಯೂ ಇದ್ದ. ಆದರೂ ಪತ್ರವನ್ನು ಮತ್ತೊಮ್ಮೆ ಓದಬೇಕೆನ್ನಿಸಿತು ಅವನಿಗೆ.

"... ಇಷ್ಟು ದಿನಗಳವರೆಗೆ ನಮ್ಮೆಲ್ಲರ ಜೊತೆಗೆ ಒಂದಾಗಿ ಬಹುಶಃ ಬೆಳಗಾವಿಯನ್ನು ಮರೆತೇ ಬಿಟ್ಟಿದ್ದ ಮುದ್ದು ಜಲಜಾ ಈಗೆರಡು ದಿನಗಳಿಂದ ನಿಮ್ಮನ್ನೇ ನೆನೆಯುತ್ತ ಇರುವಳು. ಯಾವಾಗಲೂ ಬೆಳಗಾವಿ, ನೀವು, ಗೌರತ್ತೆ, ಕುಸುಮಾ ಇವರನ್ನೇ ಕುರಿತು ಮಾತನಾಡುತ್ತಿರುವಳು. ಆದರೆ ಅವಳ ಹತ್ತು ಪಟ್ಟು ಆತುರ ಚಿ. ಸೌ. ಪದ್ಮಾಳಿಗೆ. ಅವಳಿಗೆ ಹಕ್ಕಿಗಳಂತೆ ಪಕ್ಕಗಳಿದ್ದರೆ ಈ ಕ್ಷಣಕ್ಕೇ ಅಲ್ಲಿಗೆ ಹಾರಿ ಬರುತ್ತಿದ್ದಳೋ ಏನೋ!..."

ವೆಂಕಣ್ಣನ ಮೈ ನವಿರೆದ್ದಿತು. ಪದ್ಮ ತವರಿಗೆ ಹೋಗಿ ಒಂದು ತಿಂಗಳಾಗುತ್ತ ಬಂದಿತ್ತು. ಅವಳು ಸಾಂಗಲಿಗೆ ಹೊರಡುವ ಮುನ್ನಾದಿನ ರಾತ್ರಿಯನ್ನು ಅವನು ಇನ್ನೂ ಮರೆತಿಲ್ಲ. ಪದ್ಮಳ ನೆನಹಿನೊಂದಿಗೆ ಆ ರಾತ್ರಿಯ ಚಿತ್ರವೂ ಅವನ ಬಗೆಗಣ್ಣೆದುರು ಮೂಡಿತು.

ಅಂದು, ತನ್ನ ಕೆಲಸಗಳನ್ನು ತೀರಿಸಿಕೊಂಡು ಪದ್ಮಾ ಕೈಯಲ್ಲಿ ಹಾಲಿನ ಗ್ಲಾಸನ್ನು ತೆಗೆದುಕೊಂಡು ಕೋಣೆಯೊಳಗೆ ಪ್ರವೇಶಿಸಿದಾಗ ಆಗಲೇ ಹತ್ತು ಹೊಡೆದುಹೋಗಿತ್ತು. "ಯಾಕೆ, ಇಷ್ಟು ತಡವೇಕೆ?" ಎಂದು ಅವನು ಹೆಂಡತಿಯನ್ನು ಪ್ರಶ್ನಿಸಿದ.

"ನಾಳೆ ಬೆಳಿಗ್ಗೆ ಗಡಿಬಿಡಿಯಾದೀತೆಂದು ಕೆಲವು ಸಾಮಾನು ಕಟ್ಟಿಟ್ಟು ಬರಬೇಕಾದರೆ..."

"ಅಂತೂ ನಾಳೆ ನೀನು ಹೊರಡುವವಳು ಅನ್ನು."

"ಅಂದರೆ?" ಪದ್ಮಾ ಪ್ರಶ್ನಾರ್ಥಕವಾಗಿ ಕೇಳಿದಳು. "ಮುಂಜಾನೆ ನೀವೇ ಹೇಳಲಿಲ್ಲವೇ ನಾನ್ನನ ಮುಂದೆ! ಹದಿನೈದು ದಿನ ಕರೆದುಕೊಂಡು ಹೋಗಿರೆಂದು. ಈಗ...?"

"ಹುಂ. ಹೇಳಿದೆ. ಆದರೆ...?"

"ಆದರೆ ಏನು?" ಹಾಲಿನ ಗ್ಲಾಸನ್ನು ಟೇಬಲ್ಲಿನ ಮೇಲಿಡುತ್ತ ಪದ್ಮಾ ನುಡಿದಳು. "ಅತ್ತೆಯವರಂತೂ ಮೊದಲೇ ಒಪ್ಪಿದ್ದಾರೆ, ಹವೆಯನ್ನಾದರೂ ಬದಲಿಸಿದಂತಾಯಿತೆಂದು."

"ಹೌದು. ಅದೆಲ್ಲ ನಿಜ. ಆದರೆ" ವೆಂಕಣ್ಣ ಹೆಂಡತಿಯ ಕೈ ಹಿಡಿದು ತನ್ನೆಡೆಗೆ ಸೆಳೆದುಕೊಂಡು "ನಾನಿಲ್ಲಿ ಒಬ್ಬನೇ ಹೇಗಿರಬೇಕು ಎಂಬುದೇ ಸಮಸ್ಯೆಯಾಗಿದೆ" ಎಂದ.

"ಅದಕ್ಕೇ ಅಲ್ಲವೇ ನಾನು ಹೇಳುವದು?"

"ಏನೆಂದು?"

"ನೀವೂ ನನ್ನ ಸಂಗಡ ಸಾಂಗಲಿಗೆ ನಡೆಯಿರಿ. ನಾನಣ್ಣನೂ ಆಗ್ರಹಮಾಡಿ ಕರೆದಿರುವನು. ಹೇಗೂ ಶಾಲೆಗಂತೂ ಸೂಟಿ ಇದೆ."

ಹೆಂಡತಿಯ ಅಷ್ಟೊಂದು ಸಹಜ ಉತ್ತರವನ್ನು ಕೇಳಿ ಅವನಿಗೆ ನಗೆ ಬಂದಿತ್ತು.

"ಆದರೆ ಕುಡಚಿಗೆ ಹೋಗಬೇಡವೆ? ಈಗ ಹೋಗಿ ಕೊಡ್ರದಿದ್ದರೆ ಮುಂದೆ ಏನೂ ವಸೂಲೇ ಆಗುವದಿಲ್ಲ. ನಾಳೆ ಮಳೆಗಾಲದಲ್ಲಿ ಅವರಿಗೇ ತಿನ್ನಲಿಕ್ಕೆ ಇರುವದಿಲ್ಲ. ಇನ್ನು ನಮಗೇನು ಕೊಡುತ್ತಾರೆ?"

ಕುಡಚಿ ಬೆಳಗಾವಿಯ ಹತ್ತಿರದ ಹಳ್ಳಿ. ಅಲ್ಲಿ ವೆಂಕಣ್ಣನ ಪಿತ್ರಾರ್ಜಿತ ಹೊಲಗಳಿವೆ. ಈಗ ಅಲ್ಲಿ ಹೋಗಲಿಕ್ಕೆ ಆಲಸ್ಯಮಾಡಿದ್ದರೆ ಮುಂದೆ ಲಾವಣಿ ವಸೂಲಾಗುವ ಸಂಭವ ಕಡಿಮೆ.

"ಹೌದು. ಅದೂ ನಿಜವೇ...." ಪದ್ಮಾಳ ಮೊಗದಲ್ಲಿ ಚಿಂತೆ ಮೂಡಿತು. ಒಂದು ನಿಮಿಷ ತಡೆದು ಕೇಳಿದಳು, "ಈಗಾದರೂ ಏನಾಯಿತು? ನಾನಣ್ಣನಿಗೆ ನಾನೇ ಹೇಳುತ್ತೇನೆ, ಈಗ ನಾನು ಬರುವದಿಲ್ಲ—ಎಂದು. ನಿಜವಾಗಿಯೂ ನಿಮ್ಮನ್ನು ಬಿಟ್ಟು ಹೋಗುವದು ನನಗೂ..."

ಪದ್ಮಳ ಕಣ್ಣಲ್ಲಿ ಎರಡು ಹನಿ ನೀರು ಮಿನುಗುತ್ತಿತ್ತು.

"ಹುಚ್ಚೀ, ನೀನು ನಿಜವಾಗಿಯೂ ಹುಚ್ಚಿ ನೋಡು. ನಾನು ಚೇಷ್ಟೆ ಮಾಡಿದೆ. ಅಷ್ಟೇ." ಎಂದು ಹೇಳಿ ಅವಳ ಹಣೆಯ ಮೇಲೆ ತೂಗುತ್ತಿದ್ದ ಮುಂಗುರುಳನ್ನು ನೇವರಿಸಿದನು.

ಅವನ ಮಮತೆಯ ಮಾತುಗಳಿಂದ ಅವಳ ದುಃಖ ಇನ್ನೂ ಹೆಚ್ಚಾಯಿತು. ಆತನೆದೆಯಲ್ಲಿ ತಲೆಯಿಟ್ಟು ಬಿಕ್ಕತೊಡಗಿದಳು. ಕಣ್ಣೀರಿನಿಂದ ಅವನ ಎದೆ ನೆನೆಯಿತು.

ನಾಲ್ಕೈದು ನಿಮಿಷಗಳ ತರುವಾಯ ಉಗುಳು ನುಂಗಿ ವೆಂಕಣ್ಣ, "ಇಲ್ಲಿ ನೋಡು..." ಎಂದು ಅವಳ ಕಣ್ಣುಗಳನ್ನು ತನ್ನ ಧೋತರದಿಂದ ಒರೆಸಿ, "ಇಲ್ಲಿ ನೋಡು, ನಾನು ಏನು ಹೇಳಬೇಕೆಂದಿದ್ದೆ... ಅದು ಮರೆತೇ ಹೋಯಿತು." ಎಂದ.

ಪದ್ಮ ಎದ್ದು ಕುಳಿತಳು. ವೆಂಕಣ್ಣ ಹೆಂಡತಿಯನ್ನು ತುಂಬ ಆಶಾದೃಷ್ಟಿಯಿಂದ ನೋಡಿದ. ಮೊದಲೇ ಸುಂದರವಾದ ಮುಖ. ಬಸುರಿ ಬೇರೆ. ಅವಳ ಗೌರ ವರ್ಣದ ಮುಖಕ್ಕೆ ಅತ್ತು ಕೆಂಪೇರಿದ್ದು ಇನ್ನೂ ಚೆಲುವನ್ನು ತಂದಿತ್ತು. ವೆಂಕಣ್ಣ ಭಾವಾವೇಶದಿಂದ ಅವಳನ್ನು ತನ್ನ ತೋಳಸರೆಯಲ್ಲಿ ಬಿಗಿದು ಮುತ್ತಿಟ್ಟಿದ್ದ...

ಭಾವಸಮಾಧಿಯಿಂದ ಎಚ್ಚೆತ್ತ ವೆಂಕಣ್ಣ "ಪದ್ಮಾ" ಎಂದ.

ಅವನ ಬಾಹುಗಳಿಂದ ಬಿಡುಗಡೆ ಹೊಂದಿ "ಏನು?" ಎಂಬ ದೃಷ್ಟಿಯಿಂದ ಪದ್ಮ ಗಂಡನತ್ತ ನೋಡಿದಳು.

"ನಾಲ್ಕು ದಿನಕ್ಕೊಂದಾದರೂ ಪತ್ರ ತಪ್ಪದೇ ಬರೆಯಬೇಕು. ನಿನ್ನ ಪ್ರಕೃತಿಯದೇ ನನಗೆ ಚಿಂತೆ" ಎಂದ.

"ನಾಲ್ಕು ದಿನಕ್ಕೇಕೆ, ಪ್ರತಿದಿನವೂ ಬರೆಯುತ್ತೇನೆ ಆದರೆ..." ಅರ್ಧಕ್ಕೆ ತಡೆದಳು.

"ಆದರೆ ಏನು ಮತ್ತೆ?"

"ನೀವೇನು ಮಾಸ್ತರರು. ಪ್ರತಿಯೊಂದು ವಾಕ್ಯದಲ್ಲೂ ತಪ್ಪು ತೆಗೆಯುವಿರಿ" ಗೋಣು ಕೊಂಕಿಸಿ ನುಡಿದಳು.

"ಇಲ್ಲ ಮಹಾರಾಯಳೇ. ಶಾಲೆಯಲ್ಲಿ ಮಾಸ್ತರು. ಆದರೆ ನಿನ್ನ ಮುಂದೇನು?" ತುಂಟನಗೆಯೊಂದಿಗೆ ವೆಂಕಣ್ಣ ನುಡಿದಿದ್ದ.

ಕೊನೆಗೆ, ಮೂರು–ನಾಲ್ಕು ದಿನಕ್ಕೊಂದರಂತೆ ತಪ್ಪದೆ ಪತ್ರ ಬರೆಯಬೇಕು, ಔಷಧ ಸರಿಯಾಗಿ ತೆಗೆದುಕೊಳ್ಳಬೇಕು, ಪ್ರಕೃತಿ ಜಪ್ಪಿಸಿಕೊಂಡಿರಬೇಕು, ಜಲ



ಜಾಕ್ಷಿಯ ಬಗ್ಗೆ ಎಚ್ಚರದಿಂದಿರಬೇಕು– ಇತ್ಯಾದಿ ಇತ್ಯಾದಿಯಾಗಿ ವೆಂಕಣ್ಣ ಹೆಂಡತಿಗೆ ಎರಡೆರಡು ಸಲ ಹೇಳಿ, ಅವಳಿಂದ "ಹೂಂ" ಎನ್ನಿಸಿಕೊಂಡಿದ್ದ. ಅದಕ್ಕೆ ಪ್ರತಿಯಾಗಿ ಅವಳೂ ಅವನಿಂದ ಅನೇಕ ಮಾತು ಗಳನ್ನು ಕೇಳಿಕೊಂಡಿದ್ದಳು. ಗಂಡ ತನಗೆ ದೀರ್ಘವಾದ ಮತ್ತು ರಸಭರಿತವಾದ ಪತ್ರಗಳನ್ನು ಬರೆಯಬೇಕೆಂದು ಅವಳು ಕೇಳಿಕೊಳ್ಳಲೂ ಮರೆಯಲಿಲ್ಲ. ಅದಕ್ಕೆ

"ದೀರ್ಘವಾದ ಪತ್ರಗಳನ್ನೇನೋ ಬರೆಯ ಬಹುದು; ಆದರೆ ರಸಭರಿತವೆಂದರೆ ಹೇಗದು?.." ಎಂದು ವೆಂಕಣ್ಣನ ತುಂಟ ಪ್ರಶ್ನೆ.

"ನೀವು ಏನೇ ಬರೆದರೂ ಅದು ನನಗೆ ರಸ ಭರಿತವೇ ಆಗಿರುತ್ತದೆ."

"ಹಾಗಾದರೆ 'ರಸಭರಿತವಿರಬೇಕು' ಅನ್ನುವ ಮಾತಿಗೆ ಏನು ವಿಶೇಷ ಅರ್ಥವಿಲ್ಲ ಎಂದಂತಾಯಿ ತಲ್ಲವೇ?"

"ಸಾಕು ಬಿಡಿ. ಬರೇ ತಪ್ಪು ಹುಡುಕುವದೇ ಏನು?"

"ಹೂಂ ಮತ್ತೆ ನಾನು ಮಾಸ್ತರನಲ್ಲವೇ? ಇದೀಗ ನೀನೇ ಹೇಳಿದೆಯಲ್ಲ?" ಎಂದಿದ್ದ ವೆಂಕಣ್ಣ ಅದಕ್ಕೆ.

"ಹೂಂ. ನಿಮಗಂತೂ ಶಾಲೆಗೆ ಮನೆಗೂ ಅಂತ ರವೇ ಇಲ್ಲ." ಎಂದು ಪದ್ಮ ಹುಸಿ ಮುನಿಸು ನಟಿಸುತ್ತ ಟೇಬಲ್ಲಿನ ಮೇಲಿನ ಹಾಲಿನ ಗ್ಲಾಸನ್ನು ತಂದು ಗಂಡನಿಗೆ ಕೊಟ್ಟಿದ್ದಳು.

× × ×

ಪದ್ಮಳ ಮಾತಿನಲ್ಲಿ ಅತಿಶಯೋಕ್ತಿ ಇರಲಿಲ್ಲ. ವೆಂಕಣ್ಣನ ದಿನದ ಬಹಳ ವೇಳೆ ಶಾಲೆಯಲ್ಲಿಯೇ ಕಳೆಯು ತ್ತಿತ್ತು. 'ಆದರ್ಶ ಹೈಸ್ಕೂಲಿ'ನ ಶಿಕ್ಷಕ ವರ್ಗದ ಗಣ್ಯರಲ್ಲಿ ವೆಂಕಣ್ಣ ಒಬ್ಬ. ಮೊದಲು ಅದೇ ಶಾಲೆಯ ವಿದ್ಯಾರ್ಥಿ ಯಾಗಿದ್ದ ಆತನಿಗೆ ಅದು ನಮ್ಮ ಶಾಲೆ ಎಂಬ ಅಭಿಮಾನ ಬೇರೆ. ಶಿಕ್ಷಕರ ಪುಸ್ತಕಾಲಯ, ಕೈಬರಹದ ಪತ್ರಿಕೆ ಮೊದಲಾದವುಗಳ ಕೆಲಸದ ಹೊಣೆಯೂ ಆತನ ಮೇಲೆಯೇ ಇರುತ್ತಿತ್ತು. ಹೀಗಾಗಿ ಶಾಲೆ ಅವನ ಜೀವನದ ಬಹುಭಾಗವನ್ನು ವ್ಯಾಪಿಸಿತ್ತು.

ವೆಂಕಣ್ಣನ ಮನೆತನದ ಸ್ಥಿತಿ ಚೆನ್ನಾಗಿಯೇ ಇದ್ದಿತು. ಆತನ ತಂದೆ ರಾಮರಾಯರು ಮಗನು ಕಲಿತು ದೊಡ್ಡವ ನಾಗುವವರೆಗೆ ಬದುಕಿರಲಿಲ್ಲವಾದರೂ ಮಗನ ವಿದ್ಯಾಭ್ಯಾಸಕ್ಕೆ ಯಾವ ತೊಂದರೆಯೂ ಆಗದಂತೆ, ತಮಗೆ ಬಂದ ಪಿತ್ರಾರ್ಜಿತ ಆಸ್ತಿಯಲ್ಲಿ ತಾವೂ ಕೂಡ ತಮ್ಮಿಂದ ಸಾಧ್ಯವಿದ್ದಷ್ಟು ಹೆಚ್ಚಿಸಿ ಹೋಗಿದ್ದರು. ವೆಂಕಣ್ಣ ತಾಯ ಸುಖವನ್ನಂತೂ ಕಾಣಲೇ ಇಲ್ಲ. ಕೂಸು ಜನಿಸಿದ ಎರಡು ತಾಸಿನಲ್ಲಿಯೇ ಸೀತಾಬಾಯಿ ತೀರಿಹೋಗಿದ್ದರು. ರಾಮರಾಯರು ಮಗುವಿಗೆ ತಂದೆಯೂ ಆಹುದು. ತಾಯಿಯೂ ಆಹುದು. ಅಣ್ಣನ ಕಷ್ಟವನ್ನು ನೋಡಲಾರದೆ ರಾಯರ ತಂಗಿ ಗೌರಕ್ಕ ಅಣ್ಣನ ಮನೆಗೆ ಬಂದು ಕೆಲಕಾಲ ನಿಂತು ಕೂಸಿನ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದಳು ಮುಂದೆ ಒಂದು ವರ್ಷದಲ್ಲಿ ಗೌರಿಯ ಗಂಡ ಪ್ಲೇಗಿನಿಂದ ತೀರಿ ಕೊಂಡರು. ಆ ಮೇಲಂತೂ ರಾಮರಾಯರು ವಿಧವೆ ಯಾದ ತಂಗಿಯನ್ನು ಕರೆತಂದು ತಮ್ಮ ಮನೆಯಲ್ಲಿಯೇ ಇರಿಸಿಕೊಂಡರು. ತನ್ನವರು ಎಂದು ಹೇಳಿಕೊಳ್ಳುವ ಯಾರೂ ಇಲ್ಲದ ಆ ಮನೆಗೆ ಗೌರಿ ಹೋಗಲೂ ಇಲ್ಲ. ಗೌರಿಗೆ ಮಕ್ಕಳೇ ಆಗಿರಲಿಲ್ಲ. ಅವಳ ಮಾತೃಪ್ರೇಮ ವೆಲ್ಲ ವೆಂಕಣ್ಣನಿಗಾಗಿಯೇ ಮೀಸಲಾಯಿತು.

ವೆಂಕಣ್ಣ ತನ್ನ ಜೀವನದಲ್ಲಿಯೇ ಗೌರತ್ತೆಯ ಮಾತನ್ನು ಮೀರಲಿಲ್ಲ. ವೆಂಕಣ್ಣನ ಬಿ.ಟಿ. ಪರೀಕ್ಷೆ ಮುಗಿದ ಮೇಲೆ ಗೌರತ್ತೆ, "ವೆಂಕಾ, ಇನ್ನು ನಿನ್ನ ತಲೆಯ ಮೇಲೆ ಅಕ್ಕಿಕಾಳು ಹಾಕಿದೆನೆಂದರೆ, ರಾಮಣ್ಣ ನನ್ನ ಮೇಲೆ ಹಾಕಿದ ಭಾರ ಇಳಿದಂತಾಯಿತು ನೋಡಪ್ಪ. ನೀನು ವಿದ್ಯಾವಂತನಾದದ್ದು ನೋಡಲಿಕ್ಕೆ ರಾಮಣ್ಣ ಉಳಿಯಲಿಲ್ಲ...." ಎಂದು ಕಣ್ಣು ತುಂಬ ನೀರು ತಂದಿದ್ದರು. ಅದು ಕಾರಣವೇ ವೆಂಕಣ್ಣ ಇನ್ನೆರಡು ವರ್ಷ ಮದುವೆ ಮುಂದೆ ಹಾಕಬೇಕೆಂದು ವಿಚಾರಿಸಿ ದ್ದರೂ ಗೌರತ್ತೆಯ ಇಚ್ಛೆಯ ಪ್ರಕಾರ ಅದೇ ವರ್ಷ ಮದುವೆಗೆ ಸಿದ್ಧನಾದ.

ಮದುವೆಯಾಗಿ ಪದ್ಮ ಮನೆಗೆ ಬಂದ ಮೇಲೆ ತಾನು ಈ ಮದುವೆಗೆ ಒಪ್ಪದೇ ಇದ್ದರೆ ತಪ್ಪಾಗು ತ್ತಿತ್ತು ಎಂದು ವೆಂಕಣ್ಣ ಅಂದುಕೊಂಡ. ಪದ್ಮ ತವರು ಮನೆಯಿಂದ ಬಹಳಷ್ಟು ಹಣ ತರಲಿಲ್ಲ ನಿಜ. ಆದರೆ ವೆಂಕಣ್ಣ ಅವಳ ರೂಪಕ್ಕೆ ಮಾರುಹೋದಂತೆ, ಅವಳಲ್ಲಿ ಮನೆಮಾಡಿದ ನಯ–ವಿನಯ, ಸೂಕ್ಷ್ಮ ಬುದ್ಧಿ, ತಿಳುವಳಿಕೆಯ ನಡತೆಗಳನ್ನು ಕಂಡು ಆತ ಮುಗ್ಧನಾಗಿ ಹೋಗಿದ್ದ.

ನೆರೆಮನೆ ಕುಸುಮೆಗಂತೂ ಪದ್ದಕ್ಕನಲ್ಲದೆ ಬೇರೆ ಯವರು ಹೆರಳು ಹಾಕಿದರೆ ಎಂದಿಗೂ ಆಗುತ್ತಿರ ಲಿಲ್ಲ. ಕುಸುಮೆ ಒಂದೂವರೆ ವರ್ಷದ ಹುಡುಗಿ. ಅವಳನ್ನು ಎಷ್ಟು ಮುದ್ದಿಸಿದರೂ ಪದ್ಮಳಿಗೆ ಸಾಕಿಲ್ಲ. ಅವಳಾದರೂ "ನನಗೆ ಅದು ಕೊಡು, ಇದು ಬೇಕು" ಎನ್ನುತ್ತ ಯಾವಾಗಲೂ ಪದ್ದಕ್ಕತ್ತೆಯ ಬೆನ್ನ ಹಿಂದೆ ಯೇ ಅಲೆಯುತ್ತಿದ್ದಳು. ಅವಳು ತನ್ನ ಅತ್ತೆಯ ತಾಟಿನಲ್ಲಿಯೇ ಅನೇಕ ಸಲ ಉಂಡುದೂ ಉಂಟು.

ಕುಸುಮೆಯ ತಾಯಿ ರಾಧಕ್ಕ ಎಷ್ಟೋ ಸಲ ಅನ್ನುತ್ತಿದ್ದರು, "ಪದ್ದಕ್ಕ, ನೀವು ಮಕ್ಕಳನ್ನು ಎಷ್ಟು ಹಚ್ಚಿಕೊಳ್ಳುತ್ತೀರಿ! ನಮ್ಮ ಕುಸುಮಾ ಅಂತೂ ನಿಮ್ಮ ವಳೇ ಆಗಿದ್ದಾಳೆ."

"ಅದೆಂಥ ಮಾತು ರಾಧಕ್ಕ? ನಾನೇನು ಮಾಡು ತ್ತೇನೆ ಅವಳಿಗೆ, ಎರಡು ಸವಿಮಾತು ತಾನೇ?"

"ಅಂದರೆ, ಅದೇ ಹೆಚ್ಚಿನದೂ ಅಂದೆ."

"ಆದರೆ ಅದಕ್ಕೆ ಬದಲಾಗಿ ನನಗೆ ಅವಳು ಕೊಡುವ ಪ್ರೀತಿ– ಆನಂದಗಳಿಗೆ ಏನಾದರೂ ಬೆಲೆ ಇದೆಯೆ?" ಎಂದು ಪದ್ದಕ್ಕ ಕೇಳಿದರೆ,

"ದೇವರು ಬೇಗನೆ ನಿಮಗೊಬ್ಬ ಮಗನನ್ನು ಕೊಡಬಾರದೇ" ಎನ್ನುವರು ರಾಧಕ್ಕ.

ಅದನ್ನು ಕೇಳಿ ಪದ್ಮಳ ಮುಖ ಕೆಂಪೇರುತ್ತಿತ್ತು. "ಸಾಕು ಬಿಡಿರಿ..." ಎಂದೆನ್ನುತ್ತಾ ಒಳಗೆ ನಡೆಯು ವಳು.

ಹೀಗೆ ಅನ್ನಿಸಿಕೊಳ್ಳುವ ಪ್ರಸಂಗ ಅವಳಿಗೆ ಅನೇಕ ಸಲ ಬಂದಿತು. ಯಾಕೆಂದರೆ ಜಲಜಾಕ್ಷಿ ಹುಟ್ಟಿದುದು ಪದ್ಮಳ ಮದುವೆಯಾಗಿ ನಾಲ್ಕನೆಯ ವರ್ಷದಲ್ಲಿ. ಆಗ ಅವಳ ಆನಂದಕ್ಕೆ ಪಾರವೇ ಉಳಿಯಲಿಲ್ಲ. ತನ್ನ ಅತ್ತೆ ಮತ್ತು ಗಂಡ ಬಯಸುತ್ತಿದ್ದ ಗಂಡು ಮಗುವಾ ಗಿದ್ದರೆ ಅವಳಿಗೆ ಇನ್ನೂ ಹೆಚ್ಚಿನ ಆನಂದವಾಗುತ್ತಿತ್ತು. ಆದರೂ ಗಂಡಾದರೇನು, ಹೆಣ್ಣಾದರೇನು, ಈಗ ಮುಖ್ಯ ಬೇಕಾಗಿದ್ದುದು ಅವಳಿಗೊಂದು ಮಗು!

ಆದರೆ ಈ ಸಲ ಮಾತ್ರ ಗಂಡೇ ಆಗಬೇಕೆಂದು ಅವಳಿಗೂ ಅನಿಸುತ್ತಿತ್ತು. ವೆಂಕಣ್ಣ ಹಾಗೆ ಅಂದು ತೋರಿಸಿರಲಿಲ್ಲ. ಅಷ್ಟೇ. ಇನ್ನು ಗೌರತ್ತೆ? ಅವರಂತೂ ಈ ಸಲ ಮೊಮ್ಮಗನೇ ಎಂದು ದೃಢವಾಗಿ ನಂಬಿದ್ದರು. ಅದಕ್ಕಾಗಿ ಹನುಮಪ್ಪನಿಗೆ ಬೆಳ್ಳಿಯ ಕಿರೀಟ ಮಾಡಿ ಸುವ ಹರಕೆಯನ್ನೂ ಹೊತ್ತಿದ್ದರು.!

– ೩ –

ಪದ್ದಕ್ಕ ಸಾಂಗಲಿಯಿಂದ ಬೆಳಗಾವಿಗೆ ಬಂದಾಗ ಮಳೆ ಆರಂಭವಾಗಿತ್ತು. ಬೆಳಗಾವಿಯ ಮಳೆ ಗಟ್ಟಿ ಮುಟ್ಟಾದ ಪ್ರಕೃತಿಯವರಿಗೇ ಒಗ್ಗುವುದಿಲ್ಲ. ಮಳೆಯ ನೆಳಕುಗಳು ಒಂದರ ತರುವಾಯ ಒಂದರಂತೆ ಹೊಡೆ ಯುತ್ತಲೇ ಇರುತ್ತವೆ. ಈ ನಾಲ್ಕು ತಿಂಗಳ ಅವಧಿ ಯಲ್ಲಿ ಚಳಿಜ್ವರ, ವಿಷಮ ಜ್ವರ, ಪ್ಲೇಗು ಹೀಗೆ ಎಲ್ಲ ರೋಗಗಳೂ ಊರಲ್ಲಿ ಹಬ್ಬಿಕೊಂಡಿರುತ್ತವೆ. ಹವೆ ಯಂತೆ ಊರ ನೀರೂ ಕೆಟ್ಟು ಹೋಗಿರುತ್ತದೆ. ಯಾಕೆಂದರೆ ಬೀದಿಗಳಲ್ಲಿಯ ಕೊಳಚೆ ನೀರೇ ಬಾವಿ ಗಳಲ್ಲಿ ತುಂಬಿರುವಾಗ ಅದನ್ನು ಕುಡಿದು ಆರೋಗ್ಯ ವನ್ನು ಕಾಯ್ದುಕೊಳ್ಳುವುದು ಸುಲಭವಲ್ಲ.

ಬೆಳಗಾವಿಗೆ ಬಂದ ಹದಿನೈದು ದಿನಗಳಲ್ಲಿ ಪದ್ದಕ್ಕ ಹಾಸಿಗೆ ಹಿಡಿದಳು. ದಿನಾಲು ಸಣ್ಣಜ್ವರ ಬರು ತ್ತಿತ್ತು. ಎಂಟು ದಿನಗಳಲ್ಲಿ ಅಸಾಧ್ಯವಾದ ಅಶಕ್ತತೆ ಬಂದು ಬಿಟ್ಟಿತು. ವೆಂಕಣ್ಣ ಗೌರತ್ತೆ ಇಬ್ಬರೂ ಗಾಬರಿಯಾದರು. ಡಾಕ್ಟರರ ಔಷಧ ಇಂಜಕ್ಷನ್‌ಗಳು ನಡೆದೇ ಇದ್ದುವು. ಅದರಿಂದ ಜ್ವರ ಬರುವುದು ಸ್ವಲ್ಪ ಕಡಿಮೆಯಾದರೂ ಅವಳಲ್ಲಿ ಶಕ್ತಿ–ಉತ್ಸಾಹಗಳು ಬೇಗನೇ ಬರಲಿಲ್ಲ.

ಪದ್ದಕ್ಕ ಶಾರೀರಿಕ ಬೇನೆಯ ಜೊತೆಗೆ ಮಾನ ಸಿಕ ಚಿಂತೆಯಿಂದಲೂ ನವೆಯುತ್ತಿದ್ದಳು. ಅವಳಲ್ಲಿ ಮನೆಮಾಡಿಕೊಂಡಿದ್ದ ಕೊರಗಿನ ಮುಖ್ಯ ಕಾರಣ ಜಲಜಾಕ್ಷಿಯ ಲುಕೋಡರ್ಮಾ(ತೊನ್ನು). "ಅಣ್ಣಾ ನಿಗೆ ತಿಳಿದಂತೆ ಮತ್ತೆ ಯಾರಿಗಾದರೂ ತಿಳಿದರೆ?" ಹಾಗೆ ತಿಳಿಯದೆ ಇರಲಿಕ್ಕೆ ಶಕ್ಯವೂ ಇಲ್ಲ. ಜನರಲ್ಲಿ ರೋಗದ ಬಗ್ಗೆ ಸುದ್ದಿ ಹಬ್ಬಿಬಿಟ್ಟರೆ, ಮುಂದೆ ಅವಳ ಗತಿ? ಡಾಕ್ಟರರೇನೋ ಹೇಳುತ್ತಾರಂತೆ, ಅದೇನೂ ಅಂಥ ಭಯಂಕರ ರೋಗವಲ್ಲವೆಂದು. ಅದನ್ನು ಡಾಕ್ಟರರೇ ಹೇಳಿರುವರೋ ಅಥವಾ 'ಇವರೇ' ನನ್ನ ಸಮಾಧಾನಕ್ಕಾಗಿ ಹೇಳುವರೋ? ಹೋದ ಜನ್ಮ ದಲ್ಲಿ ನಾನೇನು ಅಂಥ ಪಾಪ ಮಾಡಿದೆನೋ!..." ಎಂದೆಲ್ಲ ಯೋಚಿಸುತ್ತಿರುವಾಗ, ಹಾಗೆ ತೊನ್ನು ಹತ್ತಿ ದವರ ಅನೇಕ ಮುಖಗಳು ಅವಳ ಕಣ್ಣ ಮುಂದೆ ಹಾಯ್ದು ಹೋಗುವವು. ಸಮಾಜದಲ್ಲಿ ಅವರಿಗಿರುವ ಅಸಡ್ಡೆಯನ್ನು ನೆನೆದಾಗ ಅವಳು ಗಡಗಡ ನಡುಗು ವಳು... ಆ ದೇಶಪಾಂಡೇರ ವಿಮಲೆಯ ಲಗ್ನವೇ ಆಗಲಿಲ್ಲವಲ್ಲ ಈ ದರಿದ್ರ ತೊನ್ನಿನಿಂದ! ಆ ಇವರು, ಅವರ್ಯಾರು, ಹೂಂ ಆ ಮುಗಳಖೋಡದವರು. ಅವರ ಮನೆಯಲ್ಲಿ ಮಡಿಮೈಲಿಗೆ ಬಹಳ. ಆ ರಮಾಬಾಯಿ ಯವರ ತಂಗಿಯ ಮಗನಿಗೆ ತೊನ್ನು ಇದ್ದಿಲ್ಲವೇ? ಆತ ಇಲ್ಲಿ ಬಂದರೆ ಇವರು ಅವನನ್ನು ಮುಟ್ಟಿಸಿ ಕೊಳ್ಳುತ್ತಿರಲಿಲ್ಲ ಕೂಡ..." ಹೀಗೆಯೇ ಅವಳ ವಿಚಾರಮಾಲೆ ಹೆಣೆದುಕೊಂಡು ಅವಳ ಕುತ್ತಿಗೆಗೆ ಗಂಟು ಬೀಳುತ್ತಿತ್ತು. ಉಸಿರುಗಟ್ಟಿದಂತಾಗಿ ಒಮ್ಮೆಲೇ ಏನೋ ಒಂದು ತೆರನಾದ ಹೇಳಲಿಕ್ಕೆ ಬಾರದ ಕಳವಳ ವಾಗುತ್ತಿತ್ತು.

ಮಗಳ ರೋಗದ ಸಲುವಾಗಿ ಪದ್ದಕ್ಕ ದೇವರಿಗೆ ಹರಕೆಯನ್ನು ಹೊತ್ತಿದ್ದಳು. ಆದರೆ ಯಾವ ದೇವರೂ

ಇನ್ನೂ ಕಣ್ಣು ತೆರೆದಿರಲಿಲ್ಲ. ದೇವರ ಸೇವೆ-ವ್ರತಗಳನ್ನು ಕೈಕೊಂಡಿದ್ದಳು. ಅದರಿಂದ ಆದ ಪರಿಣಾಮವೆಂದರೆ ಉಪವಾಸ ಮಾಡಿ ಮಾಡಿ, ಮೊದಲೇ ಅಶಕ್ತವಾಗಿದ್ದ ಅವಳ ಪ್ರಕೃತಿ ಇನ್ನಷ್ಟು ಕ್ಷೀಣವಾಗಿತ್ತು. ಹೀಗಾಗಿ ಈ ಆರೆಂಟು ತಿಂಗಳಲ್ಲಿ ಪದ್ದಕ್ಕ ಬಹಳೇ ಹಣ್ಣಾಗಿದ್ದಳು. ವೆಂಕಣ್ಣ ಅವಳಿಗೆ ಆಗಾಗ "ನೀನು ಈ ವಿಷಯ ಮನಸ್ಸಿಗೆ ಹಚ್ಚಿಕೊಂಡು ಕೊರಗಬೇಡ"

ವೆಂಕಣ್ಣನ ಮುಖಭಾವವನ್ನು ಗಮನಿಸಿದ ಲೇಡಿ ಡಾಕ್ಟರರು, Don t Worry ನಾನೊಂದು ಚೀಟಿಯನ್ನು ಕೊಡುತ್ತೇನೆ. ಅಲ್ಲಿ ಎಲ್ಲ ಸರಿಯಾಗಬಹುದು" ಎಂದರು.

ಹಾಗೆ ಮಾಡದೆ ಬೇರೆ ಉಪಾಯವೇ ಇರಲಿಲ್ಲ. ನೋವಿನಿಂದ ಪದ್ದಕ್ಕ ಬಹಳೇ ನಿರ್ವಿಣ್ಣಳಾಗಿದ್ದಳು. ಕೂಡಲೇ ಥಮಣಿಯಲ್ಲಿ (ಸಾರೋಟು) ಅವಳನ್ನು

ಹದಿನೈದು ನಿಮಿಷಕ್ಕೊಮ್ಮೆ ಗೌರತ್ತೆ ಆ ಕಡೆಯಿಂದ ಈ ಕಡೆಗೆ ಅಡ್ಡಾಡುತ್ತಿದ್ದರು. ಪದ್ದಕ್ಕನನ್ನು ಮಲಗಿಸಿದ ಕೋಣೆಯ ಹತ್ತಿರ ಸುಳಿದಾಡಲಾದರೂ ಅವರಿಗೆ ಸ್ವಾತಂತ್ರ್ಯವಿತ್ತು. ಆದರೆ ಗಂಡನಾದ ವೆಂಕಣ್ಣನಿಗೆ ಆ ಕೋಣೆಯ (Labour Room) ಸಮೀಪ ಹೋಗಲಿಕ್ಕೂ ಶಕ್ಯವಿರಲಿಲ್ಲ.

ಸುಮಾರು ಹನ್ನೊಂದು ಗಂಟೆಗೆ ಸಿವ್ಹಿಲ್ ಸರ್ಜನರು ಸ್ವತಃ ಪರೀಕ್ಷೆ ಮಾಡಿ ಆಪರೇಶನ್ ಮಾಡಬೇಕಾಗುವದೆಂದು ಅಭಿಪ್ರಾಯಪಟ್ಟರು. ನರ್ಸೊಬ್ಬಳು ಅದನ್ನು ವೆಂಕಣ್ಣನಿಗೆ ತಿಳಿಸಿದಾಗ ಅವನ ಮುಖ ವಿವರ್ಣವಾಯಿತು. "ಏನಾದರೂ ಮಾಡಿ ಅವಳ ಜೀವ ಉಳಿಸಿರಿ" ಎಂದು ನಡುಗುವ ಧ್ವನಿಯಲ್ಲಿ ನುಡಿದ. ಆದರೆ "Willing for Operation" ಎಂದು ಬರೆದು ಕೊಡುವಾಗ



ಎಂದು ಹೇಳುತ್ತಲೇ ಇದ್ದಾನೆ. ಆದರೆ ಅದನ್ನು ಹೇಗೆ ಮರೆಯುವುದು?

ಈಗಂತೂ ಅವಳಲ್ಲಿ ಒಮ್ಮೊಮ್ಮೆ ಇನ್ನೊಂದು ಚಿಂತೆಯೂ ಸೇರಿಕೊಳ್ಳುವದು. "ಈ ಸಲವೂ ತನಗೆ ಹೆಣ್ಣೇ ಹುಟ್ಟಿದರೆ?... ಹಾಗಾಗಲಿಕ್ಕಿಲ್ಲ. ಯಾರಿಗೆ ಗೊತ್ತು?"

ಅಂತೂ ಅವಳ ಸಮಸ್ಯೆಗಳೆಲ್ಲ ಬಗೆಹರಿಯದ ಸಮಸ್ಯೆಗಳು; ಯಾರ ಮುಂದೆಯೂ ಹೇಳಲಾರದ ಸಮಸ್ಯೆಗಳು. ಅವಳು ಎಷ್ಟು ವಿಚಾರಿಸಿದರೂ ಏನೂ ಉತ್ತರ ದೊರೆಯದೆ ಸಮಸ್ಯೆ ಸಮಸ್ಯೆಯಾಗಿಯೇ ಉಳಿಯುತ್ತಿತ್ತು.

ಎರಡುತಿಂಗಳು ಗತಿಸಿದುವು.

ಒಂದುರಾತ್ರಿ ಇದ್ದಕ್ಕಿದ್ದಂತೆ ಪದ್ದಕ್ಕನಿಗೆ ಹೊಟ್ಟೆ ನೋಯಲಿಕ್ಕೆ ಆರಂಭವಾಯಿತು. ಗೌರತ್ತೆಯ ಲೆಖ್ಖದ ಪ್ರಕಾರ ದಿನಗಳು ಇನ್ನೂ ಪೂರ್ಣ ತುಂಬಿರಲಿಲ್ಲ. ಚಳಿಯಿಂದ ಇರಬಹುದು ಎಂದುಕೊಂಡು ಅವರು ಮನೆಯಲ್ಲಿಯೇ ತಮಗೆ ತಿಳಿದ ಉಪಚಾರ ಮಾಡಿದರು. ಆದರೆ ಏನೂ ಪ್ರಯೋಜನವಾಗಲಿಲ್ಲ. ಬೆಳಗಿನ ಆರು ಗಂಟೆಗೇ ಹೋಗಿ ವೆಂಕಣ್ಣ ಲೇಡಿ ಡಾಕ್ಟರ ಮಿಸ್ ಚಿಟ್ನಿಸ್ ಅವರನ್ನು ಕರೆದುಕೊಂಡು ಬಂದ. ಅವರು ಪದ್ದಕ್ಕನನ್ನು ಪರೀಕ್ಷೆ ಮಾಡಿ, "ಈ ಕೇಸು ಮನೆಯಲ್ಲಿ ಸಾಧ್ಯವಿಲ್ಲ. ಸಿವ್ಹಿಲ್ ಹಾಸ್ಪಿಟಲಿಗೇ ಕರೆದುಕೊಂಡು ಹೋಗಿರಿ." ಎಂದರು. ಅದನ್ನು ಕೇಳಿ ಗೌರತ್ತೆಯಲ್ಲದೆ ವೆಂಕಣ್ಣನೂ ಗಾಬರಿಯಾದ.

ಹಾಸ್ಪಿಟಲಿಗೆ ಸಾಗಿಸಿದರು. ಅಲ್ಲಿಯ ಡ್ಯೂಟಿ ಡಾಕ್ಟರರು ರೋಗಿಯನ್ನು ಪರೀಕ್ಷಿಸಿ "ಇಷ್ಟೇಕೆ ತಡ ಮಾಡಿದಿರಿ?" ಎಂದರು. ಅವರ ಸಿಡುಕುಮೋರೆಯನ್ನು ಕಂಡು ವೆಂಕಣ್ಣ ಇನ್ನೂ ಎದೆಗುಂದಿದ.

ಮಧ್ಯಾಹ್ನದವರೆಗೂ ವೆಂಕಣ್ಣ ಮತ್ತು ಗೌರತ್ತೆ ಆಸ್ಪತ್ರೆಯ ಎದುರಿಗಿನ ವಿಶಾಲವಾದ ಆಲದ ಮರದ ಬುಡದಲ್ಲಿ ಕುಳಿತು ಹೇಗೋ ವೇಳೆಯನ್ನು ಕಳೆದರು. ಒಂದೊಂದು ನಿಮಿಷ ಒಂದೊಂದು ಯುಗವಾಗಿ ಕಂಡಿತವರಿಗೆ. ದವಾಖಾನೆಯಿಂದ ಯಾರದೇ ನರಳುವ ಧ್ವನಿಯನ್ನು ಕೇಳಿದರೂ ವೆಂಕಣ್ಣರಾಯನ ಎದೆ ಧಸಕ್ಕೆನ್ನುತ್ತಿತ್ತು. ಹತ್ತು ನಿಮಿಷಕ್ಕೊಮ್ಮೆ ಪದ್ಮಳನ್ನು ಮಲಗಿಸಿದ ಕೋಣೆಯ ಕಡೆಗೆ ಹಾಯ್ದು ಬರುತ್ತಿದ್ದ. ಅಕಸ್ಮಾತ್ ಅವಳ ಅಯ್ಯೋ ಎನ್ನುವ ಸ್ವರ ಕೇಳಿದರೆ, ಹೆದರಿಕೆಯಿಂದ ಇವನ ಹೃದಯ ನಡುಗುತ್ತಿತ್ತು; ಅವನ ಉಮ್ಮಳಿಕೆ ಇನ್ನೂ ಹೆಚ್ಚಾಗುತ್ತಿತ್ತು.

ಮಾತ್ರ ಆತನಿಂದ ತಡೆಯಲಾಗಲಿಲ್ಲ. ಕಣ್ಣಂನೀರು ತಟಕ್ಕಿದುವು. ಅಲ್ಲಿಯೇ ನಿಂತಿದ್ದ ದಾದಿಯೊಬ್ಬಳನ್ನು ಆತ ದೈನ್ಯದಿಂದ ಕೇಳಿದ,

"ಸಿಸ್ಟರ್, ನಾನು ಒಂದು ನಿಮಿಷ ಅವಳನ್ನು ಕಂಡು ಬರಬಹುದೇ?" ಎಂದು.

ಆದರೆ ಅವಳು "Very Sorry ಲೇಬರ ರೂಮಿನಲ್ಲಿ ಬಿಡಲಾಗುವುದಿಲ್ಲ"ಎಂದಳು.

ಬಹುದೂರ ಹೋಗಿ, ಯಾರೂ ಇಲ್ಲದಂಥ ಬೈಲಿನಲ್ಲಿ ಕುಳಿತು ಒಮ್ಮೆ ಸಾಕಷ್ಟು ಅತ್ತು ಬಿಡಬೇಕು ಎನಿಸಿತು ವೆಂಕಣ್ಣನಿಗೆ!

ಮೆಟ್ಟಲು ಇಳಿಯುತ್ತಿರುವಂತೆಯೇ ಎದುರಿಗೆ ಜಲಜಾಕ್ಷಿಯನ್ನು ಸಾಯಕಲ್ಲ ಮೇಲೆ ಕೂಡ್ರಿಸಿಕೊಂಡು ಬರುತ್ತಿರುವ ನೆರೆಮನೆಯ ಕೃಷ್ಣರಾಯರು ಕಂಡರು,

ಜಲಜಾಕ್ಷಿ, "ಅಣ್ಣಾ" ಎಂದು ಚೀರುತ್ತ ಇವನ ಕಡೆಗೆ ಬಂದಾಗ ವೆಂಕಣ್ಣ ಅವಳನ್ನು ತಬ್ಬಿಕೊಂಡು "ಬಂದೆಯಾ ಅಪ್ಪ?" ಎಂದ.

"ಈಗ ಹೇಗಿದ್ದಾರೆ?" ಕೃಷ್ಣರಾಯರು ಕೇಳಿದರು.

"ಆಪರೇಶನ್ ಮಾಡ್ತಾರಂತೆ" ವೆಂಕಣ್ಣ ವಿಷಣ್ಣ ಭಾವದಿಂದ ನುಡಿದ.

ಅದನ್ನು ಕೇಳಿ ಏನು ಹೇಳಬೇಕೆಂದು ಅವರಿಗೆ ಒಮ್ಮೆಲೇ ತಿಳಿಯಲಿಲ್ಲ. ಅರೆನಿಮಿಷದ ನಂತರ,

"ಅಷ್ಟೇನೂ ಹೆದರುವ ಕಾರಣವಿಲ್ಲ. ಈ ಸರ್ಜನರು ಒಳ್ಳೇ ಪರಿಣತರಂತೆ." ಎಂದರು ಕೃಷ್ಣರಾಯರು.

ವೆಂಕಣ್ಣ ಏನೂ ಉತ್ತರವನ್ನು ಕೊಡಲಿಲ್ಲ. ಪುನಃ ಕೃಷ್ಣರಾಯರೇ ಹೇಳಿದರು: ಈಗ ನಾಲ್ಕು ದಿನಗಳ ಕೆಳಗೇ ಇಂಥದೊಂದು ಆಪರೇಶನ್ ಮಾಡಿದ್ದಾರಂತೆ. ಅವಳಿ-ಜವಳಿ ಮಕ್ಕಳಲ್ಲದೆ ತಾಯಿಯೂ ಸುರಕ್ಷಿತ ಇದ್ದಾಳಂತೆ.

"ಹೀಗೇನು?"

"ಹೌದಂತೆ. ನೀವೇನೂ ಗಾಬರಿಯಾಗಬೇಡಿರಿ." ಎಂದು ಹೇಳಿ, "ನಾನೂ ರಜೆ ತೆಗೆದುಕೊಂಡು ಬರಲೇನು ಬೇಕಾದರೆ?" ಎಂದೂ ಕೇಳಿದರು.

"ಛೇ. ಯಾತಕ್ಕೆ?" ವೆಂಕಣ್ಣನ ಕಣ್ಣುಗಳು ಕೃತಜ್ಞತೆಯನ್ನು ಸೂಚಿಸುವಂತಿದ್ದವು.

ಕೃಷ್ಣರಾಯರು ಇನ್ನೂ ಹತ್ತು ನಿಮಿಷ ಇದ್ದು, ತಾವು ಕೇಳಿದ ಆಪರೇಶನ್ನುಗಳ ಮತ್ತೆ ಕೆಲವು ಸುದ್ದಿಗಳನ್ನು ಹೇಳಿ, ಏನೂ ಗಾಬರಿಯಾಗುವ ಅಗತ್ಯವಿಲ್ಲವೆಂದು ಪುನಃ ಪುನಃ ಹೇಳಿ ಹೊರಟುಹೋದರು.

ವೆಂಕಣ್ಣ ಅತ್ತಿತ್ತ ಅಡ್ಡಾಡತೊಡಗಿದ. ಇವನಂತೆಯೇ ಅನೇಕರು ಅಲ್ಲಿ ಭೀತಿ-ಶಂಕೆಗಳಿಂದೊಡಗೂಡಿ ದಾರಿ ಕಾಯುತ್ತಿದ್ದರು. ಕೆಲವರು ಅಲ್ಲಿಯೇ ಗಿಡದ ಬುಡದಲ್ಲಿಯೇ ತಮ್ಮ ಮನೆ ಹೂಡಿದ್ದರು. ಮೂರು ಕಲ್ಲು ಜೋಡಿಸಿಟ್ಟು ಅಡಿಗೆ ಮಾಡಿಕೊಳ್ಳುತ್ತಿದ್ದರು. ಚಹ ಕಾಯಿಸಿ ಹಾಸ್ಪಿಟಲಿನಲ್ಲಿ ಮಲಗಿದ್ದ ತಮ್ಮ ರೋಗಿಗೆ ಕುಡಿಸುತ್ತಿದ್ದರು. ಒಬ್ಬಿಬ್ಬರು ಅಲ್ಲಿಯ ನರ್ಸೊಬ್ಬಳ ಟೀಕೆಯನ್ನು ಮಾಡುತ್ತಿದ್ದರು, "ತನ್ನ ಮನೆಯೇ ಇದ್ದವಳಂತೆ ಮಾಡುತ್ತಾಳೆ. ಐದು ಮಿನಿಟು ಭೆಟ್ಟಿಯಾಗಿ ಹೋಗುತ್ತೇನೆಂದರೂ ಕೇಳಲಿಲ್ಲ. ಹೊರಗೆ ಕಳಿಸಿಯೇ ಬಿಟ್ಟಳು." ಎಂದು ಒಬ್ಬ ಎಂದರೆ, ಇನ್ನೊಬ್ಬ "ಅವಳಾದರೂ ಏನು ಮಾಡಬೇಕು? ಡಾಕ್ಟರುಗಳು ಹಾಗೆ ಅವರಿಗೆ ಹೇಳಿರಬಹುದು" ಎಂದು ಅವಳಿಗೆ ಸಹಾನುಭೂತಿ ತೋರಿಸುತ್ತಿದ್ದ.

ಅವು ಮಳೆಗಾಲದ ಕೊನೆಯ ದಿನಗಳು. ಆ ನಾಲ್ಕು ದಿನದಿಂದ ಮಳೆಯೂ ಆಗಿರಲಿಲ್ಲ. ಆದರೂ ಆಕಾಶದಲ್ಲಿ ಮೋಡಗಳು ಮುಸುಕಿಕೊಂಡು ಸೂರ್ಯನ ದರ್ಶನ ದುರ್ಲಭವಾಗಿತ್ತು. "ಇಂಥದರಲ್ಲಿ ಈ ಮಳೆಯೊಂದು ಬೇರೆ ಇಲ್ಲ, ಅಷ್ಟೇ ಅನುಕೂಲ" ಎಂದು ಮನದಲ್ಲಿಯೇ ಮಳೆರಾಯನ ಉಪಕಾರ ಸ್ಮರಿಸಿದ ವೆಂಕಣ್ಣ. ಮಳೆಯ ವಿಚಾರ ಬಂದ ಕೂಡಲೇ, "ಈ ಮಳೆಗಾಲದ ಹವೆಯೇ ಅವಳಿಗೆ ಒಗ್ಗಲಿಲ್ಲ. ಸಾಂಗಲಿಯಲ್ಲಿಯೇ ಇನ್ನೂ ಕೆಲವು ದಿವಸ ಇದ್ದಿದ್ದರೆ ಒಳ್ಳೆಯದಾಗುತ್ತಿತ್ತೊ ಏನೋ?" ಎಂಬ ವಿಚಾರವೂ ಬಂದು ಹೋಯಿತು. ಅದರ ಜೊತೆಗೆ ಸಾಂಗಲಿಗೆ ತಾರನ್ನು ಕೊಟ್ಟು ಬಿಡಬೇಕೇ-ಎಂಬ ವಿಚಾರವೂ ಬಂದಿತ್ತು, ಆದರೆ "ಸುಮ್ಮನೆ ಯಾತಕ್ಕೆ? ಅವರೂ ಗಾಬರಿಯಾಗುವರು" ಎಂದುಕೊಂಡ.

"ಅಣ್ಣಾ, ಪದ್ದಕ್ಕ ಎಲ್ಲಿದ್ದಾಳೆ?" ಎಂದು ಜಲಜಾಕ್ಷಿ ಕೇಳಿದಾಗ, ವೆಂಕಣ್ಣ ವಿಚಾರಲೋಕದಿಂದ ಎಚ್ಚತ್ತ.

"ಆಂ! ಹೂಂ. ಇಲ್ಲಿಯೇ ಇದ್ದಾಳೆ. ಅವಳಿಗೆ ನೋವಾಗಿಲ್ಲವೇನು! ಈಗ ಭೆಟ್ಟಿಯಾಗಬಾರದು." ಎಂದು ಮಗಳನ್ನು ರಮಿಸಲು ಯತ್ನಿಸಿದ.

"ಆದರೆ, ನಾನು ದೂರದಿಂದ ನೋಡ್ತೇನಲ್ಲ?"

ಜಲಜಾಕ್ಷಿಯ ಪ್ರಶ್ನೆಗೆ ಏನು ಉತ್ತರ ಹೇಳಬೇಕೆಂದು ತಿಳಿಯದೆ, "ಬಾ. ಆ ಕಡೆಗೆ ಹೋಗಿ ಬರೋಣ" ಎಂದು ಅವಳ ಕೈ ಹಿಡಿದುಕೊಂಡು ನಡೆದನು.

ಒಳಗೆ, ಕೋಣೆಗಳಲ್ಲಿ ಸ್ಥಳಾವಕಾಶವಿಲ್ಲದ್ದರಿಂದ ಕೆಲವು ರೋಗಿಗಳನ್ನು ಹೊರಗೆ ವರಂಡಾದಲ್ಲಿ ಮಲಗಿಸಿದ್ದರು. ಅವರಲ್ಲಿ ಒಬ್ಬಳು ಕೆಟ್ಟ ಧ್ವನಿಯಿಂದ ನರಳುತ್ತಿದ್ದಳು; ಅವಳನ್ನು ಕಂಡು ಜಲಜಾಕ್ಷಿ,

"ಅಣ್ಣಾ, ಅವಳು ಹಾಗೇಕೆ ಒದರುತ್ತಾಳೆ?" ಎಂದು ಕೇಳಿದಳು.

"ಅವಳಿಗೆ ನೋವಾಗಿದೆ" ಎಂದ ವೆಂಕಣ್ಣ.

"ಅಂದರೆ, ಪದ್ದಕ್ಕಗೂ ಹೀಂಗs ನೋವಾಗೇದೇನು?"

ಮಗಳ ಈ ಪ್ರಶ್ನೆಯಿಂದ ವೆಂಕಣ್ಣನ ಮನಸ್ಸು ಮತ್ತೆ ನೊಂದಿತು. ಮಗಳಿಗೆ ಏನು ಉತ್ತರ ಹೇಳಬೇಕೆಂದು ಆತ ವಿಚಾರಿಸಿದ.

ಅಷ್ಟರಲ್ಲಿ ಗೌರತ್ತೆ ಅವರಿಬ್ಬರನ್ನೂ ಹುಡುಕುತ್ತ ಅಲ್ಲಿಗೇ ಬಂದರು. "ಅವಳನ್ನು ಆ ಕಡೆ ಕರೆದುಕೊಂಡು ಹೋದರು. ಈಗ ಆಪರೇಶನ್ನು ಮಾಡುತ್ತಾರಂತೆ" ಎಂದರು. ಅವರ ಮುಖದಲ್ಲಿ ಗಾಬರಿ ಒಡೆದು ಕಾಣುತ್ತಿತ್ತು. ಕೂಡಲೇ ಅವರೆಲ್ಲ 'ಆಪರೇಶನ್ ಥಿಯೇಟರ' ಕಡೆಗೆ ನಡೆದರು. ಅಲ್ಲಿ ಒಳಗೆ ಯಾರನ್ನೂ ಬಿಡುವುದಿಲ್ಲ. ಹೊರಗೆ ನಿಂತುಕೊಂಡೇ ಇವರು ಒಬ್ಬರ ಮುಖವನ್ನೊಬ್ಬರು ನೋಡುತ್ತ ಭಯ-ಶಂಕೆಗಳಿಂದೊಡಗೂಡಿದ್ದರೂ, ತುಸುಧೈರ್ಯವನ್ನು ತಂದುಕೊಂಡು ನಿಮಿಷವನ್ನು ಯುಗವಾಗಿ ಕಳೆದರು. ಸುಮಾರು ಅರ್ಧ ತಾಸು ಕಳೆದರೂ ಆಪರೇಶನ್ ಕೋಣೆಯಿಂದ ಯಾರೂ ಹೊರಗೆ ಬರಲಿಲ್ಲ. ವೆಂಕಣ್ಣನ ಎದೆ ಧಡಧಡ ಹೊಡೆದುಕೊಳ್ಳತೊಡಗಿತು. "ಒಳಿತೇ ಇರಲಿ, ಏನೇ ಇರಲಿ. ಒಮ್ಮೆ ಬೇಗನೇ ಬಂದು ಹೇಳಬಾರದೇ?" ಎಂದುಕೊಂಡ. ಇನ್ನೊಮ್ಮೆ "ಹೋಗಲಿ ಇನ್ನೂ ಹತ್ತು ನಿಮಿಷ" ಎನ್ನುತ್ತಿತ್ತು ಅವನ ಮನಸ್ಸು. ಗೌರತ್ತೆಯವರಂತೂ ಮುಂಗಾಣದೆ ಕುಳಿತಿದ್ದರು. ಜಲಜಾಕ್ಷಿ ಮಾತ್ರ ಆಗಾಗ ಏನಾದರೂ ಪ್ರಶ್ನೆ ಕೇಳುತ್ತಲೇ ಇದ್ದಳು. ಅವಳಿಗೇನು ತಿಳಿಯಬೇಕು ಆ ಕ್ಷಣದ ಗಾಂಭೀರ್ಯ?

ಕೋಣೆಯಿಂದ ನರ್ಸೊಬ್ಬಳು ಹೊರಗೆ ಬಂದಳು. ವೆಂಕಣ್ಣ ಧಾವಿಸಿ ಹೋಗಿ ಅವಳನ್ನು "ಏನಾಯ್ತು?" ಎಂದು ಕೇಳಿದ. "ಇನ್ನೂ ಏನೂ ಇಲ್ಲ" ಎಂದು ಹೇಳುತ್ತ ಅವಳು ಲಗುಬಗೆಯಿಂದ ಬೇರೆ ಕೋಣೆಯತ್ತ ಹೊರಟು ಹೋದಳು.

ಮತ್ತೆ ಹದಿನೈದು ನಿಮಿಷಗಳು ಕಳೆದುವು.

ಕೋಣೆಯ ಬಾಗಿಲು ಸದ್ದಾಯಿತು. ವೆಂಕಣ್ಣನ ದೃಷ್ಟಿ ಆ ಕಡೆಗೇ ಇದ್ದಿತು. ಸಿವ್ಹಿಲ್ ಸರ್ಜನ್ನರು ಅಸಿಸ್ಟಂಟ ಡಾಕ್ಟರರ ಹತ್ತಿರ ಏನೋ ಮಾತನಾಡಿ ಹೊರಗೆ ಬಂದರು. ಅವರು ಏನು ಹೇಳಿದರೆಂದು ಇವನಿಗೆ ಪೂರ್ಣ ತಿಳಿಯಲಿಲ್ಲ. ಆದರೆ ಕೊನೆಯ ಮಾತು ಮಾತ್ರ ಕೇಳಿಸಿತು.

"Ha, right they are very late" ಎಂದು ಹೇಳುತ್ತ ಅವರು ತಮ್ಮ ಆಫೀಸಿನತ್ತ ಹೋದರು. ವೆಂಕಣ್ಣನಿಗೆ ಇನ್ನು ಹೆಚ್ಚಿಗೆ ಏನೂ ತಿಳಿಯಬೇಕಾಗಿರಲಿಲ್ಲ. ಆತನಿಗೆ ಇಡೀ ಆಸ್ಪತ್ರೆಯೇ ಗರಗರ ತಿರುಗಿದಂತೆ ಕಾಣತೊಡಗಿತು. ತಾನೆಲ್ಲಿರುವೆನೆಂಬುದೇ ತಿಳಿಯದಂತಾಯಿತು.

ಅಷ್ಟರಲ್ಲಿ, ತನ್ನೆದುರು ನರ್ಸು ಬಂದು ನಿಂತುದೇ ಕಾಣದಾಯಿತವನಿಗೆ. ಅವಳು "ನೋಡಿರಿ; ಆಪರೇಶನ್ Successful ಆಯಿತು" ಎಂದು ಹೇಳುತ್ತಿದ್ದಳು.

ವೆಂಕಣ್ಣ ಪಟಪಟನೆ ಕಣ್ಣು ಬಿಟ್ಟು ಅವಳನ್ನು ನೋಡಿ "ಆಂ! ಏನೆಂದಿರಿ?" ಎಂದು ಕೇಳಿದ.

"Operation successful ಆಯಿತು. ಆದರೆ ಬೇಬೀ ಸತ್ತು ಹೋಗಿತ್ತು."

"ಅವಳು ಚೆನ್ನಾಗಿದ್ದಾಳೆಯೆ?"

"ಹಾಂ, ಹೌದು. ಚೆನ್ನಾಗಿದ್ದಾರೆ."

ವೆಂಕಣ್ಣ ತನ್ನ ಕಿವಿಯನ್ನೇ ನಂಬದಾದ.

ವಿಷಯವನ್ನು ವೆಂಕಣ್ಣನಿಂದ ತಿಳಿದ ಗೌರತ್ತೆ "ಆಗಲಿ. ಅವನ ಇಚ್ಛಾ" ಎಂದು ನಿಟ್ಟುಸಿರುಬಿಟ್ಟರು.

× × × ×

ಮುಂದೆ ಹದಿನೈದು ದಿನಗಳವರೆಗೆ ಆಸ್ಪತ್ರೆಯಲ್ಲಿಯೇ ಇದ್ದು ಪದ್ದಕ್ಕ ಮನೆಗೆ ಬಂದಳು. ಔಷಧೋಪಚಾರದ ಸಲುವಾಗಿ ಅವಳು ಇನ್ನೂ ಕೆಲವು ದಿನ ಅಲ್ಲಿಯೇ ಇರಬೇಕೆಂದು ಡಾಕ್ಟರರು ಅಭಿಪ್ರಾಯ ಪಟ್ಟಿದ್ದರು. ಆದರೆ ಪದ್ದಕ್ಕ ಮಾತ್ರ ತಾನು ಅಲ್ಲಿರುವುದು ಸಾಧ್ಯವಿಲ್ಲವೆಂದು ಹಟ ಹಿಡಿದಳು. ಅದರಿಂದ ವೆಂಕಣ್ಣ ನಿರುಪಾಯನಾಗಿ ಅವಳನ್ನು ಮನೆಗೆ ಕರೆತರಬೇಕಾಯಿತು.

ಮೊದಲೇ ಅಶಕ್ತಳಾಗಿದ್ದ ಪದ್ದಕ್ಕ ಈಗ ಪೂರ್ಣ ಇಳಿದು ಹೋಗಿದ್ದಳು. ಮೊದಲಿದ್ದ ಕೊರಗಿಗೆ ಈಗ ಹೆಚ್ಚಿನ ಹಳಹಳಿ, ದುಃಖ ಸೇರಿಕೊಂಡವು. ಮಗು ಹುಟ್ಟದೇ ಇದ್ದರೆ ಆ ಮಾತು ಬೇರೆ. ಆದರೆ ಈ ದುಃಖವನ್ನು ಆ ತಾಯಕರುಳು ಸಹಿಸುವುದು ಅಸಾಧ್ಯವಾಗಿತ್ತು. ಅದೂ, ಎಲ್ಲರೂ ಬಯಸುತ್ತಿದ್ದ ಗಂಡುಮಗುವಾಗಿತ್ತೆಂದು ತಿಳಿದಾಗ ಅವಳಿಗಾದ ದುಃಖ-ನಿರಾಶೆಗಳಿಗೆ ಮಿತಿಯಿರಲಿಲ್ಲ. ಅವಳು ಅದನ್ನು ಯಾರ ಮುಂದೆಯೂ ಅಂದು ತೋರಿಸಲಿಲ್ಲ; ಮನದಲ್ಲಿಯೇ ಬಹುವಾಗಿ ಕೊರಗಿದಳು.

ನಾರಾಯಣರಾಯರು ಬೀಗನ ಪತ್ರವನ್ನು ಕಂಡ ಕೂಡಲೇ ಸಾಂಗಲಿಯಿಂದ ಧಾವಿಸಿ ಬೆಳಗಾವಿಗೆ ಬಂದರು. ತಂಗಿಯ ಆಶಾಸೌಧ ಕಳಚಿ ಬಿದ್ದುದನ್ನು ಕಂಡು ಬಹಳ ಮರುಗಿದರು. ಆದರೆ ಅದನ್ನು ಅಷ್ಟೊಂದಾಗಿ ತಂಗಿಯ ಮುಂದೆ ತೋರಗೊಡಲಿಲ್ಲ. ಅದರಿಂದ ಅವಳ ದುಃಖ ಇನ್ನಷ್ಟು ಹೆಚ್ಚಾಗಬಹುದೆಂಬ ಭಯ ಅವರದು. ಆದರೆ ಪದ್ಮ ಅವರನ್ನು ಕಂಡ ಕೂಡಲೇ ಸಣ್ಣ ಹುಡುಗಿಯಂತೆ ಅತ್ತು ಬಿಟ್ಟಳು. ಅಷ್ಟು ವೇಳೆ ಹತ್ತಿಕ್ಕಿಕೊಂಡಿದ್ದ ಅವಳ ಹೃದಯದಲ್ಲಿಯ ಕಳವಳ ಕಣ್ಣೀರಾಗಿ ಹರಿಯಿತು. ಸುಮಾರು ಅರ್ಧತಾಸಾದರೂ ಅವಳು ಅಣ್ಣನ ತೊಡೆಯಲ್ಲಿ ಮುಖವಿಟ್ಟು ಬಿಕ್ಕುತ್ತಿದ್ದಳು. ಅವಳಿಂದ ಯಾವ ಮಾತೂ ಬರಲಿಲ್ಲ.

---

"ಪದ್ಮಕ್ಕ, ಏಳು, ಏನದು" ಎಂದು ತಂಗಿಯನ್ನು ಸಮಾಧಾನ ಪಡಿಸಲು ನುಡಿದ ಅವರ ಮಾತು ಅವಳ ದುಃಖವನ್ನು ಹೆಚ್ಚಿಸಿತ್ತೇ ಹೊರತು ಕಡಿಮೆಮಾಡಲು ಶಕ್ಯವಾಗಿರಲಿಲ್ಲ.

"ನಾನಣ್ಣಾ, ದೇವರ ಕೋಪ ನನ್ನ ಮೇಲೆ ಈ ಪರಿಯೇಕೆ? ನಾನೇನು ಅಂಥ ತಪ್ಪು ಮಾಡಿದ್ದೇನೆ?" ಎಂದು ಅತ್ತಳು.

"ಹುಚ್ಚೀ, ಅವನೇಕೆ ಕೋಪಮಾಡುತ್ತಾನೆ? ಎಂದು ನಾರಾಯಣರಾಯರು ತಂಗಿಗೆ ಒಣಸಮಾಧಾನದ ಮಾತು ಹೇಳಿದರು.

"ಇಲ್ಲ. ಅವನು ಇನ್ನು ನನ್ನನ್ನು ಇಡಬಾರದು" ಪದ್ಮಳ ದುಃಖ ಹೆಚ್ಚಾಯಿತು.

"ನೀನು ಹೀಗೆಲ್ಲ ಮಾತಾಡಿದರೆ ನಾನು ಹೊರಟೇ ಹೋಗುತ್ತೇನೆ, ನೋಡು. ನಮಗೇನು ದುಃಖವಾಗಿಲ್ಲ ವೇನು? ವೆಂಕಣ್ಣನನ್ನು ನೋಡು. ಜಲಜಾನ್ನನೋಡು."

ಪದ್ಮಾಳ ದುಃಖ ಯಾವ ಸಮಾಧಾನದ ಮಾತಿನ ಆಳವನ್ನೂ ಮೀರಿತ್ತು.

ದಿನ ಬಿಟ್ಟು ದಿನ ಕ್ಯಾಲ್ಸಿಯಮ್, ವ್ಹಿಟಮಿನ್ ಬಿ. ಚುಚ್ಚುಮದ್ದು ನಡೆದೇ ಇತ್ತು. ಆದರೆ ಪದ್ಮಕ್ಕನ ಮೇಲೆ ಅವುಗಳ ಪರಿಣಾಮ ವಿಶೇಷ ಕಂಡುಬರಲಿಲ್ಲ. ಅವಳ ಸ್ಥಿತಿಯನ್ನು ಕಂಡು ವೆಂಕಣ್ಣ ಗಾಬರಿಯಾಗಿದ್ದ. ಆದರೆ ಡಾಕ್ಟರರು ಮಾತ್ರ ಹಾಗೆ ಹೆದರುವ ಕಾರಣ ವಿಲ್ಲವೆಂದು ಹೇಳುತ್ತಿದ್ದರು. ಬಹುಶಃ ಅವರಿಗೆ ಅವಳ ರೋಗದ ಲಕ್ಷಣ ತಿಳಿದಿರಲಿಲ್ಲವೆಂದು ಕಾಣುತ್ತದೆ.

ಆ ದಿವಸ ಪದ್ಮಳಿಗೆ ಅಸಾಧ್ಯ ಎದೆನೋವು ಆರಂಭವಾಯಿತು. ಗೌರತ್ತೆ ಗಾಬರಿಯಾಗಿ ಯಾರನ್ನೋ ಕಳಿಸಿ ವೆಂಕಣ್ಣನನ್ನು ಕರೆಸಿದಳು. ಕೂಡಲೇ ಡಾಕ್ಟರರೂ ಬಂದು ಏನೋ ಒಂದು ಚುಚ್ಚುಮದ್ದು ಕೊಟ್ಟು ಹೋದರು. ಅದರಿಂದ ಪದ್ಮಕ್ಕನಿಗೆ ನಿದ್ರೆ ಹತ್ತಿ ತ್ರಾಸು ಸ್ವಲ್ಪ ಕಡಿಮೆಯಾಯಿತು. ಆದರೆ ಮುಂದೆ ಎರಡು ತಾಸಿನ ತರುವಾಯ ಎಚ್ಚರವಾದಾಗ ಮೊದಲಿನಷ್ಟೇ ನೋವು ಕಾಣಿಸಿಕೊಂಡಿತು. ಡಾಕ್ಟರರು ಮತ್ತೆ ಬಂದರು. ಪರೀಕ್ಷೆಮಾಡಿ ಗಾಬರಿಯಾಗುವಂಥದೇನೂ ಇಲ್ಲವೆಂದೂ ಒಂದೆರಡು ದಿನಗಳಲ್ಲಿ ಕಡಿಮೆಯಾಗಬಹುದೆಂದೂ ಹೇಳಿದರು.

ಆದರೆ ಪದ್ಮಕ್ಕ ಬಹಳೇ ಹೆದರಿಕೊಂಡಿದ್ದಳು.

"ಒಮ್ಮೆ ಅಪ್ಪನನ್ನೂ ನಾನಣ್ಣನನ್ನೂ ನೋಡಬೇಕು. ಕರೆಸುತ್ತೀರಾ?" ಎಂದು ದೈನ್ಯದಿಂದ ಪತಿಯನ್ನು ಕೇಳಿದಳು.

ನಾರಾಯಣರಾಯರು ಸಾಂಗಲಿಗೆ ಹೋಗಿ ಇನ್ನೂ ಹದಿನೈದು ದಿನಗಳೂ ಆಗಿರಲಿಲ್ಲ. ಮತ್ತೆ ಕರೆಸುವುದೆಂದರೆ ಅವರು ಗಾಬರಿಯಾಗಲಿಕ್ಕಿಲ್ಲವೇ?–ಎಂದು ವೆಂಕಣ್ಣನ ವಿಚಾರ. ಆದರೆ ಹೆಂಡತಿಗೆ ಹಾಗೆಂದು ಹೇಗೆ ಹೇಳುವುದು? ಅವಳ ದೈನ್ಯವನ್ನು ಕಂಡು ಅವನಿಗೂ ಅಧೈರ್ಯವೆನಿಸಿತು. ಕೂಡಲೇ, ಸಾಂಗಲಿಗೆ ಪತ್ರ ಬರೆದು ಹಾಕಿದನು.

ಗಾಬರಿಯಾಗುವ ಕಾರಣವಿಲ್ಲವೆಂದು ವೆಂಕಣ್ಣ ಬರೆದಿದ್ದರೂ ಶಾರದಾಬಾಯಿ ಮತ್ತು ನಾರಾಯಣ ರಾಯರು ಗಾಬರಿಗೊಂಡರು. ಪತ್ರವನ್ನು ಕಂಡ ಮರು ದಿನವೇ ಇಬ್ಬರೂ ಸಾಂಗಲಿಯಿಂದ ಬಂದುಬಿಟ್ಟರು.

ಮಗಳ ಸ್ಥಿತಿಯನ್ನು ಕಂಡು ಶಾರದಾಬಾಯಿ ಅತ್ತೇ ಬಿಟ್ಟರು. ಅವರನ್ನು ಸಮಾಧಾನ ಮಾಡುವುದೇ ಗೌರತ್ತೆಗೆ ಕಠಿಣವಾಯಿತು.

## ನೀನು!



ನೀನು ಅನಂದದ ತೊರೆ
ಹರುಷದ ಮಹಾಪೂರ
ನನ್ನ ಮಾನಸ ಸರೋವರದಲ್ಲಿ
ನಲಿದಾಡುವ ಪರಮಹಂಸ, ನೀನು!

–ಪಂಚಾಕ್ಷರಿ ಹಿರೇಮಠ

ಪದ್ಮಳ ಪರಿಸ್ಥಿತಿ ನಿಜವಾಗಿಯೂ ತುಸು ಗಂಭೀರವೇ ಆಗಿತ್ತು. ಆ ದಿನವೇ ಬಂದು ಪರೀಕ್ಷಿಸಿ ಹೋದ ಸಿವ್ಹಿಲ್ ಸರ್ಜನರು "Heart ಬಹಳೇ Weak ಆಗಿದೆ"ಎಂದು ಹೇಳಿದ್ದರು. ಅವರ ಆದೇಶದ ಪ್ರಕಾರ ಎಲ್ಲ ಔಷಧ–ಉಪಚಾರ ನಡೆದೇ ಇತ್ತು. ನಾಲ್ಕು ತಾಸಿಗೊಮ್ಮೆ ಕೊರ್‍ಯಾಮಿನ್ ಕೊಡಲಾಗುತ್ತಿತ್ತು.

ತಂಗಿಯನ್ನು ನೋಡಿದ ಕೂಡಲೇ ನಾರಾಯಣ ರಾಯರ ಮುಖ ಬಾಡಿಹೋಯಿತು. ಪದ್ಮ ಈ ಬೇನೆಯಿಂದ ಒಮ್ಮೆ ಪಾರಾದರೆ–! ಎಂದುಕೊಂಡಿತು ಅವರ ಮನಸ್ಸು. ಅಣ್ಣನನ್ನೂ ತಾಯಿಯನ್ನೂ ಕಂಡು ಪದ್ಮಕ್ಕ "ಬಂದಿರಾ? ನಿಮ್ಮನ್ನು ನೋಡುತ್ತೇನೋ ಇಲ್ಲೋ ಅಂತಿದ್ದೆ..."ಎಂದಳು.

"ಪದ್ಮ ಹಾಗೆ ಮಾತನಾಡಬಾರದು ಒಳಿತನ್ನು". ತುಂಬಿ ಬಂದ ಗಂಟಲಿನಿಂದ ಶಾರದಾಬಾಯಿ ನುಡಿದರು.

ನಾರಾಯಣರಾಯರಿಗೆ ಮಾತೇ ಬರಲಿಲ್ಲ.

ಮುಂದೆ ನಾಲ್ಕು ದಿನಗಳಲ್ಲಿ ಪದ್ಮಳ ಸ್ಥಿತಿ ಬಹಳೇ ಚಿಂತಾಜನಕವಾಯಿತು. ಮಾತನಾಡುವ ತ್ರಾಣವೂ ಉಳಿದಿರಲಿಲ್ಲ. ಅಂದು ಮನೆಯಲ್ಲಿ ಯಾರೂ ಒಂದು ಗುಟುಕು ನೀರನ್ನು ಕುಡಿಯಲಿಲ್ಲ.

ಕೋಣೆಯಲ್ಲಿ ಅಣ್ಣ ಒಬ್ಬನೇ ಇರುವುದನ್ನು ಕಂಡು ಪದ್ಮ "ನಾನಣ್ಣಾ" ಎಂದಳು.

"ಏನು ಪದ್ಮಕ್ಕ, ನೀರು ಬೇಕೇ?"

ಬೇಡವೆಂಬಂತೆ ಅವಳು ಗೋಣು ಅಲ್ಲಾಡಿಸಿದಳು.

"ಮತ್ತೇನು ಬೇಕು? ಈಗ ಆರಾಮ ಇದೆಯೆ?"

ಅರ್ಧನಿಮಿಷದ ನಂತರ ಬಹು ಮೆದುವಾಗಿ ನುಡಿದಳು "ಇನ್ನೇನು ಮುಗಿದಂತಾಯಿತು."

"ಛೇ. ಹಾಗೆ ಮಾತಾಡಬಾರದು ಕಡಿಮೆಯಾಗುತ್ತದೆಂದು ಡಾಕ್ಟರರು ಹೇಳಿರುವರು."

ಮತ್ತೆ ಮೌನ.

"ಜಲಜಾ..."

"ಕರೆಯಲೇ? ಹೊರಗೆ ಮೋಹನ, ಶಾಮಿ ಅವರ ಸಂಗಡ ಇದ್ದಾಳೆ"

"ಅಲ್ಲ, ಪರದೇಶಿ..."

"ಹಾಗೇಕೆ ಅನ್ನುತ್ತೀ? ನಿನಗೆ ನೆಟ್ಟಗಾಗುವದು. ಹಾಗೆ ಧೈರ್ಯಗೆಳಕೊಳ್ಳಬಾರದು." ಅಣ್ಣ ಸಮಾಧಾನ ಹೇಳಿದರು.

"ಇಲ್ಲ. ನೀನಿದ್ದೀ ಬಿಡು. ಅವಳದೆಲ್ಲ ನಿನ್ನಷ್ಟೇ ಕೂಡಿದೆ. ಅವಳ ಕೈ ಬಿಡಬೇಡ". ಅವಳ ಕಣ್ಣಲ್ಲಿ ನೀರೂರಿತು. ಮಾತು ತಡೆತಡೆದು ಬಂತು. ಅದನ್ನು ಕಂಡು ನಾನಣ್ಣನಿಗೂ ತಡೆಯಲಾಗಲಿಲ್ಲ. "ಪದ್ಮಕ್ಕ, ಹಾಗೆ ಮಾತಾಡಬೇಡ" ಎಂದು ಬಿಕ್ಕಿ ಅಳತೊಡಗಿದರು.

ಅವರ ಧ್ವನಿ ಕೇಳಿ ಗಾಬರಿಗೊಂಡು ವೆಂಕಣ್ಣ ಗೌರತ್ತೆ ಶಾರದಾಬಾಯಿ ಎಲ್ಲರೂ ಕೋಣೆಯೊಳಗೆ ಧಾವಿಸಿ ಬಂದರು. "ಏನು? ಏನು?"–ಎನ್ನುತ್ತಾ.

"ಏನಿಲ್ಲ..." ಎನ್ನುತ್ತಾ ನಾರಾಯಣರಾಯರು ಎದ್ದು ಹೊರಗೆ ಹೋದರು.

ಕೋಣೆಯಲ್ಲಿ ಗಾಂಭೀರ್ಯ ಆವರಿಸಿತು.

ಆ ರಾತ್ರಿ ಪದ್ಮಾಳ ಸ್ಥಿತಿಯೂ ಗಂಭೀರವಾಯಿತು.

ಡಾಕ್ಟರರು ಬಂದು ಬೇರೆ ಯಾವುದೋ ಚುಚ್ಚುಮದ್ದು ಕೊಟ್ಟು ಹೋದರು. ಅವರ ಮುಖಭಾವದಿಂದಲೇ ಯಾರೂ ಹೇಳಬಹುದಿತ್ತು, ಪದ್ಮಳ ಆಶೆ ಮುಗಿಯಿತೆಂದು!

ಇಡೀ ರಾತ್ರಿ ಕೋಣೆ ಬಿಟ್ಟು ಯಾರೂ ಅಲುಗಾಡಲಿಲ್ಲ.

ಬೆಳಗು ಮುಂಜಾನೆ ಆರು ಗಂಟೆಯ ಸಮಯ. ಪದ್ಮ ಕಣ್ಣು ತೆರೆದು ಸುತ್ತಲೂ ನೋಡಿದಳು. ಅವಳ ತಲೆಯ ಹತ್ತಿರವೇ ಕುಳಿತಿದ್ದ ಶಾರದಾಬಾಯಿ "ಪದ್ದು" ಎಂದರು.

"ಏನು ಬೇಕು?" ವೆಂಕಣ್ಣ ಕೇಳಿದ.

"ನಾನಣ್ಣ"

"ಇಲ್ಲೇ ಇದ್ದೇನಲ್ಲ, ಏನು?" ಎಂದರು ನಾನಣ್ಣ ಅವಳ ಸಮೀಪಕ್ಕೆ ಹೋಗಿ.

"ಜ...ಲ...ಜಾ" ಕೊನೆಯ 'ಜಾ' ಸ್ಪಷ್ಟವಾಗಿ ಕೇಳಿಸಲಿಲ್ಲ.

ಕೂಡಲೇ ವೆಂಕಣ್ಣ ಮಗಳನ್ನು ಎಬ್ಬಿಸಿಕೊಂಡು ಬಂದ. ಏನೋ ನುಡಿಯಬೇಕೆಂದು ಪದ್ಮಳ ತುಟಿ ಅಲುಗಾಡುತ್ತಿತ್ತು. ಆದರೆ ಮಾತು ಬರಲಿಲ್ಲ. ವೆಂಕಣ್ಣ ಮಗಳನ್ನು ಬೇಗನೆ ಕಡೆಕೊಟ್ಟು ಹೆಂಡತಿಯ ಸಮೀಪಕ್ಕೆ ಬಂದು, "ಏನು ಏನು" ಎಂದು ಕೇಳಿದ. ಅವಳು ಏನೂ ನುಡಿಯುವ ಸ್ಥಿತಿಯಲ್ಲಿರಲಿಲ್ಲ. ಗಂಡನನ್ನು ಆಶಾದೃಷ್ಟಿಯಿಂದ ನೋಡಿದಳು, ಅಷ್ಟೇ.

ಆತ ಒಂದುಚಮಚೆ ನೀರನ್ನು ಹೆಂಡತಿಯ ಬಾಯಲ್ಲಿ ಹಾಕಿದ. ಆದರಲ್ಲಿಯ ಅರ್ಧನೀರೂ ಕೂಡ ಗಂಟಲಲ್ಲಿ ಇಳಿಯಲಿಲ್ಲ!

ಪದ್ಮಕ್ಕ ಮುಚ್ಚಿದ ಕಣ್ಣನ್ನು ಮತ್ತೆ ತೆರೆಯಲಿಲ್ಲ! ಕೋಣೆ ಅಳುವಿನಿಂದ ತುಂಬಿ ಹೋಯಿತು.

- ೪ -

ಒಂದು ಜೀವ ಹೋಗಿ ಅನೇಕ ಜೀವಿಗಳಿಗೆ ಬಲವಾ.. ತ್ಯಾಗಮಾದಂತಾಯಿತು!

ಜಲಜಾಕ್ಷಿಯಂತೂ ಹುಚ್ಚಿಯಂತಾಗಿದ್ದಳು. ಯಾರೊಡನೆಯೂ ಹೆಚ್ಚು ಮಾತಿಲ್ಲ. ಊಟಕ್ಕೆ ಕುಳಿತರೆ "ಸಾಕು, ಬೇಡ" ಇಷ್ಟನ್ನು ಬಿಟ್ಟರೆ ಹೆಚ್ಚಿಗೆ ಯಾವ ಮಾತನ್ನೂ ಆಡುತ್ತಿರಲಿಲ್ಲ. ದಿನದ ಹೆಚ್ಚು ಸಮಯವನ್ನು ಮನೆಯ ಹಿಂಬದಿಯ ಬಾವಿಕಟ್ಟೆಯ ಮೇಲೆ ಸುಮ್ಮನೆ ಕುಳಿತು ಕಳೆಯುತ್ತಿದ್ದಳು.

ತನ್ನ ತಾಯಿಯ ನೆನಪಿನೊಡನೆ ಅಂದಿನ ಆ ಭೀಕರ ದೃಶ್ಯ ಅವಳ ಕಣ್ಣೆದುರು ಸುಳಿದು ಹೆದರಿಕೆ ಆವರಿಸುತ್ತಿತ್ತು; ಮೈ ನವಿರೇಳುತ್ತಿತ್ತು. ನೆಟ್ಟದೃಷ್ಟಿಯಿಂದ ಗೋಡೆಯನ್ನೋ, ನೆಲವನ್ನೋ, ಕಟ್ಟೆಯ ಕಲ್ಲಿನಲ್ಲಿದ್ದ ಬಿರುಕನ್ನೋ ಎವೆಯಿಕ್ಕದೆ ನೋಡುತ್ತ ಹಾಗೆಯೇ ಕುಳಿತಿರುತ್ತಿದ್ದಳು.

ಅಂದು ಅಣ್ಣಾ ತನ್ನನ್ನು ಎಬ್ಬಿಸಿಕೊಂಡು ಪದ್ದಕ್ಕನ ಹತ್ತಿರ ಹೋದುದು, ಅವಳು ಮೈಮೇಲೆ ತನ್ನ ಕೈಯಿಂದ ಸವರಿ ತನ್ನನ್ನು 'ಹ್ಯಾಗೋ' ನೋಡಿದುದು, ಅವಳು ಗೋಣು ಹೊರಳಿಸಿ ಮಲಗಿದಾಗ ನಾನಣ್ಣ ಮಾವಾ ಅಯ್ಯೋ ಎಂದು ಚೀರಿ ಪದ್ದಕ್ಕನ ಮೇಲೆ ಬಿದ್ದುದು, ಎಲ್ಲರೂ ಅಳತೊಡಗಿದಾಗ ಏನೂ ತಿಳಿಯದಂತಾಗಿ ತಾನೂ ಚೀರಿ ಚೀರಿ ಅತ್ತು ಬಿಟ್ಟುದುದೂ.. (ಈ ನೆನಪು ಅವಳ ಮೈಯಲ್ಲಿ ನಡುಕವನ್ನು ಹುಟ್ಟಿಸುತ್ತಿತ್ತು.) ...ಹಾಂ, ಆ ಬಿದುರಿನ ಮಂಚ, ಆ ಗಡಿಗೆಯಲ್ಲಿಯ ಬೆಂಕಿ, ಪದ್ದಕ್ಕನ ಮೈ ತೊಳಿಸಿ ಬಿಳಿ ಸೀರೆ ಉಡಿಸಿದ್ದು, ಹಣೆಯ ತುಂಬ ದೊಡ್ಡದಾದ ಕುಂಕುಮ... ಕಡೆಗೆ... ಕಡೆಗೆ... ಪದ್ದಕ್ಕನನ್ನು ನಾಲ್ಕು ಜನರು ಹೊತ್ತುಕೊಂಡು ಹೋದರು.

ಈ ಎಲ್ಲ ನೆನಪು ಬಂದು ಅವಳ ಎದೆ ಧಡಧಡ ಹೊಡೆದುಕೊಳ್ಳುತ್ತಿತ್ತು. ಒಮ್ಮೆಲೆ ಚಳಿ ತುಂಬಿದವರಂತೆ ನಡುಗುವಳು. ಆದರೆ ಆ ದೃಶ್ಯ ಅವಳಿಂದ ದೂರ ಸರಿಯುತ್ತಿರಲಿಲ್ಲ... ಒಮ್ಮೆಲೇ ಓಡಿ ಹೋಗಿ ಗೌರತ್ತೆಯನ್ನು ತಬ್ಬಿಕೊಳ್ಳುತ್ತಿದ್ದಳು.. ಅವಳ ಬಾಯಲ್ಲಿ ಮತ್ತೆ ಪದ್ದಕ್ಕನ ಗುಣಗಾನ, ಆದರ ಜೊತೆಗೇ ಕಣ್ಣೀರು! ಜಲಜಾಕ್ಷಿಗೆ ಎದ್ದಲ್ಲಿ, ಕುಳಿತಲ್ಲಿ, ಎಲ್ಲಿ ಹೋದರೂ ಪದ್ದಕ್ಕನ ನೆನಪೇ ನೆನಪು!

ಪದ್ದಕ್ಕ ಸತ್ತು ಹೋದಳಂತೆ. ಮರುದಿನ ಮೋಹನ ಹೇಳಲಿಲ್ಲವೇ.? ಸತ್ತವರನ್ನು ಹಾಗೆ ಒಯ್ದು ಸುಡುವರಂತೆ. ಸುಟ್ಟರೂ ಅವರಿಗೆ ನೋವಾಗುವದಿಲ್ಲವಂತೆ. ಸತ್ತವರನ್ನು ದೇವರು ತನ್ನ ಹತ್ತಿರ ಕರೆದುಕೊಳ್ಳುವನಂತೆ. ಅಂದರೆ ಅವರು ಮತ್ತೆ ನಮ್ಮ ಕಡೆಗೆ ಬರುವದಿಲ್ಲವಂತೆ. ಹಾಗಾದರೆ ಪದ್ದಕ್ಕ ಮತ್ತೆ ಬರುವದಿಲ್ಲವೇ? ಅವಳಿಲ್ಲದೆ ಹಾಗೇ ಎಷ್ಟು ದಿನ ಇರುವದು? ಅವಳು ತನಗೆಷ್ಟು ಪ್ರೀತಿ ಮಾಡುತ್ತಿದ್ದಳು. ಗೌರತ್ತೆ ಅಜ್ಜಿ ಅವರೂ ಪ್ರೀತಿಮಾಡುವರು. ಆದರೂ "ಪದ್ದಕ್ಕ...? ಪದ್ದಕ್ಕಾ-" ಎಂದು ನೆನಪಾಗಿ ಅಳತೊಡಗುವಳು.

ಆದರೂ ಹಿತ್ತಲಲ್ಲಿಯ ಕೈತೋಟದಲ್ಲಿ ಒಬ್ಬಳೇ ಕುಳಿತಾಗ ಆ ಸಣ್ಣ-ದೊಡ್ಡ ಹೂಗಿಡಗಳು, ಎಲೆ-ಹೂ-ಕಾಯಿಗಳು, ಅಲ್ಲಿ ಹಾರಾಡುವ ಚಿಕ್ಕ ಚಿಕ್ಕ ಗುಬ್ಬಿಗಳು, ಅವುಗಳ ಚಿಲಿಪಿಲಿ ಧ್ವನಿ, ಆಕಾಶದಲ್ಲಿ ತೇಲಿಹೋಗುತ್ತಿದ್ದ ಆ ಅರಳೆಯಂಥ ಚಿತ್ರವಿಚಿತ್ರ ಆಕಾರದ ಮೋಡಗಳು- ಇವೆಲ್ಲ ಕೆಲಕಾಲ ಅವಳ ಮನಕ್ಕೆ ಪದ್ದಕ್ಕನ ಮರೆವನ್ನುಂಟು ಮಾಡಿ ಶಾಂತಿ ಸಮಾಧಾನಗಳನ್ನು ಒದಗಿಸುತ್ತಿದ್ದವು. ಆ ಕ್ಷಣದಲ್ಲಿ ಅವೆಲ್ಲ ತನ್ನಂತೆಯೇ ಜೀವಂತವಾಗಿವೆಯೆಂದು ಅವಳ ಭಾವನೆ. ಆ ನೀಲಾಗಸದಲ್ಲಿ ಹಾರಾಡುವ ಹಕ್ಕಿಗಳನ್ನು ಕಂಡು ತನಗೂ ಕೂಡ ಅವುಗಳಂತೆ ಹಾರಲಿಕ್ಕೆ ಯಾಕೆ ಬರಬಾರದು? ಹಾಗೆ ಬಂದಿದ್ದರೆ...! ತಾನೂ ಆಕಾಶದಲ್ಲಿ ಹಾರಿ ಎಲ್ಲಿ ಬೇಕಾದಲ್ಲಿ ಹೋಗಬಹುದಿತ್ತು...... ಹೀಗೆಯೇ ಏನೇನೋ ಯೋಚಿಸುತ್ತಾ ಕುಳಿತಿರುವಳು.

ಆದರೆ ಈ ಹಗಲುಗನಸುಗಳ ಲೋಕದಲ್ಲೂ ಒಮ್ಮೊಮ್ಮೆ ಪದ್ದಕ್ಕನ ನೆನಪು ಬಾರದೆ ಇರುತ್ತಿರಲಿಲ್ಲ. ಗುಬ್ಬಿಗಳೆಲ್ಲ ಕೂಡಿ ಚಿಲಿಪಿಲಿ ಮಾಡುವುದು ಹೆಚ್ಚಾದಾಗ "ಇವುಗಳಲ್ಲಿ ಯಾರೋ ಒಬ್ಬರು ಸತ್ತಿರಬಹುದೇ?" ಎಂದುಕೊಳ್ಳುವಳವಳು. ಆಗ ಕೂಡಲೇ ಪದ್ದಕ್ಕನ ನೆನಪು! ಅಂಥಗಳಿಗೆಯಲ್ಲಿ ಕಣ್ಣೀರು ದಳದಳ ಇಳಿಯುತ್ತಿತ್ತು. ದೇವರ ಹತ್ತಿರದಿಂದ ನಿಜವಾಗಿಯೂ ಪದ್ದಕ್ಕ ಒಮ್ಮೆಯೂ ತಿರುಗಿ ಬರಲಾರಳೇ? ಅವಳಿಗೆ ತನ್ನ ನೆನಪು ಬರುವದೇ ಇಲ್ಲವೇ...?

× × × × × ×

ತಂಗಿಯ ಸಾವು ನಾರಾಯಣರಾಯರ ಮನಸ್ಸಿನ ಮೇಲೆ ವಿಚಿತ್ರಪರಿಣಾಮವನ್ನುಂಟು ಮಾಡಿತು. ಅವರು ತಂಗಿ ಪದ್ಮಾಳನ್ನು ಬಹಳೇ ಅಂತಃಕರಣದಿಂದ ಕಂಡಿದ್ದರು. ತಮ್ಮ ಹೆಂಡತಿ ಹೋದ ದುಃಖವನ್ನು ಇದೀಗ ಜಯಿಸಿದ್ದರು. ಅಷ್ಟರಲ್ಲಿ ಬಿದ್ದ ಈ ಪೆಟ್ಟು ಅವರಿಗೆ ಹೆಚ್ಚಿನ ನೋವನ್ನುಂಟು ಮಾಡಿತು. ಆದರೆ ಅದನ್ನು ಯಾರಿಗೂ ತೋರಗೊಡುವಂತಿರಲಿಲ್ಲ. ತಮ್ಮ ತಾಯಿಯ ದುಃಖವನ್ನು ಕಂಡು - "ಅಯ್ಯೋ" ಎನ್ನುತ್ತಿದ್ದರು. ದೇವರು ಇಂಥ ಅನ್ಯಾಯವನ್ನು ಯಾಕೆ ಮಾಡುತ್ತಾನೆ-ಎಂದು ಕೆಲವು ಸಲ ವಿಚಾರಿಸುವರು. ಆದರೆ ಅದಕ್ಕೆ ಉತ್ತರವೆಲ್ಲಿಂದ ಸಿಗಬೇಕು? ಇದೆಲ್ಲ ತಮ್ಮ ಯಾವುದೋ ಪಾಪದ ಫಲವೆಂದುಕೊಂಡು ಮನದಲ್ಲಿಯೇ ಕೊರಗುವರು.

ಶಾರದಾಬಾಯಿಯವರಂತೂ "ಅಯ್ಯೋ, ನಾನು ಇದನ್ನು ನೋಡುವಂತಾಯಿತೇ! ದೇವರು ನನ್ನ ಮಗಳನ್ನು ಉಳಿಸಿ ನನ್ನನ್ನೇ ಒಯ್ದಿದ್ದರೆ ಏನು ಕೆಡಿತ್ತು?" ಎಂದು ತಮ್ಮನ್ನೇ ಶಪಿಸಿಕೊಳ್ಳುವರು.

× × × × × ×

ಹೆಂಡತಿಯ ಸಾವಿನಿಂದ ವೆಂಕಣ್ಣನ ದಿನಚರ್ಯೆಯೇ ಬದಲಾಯಿತು. ಪದ್ಮ ತೀರಿಕೊಂಡು ಎಷ್ಟೋ ದಿನಗಳವರೆಗೆ ಅವನು ಮನೆಬಿಟ್ಟು ಹೊರಗೆ ಕಾಲೇ ಹಾಕಲಿಲ್ಲ. ತಾನೇನೋ ತಪ್ಪು ಮಾಡಿದಂತೆ ಅವನ ಮನೋಭಾವನೆಯಾಗಿ ಬಿಟ್ಟಿದ್ದಿತು. ಯಾರನ್ನು ಕಾಣಲಿಕ್ಕೂ ಅವನಿಗೆ ಇಚ್ಛೆಯಿರಲಿಲ್ಲ. ಅವನಿಗೆ ಒಂದು ಪ್ರಕಾರದ ಹೆದರಿಕೆಯೂ ಬಂದಂತಾಗುತ್ತಿತ್ತು. ಈ ಹೆದರಿಕೆ ಯಾಕೆ ಎನ್ನುವುದು ಅವನಿಗೇ ತಿಳಿಯದು. ಮನೆಯಲ್ಲೂ ಹೆಚ್ಚು ಮಾತನ್ನೇ ಆಡುತ್ತಿರಲಿಲ್ಲ. ಯಾವಾಗಲೂ ಹೆಂಡತಿಯ ಮುಖವೇ ಕಣ್ಣಮುಂದೆ ಕಟ್ಟಿದಂತೆ ಆಗುತ್ತಿತ್ತು. ಅವಳ ಆ ಮೃದುಹಾಸ, ವಿನಯ ಗೌರವಗಳಿಂದ ಕೂಡಿದ ಮಾತು, ಗಾಂಭೀರ್ಯಯುಕ್ತವಾದ ನಡವಳಿಕೆಗಳನ್ನು ಅವನಿಂದ ಮರೆಯಲು ಸಾಧ್ಯವಾಗಲಿಲ್ಲ. ಅದೆಷ್ಟೋ ಸಲ ಹೆಂಡತಿಯ ವಿಚಾರದಲ್ಲಿ ಮಗ್ನನಾಗಿ ತಾಸುಗಟ್ಟಲೆ ಕುಳಿತುದೂ ಉಂಟು. ಕೆಲವು ಸಲವಂತೂ ಪದ್ಮ ತನ್ನ ಎದುರಿಗೇ ಇದ್ದಂತೆ ಅವನಿಗೆ ಭಾಸವಾಗುತ್ತಿತ್ತು. ಏನೋ ಮಾತನಾಡಬೇಕೆಂದು ಬಾಯಿ ತೆರೆಯುವನು. ಆದರೆ... ವಸ್ತುಸ್ಥಿತಿ ಜ್ಞಾಪಕಕ್ಕೆ ಬಂದಾಗ ಆಳವಾದ ನಿಟ್ಟುಸಿರು ಬಿಡುವನು.

ಪದ್ಮ ಇರುವಾಗಿನ ಹಲವಾರು ಸನ್ನಿವೇಶಗಳು ಅವನ ಕಣ್ಣೆದುರು ಹಾಯ್ದು ಹೋಗುತ್ತಿದ್ದವು. ಆಗ ಜಲಜಾಕ್ಷಿಗೆ ಅದೇ ಒಂದು ವರ್ಷ. ಮನೆಯಲ್ಲೆಲ್ಲ ಅಂಬೆಗಾಲಿಕ್ಕಿ ಹರಿದಾಡುತ್ತಿದ್ದಳು. ಒಂದು ದಿನ ಸಾಯಂಕಾಲ ಗೌರತ್ತೆ ಪುರಾಣಕ್ಕೆ ಹೋದವರು ಇನ್ನೂ ಮನೆಗೆ ಬಂದಿರಲಿಲ್ಲ. ವೆಂಕಣ್ಣ ತಿರುಗಾಡಲಿಕ್ಕೆ ಹೋಗಿದ್ದ. ಪದ್ಮ ದೀಪಕ್ಕೆ ಎಣ್ಣೆ ಹಾಕಿ, ಕಂದೀಲು ಹಚ್ಚಿಟ್ಟು ಕೈತೊಳೆಯಲೆಂದು ಬಚ್ಚಲುಮನೆಗೆ ಹೋಗಿದ್ದಳು. ಜಲಜಾಕ್ಷಿ ಅಂಬೆಗಾಲಿಕ್ಕುತ್ತ ಬಂದು ದೀಪ ಹಿಡಿದು ಹೋಗಿ ಉರುಳಿಸಿ ಬಿಟ್ಟಳು. ದೀಪದಿಂದ ತುಸು ಎಣ್ಣೆ ಕೆಳಗೆ ಬಿದ್ದು ಭುಗಿಲ್ ಎಂದು ಉರಿ ಎದ್ದಿತು. ಕೂಸಿನ ಕೈಗೆ ತುಸು ಉರಿಯೂ ತಾಗಿ ಅದು ಚೀರತೊಡಗಿತು.

ಪದ್ಮ ಒಂದೇ ಉಸುರಿಗೆ ಹಾರಿ ಬಂದಳು. ದೀಪದ ಉರಿ ಒಂದು ಕಡೆಗೆ, ಮಗುವಿನ ಚೀರಾಟ ಇನ್ನೊಂದು ಕಡೆಗೆ, ಅವಳಿಗೆ ಹೌಹಾರಿ ಏನು ಮಾಡಲಿಕ್ಕೂ ತಿಳಿಯಲಿಲ್ಲ. "ಅಯ್ಯೋ, ಜಲಜಾ" ಎಂದು ಕೂಗುತ್ತಾ ಮಗುವನ್ನೆತ್ತಿಕೊಂಡು ಎದೆಗವಚಿಕೊಂಡಳು. ಕೂಸು ಚೀರುತ್ತಲೇ ಇತ್ತು.

ನೆರೆಮನೆ ರಾಧಕ್ಕನವರು "ಏನ್ರೀ ಪದ್ದಕ್ಕ, ಯಾಕ್ರಿ, ಏನಾಯಿತು?" ಎನ್ನುತ್ತಾ ಧಾವಿಸಿ ಬಂದರು, ತಾಯಿ ಮಕ್ಕಳ ಕೂಗು ಕೇಳಿ. ಅವರಿಗೂ ಗಾಬರಿಯಾಗಿತ್ತು. ಪದ್ಮಳಿಗೆ ಏನು ಹೇಳಲಿಕ್ಕೂ ತಿಳಿಯಲಿಲ್ಲ. ಕಣ್ಣೀರು ದಳದಳ ಸುರಿಯುತ್ತಲೇ ಇತ್ತು.

ಅವರು ಉರಿಯನ್ನು ಆರಿಸಿ, ಒಳಗಿನ ಇನ್ನೊಂದು ಕಂದೀಲು ತಂದು "ಯಾರಿಗೆ ರಝಳ ತಾಕಿತು? ನಿಮಗೋ ಕೂಸಿಗೋ?" ಎಂದು ಕೇಳಿದರು.

ಪದ್ಮ ಬಿಕ್ಕುತ್ತಾ "ನನಗೇನು ಬಂತು ಧಾಡಿ? ಕೂಸಿನ ಕೈ..." ಮುಂದೆ ಹೇಳಲಾಗಲಿಲ್ಲ. ಅಳು ತಡೆಯಲಿಲ್ಲ. ಕೂಸಂತೂ ಕಿರುಚುತ್ತಲೇ ಇತ್ತು.

"ನಿಮಗೇನು ಹುಚ್ಚೇ? ಅಳುತ್ತ ಕುಳಿತರೇನಾಯಿತು? ಇಲ್ಲಿ ಕೊಡಿರಿ ಕೂಸಿನ್ನ. ಸ್ವಲ್ಪ ಜೇನು ತುಪ್ಪ ಇದ್ದರೆ ತರ್ರಿ. ಇಲ್ಲದಿದ್ದರೆ ಎಣ್ಣೇನಾದರೂ ತಗೊಂಡು ಬರ್ರಿ. ಸಾಕು." ಎಂದು ಜಲಜಾಕ್ಷಿಯನ್ನು ಎತ್ತಿಕೊಂಡರು. ನೋಡಿದರು. ಅಷ್ಟೇನೂ ಬಹಳ ಸುಟ್ಟಿರಲಿಲ್ಲ. ಅಂಗೈಯ್ಯ ಹತ್ತಿರ ಸ್ವಲ್ಪ ಝಳ ತಾಕಿ ಕೆಂಪಗಾಗಿತ್ತು.

ಅಷ್ಟರಲ್ಲಿ ಗೌರತ್ತೆಯವರೂ ಬಂದರು. ರಾಧಕ್ಕನ ಮುಖದಿಂದ ಎಲ್ಲವನ್ನೂ ಕೇಳಿ ಅವರಿಗೂ ಗಾಬರಿಯಾಯಿತು. ಮಗುವಿನ ಕೈಗೆ ಜೇನುತುಪ್ಪ, ಎಣ್ಣೆ ಎರಡನ್ನೂ ಹಚ್ಚಿದರು! ಆದರೂ ಮಗುವಿನ ಚೀರಾಟ ಕಡಿಮೆಯಾಗಲಿಲ್ಲ.

ವೆಂಕಣ್ಣ ಮನೆಗೆ ಬರುತ್ತಲೇ ಎಲ್ಲವನ್ನೂ ಕೇಳಿ ತಿಳಿದು, ಮಗುವನ್ನು ಡಾಕ್ಟರರ ಕಡೆಗೆ ಕರೆದುಕೊಂಡು ಹೋದ. ಡಾಕ್ಟರರು ಸಾಕಷ್ಟು ಪರಿಚಿತರೇ ಆಗಿದ್ದರು. ಅವರು ಕೂಸಿನ ಕೈಗೆ ಮುಲಾಮು ಹಚ್ಚಿ, "ಏನ್ರೀ, ಈಗಲೇ ಇಷ್ಟು ಅಲಕ್ಷ್ಯವಾದರೆ, ಮುಂದೆ



ನಾಲ್ಕಾರು ಹುಡುಗರಾದರೆ ಹೇಗೆ?" ಎಂದು ಸಹಜವಾಗಿ ಪದ್ಮಳಿಗೆ ನಗೆ ಮಾತನಾಡಿದರು.

ಪದ್ಮಳಿಗೆ ಅಷ್ಟೇ ಮಾತು ಸಾಕಾಗಿ ಹೋಯಿತು. ಮತ್ತೆ ದುಃಖ ತುಂಬಿ ಬಂದಿತು. ಕಣ್ಣೀರು ಕಪಾಳಕ್ಕೆ ಇಳಿಯಲು ತೊಡಗಿತು. ಅದನ್ನು ಗಮನಿಸಿದ ಡಾಕ್ಟರರು,

"ಓ, Sorry . ನಾನು ಹಾಗೇ ಚೇಷ್ಟೆ ಮಾಡಿದೆ. Excuse me" ಎಂದರು.

ಅದಕ್ಕೆ ವೆಂಕಣ್ಣ –"No, no, never mind Doctor, She is a bit sensitive ಅಷ್ಟೇ." ಎಂದು ಒಣನಗೆ ನಗಬೇಕಾಯಿತು.

ರಾತ್ರಿ "ಅಲ್ಲ, ಮಗೂನ ಕೈ ಸುಟ್ಟರೆ, ಆ ನೋವೆಲ್ಲ ನಿನಗೇ ಆದವರಂತೆ ಇದ್ದೆಯಲ್ಲ?" ಎಂದು ಕೇಳಿದರೆ "ನನಗೇನು ಬಂತು ನೋವು? ನನ್ನ ನಿಷ್ಕಾಳಜಿತನಕ್ಕೆ ಪಾಪ, ಕಂದವ್ವ ಕೈ ಸುಟ್ಟುಕೊಂಡಿತು." ಎಂದು ನುಡಿದಳು. ಅವಳ ದೃಷ್ಟಿಯೆಲ್ಲ ಮಲಗಿ ನಿದ್ರಿಸುತ್ತಿದ್ದ ಜಲಜಾಕ್ಷಿಯ ಕಡೆಗೇ ಇತ್ತು.

ಅಂದಿನಿಂದ ಗೌರತ್ತೆಯ ಪುರಾಣಶ್ರವಣಕ್ಕೆ ಸೊನ್ನೆಬಿತ್ತು. ಆ ವಿಷಯವನ್ನು ಹೆಂಡತಿಯಿಂದ ತಿಳಿದ ವೆಂಕಣ್ಣ "ಗೌರತ್ತೆ, ಯಾಕೆ ಪುರಾಣವನ್ನು ನಿಲ್ಲಿಸಿಬಿಟ್ಟಿಯಂತೆ?" ಎಂದು ಕೇಳಿದ್ದ.

ಆದಕ್ಕೇ ಅವರು, "ಇನ್ನೆಲ್ಲಿಯ ಪುರಾಣವೋ? ನೀನೇ ಆರಂಭಿಸಿದ್ದೀಯಲ್ಲ ವೆಂಕಟೇಶ ಮಹಾತ್ಮ್ಯ!' ಎಂದು ನಕ್ಕುಬಿಟ್ಟಿದ್ದರು.

ಆದರೆ... ಆದರೆ? ಆ ಪುರಾಣ ಅರ್ಧಕ್ಕೆ ನಿಂತು ಹೋಯಿತಲ್ಲ!

ವೆಂಕಣ್ಣನ ಕಣ್ಣುಗಳಿಂದ ನೀರು ಪಟಪಟ ಉದುರಿತು. ಆತ ಹಾಗೇ ಗೋಡೆಗೆ ಒರಗಿ ಮುಗ್ಗುಲಾದ.

× × × × × ×

ಎಲ್ಲರಿಗಿಂತ ಗಟ್ಟಿಮನಸ್ಸು ಮಾಡಿದವರೆಂದರೆ ಗೌರತ್ತೆಯವರು. ಅವರು ಜೀವನದಲ್ಲಿ ಅನೇಕ ಜನರ ಸಾವನ್ನು ಕಂಡಿದ್ದಾರೆ. ಆ ಕ್ಷಣಕ್ಕೆ ದುಃಖ ಅಸಹನೀಯವಾಗಿದ್ದರೂ ಕಾಲವು ಗತಿಸಿದಂತೆ ಅದರ ಆವೇಗವು ಕಡಿಮೆಯಾಗುವುದೆಂಬುದನ್ನು ಅವರು ಸ್ವತಃ ಅನುಭವಿಸಿ ತಿಳಿದುಕೊಂಡಿದ್ದಾರೆ, ಅದಕ್ಕಾಗಿಯೇ ಅವರು ತಮ್ಮ ದುಃಖವನ್ನೂ ಹತ್ತಿಕ್ಕಿ ಉಳಿದವರ ಅಳಲನ್ನೂ ಮರೆಯಿಸುವ ಪ್ರಯತ್ನವನ್ನು ಮಾಡುತ್ತಾರೆ.

– ೫ –

ಪದ್ಮ ತೀರಿಕೊಂಡು ಈಗ ಕೆಲವು ವರ್ಷಗಳೇ ಸಂದಿವೆ. ಈ ಅವಧಿಯಲ್ಲಿ ವೆಂಕಣ್ಣನಾಗಲಿ ಜಲಜಾಕ್ಷಿಯಾಗಲಿ ಅವಳ ಸಾವನ್ನು, ಸಾವಿನ ಸಂಕಟವನ್ನು ಅದೆಷ್ಟೋ ಪಾಲು ಮರೆತಿದ್ದರೆ ಅದರಲ್ಲಿ ಅಸ್ವಾಭಾವಿಕವೇನೂ ಇಲ್ಲ. ಹೆಂಡತಿಯನ್ನು ಕಳೆದುಕೊಂಡು ಇನ್ನೇನು ತಾನು ತಬ್ಬಲಿಯಾದೆ, ಅವಳ ಜೊತೆಗೆ ತನಗೂ ಸಾವೇಕೆ ಬರಲಿಲ್ಲ, ಎಂದು ಯೋಚನೆ ಬಂದುಹೋದಂಥ ವ್ಯಕ್ತಿಯ ಸ್ಮೃತಿಪಟಲದಿಂದ ಆತನ ಪದ್ಮ ಈಗ ಮಸಕಾಗುತ್ತಿದ್ದಾಳೆ. ಆದರೆ ಅವಳ ನೆನಹು ಮೂಡಿದಾಗಲೆಲ್ಲ ಮಾತ್ರ ಅವನ ಮನಸ್ಸು ಇಂದಿಗೂ ವಿಲಿವಿಲಿ ಎನ್ನುತ್ತದೆ. ಆದರೆ ಕೆಲವು ಸಲ ಅವಳ ಜೊತೆಗೆ ಕಳೆದ ದಿನಗಳ ನೆನಹೇ ಅವನ ರಸನಿಮಿಷಗಳಾಗುತ್ತವೆ. ಅವಳು ಕನಸಿನಲ್ಲಿ ಕಾಣಿಸಿಕೊಂಡ ರಾತ್ರಿ ಅವನನ್ನು ಆನಂದತುಂದಿಲನನ್ನಾಗಿ ಮಾಡುತ್ತವೆ.

ಆದರೆ ಆ ರಸನಿಮಿಷಗಳೇ ಆಗಲಿ, ವಿಷನಿಮಿಷಗಳೇ ಆಗಲಿ ಅವನಿಗೆ ದೊರೆಯುವುದು ವಿರಳ. ದಿನದ ವೇಳೆಯೆಲ್ಲ ಶಾಲೆ, ವಾಚನ, ಪೇಟೆ, ತಿರುಗಾಟ ಇದರಲ್ಲಿಯೇ ಕಳೆದುಹೋಗುತ್ತದೆ. ದಣಿದ ದೇಹಕ್ಕೆ ರಾತ್ರಿ ಗಾಢನಿದ್ರೆ ಆವರಿಸಲು ತಡವಾಗುವುದಿಲ್ಲ. ಬಹಳೇ ಬೇಸರ ಬಂದಾಗ ಕೆಲವು ಸಲ ಸಿನೇಮಕ್ಕೆ ಹೋಗುವುದೂ ಉಂಟು. ಅಂಥ ವೇಳೆಯಲ್ಲಿ ಗೆಳೆಯರು ಯಾರೂ ಇಲ್ಲದಾಗ ಜಲಜಾಕ್ಷಿಯನ್ನು ಸಂಗಡ ಕರೆದುಕೊಂಡು ಹೋಗುವನು.

ಜಲಜಾಕ್ಷಿಗೆ ಈಗ ಸುಮಾರು ಹದಿನಾಲ್ಕು ವರ್ಷ, ಇಂಗ್ಲೀಷು ಐದನೆಯ ವರ್ಗದಲ್ಲಿ ಓದುತ್ತಿದ್ದಾಳೆ. ಶಾಲೆಯಲ್ಲಿ ಮೇಲಿನ ನಂಬರು ಪಡೆಯದಿದ್ದರೂ ಪರೀಕ್ಷೆಯಲ್ಲಿ ನಪಾಸಾದ ಪ್ರಸಂಗಗಳಿಲ್ಲ. ಅವಳಿಗೆ ಶಾಲೆಯಲ್ಲಿ ಗಣಿತ-ಭೂಗೋಲ ಮೊದಲಾದವುಗಳಿಗಿಂತ ಕನ್ನಡ ಪಾಠಗಳೆಂದರೆ ಹೆಚ್ಚು ಇಷ್ಟವಾಗುತ್ತವೆ. ವರ್ಗದ ವಾಚನಾಲಯದಲ್ಲಿ ಇರುವ ಬಹುಶಃ ಎಲ್ಲ ಕತೆ-ಕಾದಂಬರಿಗಳನ್ನೂ ಓದುವುದಲ್ಲದೆ, ಸಾರ್ವಜನಿಕ ವಾಚನಾಲಯದ ಪುಸ್ತಕಗಳ ಮೇಲೂ ಅವಳ ದೃಷ್ಟಿ. ಹಾಗೆ ಅವಳಲ್ಲಿ ವಾಚನಾಭಿರುಚಿ ಹುಟ್ಟಿದ್ದರೆ ಅದಕ್ಕೆ ಅವಳ ತಂದೆಯೇ ಬಹಳಷ್ಟು ಕಾರಣನಾಗಿದ್ದನು. ಎಷ್ಟೋ ಸಲ ಒಳ್ಳೆಯ ಪುಸ್ತಕ ಸಿಕ್ಕಾಗ ತಂದು ಮಗಳಿಗೆ ಕೊಟ್ಟು ವೆಂಕಣ್ಣ ಓದಿಸಿದ್ದಾನೆ. "ಆ ಕತೆ ಚೆನ್ನಾಗಿದೆಯಲ್ಲವೇ? ಆನಂದರೂ ಮಾಸ್ತಿಯವರಂತೆಯೇ ಬರೆಯುವರು. ಕೊಡಗುನಾಡಿನ ಗೌರಮ್ಮನವರ "ಚಿಗುರು" ಮೆಚ್ಚಿಕೆಯಾಯಿತೇ? ನೀನೂ ಅಂಥ ಒಂದು ಕತೆ ಬರೆಯಬಲ್ಲೆಯಾ?" ಎಂದು ಕೇಳಿದ ಪ್ರಸಂಗಗಳೂ ಉಂಟು. ಜಲಜಾಕ್ಷಿಗೆ ತಾನೂ ಬರೆಯಬೇಕು, ಬರೆದೇನು ಎನ್ನುವ ಆಸೆ–ಧೈರ್ಯ ಇಲ್ಲವಾದರೂ, ಒಂದು ಒಳ್ಳೆಯ ಕತೆಯನ್ನೋ ಕಾದಂಬರಿಯನ್ನೊ ಓದಲು ತೆಗೆದುಕೊಂಡರೆ ಊಟ ನಿದ್ರೆಗಳನ್ನೂ ಒಮ್ಮೊಮ್ಮೆ ಮರೆಯುತ್ತಾಳೆ. ಕತೆಯಲ್ಲಿಯ ನಾಯಕಿಯ ಆಶಾಗೋಪುರ ಕಳಚಿಬಿದ್ದಾಗ, ದಳದಳ ಕಣ್ಣೀರು ಸುರಿಸುತ್ತಾಳೆ. ಅದನ್ನು ಕಂಡಾಗ ಗೌರತ್ತೆ, "ಜಲಜಾ,

ವಿನಾಯ್ತವ್ವ?" ಎಂದು ಗಾಬರಿಗೊಂಡು ಕೇಳಿದ ಪ್ರಸಂಗಗಳು ಹಲವು. ಆಗ ಜಲಜಾಕ್ಷಿ "ಏನಿಲ್ಲ" ಎಂದರೆ ಅವರು ಅಷ್ಟಕ್ಕೇ ಬಿಡುವುದಿಲ್ಲ. ಆಗ ಜಲಜಾಕ್ಷಿ ತಾನು ಓದಿದ ಕತೆಯನ್ನೆಲ್ಲ ಹೇಳಬೇಕಾಗುವುದು. ಕತೆ ಹೇಳುವಾಗಲೂ ಅವಳು ಕಣ್ಣೀರು ಸುರಿಸುತ್ತಲೇ ಹೇಳಿದ್ದೂ ಉಂಟು. ಅದನ್ನು ಕೇಳಿದ ಗೌರತ್ತೆಯವರು ನಗುತ್ತಾ, "ಹುಚ್ಚೀ, ಅದೆಲ್ಲ ಕಥೆ ಅದಕ್ಕೆ ಅಳಬೇಕೇನು? ಚಿಕ್ಕವರು ಕಾದಂಬರಿ ಓದಬಾರದೆಂದು ಅದಕ್ಕೇ ಹೇಳುವರು. ನಾಳೆಯಿಂದ ಅಂಥವನ್ನು ಓದಬೇಡ." ಎನ್ನುವರು.

ಅಂಥ ಸಾಹಿತ್ಯವಾಚನದಲ್ಲಿ ತೊಡಗಿದಾಗ ಅವಳ ಮುಗ್ಧ ಮನಸ್ಸು ಮಸ್ತಕಪ್ರಪಂಚದಿಂದ ಭಾವ ಪ್ರಪಂಚಕ್ಕೆ ಕಾಲಿರಿಸುತ್ತದೆ. ಅಲ್ಲಿ ಪದ್ದಕ್ಕ, ನಾನಣ್ಣ ಮಾಮಾ, ಸಾಂಗಲಿಯಲ್ಲಿ ಕಳೆದ ಬಿಡುವಿನ ದಿನಗಳು, ಮೋಹನ-ಶಾಮರ ಸ್ನೇಹ ಮೊದಲಾದವು ಅವಳ ಹೃದಯವನ್ನು ಆವರಿಸುತ್ತವೆ. ಆಗ ಅವಳು "ಎಂದು ಶಾಲೆಗೆ ಬಿಡುವಾಗುವದೊ, ಎಂದು ಸಾಂಗಲಿಗೆ ಹೋಗುವೆನೊ" ಎಂದು ಯೋಚಿಸುವಳು.

ಅವಳ ಬಿಡುವಿನ ದಿನಗಳೆಲ್ಲ ಸಾಂಗಲಿಯಲ್ಲಿಯೇ ಕಳೆಯುತ್ತವೆ. ಪದ್ದಕ್ಕ ತೀರಿಕೊಂಡ ಕೂಡಲೇ ನಾರಾಯಣರಾಯರು ಜಲಜಾಕ್ಷಿಯನ್ನು ತಮ್ಮ ಜೊತೆಗೆ ಸಾಂಗಲಿಗೆ ಕರೆದುಕೊಂಡು ಹೋಗಿದ್ದರು. ಅಲ್ಲಿ ವಾತಾವರಣ ಬೇರೆಯಾಗಿ, ಮೋಹನ-ಶಾಮರ ಜೊತೆಯಲ್ಲಿ ಅವಳು ತಾಯಿಯ ಮರಣದ ವಿಷಯವನ್ನು ತುಸು ಮರೆಯಲು ಸಾಧ್ಯವಾಯಿತು. ಅವಳನ್ನು ಅಲ್ಲಿಯೇ ಇಟ್ಟುಕೊಂಡುಬಿಡಬೇಕೆಂದು ನಾರಾಯಣರಾಯರು ಶಾರದಾಬಾಯಿಯವರೂ ಅಪೇಕ್ಷಿಸಿದ್ದರು. ಆದರೆ ವೆಂಕಣ್ಣನೇ ಒಪ್ಪಲಿಲ್ಲ. ಒಂದೆರಡು ತಿಂಗಳ ನಂತರ ಅವನೇ ಹೋಗಿ ಕರೆದುಕೊಂಡು ಬಂದಿದ್ದನು. ಪದ್ಮಾಳು ಹೋದನಂತರ ವೆಂಕಣ್ಣನಿಗೆ ಮನೆ ಬಿಕೋ ಎನ್ನುವಂತಾಗಿತ್ತು. ಆದ್ದರಿಂದ ಆತ ಜಲಜಾಕ್ಷಿಯನ್ನು ಬೆಳಗಾವಿಗೇ ಕರೆದುಕೊಂಡು ಬಂದಿದ್ದನು. ಜಲಜಾಕ್ಷಿಗೆ ಉಳಿದದಿನಗಳಲ್ಲಿ ಶಾಲೆ, ಅಭ್ಯಾಸ, ಮನೆಗೆಲಸದಲ್ಲಿ ಗೌರತ್ತೆಗೆ ಸಹಾಯ ಮಾಡುವುದು ಇವುಗಳಲ್ಲಿಯೇ ವೇಳೆಯೆಲ್ಲ ಕಳೆದು ಹೋಗುತ್ತದೆ. ದಿನದ ಒಂದುಗಂಟೆಯಾದರೂ ನೆರೆಮನೆ ಕುಸುಮಾನ ಜೊತೆ ಅವಳು ಇದ್ದೇ ಇರುತ್ತಾಳೆ. ಕುಸುಮಾ ಈಗ ಮ್ಯಾಟ್ರಿಕ್ ಪಾಸಾಗಿ ಶಾಲೆಯನ್ನು ಬಿಟ್ಟಿರುವಳು. ಅವಳ ತಂದೆ ಕೃಷ್ಣರಾಯರು ಮಗಳಿಗೆ ವರ ಹುಡುಕುತ್ತಲಿದ್ದಾರೆ. ತಾಯಿ ರಾಧಕ್ಕ ಮಗಳಿಗೆ ಬೇಗನೇ ಲಗ್ನ ಮಾಡದೆ ಇಷ್ಟು ದಿನ ಬಿಟ್ಟದ್ದೇ ದೊಡ್ಡತಪ್ಪು ಎಂದು ಗಂಡನನ್ನು ದೂಷಿಸುತ್ತಾರೆ. ಅದಕ್ಕೆ ಅವರು, "ಅವಳಿಗೇನು ಅಂಥ ವಯಸ್ಸು ಈಗ? ನೋಡೋಣ ಈ ವರ್ಷ. ಈ ವರ್ಷ ತಪ್ಪಿದರೆ ಮುಂದಿನ ವರ್ಷ" ಎಂದು ಮಾತು ಹಾರಿಸುತ್ತಾರೆ.

× × ×

ಅಂದು ಯಾವುದೋ ಹಬ್ಬ. ವೆಂಕಣ್ಣನ ಊಟ ನಿಧಾನವಾಗಿ ನಡೆದಿದ್ದಿತು. ಗೌರತ್ತೆ ಎಂದಿನಂತೆ ಬಡಿಸುತ್ತಿದ್ದರು. "ಸಾಕು, ಸಾಕು" ಎನ್ನುತ್ತ ಅಳಿಯ ಎಲೆಯಲ್ಲಿಯ ಆಹಾರವನ್ನು ಸವೆಯಿಸುತ್ತಿದ್ದ.

ದಿನಾಲು ಪಕ್ಕದಲ್ಲಿ ಊಟಕ್ಕೆ ಕೂಡುತ್ತಿದ್ದ ಜಲಜಾಕ್ಷಿ ಅಂದು ಆತನಜೊತೆ ಕುಳಿತಿರಲಿಲ್ಲ. ನೆರೆಮನೆ ರಾಧಾಬಾಯಿಯವರು ಅವಳಿಗೆ ಊಟಕ್ಕೆ ಹೇಳಿದ್ದರು.

ಬಿಸಿ ಬಿಸಿ ಕಡುಬಿಗೆ ಎರಡು ಚಮಚೆ ತುಪ್ಪ ಬಡಿಸುತ್ತ ಗೌರತ್ತೆ,

"ವೆಂಕಾ," ಎಂದರು.

"ಏನು ಗೌರತ್ತೆ?" ವೆಂಕಣ್ಣ ಕೇಳಿದ.

"ಒಂದು ಸಂಗತಿ. ನೀನು ಹೇಳು ಅಂದರೆ ಹೇಳುತ್ತೇನೆ."

"ಏನೂಂತ ಹೇಳಬಾರದೇ? ಇಷ್ಟು ಸಂಕೋಚ ಯಾಕೆ?"

"ಮೊನ್ನೆ ರಾಮಣ್ಣ ಬಂದಿದ್ದ..."

ರಾಮಣ್ಣ ಗೌರತ್ತೆಗೆ ದೂರದ ಸಂಬಂಧಿಕ. ಬೆಳಗಾವಿಗೆ ಸಮೀಪದ ಪಾರಿಶ್ವಾಡ ಅವರ ಹಳ್ಳಿ. ಏನಾದರೂ ಕೆಲಸವಿದ್ದಾಗ್ಗ, ಆಗಾಗ ಬೆಳಗಾವಿಗೆ ಬರುತ್ತಿದ್ದರು. ಹಾಗೆ ಬಂದಾಗಲೆಲ್ಲ ಇವರ ಮನೆಯಲ್ಲಿಯೇ ಉಳಿದುಕೊಳುತ್ತಿದ್ದರು.

"ಹೌದು. ಅಂದಹಾಗೆ, ಮರೆತೇಬಿಟ್ಟಿದ್ದೆ, ನೋಡು. ಅವರು ಏನು ಕಾರಣ ಬಂದಿದ್ದರಂತೆ?" ವೆಂಕಣ್ಣ ಕೇಳಿದ.

"ಅವನ ಮಗಳು ಚಂಪಾ ಬೆಳೆದು ದೊಡ್ಡವಳಾಗಿದ್ದಾಳೆ. ವರ ಹುಡುಕುವದಕ್ಕಾಗಿ ಬಂದಿದ್ದನಂತೆ." ಗೌರತ್ತೆ ಹೇಳಿದರು.

"ಎಲ್ಲಿಯಾದರೂ ಗೊತ್ತಾಯಿತೇನು?" ವೆಂಕಣ್ಣ ಸಹಜವಾಗಿ ವಿಚಾರಿಸಿದ.

"ಇಲ್ಲವಂತೆ ಪಾಪ! ಎಲ್ಲಿ ಹೋದರೂ ವರದಕ್ಷಿಣೆಯ ಪ್ರಾಬಲ್ಯವೇ ಹೆಚ್ಚು. ಬಡವ ರಾಮಣ್ಣ ಅಷ್ಟು ಹಣ ಎಲ್ಲಿಂದ ತರಬೇಕು? ಅದರಲ್ಲಿ ಹುಡುಗಿಗೆ ವಯಸ್ಸೂ ಹೆಚ್ಚಾಯಿತು..."

"ಹೂಂ." ನೀರು ಕುಡಿಯುತ್ತ ವೆಂಕಣ್ಣ ಸಹಜವಾಗಿ ಕೇಳಿದ,

"ಹುಡುಗಿ ಕಲಿತಿದ್ದಾಳೇನು?"

"ಹೆಚ್ಚಿಗೆ ಕಲಿತಿಲ್ಲ. ಕನ್ನಡ ಮುಲ್ಕೀತನಕ ಕಲಿತಿರಬೇಕು".

"ಅದೇ ತೊಂದರೆಯವ್ವ, ಶಿಕ್ಷಣವೂ ಇಲ್ಲ, ವರದಕ್ಷಿಣೆಯೂ ಇಲ್ಲ-ಅಂದರೆ, ಅಂಥ ಹಳ್ಳಿಯ ಕಾಡು ಹುಡುಗಿಯನ್ನು ಈಗಿನವರು ಯಾರು ಒಪ್ಪುವರು?"

"ಕಾಡು ಯಾಕೊ? ಹುಡುಗಿ ನಕ್ಷತ್ರವಾಗಿದ್ದಾಳೆ. ಚಂಪಾನ್ನ ನಾನು ನೋಡಿಲ್ಲವೇನು?"

"ಎಲ್ಲಿಯಾದರೂ ದೊರೆತೀತೇಳು ಸ್ಥಳ. ಅಷ್ಟು ಅವಸರವೇಕೆ?" ವೆಂಕಣ್ಣ ಸಮಾಧಾನ ಹೇಳಿದ.

ಗೌರತ್ತೆ ಹಾಲು ಅನ್ನ ಬಡಿಸುತ್ತ,

"ರಾಮಣ್ಣ ನಿನ್ನನ್ನು ಒಂದು ಮಾತು ಕೇಳೂ, ಅಂದ..."ಎಂದರು.

"ಏನು?"

"ಚಂಪಾನ್ನ ನಿನಗೇ ಕೊಡಬೇಕು ಎಂದು ರಾಮಣ್ಣನ ವಿಚಾರ..."

"ಇದೇನು ಮಾತು ಗೌರತ್ತೆ? ನಾನು ಮದುವೆ ಮಾಡಿಕೊಳ್ಳುತ್ತೇನೆಂದು ಅವರಿಗೆ ಯಾರು ಹೇಳಿದರು?" ವೆಂಕಣ್ಣ ಕೇಳಿದ.

ಗೌರತ್ತೆ ಎರಡು ಮಿನಿಟು ತಡೆದು,

"ಪದ್ಮ ಹೋದದ್ದು ನಿನಗೇನೂ ದುಃಖವಿಲ್ಲವೆಂದು ತಿಳಿಯಬೇಡ. ಆದರೂ ಮನೆ ನಿಲ್ಲಲಿಕ್ಕೆ ಒಂದು ಗಂಡುಮಗು ಬೇಡವೇನೋ?" ಗೌರತ್ತೆ ಸೆರಗಿನಿಂದ ಕಣ್ಣು ಒರಸಿಕೊಂಡರು.

ವೆಂಕಣ್ಣನಿಗೆ ತುತ್ತು ಗಂಟಲಲ್ಲಿ ಇಳಿಯಲಿಲ್ಲ. ನೀರು ಕುಡಿದು ಹಾಗೇ ಎದ್ದುಬಿಟ್ಟ.

ಹಾಗೆ, ವೆಂಕಣ್ಣನ ಎರಡನೆಯ ಮದುವೆಯ ಪ್ರಸ್ತಾಪ ಬಂದುದು ಇದೇ ಮೊದಲ ಸಲವಲ್ಲ. ಪದ್ಮ ತೀರಿಹೋಗಿ ಒಂದು ತಿಂಗಳು ಕಳೆಯುವ ಮೊದಲೇ ಗೌರತ್ತೆಯ ಮುಂದೆ ಅವರ ಪರಿಚಯದವರೊಬ್ಬರು ಆ ಮಾತು ತೆಗೆದಿದ್ದರು. ಆದರೆ ತಮ್ಮ ಅಳಿಯನ ಆಗಿನ ಮನಃಸ್ಥಿತಿಯನ್ನು ಅರಿತ ಗೌರತ್ತೆ ಆ ಮಾತನ್ನು ವೆಂಕಣ್ಣನ ಮುಂದೆ ತೆಗೆದಿರಲೇ ಇಲ್ಲ. ಮುಂದೆ ಅನೇಕ ಕನ್ಯಾಪಿತೃಗಳು ವೆಂಕಣ್ಣನ ಸ್ನೇಹಿತರ ಮುಖಾಂತರ ಬಂದಿದ್ದರು. ಆದರೆ ಆತ ನೇರವಾಗಿ ನಿರಾಕರಿಸಿಬಿಟ್ಟಿದ್ದ. ಕೆಲವು ಸಲ ಗೌರತ್ತೆಯವರು ಒತ್ತಾಯವನ್ನು ಮಾಡಿದ್ದರೂ, ವೆಂಕಣ್ಣ ಒಪ್ಪಿರಲಿಲ್ಲ. ಕಳೆದ ಒಂದೆರಡು ವರ್ಷದಿಂದ ಯಾರೂ ಆ ಮಾತನ್ನೇ ತೆಗೆದಿರಲಿಲ್ಲ.

ಈಗ ಗೌರತ್ತೆಯ ಸಂಬಂಧಿಕರಾದ ರಾಮಣ್ಣ ಗೌರತ್ತೆಯವರನ್ನೇ ಮೊರೆಹೊಕ್ಕಿದ್ದರು. ರಾಮಣ್ಣನ ಮನೆತನವನ್ನು ಗೌರತ್ತೆ ಚೆನ್ನಾಗಿ ಬಲ್ಲರು. ಅಲ್ಲದೆ ಚಿಕ್ಕಂದಿನಿಂದಲೂ ಚಂಪಾ ಅವರ ಮುಂದೆಯೇ ಬೆಳೆದ ಹುಡುಗಿ. ಅವಳು ತಮ್ಮ ಮನೆಗೆ ಹೊಂದಿಕೊಳ್ಳಬಹುದೆಂದು ಗೌರತ್ತೆ ಬಲ್ಲರು. ಚಂಪಾ ಕಾಣಲಿಕ್ಕೂ ಚೆನ್ನಾಗಿದ್ದಳು. ಈ ಸಂಬಂಧ ಕೂಡಿ ಬರಲಿ ಎಂದು ಗೌರತ್ತೆ ಮನಃಪೂರ್ವಕ ಬಯಸಿದ್ದರು. ಆದರೆ ವೆಂಕಣ್ಣ ಒಪ್ಪುವನೆಂಬ ಭರವಸೆ ಮಾತ್ರ ಅವರಿಗಿರಲಿಲ್ಲ. ದೇವರ ದಯದಿಂದ ಅವನು ಒಪ್ಪಿದರೆ ಎಲ್ಲರಿಗೂ ಒಳಿತೆಂದು ಅವರ ವಿಚಾರ.

ಮುಂದೆ ನಾಲ್ಕಾರು ದಿನ ಗೌರತ್ತೆ ಮತ್ತೆ ಆ ಬಗ್ಗೆ ಮಾತೆತ್ತಿರಲಿಲ್ಲ. ವೆಂಕಣ್ಣನೂ ಆ ನಾಲ್ಕು ದಿನ ವಿಚಾರಮಗ್ನನಾಗಿಯೇ ಇದ್ದಂತಿದ್ದನು. ಅವನ ಮನದಲ್ಲಿ ತನ್ನ ಮರುಮದುವೆಯ ಸಾಧಕ-ಬಾಧಕ ವಿಚಾರಗಳ ತಾಕಲಾಟ ನಡೆದೇ ಇತ್ತು. ಅಳಿದುಹೋದ ಪದ್ಮಳ ನೆನಪು ಅವನನ್ನು ಪದೇಪದೇ ಪೀಡಿಸಿತು. ಅವಳ ಪ್ರೇಮ, ಅಂತಃಕರಣಗಳ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋದ ತಾನು ಈಗ ಮರುಳುಗಾಡಿನಲ್ಲಿರುವಂತೆ ತೋರಿತು. ತನ್ನ ಮಗಳೂ ತಾನೂ ಬಹಳ ದುರ್ದೈವಿಗಳೆಂದು ಆತ ಸಾವಿರ ಸಲ ಅಂದುಕೊಂಡ. ಪದ್ಮಳ ಸ್ಥಾನವನ್ನು ಬೇರೊಬ್ಬಳಿಗೆ ಹೇಗೆ ಕೊಡುವದು? ಆ ಬಂದವಳು ತನ್ನನ್ನು, ತನ್ನ ಮಗಳನ್ನೂ ನಿಜವಾದ ಪ್ರೀತಿಯಿಂದ ಕಾಣಬಹುದೇ? ಈ ಪ್ರಶ್ನೆ ತಲೆ ಎತ್ತಿದಾಗ ಆತ ಮರುಮದುವೆ ಬೇಡವೆಂದೇ ನಿರ್ಧರಿಸುತ್ತಿದ್ದ. ಆದರೆ ಗೌರತ್ತೆಯ-ಆಸೆ-ಒತ್ತಾಯಗಳನ್ನೂ ಆತ ವಿಚಾರಿಸಬೇಕಾಗಿತ್ತು. ಮೊಮ್ಮಗನನ್ನು ಕಾಣಬೇಕೆಂಬ ಅವರ ಆಸೆಯಲ್ಲಿ ಅಸ್ವಾಭಾವಿಕವಾದುದೇನೂ ಇಲ್ಲವೆಂದು ಆತ ಒಪ್ಪುತ್ತಾನೆ. ತನಗೂ ಎಷ್ಟೋ ಸಲ ಆ ಆಸೆ, ವಿಚಾರ ಬಂದಿಲ್ಲವೇ? ಜಲಜಾಕ್ಷಿಯ ಮದುವೆಯನ್ನು ಮಾಡಿ ಅವಳ ಮಗನನ್ನೇ ಏಕೆ ದತ್ತಕ ಮಾಡಿಕೊಳ್ಳಬಾರದು? ಆದರೆ ಅದು ದೂರದ ಕನಸು. ನಾಳೆ ಗೌರತ್ತೆಯೂ ಹೊರಟು ಹೋಗಿ, ಜಲಜಾಕ್ಷಿಯೂ ಗಂಡನ ಮನೆ ಸೇರಿದಾಗ ತನ್ನ ಒಂಟಿತನವನ್ನು ಹೇಗೆ ಎದುರಿಸಬೇಕು?-ಹೀಗೆ ವಿಚಾರಗಳ ತಾಕಲಾಟದಲ್ಲಿ ಅವನ ಮನಸ್ಸು ಒಮ್ಮೆ ಅತ್ತ ಒಮ್ಮೆ ಇತ್ತ ಒಲಿಯುತ್ತಲಿತ್ತು.

ಮುಂದೆ, ಒಂದು ರವಿವಾರ ಗೌರತ್ತೆ ಊಟ ಮುಗಿಸಿಕೊಂಡು ಅಳಿಯನ ಕೋಣೆಗೆ ಬಂದರು,

ವೆಂಕಣ್ಣ ಪೇಪರು ಓದುತ್ತ ಅಡ್ಡಾಗಿದ್ದ. ಗೌರತ್ತೆ ಯಾಕೆ ಎಂವರೆಂಬುದು ಆತನಿಗೂ ಗೊತ್ತಾಯಿತು. ಆದರೂ ಸುಮ್ಮನೇ ಇದ್ದ. ಗೌರತ್ತೆಯವರೇ ಕೇಳಿದರು,

"ರಾಮಣ್ಣನಿಗೆ ಏನು ತಿಳಿಸಲಿ...?"

ಎರಡು ನಿಮಿಷ ವೆಂಕಣ ಏನೂ ಉತ್ತರ ವನ್ನೇ ಹೇಳಲಿಲ್ಲ. ಗೌರತ್ತೆಯವರೇ ಮತ್ತೆ ಕೇಳಿದರು.

"ನಿನ್ನ ಮನಸ್ಸಿನ ವಿರುದ್ಧ ಮಾಡಬೇಕೆಂದು ನನ ಗೇನೂ ಉತ್ಸಾಹವಿಲ್ಲಪ್ಪ. ಆದರೆ ಪ್ರಸಂಗವೇ ಹಾಗೆ ಬಂದಿದೆ. ಏನು ಮಾಡಲಿ ಹೇಳು?"

ಈಗ ವೆಂಕಣ್ಣ ಉತ್ತರಿಸಲೇಬೇಕಾಯಿತು.

"ಈಗ ಮದುವೆಯ ವಿಚಾರವೇಕೆ? ಜನರಾದರೂ ಏನೆಂದಾರು?"



"ಜನರೇನು ಅನ್ನುತ್ತಾರೆ? ಗಂಡುಮಗ ಇರಲಿಲ್ಲ; ಮದುವೆ ಮಾಡಿಕೊಂಡ–ಎನ್ನುವರು. ಶಾಸ್ತ್ರದಲ್ಲೇ ಹೇಳಿದೆಯಂತೆ."

"ಆದರೆ ಜಲಜಾಕ್ಷಿಯ ಗತಿಯೇನು?"

"ಅವಳಿಗೇನಾಗುತ್ತದೆ? ನನಗೂ ವಯಸ್ಸಾಗುತ್ತ ಬಂತು. ಅವಳ ಯೋಗಕ್ಷೇಮ ನೋಡುವವರು ಬೇಡ ವೇನು? ಇಷ್ಟಾಗಿ ಚಂಪಾ ಏನು ಹೊರಗಿನವಳೇ? ಹುಡುಗಿ ಬಹಳ ಒಳ್ಳೇದು, ನಾನು ನೋಡಿಲ್ಲವೇ? ಆದರ ಯೋಚನೆ ನಿನಗೇಕೆ, ನಾನಿಲ್ಲವೇ?"

ವೆಂಕಣ್ಣ ಮತ್ತೆ ಮೌನ ಧರಿಸಿದ. ಐದು ನಿಮಿಷ ತಡೆದು, ಗೌರತ್ತೆ ನುಡಿದರು,

"ನಮ್ಮ ರಾಮಣ್ಣನ ಮನೆತನ ಇಷ್ಟಕ್ಕೆ ನಿಲ್ಲ ಬಾರದಲ್ಲ? ನಿನ್ನ ಹೊಟ್ಟೆಯಿಂದ ಹುಟ್ಟಿದ ಗಂಡು ಮಗುವೊಂದನ್ನು ಕಾಣಬೇಕೆಂದು ನನ್ನ ಆಸೆ. ಏನು ಮಾಡುತ್ತಿಯೋ ಮಾಡು." ಅವರ ಕಣ್ಣಿನಿಂದ ನೀರು ಚಿಮ್ಮಿತು.

ವೆಂಕಣ್ಣನಿಗೆ ಧರ್ಮಸಂಕಟಕ್ಕೇ ಇಟ್ಟುಕೊಂಡಿತು. ಮರುಮದುವೆಗೆ ಅವನ ಮನಸ್ಸು ಸಂಪೂರ್ಣ ಸಿದ್ಧವಿಲ್ಲ. ಇಷ್ಟು ಅಂಗಲಾಚಿ ಕೇಳುತ್ತಿರುವ ಗೌರತ್ತೆಗೆ ಇಲ್ಲ ಎನ್ನುವಂತಿಲ್ಲ... ನಿಮಿಷಾರ್ಧದಲ್ಲಿ ಹಲವಾರು ಚಿತ್ರಗಳು ಅವನ ಕಣ್ಣೆದುರು ಸುಳಿದವು. ಒಂದೆಡೆ ಹೊಸ ಹೆಂಡತಿ, ಅವಳಿಂದ ಹುಟ್ಟಬಹುದಾದ ಗಂಡು ಮಗ, ತನ್ನ ಜೀವನದ ಸಾಫಲ್ಯ... ಇತ್ಯಾದಿ. ಅದರ ಹಿಂದೆಯೇ ಪದ್ಮಳ ಚಿತ್ರ ಕಣ್ಣೆದುರು ಕಟ್ಟಿದಂತಾಗಿ ಕಣ್ಣು ತೇವಾದುವು!

ಅವನ ಕಣ್ಣಂಚಿನಲ್ಲಿ ಮೂಡಿದ ಕಣ್ಣೀರನ್ನು ಗೌರತ್ತೆಯವರೂ ಕಂಡರು.

"ನಿನಗೆ ಅಷ್ಟು ದುಃಖವಾಗುತ್ತಿದ್ದರೆ ಬೇಡಪ್ಪ. ಎಲ್ಲರಿಗೂ ಹಿತವಾಗಲೆಂದೇ ಮಾಡುವದಲ್ಲವೇ?" ಅವರು ಅಂತಃಕರಣದಿಂದ ನುಡಿದರು.

"ಅಲ್ಲ, ಗೌರತ್ತೆ. ನನಗೆ ಜಲಜಾಕ್ಷಿಯದೇ ಚಿಂತೆ." ವೆಂಕಣ್ಣನ ಹೃದಯದಿಂದ ಮಾತು ಬಂತು.

"ಅವಳ ಹಿತ, ನಿನ್ನ ಹಿತ– ಎಲ್ಲವನ್ನೂ ವಿಚಾರ ಮಾಡಿಯೇ ನಾನು ಹೇಳುತ್ತಿದ್ದೇನೆ; ಒಪ್ಪಿಕೊಳ್ಳಪ್ಪಾ. ನನ್ನ ಮಾತನ್ನು ನೀನು ಎಂದೂ ಮೀರಿಲ್ಲ. ಈ ವಿಷಯದಲ್ಲೂ ನನ್ನ ಮಾತು ಕೇಳು. ಎಲ್ಲವೂ ಒಳಿತೇ ಆಗುತ್ತದೆ" ಎಂದರು.

ವೆಂಕಣ್ಣ ನಿರುತ್ತರನಾದ. ಅವನ ಮೂಕ ಸಮ್ಮತಿಯನ್ನು ಗೌರತ್ತೆ ಅರಿತುಕೊಂಡರು.

ಅಂತೂ ವೆಂಕಣ್ಣ ಗೌರತ್ತೆಯ ಒತ್ತಾಯಕ್ಕೆ ಮಣಿದಂತಾಯಿತು. ಈ ಸಮಾಚಾರವನ್ನು ತಿಳಿದ ಜಲಜಾಕ್ಷಿಗೆ ಹೇಗೆ ಹೇಗೋ ಎನಿಸಿತು. ಮಸುಕು ಮಸುಕಾಗುತ್ತಿದ್ದ ಪದ್ಮಕ್ಕನ ನೆನಪು ಮರುಕಳಿಸಿತು. ದುಃಖವೂ ಉಕ್ಕಿಬಂತು. ಅದರ ಜೊತೆಗೆ ಒಂದು ವಿಧವಾದ ಭಯವೂ ಆವರಿಸಿತು. ಆದರೂ ಅದನ್ನು ಯಾರ ಮುಂದೂ ಹೇಳುವಂತಿರಲಿಲ್ಲ. ನೆರೆಮನೆ ರಾಧಾಬಾಯಿರು ತಮ್ಮ ಗೆಳತಿಯನ್ನು (ಪದ್ಮಕ್ಕನನ್ನು) ನೆನೆದು, ಆಡಿದ ಆತ್ಮೀಯ ಮಾತುಗಳನ್ನು ಕೇಳಿದಾಗ ಮಾತ್ರ ಅವಳ ದುಃಖ ಕಣ್ಣೀರಾಗಿ ಹರಿಯಿತು!

- ೬ -

ಮದುವೆ ಯಾವ ಅಡ್ಡಿ–ಆಂತಕಗಳೂ ಇಲ್ಲದೆ ನಡೆಯಿತು. ಎರಡೂ ಪಕ್ಷದವರ ಅನುಮತಿಯಿಂದ ಮದುವೆ ಬೆಳಗಾವಿಯ ಅಡವಿಯ ಹನುಮನ ಗುಡಿಯಲ್ಲಿ ನೆರವೇರಿತು. ಅದು ನಿಜವಾಗಿಯೂ ರಮ್ಯವಾದ ಸ್ಥಳ. ಬೆಳಗಾವಿಯಿಂದ ಕಣಬರಗಿಯ ರಸ್ತೆಯಲ್ಲಿ ಒಂದುಒಂದೂವರೆ ಮೈಲು ದೂರದಲ್ಲಿದೆ. ಗುಡಿಯು ಪೂರ್ವಾಭಿಮುಖವಾಗಿದೆ. ಕಟ್ಟಡ ತಕ್ಕಮಟ್ಟಿಗೆ ಭವ್ಯವೂ ಆಗಿದೆ. ಗುಡಿಯ ಎದುರಿಗೆ ಅಶ್ವತ್ಥವೃಕ್ಷದ ಕಟ್ಟೆಯಿದೆ. ಸಮೀಪದಲ್ಲಿಯೇ ಸಾಕಷ್ಟು ದೊಡ್ಡದಾದ ಧರ್ಮಶಾಲೆ, ಒಂದಲ್ಲದಂತೆ ಎರಡು ಬಾವಿಗಳೂ, ಸುತ್ತಲೂ ಕಣ್ಣಿಗೆ ರಮಣೀಯವಾದ ಬೈಲು, ಅಲ್ಲಲ್ಲಿ ಗಿಡಗಳು–ಇವೆಲ್ಲ ಗುಡಿಯ ಪವಿತ್ರ ಪ್ರಶಾಂತ ವಾತಾವರಣಕ್ಕೆ ಇನ್ನಷ್ಟು ಕಳೆಯನ್ನು ಕೊಡುತ್ತವೆ.

ಮದುವೆಯಲ್ಲಿ ಹೇಳುವಂಥ ಮನಸ್ತಾಪಗಳೇನೂ ಆಗಲಿಲ್ಲ. ಅಕ್ಷತೆ ಬಿದ್ದದಿನ ಸಾಯಂಕಾಲವೇ ಎಲ್ಲರೂ ತಿರುಗಿ ಮನೆಗೆ ಬಂದರು. ರಾತ್ರಿ ಮದುಮಕ್ಕಳ ಮೆರವಣಿಗೆ ತೆಗೆಯಬೇಕೆಂದು ಹೆಣ್ಣಿನ ಕಡೆಯವರ ಉತ್ಸಾಹ. ಆದರೆ ವೆಂಕಣ್ಣ ಸ್ಪಷ್ಟವಾಗಿ ಆಗದು ಎಂದು ಹೇಳಿದ್ದನ್ನು ಕೇಳಿ ಕೆಲವು ಹೆಣ್ಣುಮಕ್ಕಳ ಮನಸ್ಸು ನೋಯದ ಇರಲಿಲ್ಲ. ರಾಮಣ್ಣನವರೇ ಎಲ್ಲರಿಗೂ ಸಮಾಧಾನ ಹೇಳಿ ಮುಗಿಸಬೇಕಾಯಿತು. ಮುಂದೆ ಎರಡು ದಿನ ಇದ್ದು ಬಂದ ಬೀಗರೆಲ್ಲರೂ ತಮ್ಮ ಹಳ್ಳಿಗೆ ತಿರುಗಿದರು. ಮದುಮಗಳು ಮಾತ್ರ ಬೆಳಗಾವಿಯಲ್ಲಿಯೇ ಉಳಿದಳು.

ಚಂಪಕ್ಕನಿಗೆ ಗಂಡನ ಮನೆಯಲ್ಲಿ ಎಲ್ಲವೂ ಹೊಸದು. ಅವಳಿಗೇನೋ ಸಾಕಷ್ಟು ಉತ್ಸಾಹ, ಆದರೆ ಅದಕ್ಕೆ ತಕ್ಕ ಪ್ರಚೋದನೆ ಗಂಡನಿಂದ ದೊರೆಯದೆ ಇರುವುದನ್ನು ಕಂಡು ನೊಂದುಕೊಳ್ಳುವಳು. ಅವಳು ತನ್ನ ಹಳ್ಳಿಯನ್ನು ಬಿಟ್ಟು ಎಲ್ಲಿಯೂ ಹೆಚ್ಚಾಗಿ ಹೋದವಳಲ್ಲ. ಮನೆಯ ಜನರನ್ನು ಬಿಟ್ಟರೆ ಉಳಿದವರೊಂದಿಗೆ ಹೆಚ್ಚಾಗಿ ಕೂಡಿಇರುವ ಪ್ರಸಂಗಗಳೂ ಬಂದಿರಲಿಲ್ಲ. ಹೀಗಾಗಿ ಈ ಹೊಸ ಜೀವನದಲ್ಲಿ ಯಾರೊಡನೆ ಹೇಗೆ ನಡೆದುಕೊಳ್ಳಬೇಕೆಂಬುದು ಅವಳಿಗೆ ಒಮ್ಮೊಮ್ಮೆ ತಿಳಿಯದಂತಾಗುತ್ತಿತ್ತು. ಆದರೂ ಗೌರತ್ತೆಯವರು ಅವಳಿಗೆ ಎಲ್ಲವನ್ನೂ ಹೇಳಿಕೊಟ್ಟು ನಡೆಯಿಸಿಕೊಳ್ಳುತ್ತಿದ್ದರು.

ಚಂಪಕ್ಕ ನಿಜವಾಗಿ ಜಾಣೆಯೆಂದೇ ಹೇಳಬೇಕು. ಅವಳು ಗಂಡನಮನೆಗೆ ಬಂದು ಸುಮಾರು ಒಂದು ತಿಂಗಳಾಗಿತ್ತು. ಒಂದು ದಿನ ಮುಂಜಾನೆ ಹೆರಳು ಹಾಕಿಕೊಳ್ಳುತ್ತಾ ನಡುಮನೆಯಲ್ಲಿ ಕುಳಿತಿದ್ದಳು. ಜಲಜಾಕ್ಷಿ ತಲೆಗೆ ಎಣ್ಣೆ ಹಚ್ಚಿಕೊಳ್ಳಲು ಎಣ್ಣೆಬಟ್ಟಲು ಹುಡುಕುತ್ತಿದ್ದಳು. ಚಂಪಕ್ಕ ಬಟ್ಟಲನ್ನು ಕೊಟ್ಟು,

"ಹೆರಳು ಹಾಕಲೇ?" ಎಂದು ಜಲಜಾಕ್ಷಿಯನ್ನು ಕೇಳಿದಳು.

"ಬೇಡ. ಕುಸುಮಕ್ಕ ಹಾಕ್ತಾಳೆ." ಎಂದು ಹೇಳಿ ಜಲಜಾಕ್ಷಿ ಹೊರಡಲನುವಾದಳು.

ಚಂಪಕ್ಕನಿಗೆ ಏನೋ ಹೊಳೆದಂತಾಯಿತು,

"ಜಲಜಾಕ್ಷೀ" ಎಂದು ಕೂಗಿದಳು.

"ಯಾಕೆ?" ಜಲಜಾಕ್ಷಿ ತಡೆದಳು.

"ನನ್ನ ಮೇಲೆ ನಿನಗೆ ಸಿಟ್ಟೇನು?"

"ಛೇ. ಇಲ್ಲವಲ್ಲ!"

"ಹಾಗಾದರೆ ನನ್ನಿಂದ ದೂರವೇ ಯಾಕೆ ಇರುತ್ತೀ? ನಾನು ಹೆರಳು ಹಾಕುವದು ಮನಸ್ಸಿಗೆ ಬರುವದಿಲ್ಲವೇ?"

"ಛೇ. ಹಾಗೇನೂ ಇಲ್ಲ. ಏನೋ ಕುಸುಮಕ್ಕ ಹಾಕುತ್ತಾಳೆ. ಅವಳಿಂದ ಹಾಕಿಸಿಕೊಳ್ಳುತ್ತೇನೆ. ಅಷ್ಟೆ." ಎಂದು ಜಲಜಾಕ್ಷಿ ಅಲ್ಲಿಯೇ ಕುಳಿತಳು.

ಅಂದು ಜಲಜಾಕ್ಷಿ ತನ್ನ ಹೊಸ ತಾಯಿಯಿಂದಲೇ ಹೆರಳು ಹಾಕಿಸಿಕೊಂಡಳು.

ತಾಯಿ–ಮಗಳು ಕ್ರಮೇಣ ಹೊಂದಿಕೊಳ್ಳ ತೊಡಗಿದರು.

ಅದನ್ನು ಕಂಡು ಗೌರತ್ತೆಗೆ ಹೆಚ್ಚಿನ ಸಮಾಧಾನ.

- ೭ -

ಬೀಗನ ಮರುಮದುವೆಯಿಂದ ನಾರಾಯಣ ರಾಯರಿಗೆ ಆಶ್ಚರ್ಯವಾಗದಿದ್ದರೂ, ಅದರಿಂದ ಅವರ ಚಿಂತೆ ಹೆಚ್ಚಾಯಿತು. ತನ್ನ ತಂಗಿಯ ಮಗಳ ಭವಿಷ್ಯವೇ ಅವರ ಚಿಂತೆಗೆ ಕಾರಣ. ಮಲತಾಯಿ ಜಲಜಾಕ್ಷಿಯನ್ನು ಹೇಗೆ ಕಾಣಬಹುದು?... ಅವಳ ಮನಸ್ಸು ಹೇಗೆ ಹೊಂದಿಕೊಳ್ಳಬಹುದು?... ಒಮ್ಮೊಮ್ಮೆ ನಾರಾಯಣ ರಾಯರಿಗೆ ಬೀಗನ ಮೇಲೆ ಕೋಪವೂ ಉಂಟಾಗುತ್ತಿತ್ತು. ಇಷ್ಟು ದಿವಸ ಬಿಟ್ಟು ಈಗ ಎರಡನೆಯ ಮದುವೆಯ ವಿಚಾರ ಇವನಿಗೇಕೆ ಬಂದಿತು? ಅಂತೂ ಜಲಜಾಕ್ಷಿಯ ದೈವ ಹೇಗಿದೆಯೊ? ಅಂದು ಪದ್ಮಕ್ಕ "ಜಲಜಾನದು ಎಲ್ಲಾ ನಿನ್ನನ್ನೇ ಕೂಡಿದೆ." ಎಂದಿದ್ದಳು. ಅದು ನಿಜವೇ ಆಗಬೇಕೆ?–ಎಂದುಕೊಂಡರು.

ನಾರಾಯಣರಾಯರಿಗೆ ಮೊದಲಿನಿಂದಲೂ ಜಲಜಾಕ್ಷಿಯ ಮೇಲೆ ಪ್ರೀತಿ. ಈಗ ಒಂದು ರೀತಿಯ ಹೊಣೆಗಾರಿಕೆಯೂ ಸೇರಿಕೊಂಡಂತಾಯಿತು. ಅದರಿಂದ ಅವರ ಮನಸ್ಸು ಅವಳಬಗ್ಗೆ ಸದಾ ಚಿಂತಿಸುವಂತಾಯಿತು.

ವೆಂಕಣ್ಣನ ಲಗ್ನಕ್ಕೆ ಸಾಂಗಲಿಯಿಂದ ಯಾರೂ ಹೋಗಿರಲಿಲ್ಲ. ಮುಖ್ಯವಾಗಿ ಮನಸ್ಸೂ ಇರಲಿಲ್ಲ. ಅಲ್ಲದೆ ಏನೋ ಆಫೀಸಿನ ಅಡಚಣೆಯೂ ಇತ್ತು. ಅದರಿಂದ ನಾರಾಯಣರಾಯರು ಕೇವಲ ಶುಭ ಸಂದೇಶವನ್ನು ಮಾತ್ರ ಕಳುಹಿಸಿಬಿಟ್ಟಿದ್ದರು. ಅದರಿಂದ ವೆಂಕಣ್ಣನಿಗೆ ತುಸು ಖೇದವೆನಿಸಿದ್ದು ಸಹಜ. ಜಲಜಾಕ್ಷಿ ಮಾತ್ರ ಹೆಚ್ಚಾಗಿ ನೊಂದುಕೊಂಡಿದ್ದಳು. ಅವಳಿಗೆ ತಾನು ಏಕಾಕಿ ಎಂಬ ಭಾವ ಬಂದುಬಿಟ್ಟಿತು. ತನ್ನ ಮಾಮಾ ತನ್ನನ್ನು ಮರೆತನೆ? ಹೀಗೇಕೆ ಮದುವೆಗೂ ಬರಲಿಲ್ಲ?–ಎಂದು ಅವಳು ಚಿಂತಿಸುತ್ತಿದ್ದಳು.

ವೆಂಕಣ್ಣನ ಮರುಮದುವೆಯಾಗಿ ಸುಮಾರು ಒಂದು–ಒಂದೂವರೆ ತಿಂಗಳು ಕಳೆದಿರಬಹುದು. ನಿತ್ಯದ ರೂಢಿಯಂತೆ ನಾರಾಯಣರಾಯರು ಮುಂಜಾನೆ ಆರು ಗಂಟೆಗೆ ಎದ್ದರು. ಎದ್ದು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಒಂದು ಕಪ್ಪು ಕಾಫಿ ಕುಡಿದ ಹೊರತು ಅವರಿಂದ ಯಾವ ಕೆಲಸವೂ ಆಗುತ್ತಿರಲಿಲ್ಲ. ಆದರೆ ಈ ದಿನ ಮುಖ ತೊಳೆದಕೂಡಲೇ ಕೋಟು ಹಾಕಿಕೊಳ್ಳುತ್ತಿರುವ ಮಗನನ್ನು ಕಂಡು ಶಾರದಾಬಾಯಿಗೆ ಆಶ್ಚರ್ಯವಾಯಿತು.

"ಇದೇನೋ ನಾನಾ, ಎದ್ದ ಕೂಡಲೇ ಎಂದೂ ಇಲ್ಲದವ ಈ ದಿನ ಹೊರಗೆ ಹೊರಟಿದ್ದೀಯಲ್ಲ?" ಎಂದು ಕೇಳಿದರು.

"ಹೌದವ್ವ, ಸ್ವಲ್ಪ ತಾರ-ಆಫೀಸಿಗೆ ಹೋಗಿ ಬರುತ್ತೇನೆ."

"ತಾರ ಆಫೀಸು?" ಅವರ ಆಶ್ಚರ್ಯ ಇನ್ನೂ ಹೆಚ್ಚಾಯಿತು.

"ಜಲಜಾಕ್ಷಿಗೆ ಬಾ ಎಂದು ತಾರು ಕೊಡಬೇಕು. ಇಂದು ಏನೋ ಕೆಟ್ಟ ಕನಸು ಬಿದ್ದಿತ್ತು." ನಾರಾಯಣ ರಾಯರು ವಿವರಿಸಿದರು.

"ಹಾಂ! ಅಂಥದೇನು ಕನಸು?"

"ಏನೋ ದೊಡ್ಡ ನದಿಯಂತಿತ್ತು. ನಾನು ದಂಡೆಯಲ್ಲಿದ್ದೆ. ಜಲಜಾಕ್ಷಿ ನೀರಿನಲ್ಲಿದ್ದು- ಅರ್ಧ ಬೆಟ್ಟ ತೋರಿಸಿಕೊಂಡು ಚೀರುತ್ತಿದ್ದಳು."

"ಏನು ಕನಸೋ, ಏನೋಪ್ಪ. ದಿನವೆಲ್ಲ ಅವಳ ವಿಚಾರವೇ ಮಾಡುತ್ತೀ. ರಾತ್ರಿ ಅದೇ ಕನಸು. ಆದರೆ ಹೀಗೆ ತಾರು ಮಾಡಿದರೆ ಅವರು ಗಾಬರಿಯಾಗಲಿಕ್ಕಿಲ್ಲವೇನು?"

"ಗಾಬರಿಯಾಗಲಿಕೇನು?" ಎನ್ನುತ್ತಾ ನಾರಾಯಣ ರಾಯರು ಬಾಗಿಲು ದಾಟಿ ನಡೆದರು.

ಅಂದೇ ಮಧ್ಯಾಹ್ನ ಹನ್ನೊಂದು ಗಂಟೆಗೆ ಊಟ ಮಾಡಿ ಆಫೀಸಿಗೆ ಹೊರಟಾಗ ನಾರಾಯಣರಾಯರು,

"ಮೋನ, ಈ ದಿನ ನೀನು ಕಾಲೇಜಿಗೆ ಹೋಗ ಬೇಡ. ಮೂರುಗಂಟೆಗೆ ಸ್ಟೇಶನ್ನಿಗೆ ಹೋಗು. ಜಲಜಾಕ್ಷಿ ಬರುವವಳಿದ್ದಾಳೆ." ಎಂದು ಹೇಳಿ, ಇನ್ನೇನು ಹೊರಡುವವರು, ಅಷ್ಟರಲ್ಲಿ,

"ಮಾಮಾ" ಎನ್ನುತ್ತಾ ಜಲಜಾಕ್ಷಿ ಟಾಂಗಾ ಇಳಿದು ಮೆಟ್ಟಿಲು ಏರುತ್ತಿದ್ದಳು.

ನಾರಾಯಣರಾಯರಿಗೆ ಒಂದು ಕ್ಷಣ ತಮ್ಮ ಕಣ್ಣ ಮೇಲೆಯೇ ನಂಬುಗೆಯಾಗಲಿಲ್ಲ!

"ಇದೇನು ಜಲಜಾ, ಇದೀಗಲೇ ಹೇಗೆ ಬಂದೆ?" ಎಂದು ಉದ್ಗಾರ ತೆಗೆದರು.

ಜಲಜಾಕ್ಷಿಗೆ ಏನೂ ಮಾತೇ ಬರಲಿಲ್ಲ.

"ಇರಲಿ, ನಡೆ ಒಳಗೆ. ಮೋನ, ಅವಳ ಸಾಮಾನು ಒಳಗೆ ಇಡಿಸು." ಎಂದು ಹೇಳಿ, ಜಲಜಾಕ್ಷಿಯ ಮೈದಡವುತ್ತ ಒಳಕ್ಕೆ ನಡೆದರು.

ಜಲಜಾಕ್ಷಿಯನ್ನು ಕಂಡು ಶಾರದಾಬಾಯಿಯವರಿಗೆ ಆಶ್ಚರ್ಯ, ಆನಂದ, ದುಃಖ ಎಲ್ಲವೂ ಕೂಡಿ ಕಣ್ಣು ತೇವಾದುವು. ತಮ್ಮ ಕಾಲಿಗೆ ನಮಸ್ಕರಿಸಿದ ಮೊಮ್ಮಗಳನ್ನು ಎಬ್ಬಿಸುತ್ತ,

"ನಿನ್ನ ಮಾಮಾ ಮಾಡಿದ ತಾರು ಮುಟ್ಟಿತೇನು?" ಎಂದು ಕೇಳಿದರು.

ಜಲಜಾಕ್ಷಿಯ ಮುಖದ ಮೇಲೆ ಆಶ್ಚರ್ಯದ ಭಾವ ಮೂಡಿತು.

"ಎಂಥ ತಾರು?" ಎಂದು ಕೇಳಿದಳು.

"ನಿನಗೆ ಮುಟ್ಟಲಿಲ್ಲವೇ?... ನೀನು ಎಷ್ಟು ಗಂಟೆಗೆ ಹೊರಟಿದ್ದೆ?"

"ಮುಂಜಾನೆ ಆರೂವರೆಗೆ."

ಶಾರದಾಬಾಯಿಯವರಿಗೆ ಎಲ್ಲವೂ ವಿಚಿತ್ರವಾಗಿ ತೋರಿತು. ಇವಳಿಗೆ ತಾರು ಮುಟ್ಟಲಿಲ್ಲ. ಆದರೆ ತಾರು ಮುಟ್ಟಿದವರು ಬರಬೇಕಾದ ವೇಳೆಗಿಂತಲೂ ಮೊದಲು ಬಂದಿದ್ದಾಳೆ.

"ನಿಮ್ಮ ಅಪ್ಪ ತಾನಾಗಿಯೇ ಹೋಗಿ ಬಾ ಎಂದರೋ, ನೀನೇ ಕೇಳಿದೆಯೊ? ಮನೆಯಲ್ಲಿ ಎಲ್ಲರೂ ನೆಟ್ಟಗಿದ್ದಾರೆಯೇನು?" ಅಜ್ಜಿ ಕೇಳಿದರು.

"ನನಗೇ ಅದೇಕೋ ಬರಬೇಕು ಎನ್ನಿಸಿತು. ಈಗ ನಾಲ್ಕು ದಿನದಿಂದಲೂ ಮನಸ್ಸು ಇತ್ತಕಡೆಗೆ ಹರಿಯುತ್ತಲೇ ಇತ್ತು. ಕೊನೆಗೆ ನಿನ್ನೆ ಕೇಳಿದೆ. ಹೋಗು ಎಂದರು. ಬಂದುಬಿಟ್ಟೆ." ಜಲಜಾಕ್ಷಿ ವಿವರಿಸಿದಳು.

"ಒಳ್ಳೇಯದಾಯ್ತು ಬಿಡು. ಅಂತೂ ಬಂದೆಯಲ್ಲ?" ಶಾರದಾಬಾಯಿ ನುಡಿದರು.

"ತಾರು ಯಾಕೆ ಮಾಡಿದ್ದೆ ಮಾಮಾ?" ಜಲಜಾಕ್ಷಿ ನಾರಾಯಣರಾಯರನ್ನು ಕೇಳಿದರು.

"ಯಾತಕ್ಕೂ ಇಲ್ಲ. ನಿನ್ನನ್ನು ನೋಡಬೇಕು ಅಂತ ಅನ್ನಿಸಿತ್ತು. ಕಾರಣ ಕಳಿಸು ಅಂತ ನಿಮ್ಮ ಅಪ್ಪನಿಗೆ ತಾರು ಕೊಟ್ಟಿದ್ದೆ. ಅಷ್ಟೇ. ಅಂತೂ ಈಗ ನಿನಗೂ ನಮ್ಮನ್ನೆಲ್ಲ ನೋಡಬೇಕು ಅಂತ ಹಂಬಲವಾಗಿತ್ತಲ್ಲ?"

ಮಾಮಾನ ಈ ಪ್ರಶ್ನೆಗೆ ಅವಳು ಉತ್ತರ ಹೇಳಲಿಲ್ಲ. ಅದರ ಆವಶ್ಯಕತೆಯೂ ಇರಲಿಲ್ಲ. ಅವಳ ಮುಖದ ಮೇಲೇ ಉತ್ತರವನ್ನು ಬರೆದಂತಿತ್ತು.

"ಏನವ್ವ ಜಲಜಾಕ್ಷೀ, ನಿನ್ನ ಹೊಸ ತಾಯಿ ಹೇಗೆ ಇದ್ದಾಳೆ?"

## ಇಂದೇಕೆ?



ಸದಾ ಬೆಳದಿಂಗಳೊಲು
ಆನಂದವ ನೀಡಿದವಳೆ
ನಿನ್ನ ಮುಖಚಂದಿರದ ತುಂಬ
ಇಂದೇಕೆ ನೊ'ಡಕವಿದಿಹುದು?

—ಪಂಚಾಕ್ಷರಿ ಹಿರೇಮಠ

"ಚೆನ್ನಾಗಿದ್ದಾಳೆ..."

"ಮೊದಲಿಗೆಲ್ಲ ಹನೆ ಹಾಗೆ ಮೆತ್ತಗಾಗಿಯೇ ಇರುವರು. ನಿನಗದೆಲ್ಲ ತಿಳಿಯದು." ಶಾರದಜ್ಜಿ ನುಡಿದರು.

"ಹಾಗಲ್ಲ. ಏನೇ ಆದರೂ ಎದುರು ಮನೆ ಅಕ್ಕಮ್ಮನ ತಾಯಿಯಂಥವಳಲ್ಲ."

"ಆಯ್ತಲ್ಲ, ಒಳ್ಳೆಯವಳಿದ್ದರೆ, ಅದೊಂದು ಗುಣವೇ ಅನ್ನು." ಎಂದರು ಅಜ್ಜಿ.

"ಅಲ್ಲ, ನಾವು ಯಾರೂ ಲಗ್ನಕ್ಕೆ ಬರಲಿಲ್ಲವೆಂದು ವೆಂಕಣ್ಣನಿಗೆ ಸಿಟ್ಟುಬಂದಿರಬಹುದಲ್ಲ?" ನಾಣಣ್ಣಮಾಮಾ ಕೇಳಿದರು.

"ಹಾಗೆ ನನ್ನ ಮುಂದೇನೂ ಅನ್ನಲಿಲ್ಲ. ಆದರೂ.." ಜಲಜಾಕ್ಷಿ ಮಧ್ಯದಲ್ಲಿಯೇ ತಡೆದಳು.

ಜಲಜಾಕ್ಷಿಯ ಅಳುಮೊಗವನ್ನುಕಂಡ ನಾರಾಯಣರಾಯರು, "ಬರಲೊಲ್ಲದೇಕೆ ಬಿಡು. ಅದಕ್ಕೇನಂತೆ..." ರಾಯರು ಧ್ವನಿಯಲ್ಲಿ ಕಿಂಚಿತ್ತು ಸಿಡುಕು ಕಂಡಿತು.

"ಅದೆಲ್ಲ ಇರಲಿ, ಬಿಡಪ್ಪ, ಮೊದಲು ಅವಳು ಊಟ ಮಾಡಲಿ. ಕೂಸು ಹಸಿದಿದ್ದೀತು." ಅಜ್ಜಿ ಮಧ್ಯೆ ನುಡಿದರು.

"ಇಲ್ಲ, ನನಗೆ ಹಸಿವೆಯೇ ಆಗಿಲ್ಲ."

ಜಲಜಾಕ್ಷಿ ಹಾಗೆ ಹೇಳಿದರೂ, ಅಜ್ಜಿ ಅವಳನ್ನು ಒಳಗೆ ಕರೆದುಕೊಂಡು ಹೋದರು.

ಮುಂದೆ ಜಲಜಾಕ್ಷಿ ಸಾಂಗಲಿಯಲ್ಲಿ ಹದಿನೈದು-ಇಪ್ಪತ್ತು ದಿನಗಳವರೆಗೆ ಉಳಿದಳು. ಬೆಳಗಾವಿಯಲ್ಲಿ ಕುಗ್ಗಿ ಹೋಗಿದ್ದ ಅವಳ ಮನಸ್ಸು ಇಲ್ಲಿ ಮತ್ತೆ ಪ್ರಫುಲ್ಲವಾಯಿತು. ನಾಣಣ್ಣಮಾಮನ ನಿರ್ವ್ಯಾಜ ಪ್ರೇಮ, ಶಾರದಜ್ಜಿಯ ಮಮತೆ, ಮೋಹನ-ಶಾಮರ ಸ್ನೇಹ ಇವುಗಳಲ್ಲಿ ಜಲಜಾಕ್ಷಿಯ ಹೃದಯ ಶಾಂತಿಯನ್ನು ಕಂಡಿತು.

ಜಲಜಾಕ್ಷಿ ಆಗಲೇ ತನ್ನ ಬಾಲ್ಯಾವಸ್ಥೆಯನ್ನು ದಾಟುವ ಹವಣಿಕೆಯಲ್ಲಿದ್ದಳು. ಆದರೆ ಅದರ ಕಲ್ಪನೆಯೇ ಅವಳಿಗಿರಲಿಲ್ಲ. ಜಲಜಾಕ್ಷಿ ಎಂದರೆ ಅವಳ ಮಾಮಾಗೆ ಇನ್ನೂ ಚಿಕ್ಕ ಮಗು. ಯಾವ ಸಂಕೋಚವೂ ಇಲ್ಲದೆ ಅವರು ಅವಳ ಮೈದಡಹುವರು. ಅವಳೂ ಕೂಡ ಹೊರಗಿನಿಂದ ಬಂದರೆ ನೇರವಾಗಿ ಮಾಮಾನ ಕೋಣೆಗೇ ಓಡುವಳು. ಅವರು ಮಲಗಿಕೊಂಡಿದ್ದರೆ ತಾನೂ ಕೂಡ ಹೋಗಿ ಅವರ ಪಕ್ಕದಲ್ಲಾಗಲಿ, ಎದೆಯ ಮೇಲಾಗಲಿ ಒರಗುವಳು. ರಾಯರು ಅವಳ ಚಿಕ್ಕಮಗುವಿನಂತಹ ನಡತೆಯನ್ನು ಕಂಡ ನಸುನಗುವರು.

ತಂಗಿ ಪದ್ಮ ತೀರಿಕೊಂಡು ಜಲಜಾಕ್ಷಿ ತಬ್ಬಲಿಯಾದ ಮೇಲೆ ರಾಯರ ಮನಸ್ಸು ಯಾವಾಗಲೂ ತಮ್ಮ ಸೋದರಸೊಸೆಗಾಗಿ ಕೊರಗುತ್ತಲೇ ಇದ್ದಿತು. ಅಂಥ ಸೋದರಮಾವನ ಅಂತಃಕರಣ ಜಲಜಾಕ್ಷಿಯ ಮುಗ್ಧ ಮನಸ್ಸನ್ನು ಮಾರುಗೊಂಡಿತ್ತು. ಅದಕ್ಕೆ ಇನ್ನೂ ಒಂದು ಕಾರಣವೂ ಇದ್ದಿತು. ಜಲಜಾಕ್ಷಿಗೆ ಮೊದಲಿನಿಂದಲೂ ತುಸು ಹುಡುಗಾಟ ಬೇಕು. ಚಿಕ್ಕಂದಿನಲ್ಲಿ ತಂದೆ, ತಾಯಿ, ಮಾವ ಎಲ್ಲರೂ ಅದನ್ನೇ ಕಲಿಸಿದ್ದರು. ಆದರೆ ತಾಯಿ ತೀರಿಕೊಂಡ ಮೇಲೆ ತಂದೆಯಿಂದ ಅವಳಿಗೆ ಮೊದಲಿನಷ್ಟು ವಾತ್ಸಲ್ಯ ದೊರೆಯಲಿಲ್ಲ. ಮೊದಮೊದಲು ಹೆಂಡತಿಯ ಮರಣದ ದುಃಖದಲ್ಲಿ ಮುಳುಗಿ ಹೋದ ವೆಂಕಣ್ಣ ಮಗಳೊಂದಿಗೆ ಹೆಚ್ಚು ಸಲಿಗೆಯಿಂದ ಇರುತ್ತಿರಲಿಲ್ಲ. ಆ ಮೇಲೆ ಅವನಿಗೆ ಅದೇ ರೂಢಿಯಾಯಿತು. ಈಗ ಆ ಮೊದಲಿನ ಸಲಿಗೆಯನ್ನು ಜಲಜಾಕ್ಷಿ ತಂದೆಯಿಂದ ಅಪೇಕ್ಷಿಸುವುದೂ ಇಲ್ಲ. ಈಗ ನಾಣಣ್ಣಮಾಮನ ವಾತ್ಸಲ್ಯವೇ ಅವಳಿಗೆ ಸರ್ವಸ್ವವಾಗಿಬಿಟ್ಟಿತು. ಅವಳು ತನ್ನ ತಾಯಿಯ ಮರಣದ ನೋವನ್ನು ಸೋದರಮಾವನ ಅಂತಃಕರಣದಲ್ಲಿ ಮರೆಯುವಂತಾಗಿದ್ದಿತು. ತಾಯಿ ಸತ್ತರೂ ಸೋದರಮಾವನಿರಬೇಕು-ಎಂಬ ಗಾದೆಯ ಮಾತು ಜಲಜಾಕ್ಷಿಯ ಜೀವನದಲ್ಲಿ ಅಕ್ಷರಶಃ ನಿಜವಾಗಿ ಪರಿಣಮಿಸಿತ್ತು.

ನಾರಾಯಣರಾಯರೂ ಅಷ್ಟೇ. ಅವರ ಹೃದಯ ಜಲಜಾಕ್ಷಿಗಾಗಿ ಮೀಸಲಾದಂತೆಯೇ ಆಗಿತ್ತು. ಅವರು ಅವಳ ಭಾವೀಜೀವನದ ವಿಚಾರವಾಗಿ ಬಹಳೇ ಚಿಂತಿಸುವರು. ತಮ್ಮಿಂದ ಏನು ಸಾಧ್ಯವೋ ಅದೆಲ್ಲವನ್ನೂ ಮಾಡಿ ಅವಳ ಭವಿಷ್ಯವು ಸುಖಕರವಾಗುವಂತೆ ಮಾಡಬೇಕೆಂದು ಅವರ ಮನದಾಸೆ. ತಾಯಿಯನ್ನು ಕಳೆದುಕೊಂಡ ತಬ್ಬಲಿ ಎಂದು ಜಲಜಾಕ್ಷಿಯ ಬಗ್ಗೆ ಅವರ ಮನವು ಕರಗಿದರೆ, ಅವಳಿಗೆ ಅಂಟಿಕೊಂಡ ಆ ಕಲೆ ತೊಡೆದೀತೆ ಆದರೆ?-ಎಂಬ ಚಿಂತೆಯಿಂದ ಅವರು ಇನ್ನೂ ಕೊರಗುತ್ತಿದ್ದರು...

ಅಂದು ಶನಿವಾರ. ರಾತ್ರಿ ನಾರಾಯಣರಾಯರು ಊಟ ಮಾಡುತ್ತಿರಲಿಲ್ಲ. ಮನೆಯಲ್ಲಿ ಉಳಿದ ಮೋಹನ ಶಾಮ ಅವರೂ ತಿಂಡಿಯ ಮೇಲಿನ ಆಸೆಯಿಂದ ತಾವೂ ಊಟ ಬಿಟ್ಟು 'ಉಪವಾಸ' ಮಾಡುತ್ತಿದ್ದರು. ಅಂದ್ಯ

ಶನಿವಾರದ ಫಲಾಹಾರ ನಡೆದಿತ್ತು. ಶಾರದಾಬಾಯಿಯವರು ಮಗನಿಗೂ ಮೊಮ್ಮಕ್ಕಳಿಗೂ ಉಪ್ಪಿಟ್ಟು ಮಾಡಿದ್ದರು. ಹರಟೆಯೊಂದಿಗೆ ಎಲ್ಲರೂ ಸಾವಕಾಶವಾಗಿ ತಿನ್ನುತ್ತಿದ್ದರು.

"ಮಾಮಾ, ನಾನು ನಾಳೆ ಊರಿಗೆ ಹೋಗಲೇನು?" ಎಂದು ಜಲಜಾಕ್ಷಿ ಕೇಳಿದಳು.

"ಆಂ! ನಾಳೆಯೇ ಯಾಕೆ? ಇಷ್ಟೇಕೆ ಅವಸರ?' ರಾಯರು ಕೇಳಿದರು.

"ಇಲ್ಲಿಗೆ ಬರುವ ಮುಂದೆ ಅಣ್ಣಾ ಹೇಳಿದ್ದರು, ಆದಷ್ಟು ಬೇಗ ಹೊರಟು ಬಾ ಅಂತ" ಜಲಜಾಕ್ಷಿ ಕಾರಣ ಹೇಳಿದಳು.

"ಆದರೆ ನಾಳೆಯೇ ಯಾಕೆ?"

"ಬಂದು ಇಪ್ಪತ್ತು ದಿನಗಳಾದವು. ಶಾಲೆಯನ್ನು ಎಷ್ಟು ದಿವಸ ತಪ್ಪಿಸುವುದು?"

"ಆದರೇನಾಯಿತು! ನಾಳೆ ಬೇಡ. ನಿಮ್ಮಪ್ಪ ಸಿಟ್ಟಾಗುವನೇನು ಮತ್ತೆ?"

"ಹಾಗೇನೂ ಇಲ್ಲ."

"ಇನ್ನೆರಡು ದಿನ ಬಿಟ್ಟು ಹೋಗೀಯಂತೆ."

ಜಲಜಾಕ್ಷಿ ಅಷ್ಟಕ್ಕೇ ಸುಮ್ಮನಾದಳು.

ಮರುದಿನ ಮಧ್ಯಾಹ್ನ ಮೂರೂವರೆಯ ಆಟಕ್ಕೆ ಶಾರದಾಬಾಯಿಯನ್ನುಳಿದು ಎಲ್ಲರೂ ಸಿನೇಮಾಕ್ಕೆ ಹೋದರು. ನಾರಾಯಣರಾಯರು ಸಹಸಾ ಸಿನೇಮ ನೋಡಲು ಹೋಗುತ್ತಿರಲಿಲ್ಲ. ಆದರೆ ಅಂದು ಜಲಜಾಕ್ಷಿಯ ಸಲುವಾಗಿ ಹೋಗಲೇಬೇಕಾಗಿದ್ದಿತು.

ಅದೊಂದು ದುಃಖಾಂತ ಕಥೆ. ನಾಯಕ–ನಾಯಕಿಯರ ಮದುವೆಯನ್ನು ಅವರ ತಂದೆ ತಾಯಿಗಳು ಬಾಲ್ಯದಲ್ಲಿಯೇ ಮಾಡುವರು. ಇವರು ದೊಡ್ಡವರಾದ ಮೇಲೆ ನಾಯಕನು ಅದೇ ಊರಲ್ಲಿಯ ಒಬ್ಬ ವೇಶ್ಯೆಯ ಬಲೆಯಲ್ಲಿ ಬಿದ್ದು ಹೆಂಡತಿಯನ್ನು ತಿರಸ್ಕರಿಸುವನು. ನಾಯಕಿಯ ಜೀವನದಲ್ಲಿ ಸಂಸಾರ ಸುಖವೆಂಬುದೇ ದೊರೆಯುವುದಿಲ್ಲ. ಮುಂದೆ ನಾಯಕನು ಕ್ಷಯರೋಗದಿಂದ ಸಾಯುವನು. ಪತಿಯ ಮರಣದ ಆಘಾತದಿಂದ ನಾಯಕಿಯೂ ಆತ್ಮಹತ್ಯೆ ಮಾಡಿಕೊಳ್ಳುವಳು.

ಚಿತ್ರ ಮುಗಿದಮೇಲೆ, ಮೊದಲೇ ನಿಶ್ಚಯಿಸಿದಂತೆ ತುಸು ತಿರುಗಾಡಿ ಬರಬೇಕೆಂದು ಅವರೆಲ್ಲ ಮಿರಜೆಯ ದಾರಿಯತ್ತ ಸಾಗಿದರು. ಆದರೆ ನಾರಾಯಣರಾಯರು,

"ನನಗೆ ಅದೇಕೋ ತಲೆಶೂಲಿ ಎದ್ದಂತಾಗಿದೆ. ನಾನು ಮನೆಗೆ ಹೋಗುತ್ತೇನೆ. ನೀವೆಲ್ಲ ತಿರುಗಾಡಿ ಬರ್ರಿ" ಎಂದರು.

"ತಲೆಶೂಲಿ? ಹಾಗಾದರೆ ಎಲ್ಲರೂ ಮನೆಗೇ ಹೋಗೋಣ" ಜಲಜಾಕ್ಷಿ ನುಡಿದಳು.

"ಹುಚ್ಚೀ ಅಷ್ಟೇಕೆ ಗಾಬರಿಯಾಗುತ್ತೀ? ನನಗ ಸಿನೇಮಾ ನೋಡುವ ರೂಢಿಯಿಲ್ಲ. ಅದಕ್ಕೇ ಏನೋ ಬೇಜಾರು. ಮನೆಗೆ ಹೋಗಿ ಒಂದು ಕಪ್ಪು ಕಾಫಿ ಕುಡಿದರೆ ಎಲ್ಲವೂ ಸರಿ ಹೋಗುತ್ತದೆ. ನೀವು ಹೋಗಿ ಬರ್ರಿ." ಎಂದು ನುಡಿದು ಮನೆಯ ಕಡೆಗೆ ಹೊರಳಿದರು.

"ನಾನಣ್ಣಾ, ನಾನೂ ಬರುತ್ತೇನೆ" ಶಾಮನೂ ತಂದೆಯ ಕಡೆ ತಿರುಗಿದ.

"ಯಾಕೋ?"?

"ನನಗೂ ಕಾಫಿ ಬೇಕು"

"ಕಾಫಿ ಬೇಕಾದರೆ ಆ ಮೈಸೂರವನ ಹೋಟೇಲಿನಲ್ಲಿ ಕುಡಿಯಿರಿ" ಎಂದು ನಾನಣ್ಣ ಹೇಳಿದರೂ ಕೇಳದೆ, ಶಾಮ ತಂದೆಯಜೊತೆಗೆ ಮನೆಗೆ ಹೊರಟ.

ಮೋಹನ ಜಲಜಾಕ್ಷಿಯರು ಕಾಫಿಯನ್ನು ಕುಡಿದು ಊರ ಹೊರಗಿನ ಬೈಲಿಗೆ ಬರುವಷ್ಟರಲ್ಲಿ ಹೊತ್ತು ಮುಳುಗಲಿಕ್ಕೆ ಬಂದಿತ್ತು. ರಾಜಮಾರ್ಗದಿಂದ ಅಡ್ಡ ನಡೆದು ತುಸು ದೂರ ಹೋಗಿ ಇಬ್ಬರೂ ಕುಳಿತರು. ಜಲಜಾಕ್ಷಿ ಮೋಹನನ ಎದುರಿಗೆ ಕುಳಿತಿದ್ದಳು. ಅವಳ ಮುದ್ದಾದ ಗೌರವರ್ಣದ ಮುಖವು ಮುಳುಗುತ್ತಲಿದ್ದ ಸೂರ್ಯನ ಕೆಂಪುಕಿರಣಗಳಿಂದ ಇನ್ನೂ ಮುದ್ದಾಗಿ ತೋರುತ್ತಿತ್ತು. ಬೀಸುತ್ತಿದ್ದ ನಸುಗಾಳಿಯಲ್ಲಿ ಅವಳ ಮುಂಗುರುಗಳು ಹಾರಾಡುತ್ತಿದ್ದವು.

ಕರವಸ್ತ್ರಗಳನ್ನು ಹಾಸಿ ಇಬ್ಬರೂ ಕುಳಿತು ಎರಡು ಮೂರು ನಿಮಿಷಗಳಾಗಿದ್ದರೂ ಒಬ್ಬರೂ ಏನೊಂದೂ ಮಾತನಾಡಿರಲಿಲ್ಲ. ಮೋಹನ ಒಂದೇಸವನೆ ಅವಳ ಮುಖವನ್ನು ದಿಟ್ಟಿಸಿ ನೋಡುತ್ತಲಿದ್ದ. ಆತ ಜಲಜಾಕ್ಷಿಯನ್ನು ಕಂಡುದು ಅದೇ ಮೊದಲಲ್ಲ. ಆದರೆ ಈ ದಿನ, ಈ ಕ್ಷಣದಲ್ಲಿ ಅವಳ ಮೊಗದಲ್ಲಿ ಅವನು ಹೊಸ ಕಾಂತಿಯನ್ನು, ಹೊಸ ಆಕರ್ಷಣೆಯನ್ನು ಕಂಡಂತಾಗಿತ್ತು. ಅದೇನೋ ಒಂದು ಹೊಸ ಅನುಭವವಾದಂತಾಯಿತವನಿಗೆ.

"ಹಾಗೇಕೆ ತಿನ್ನುವವರಂತೆ ನೋಡುತ್ತಿದ್ದೀಯೊ?' ಜಲಜಾಕ್ಷಿ ಕೇಳಿದಳು.

ಮೋಹನ ನಸುನಗೆ ಬೀರಿದ. ಆದರೆ ಅವಳಿಗೆ ಏನೊಂದೂ ಉತ್ತರ ಹೇಳಲಿಲ್ಲ. ತಾನು ಹಾಗೇಕೆ ಅವಳನ್ನು ದಿಟ್ಟಿಸಿ ನೋಡುತ್ತಿರುವೆನೆಂಬುದು ಅವನಿಗೇ ತಿಳಿಯದಂತಾಗಿದ್ದಿತು. ಆದರೆ ಹಾಗೆ ನೋಡಬೇಕೆಂದು ಮಾತ್ರ ಅವನ ಮನವು ಇಚ್ಛೆಸುತ್ತಿತ್ತು. ಅವನಿಗೆ ಅದೇನೋ ಒಂದು ಸುಖದ ಅನುಭವ.

ಒಂದು ನಿಮಿಷ ತಡೆದು ಜಲಜಾಕ್ಷಿ ಕೇಳಿದಳು, "ಸಿನೇಮಾ ಹೇಗಿತ್ತು?"

"ನಿನಗೆ ಹೇಗೆ ಅನಿಸಿತು?"

"ನಾನು ಮೊದಲು ಕೇಳಿದೆ. ನೀನು ಮೊದಲು ಉತ್ತರಹೇಳು. ಆ ಮೇಲೆ ನಿನ್ನಪ್ರಶ್ನೆ" ಜಲಜಾಕ್ಷಿ ನಗುತ್ತ ಹೇಳಿದಳು.

"ಇಲ್ಲ, ನೀನು ಮೊದಲು ಹೇಳು."

"ಊಂ ಹೂಂ" ಜಲಜಾಕ್ಷಿ ಗೋಣು ಅಲ್ಲಾಡಿಸಿದಳು.

ಉಪಾಯಗಾಣದೆ ಮೋಹನ "ಚೆನ್ನಾಗಿತ್ತು" ಎಂದ.

"ಚೆನ್ನಾಗಿತ್ತೇ?' ಕಣ್ಣುಗಳನ್ನಗಲಿಸಿ ಜಲಜಾಕ್ಷಿ ಕೇಳಿದಳು.

"ಯಾಕೆ, ಚೆನ್ನಾಗಿರಲಿಲ್ಲವೇ? ಅದೆಷ್ಟು ಸುಂದರವಾಗಿ ಕಥೆಯನ್ನು ಹೆಣೆದಿದ್ದಾನೆ!"

"ಅದೇನೋ. ಅದರ ಕೊನೆ ಹಾಗಾಗಬಾರದಿತ್ತು. ಕೊನೆಗೆ ಅವರಿಬ್ಬರೂ ಕೂಡಬೇಕಾಗಿತ್ತು." ಎಂದಳವಳು.

"ಅದು ಹೇಗೆ ಸಾಧ್ಯ? ಜಗ್ಗಿ ತಂದುಕೂಡಿಸಿದರೆ ಅದು ಸರಿಯಾದೀತೇ? ಅದರ ಕೊನೆ ನಿಜವಾಗಿಯೂ ಚೆನ್ನಾಗಿದೆ."

"ಎರಡನೆಯವರ ಕೆಡುಕನ್ನು ಕಂಡರೆ ನಿನಗೆ ಸಂ. .ಷ, ಅನ್ನು."

"ಛೇ. ಹಾಗಲ್ಲ"

"ಮತ್ತೇನು. ಅವರು ಸತ್ತರು. ಅದು ನಿನಗೆ ಸೇರಿತು."

"ಹಾಗಲ್ಲ ಜಲಜಾ. ಕಥೆ ದುಃಖಾಂತ್ಯವಾದರೂ ಕಲಾತ್ಮಕವಾಗಿದೆ." ಮೋಹನ ವಿವರಿಸಿಹೇಳಿದ.

"ಒಂದು ವೇಳೆ ಹಾಗೆ ಪ್ರತ್ಯಕ್ಷ ನಡೆದಿದ್ದರೆ?"

"ನಡೆದಿದ್ದರೆ...ರೆ...ರೆ"

"ಆಗೇನು ಹೇಳುತ್ತೀ?"

"ನೋಡು, ಅದು ಅವನ ತಪ್ಪಲ್ಲ. ಅವಳ ತಪ್ಪೂ ಅಲ್ಲ."

'ಹಾಗೆಂದರೇನು?" ನಡುವೆಯೇ ಜಲಜಾಕ್ಷಿ ಕೇಳಿದಳು.

"ಅದು ಅವರ ತಂದೆ–ತಾಯಿಗಳ ತಪ್ಪು"

"ಏನೋಪ್ಪ, ನನಗೇನೂ ಹಾಗೆನಿಸುವುದಿಲ್ಲ. ಅಂತೂ, ಆ ಕಥೆ ನನಗೆ ಸೇರಲಿಲ್ಲ."

"ಹೋಗಲಿ ಬಿಡು" ಎಂದು ಮೋಹನ ಎದ್ದು ನಿಂತ.

"ಯಾಕೆ ಹೋಗೋಣವೇನು?" ಜಲಜಾಕ್ಷಿ ಕೇಳಿದಳು.

"ಇಲ್ಲ. ಅಲ್ಲಿ ಗಿಡದ ಹತ್ತಿರ ಕೂಡೋಣ ಏಳ್" ಎಂದು ಸಮೀಪದಲ್ಲಿದ್ದ ವಿಶಾಲವಾದ ಆಲದಮರವೊಂದನ್ನು ಕೈ ಮಾಡಿ ತೋರಿಸಿದ ಮೋಹನ.

ಇಬ್ಬರೂ ಎದ್ದುಹೋಗಿ ಗಿಡದಬೊಡ್ಡೆಗೆ ಆತುಕೊಂಡು ಕುಳಿತರು. ಮೋಹನನ ಮನಸ್ಸು ಜಲಜಾಕ್ಷಿಯ ಸಮೀಪ ಕೂಡಬೇಕೆಂದು ಬಯಸುತ್ತಿತ್ತು. ಐದು ನಿಮಿಷ ಇಬ್ಬರೂ ಹಾಗೆಯೇ ಕುಳಿತಿದ್ದರು. ಜಲಜಾಕ್ಷಿಗೆ ಕೂಡ ಅದೇನೋ ಒಂದು ಬಗೆಯ ಹಿತಕರವಾದ ಅನುಭವ. ಆತನಿಂದ ದೂರಸರಿಯಬೇಕೆಂದು ಅವಳೂ ಇಚ್ಛಿಸಲಿಲ್ಲ.

"ಜಲಜಾ ನೀನು ನಾಳೆ ಬೆಳಗಾವಿಗೆ ಹೋಗುವವಳೇ ಏನು?" ಮೋಹನ ಕೇಳಿದ.

"ಯಾಕೆ?"

"ಯಾಕಿಲ್ಲ, ಇನ್ನೂ ನಾಲ್ಕು ದಿನ ಇರು. ನಾಳೆ ಮಂಗಳವಾರ. ಪದ್ಮಾ ಟಾಕೀಜಿಗೆ 'ಕಿಸ್ಮತ್' ಬರೋದಿದೆ. ಬಹಳೇ ಚೆನ್ನಾಗಿದೆಯಂತೆ. ನೋಡೋಣ."

ಜಲಜಾಕ್ಷಿಗೆ ಕೂಡ ಇನ್ನೂ ನಾಲ್ಕು ದಿನ ತಡೆಯಬೇಕು, ಆತನೊಂದಿಗೆ ತಿರುಗಾಡಬೇಕು, ಸಿನೇಮಾ ನೋಡಬೇಕು ಎಂದು ಆ ಕ್ಷಣ ಎನ್ನಿಸಿತು. ಆದರೆ ಹೋಗಬೇಕೆಂದು ನಿಶ್ಚಯಿಸಿ ನಾನಣ್ಣಮಾಮಾನ ಸಮ್ಮತಿಯನ್ನು ಕೂಡ ದೊರಕಿಸಿ ಆಗಿದೆ. ಇನ್ನು ಹೇಗೆ ನಿಲ್ಲುವುದು?

"ಇಲ್ಲ. ನೀನೇ ಬೆಳಗಾವಿಗೆ ಬಾ. ಇಬ್ಬರೂ ಕೂಡಿ ಅಲ್ಲಿಯೇ ನೋಡೋಣಂತೆ" ಜಲಜಾ ಹೇಳಿದಳು.

"ನಾನು ಅಲ್ಲಿ ಬಂದಾಗ ಕಿಸ್ಮತ್ತೂ ಅಲ್ಲಿ ಬರುತ್ತದೇನು?" ಮೋಹನ ಮುಗುಳು ನಗುತ್ತಾ ಕೇಳಿದನು.

"ಯಾಕೆ ಬರಬಾರದು?"

ಇಬ್ಬರೂ ಮನವಾರೆ ನಕ್ಕರು.

ಮೋಹನ ತನ್ನ ಕಾಲೇಜು, ಅಲ್ಲಿಯ ಪ್ರಾಧ್ಯಾಪಕರು, ಅವರ ವಿನೋದಗಳು ಹೀಗೆ ಎಷ್ಟೋ ವಿಷಯಗಳನ್ನು ಜಲಜಾಕ್ಷಿಯ ಮುಂದೆ ಹೇಳಿದ. ಅವಳು ಕೇಳಿ ನಕ್ಕು ನಲಿದಳು.

ಇಬ್ಬರೂ ಮನೆಸೇರಿದಾಗ ರಾತ್ರಿ ಎಂಟು ಹೊಡೆದುಹೋಗಿತ್ತು. ಶಾರದಾಬಾಯಿಯವರು ಇವರ ದಾರಿಯನ್ನೇ ಕಾಯುತ್ತಿದ್ದರು.

"ಯಾಕೋ ಮೋನ, ಇಷ್ಟು ತಡ ಯಾಕೆ?" ಅವರು ಕೇಳಿದರು.

"ಜಲಜಾ ನಾಳೆ ಊರಿಗೆ ಹೋಗುವವಳು. ಹಾಗೆಯೇ ಸುತ್ತಾಡಿಕೊಂಡು ಬಂದೆವು." ಮೋಹನ ಹೇಳಿದ.

"ಹೂಂ. ಊಟಕ್ಕೆ ಏಳ್ರಿ. ಅಡಿಗೆ ಆಗಿದೆ."

"ಮಾಮಾ ಎಲ್ಲಿದ್ದಾನೆ?" ಜಲಜಾಕ್ಷಿ ಕೇಳಿದಳು

"ಅವನಿಗೇನೋ ತಲೆಶೂಲಿ ಅಂತೆ. ಊಟ ಒಲ್ಲೆ ಎಂದು ಕಾಫಿ ಕುಡಿದು ಮಲಗಿಕೊಂಡಿರುವನು." ಅಜ್ಜಿ ತಿಳಿಸಿದರು.

ಅಜ್ಜಿಯ ಮಾತು ಪೂರ್ಣವಾಗುವುದರೊಳಗಾಗಿಯೇ ಜಲಜಾಕ್ಷಿ ನಾನಣ್ಣನ ಕೋಣೆಗೆ ಓಡಿದ್ದಳು.

ನಾರಾಯಣರಾಯರು ತಲೆಗೆ ಕರವಸ್ತ್ರ ಕಟ್ಟಿಕೊಂಡು ರಗ್ಗು ಹೊದೆದುಕೊಂಡು ಮಲಗಿಕೊಂಡಿದ್ದರು. ಜಲಜಾಕ್ಷಿ ಬಂದು ಕಾಟಿನಮೇಲೆ ಅವರ ಪಕ್ಕದಲ್ಲಿ ಕುಳಿತು "ಮಾಮಾ" ಎಂದೆನ್ನುತ್ತ ರಾಯರ ಮುಸುಕು ತೆಗೆದಳು. ಅವರು ಕಣ್ಣು ತೆರೆದು,

"ಈಗ ಬಂದಿದೇನು? ಹೋಗು ಊಟ ಮಾಡಿ ಬಾ" ಎಂದರು.

"ಮತ್ತೆ, ನೀನು?" ಜಲಜಾ ಕೇಳಿದಳು.

"ನಾವೊಲ್ಲೆ. ಹಸಿವಿಲ್ಲ, ಹೋಗು."

"ನನಗೂ ಹಸಿವಿಲ್ಲ"



"ಹುಚ್ಚಿಯೇನು? ಇನ್ನೂ ಸಣ್ಣಹುಡುಗೀ ಹಾಗೆ ಮಾತುತ್ತೀಯಲ್ಲ?" ರಾಯರು ರಮಿಸುತ್ತ ನುಡಿದರು.

ಜಲಜಾಕ್ಷಿ ಏನೂ ಮಾತಾಡಲಿಲ್ಲ. ಅಲ್ಲಿಯೇ ಕಪಾಟಿನಲ್ಲಿದ್ದ ಅಮೃತಾಂಜನವನ್ನು ತಂದು ಮಾಮನ ಹಣೆಗೆ ಲೇಪಿಸತೊಡಗಿದಳು.

ಒಂದು ನಿಮಿಷ ರಾಯರು ಮೌನವಾಗಿದ್ದು, "ಜಲಜಾ ನಿನ್ನ ಬುದ್ಧಿ ನಿನ್ನ ವಯಸ್ಸಿಗಿಂತ ದೊಡ್ಡದಾಗಿದೆ, ನೋಡು" ಎಂದರು ಗಂಭೀರವಾಗಿ.

ಜಲಜಾಕ್ಷಿಗೆ ನಗು ಬಂತು.

"ಯಾಕೆ ನಗುತ್ತೀ?" ರಾಯರು ಕೇಳಿದರು.

"ಅಲ್ಲಾ ಇದೀಗ ಸಣ್ಣ ಹುಡುಗಿ ಅಂದಿ. ಈಗ ಹೀಗೆ ಅನ್ನುತ್ತೀಯಲ್ಲ!"

ಅವಳ ಮಾತಿನಿಂದ ರಾಯರಿಗೂ ನಗು ಬಂತು. ಮುಗುಳು ನಗುತ್ತ "ಹೂಂ. ಇರಲಿ, ಇನ್ನು ಊಟ ಮಾಡಿ ಬಾ. ಹೋಗು ನೋಡೋಣ. ಅನ್ನ ಆರಿ ಹೋದೀತು" ಎಂದರು.

"ನಾವೊಲ್ಲೆ"

"ಯಾಕೆ?"

"ನೀನೂ ಏಡಿ ಅಂದರೆ..."

"ನಾವೊಲ್ಲೆ, ಹೋಗವ್ವ"

ಜಲಜಾಕ್ಷಿ ಊಟಕ್ಕೆ ಒಳಗೆ ಹೋಗಲೂ ಇಲ್ಲ. ಏನೂ ಉತ್ತರವನ್ನೂ ಕೊಡಲಿಲ್ಲ.

ಅಷ್ಟರಲ್ಲಿ "ಜಲಜಾಕ್ಷೀ, ಎಲೆಯಲ್ಲಿ ಅನ್ನ ಹಾಕೇನಿ" ಎಂದು ಕರೆಯುತ್ತ ಅಜ್ಜಿ ಕೋಣೆಯೊಳಕ್ಕೆ ಬಂದರು.

"ಅವ್ವಾ, ಒಂದು ಪ್ಲೇಟಿನೊಳಗೆ ನನಗೂ ಸ್ವಲ್ಪ ಹಾಕು. ನಾನೂ ಒಂದು ತುತ್ತು ಉಣತೇನಿ" ಎಂದರು ರಾಯರು.

"ಮತ್ತೆ ಇದೀಗ ಉಣ್ಣೋದಿಲ್ಲ ಎಂದೆಯಲ್ಲ?" ತಾಯಿ ಮಗನನ್ನು ಕೇಳಿದರು.

"ಹೌದು ಖರೆ, ಆದರೆ ಈ ಸೊಸೆಮುದ್ದು ಇರುವಳಲ್ಲ! ನಾನು ಉಣ್ಣದಿದ್ದರೆ ತಾನೂ ಉಣ್ಣುವುದಿಲ್ಲ ಎಂದು ಕುಳಿತಿದ್ದಾಳೆ" ಎಂದು ರಾಯರು ವಿವರಿಸಿದರು.

ಜಲಜಾಕ್ಷಿಯ ಮೊಗದಲ್ಲಿ ನಗೆ ಅರಳಿತು.

"ನಾನು ಎಷ್ಟು ಹೇಳಿದರೂ ಉಣ್ಣಲಿಲ್ಲ, ಆ ಶಾಮ ಕೇಳಿದರೆ ಸುಮ್ಮನೆ ಗದರಿಸಿ ಕಳಿಸಿದೆ. ಮತ್ತೂ ಈಗ ನೋಡು..." ಶಾರದಾಬಾಯಿ ತೋರಿಕೆಯ ಕೋಪ ನಟಿಸಿದರು.

"ಹೂಂ" ಎಂದು ಧ್ವನಿ ಎಳೆಯುತ್ತ ನಾರಾಯಣರಾಯರು ಎದ್ದು ಊಟಕ್ಕೆ ನಡೆದರು.

- ೮ -

ಮರುದಿನ ಜಲಜಾಕ್ಷಿ ಊರಿಗೆ ಹೊರಡುವವಳಿದ್ದಳು. ಶಾರದಾಬಾಯಿಯವರು ಮೊದಲದಿನ ರಾತ್ರಿಯೇ ಉಂಡಿಗಳನ್ನು ಮಾಡಿ ಡಬ್ಬಿತುಂಬಿ ಇಟ್ಟಿದ್ದರು. ಮುಂಜಾನೆ ಎದ್ದ ಕೂಡಲೇ ಜಲಜಾಕ್ಷಿ ತನ್ನ ಅರಿವೆ ಮುಂತಾದವುಗಳನ್ನು ಬ್ಯಾಗಿನಲ್ಲಿ ಹಾಕಿಡುತ್ತ ಊರಿಗೆ ಹೊರಡುವ ಸಿದ್ಧತೆಯಲ್ಲಿ ತೊಡಗಿದ್ದಳು.

ನಾರಾಯಣರಾಯರು ಆ ದಿನ ಆಫೀಸಿಗೆ ರಜೆಯ ಚೀಟಿಯನ್ನು ಕಳಿಸಿದ್ದರು. ಜಲಜಾಕ್ಷಿ ಊರಿಗೆ ಹೋಗುವ ಕಾರಣದಿಂದ ರಜೆ ತೆಗೆದುಕೊಂಡಿರಬಹುದೇ ಎಂದು ಶಾರದಾಬಾಯಿಯರು ತಿಳಿದಿದ್ದರು. ಮುಂಜಾನೆಯಿಂದಲೂ ಮಗ ಸುಸ್ತಾಗಿರುವುದನ್ನು ಕಂಡು ಅವರು,

"ಅವಳನ್ನು ಹೊಸದಾಗಿ ಅತ್ತೆಮನೆಗೆ ಕಳಿಸುವವರಂತೆ ಮಾಡುತ್ತಿದ್ದೀಯಲ್ಲ!" ಎಂದು ಮಗನಿಗೆ ಚೇಷ್ಟೆ ಮಾಡಿದರು.

ಅದಕ್ಕೇ ನಾರಾಯಣರಾಯರು "ಹಾಗೇನೂ ಇಲ್ಲ. ಇಂದು ಅದೇಕೋ ಮೈಯಲ್ಲಿಯೂ ಹುಷಾರಿಲ್ಲ. ನಿನ್ನೆಯ ತಲೆಶೂಲಿ ಇ... ಕಡಿಮೆ... ...ಲ್ಲ" ಎಂದರು.

ಕೋಣೆಯಲ್ಲಿ ಬರುತ್ತಿದ್ದ ಜಲಜಾಕ್ಷಿ ಅವರ ಮಾತನ್ನು ಕೇಳಿ,

"ಏನು? ತಲೆಶೂಲಿ ಇನ್ನೂ ಕಡಿಮೆಯಾಗಿಲ್ಲ? ಇದೇ ಈಗ ಕೇಳಿದಾಗ ಆರಾಮ ಅದೆಯೆಂದೆಯಲ್ಲ?' ಎನ್ನುತ್ತ ಕಾಟಿನ ಮೇಲೆ ಪೇಪರು ಓದುತ್ತ ಅಡ್ಡಾಗಿದ್ದ ಮಾಮನ ಹತ್ತಿರ ಬಂದು ಅವರ ಹಣೆಯನ್ನು ಕೈಯಿಂದ ಮುಟ್ಟಿ ನೋಡಿದಳು.

"ಅವ್ವಾ, ಮೈ ಕಾಯ್ದಿದೆಯಲ್ಲೋ ಮಾಮಾ?" ಗಾಬರಿಯಿಂದ ಅವಳು ಉದ್ಗರಿಸಿದಳು.

"ಇಲ್ಲ. ಮೈ ಎಲ್ಲಿ ಕಾಯ್ತದೆ? ರಾಯರು ನುಡಿದರು.

"ಮತ್ತ ಬೆಚ್ಚಗೆ ಹತ್ತುತ್ತದೆಯಲ್ಲ?"

"ನಿನಗೇನು ತಿಳೀತದ, ಸುಮ್ಮನಿರು" ಅವಳನ್ನು ನಾರಾಯಣರಾಯರು ಸುಮ್ಮನಾಗಿಸಿದರು.

"ನಿಜವಾಗಿಯೂ ಜ್ವರ ಬಂದಾವೇನು?' ಶಾರದಾ ಬಾಯಿ ಮಗನನ್ನು ಕೇಳಿದರು.

"ಇಲ್ಲ. ಜ್ವರ ಎಲ್ಲಿಯವು? ನಿನ್ನೆ ನಿದ್ದೆ ಚೆನ್ನಾಗಿ ಹತ್ತಲಿಲ್ಲ. ತುಸು ಆಲಸ್ಯ ಬಂದಿದೆ. ಅಷ್ಟೇ."

"ಏನಾದರೂ ಆಗಲೊಲ್ಲದೇಕೆ? ಮೋಹನನ ಕಡೆಯಿಂದ ಔಷಧ ತರಿಸು" ಎನ್ನುತ್ತಾ ಒಳಗೆ ಹೋದರು.

ಅಂದು ನಿಜವಾಗಿಯೂ ನಾರಾಯಣ ರಾಯರ ಮೈಯಲ್ಲಿ ಜ್ವರ ಬಂದಿದ್ದವು. ಆದರೆ ಊರಿಗೆ ಹೊರಟ ಜಲಜಾಕ್ಷಿಗೆ ಮಾತ್ರ ಹಾಗೆ ತೋರಗೊಟ್ಟಿರಲಿಲ್ಲ. ನಿಜವಾಗಿಯೂ ಜ್ವರಬಂದಿವೆ, ಅದನ್ನು ತನ್ನಿಂದ ಮಾಮಾ ಮುಚ್ಚಿಡುತ್ತಿದ್ದಾನೆ ಎಂದು ಜಲಜಾಕ್ಷಿಗೆ ಹೊಳೆದಾಗ ಅವಳ ಮುಖ ಕಳೆಗುಂದಿತು. ಅದನ್ನು ಕಂಡ ರಾಯರು,

"ಹುಚ್ಚೀ, ಜ್ವರ ನನಗೆ ಬಂದರೆ ನೀನು ಯಾಕೆ ಅಷ್ಟು ಸಣ ಮುಖ ಮಾಡಿರುವಿ?"

"ಅಂದರೆ ನಿನಗೆ ಜ್ವರ ಬಂದುದಂತೂ ನಿಶ್ಚಿತವಾಯಿತಲ್ಲ?" ಜಲಜಾಕ್ಷಿ ಕೇಳಿದಳು.

"ಎಂಥ ಜ್ವರ? ಏನೋ ಹುಗುಳು ನೆಗಡಿ. ಅಷ್ಟೇ" ಉಪಾಯಗಾಣದೆ ರಾಯರು ಒಪ್ಪಿಕೊಳ್ಳಬೇಕಾಯಿತು.

"ನನಗೆ ಮೊದಲು ಯಾಕೆ ಹಾಗೆ ಹೇಳಿದಿ?"

"ಊರಿಗೆ ಹೊರಟಿದ್ದೀ. ಸುಮ್ಮನೆ ಯಾತಕ್ಕೆ ಹೇಳುವುದೆಂದು ಬಿಟ್ಟಿದ್ದೆ. ಇಷ್ಟಾಗಿ ಅದೇನುಮಹಾ?"

"ಹೊರಟರೆ ಏನಾಯಿತು?"

"ಹಾಗಾದರೆ ಇಂದು ಹೋಗುವುದನ್ನು ಬಿಡುತ್ತೀಯಾ?"

"ನೀನು ಹೋಗು ಅಂದರೂ ನಾನೇನು ಇಂದು ಹೋಗುವುದಿಲ್ಲ" ಎಂದು ಹೇಳಿದಳಲ್ಲದೆ ಮಾಮಾನ ಮೈಯಲ್ಲಿ ಸರಿಯಾಗಿಲ್ಲ ಎರಡು ದಿನ ತಡೆದು ಬೆಳಗಾವಿಗೆ ಬರುತ್ತೇನೆಂದು ತಂದೆಗೆ ಪತ್ರವನ್ನೂ ಬರೆದಳು.

ಮುಂದೆ ನಾಲ್ಕು ದಿನಗಳೂ ಕಳೆದವು. ಆದರೆ ನಾರಾಯಣರಾಯರ ಜ್ವರ ಕಡಿಮೆಯಾಗುವ ಲಕ್ಷಣಗಳೇ ಕಾಣಲಿಲ್ಲ. ಡಾಕ್ಟರರು 'ಪಿತ್ತದ ಜ್ವರ, ಕಡಿಮೆಯಾಗಬಹುದು ನಾಳೆ' ಎಂದು ಹೇಳಿದ್ದರು. ಆದರೆ ಆ ನಾಳೆ ಇನ್ನೂ ಬಂದಿರಲಿಲ್ಲ. ದಿನಾಲು ಮಧ್ಯಾಹ್ನದಲ್ಲಿಯಂತೂ ೧೦೨, ೧೦೩ ಡಿಗ್ರಿ ಜ್ವರ ಬರುತ್ತಿದ್ದವು. ನಾಲ್ಕೇದಿನಗಳಲ್ಲಿ ರಾಯರು ಬಾಡಿಹೋದರು. ಮನೆಯಲ್ಲಿ ಯಾರಿಗೂ ನೆಮ್ಮದಿ ಇರಲಿಲ್ಲ.

ಮುಂದೆ ಮೂರು ನಾಲ್ಕುದಿನ ತಡೆದು ಡಾಕ್ಟರರು ಅವು ಪಿತ್ತದ ಜ್ವರವಲ್ಲ, ವಿಷಮದ ಜ್ವರ ಎಂದು ಅಭಿಪ್ರಾಯಪಟ್ಟು, ಶುಶ್ರೂಷೆಯನ್ನು ಅತ್ಯಂತ ಜಾಗರೂಕತೆಯಿಂದ ಮಾಡುವುದು ತೀರ ಅವಶ್ಯವೆಂದು ಹೇಳಿದರು. ಅದನ್ನು ಕೇಳಿದ ಮೋಹನ,

"ಅದಕ್ಕೆ ಏನು ಔಷಧಗಳೇ ಇಲ್ಲವೇ?" ಎಂದು ಕೇಳಿದನು.

"ಕ್ಲೋರೋಫಿನಿಕಾಲ್ ಎಂಬ ಹೊಸ ಔಷಧ ಬಂದಿದೆ. ಆದರೆ ಅದಿನ್ನೂ ನಮ್ಮ ದೇಶದಲ್ಲಿ ಸಿಗುವುದಿಲ್ಲ" ಡಾಕ್ಟರರು ನುಡಿದರು.

ಮೋಹನನ ಮುಖ ಚಿಕ್ಕ ದಾಯಿತು.

"ಹಾಗೇನೂ ಗಾಬರಿಬೇಡ. ಪಥ್ಯ, ಶುಶ್ರೂಷೆ ಚೆನ್ನಾಗಿ ಮಾಡಿದರೆ ಸಾಕು. ಔಷಧದ ವಿಚಾರ ನನಗಿರಲಿ ಚಿಂತೆ ಯಾಕೆ?" ಎಂದರು.

ಮಗನಿಗೆ ವಿಷಮಜ್ವರವೆಂದು ಕೇಳಿ ಶಾರದಾ ಬಾಯಿಯವರ ಧೈರ್ಯವೇ ಉಡುಗಿಹೋಯಿತು. 'ಅಯ್ಯೋ, ನಾನೇನು ಪಾಪವನ್ನು ಮಾಡಿದ್ದಿರಬಹುದು! ಅವನ ಬದಲು ನನಗೆ ಜಡ್ಡು ಬಂದಿದ್ದರೇನು ಕೇಡಿತ್ತು?" ಎಂದು ಕಣ್ಣೀರಿಟ್ಟರು.

ಎಲ್ಲ ಭಾರವೂ ಮೋಹನನ ಮೇಲೆಯೇ ಬಿದ್ದಿತು. ಪಥ್ಯ, ಶುಶ್ರೂಷೆಗಳಲ್ಲಿ ಜಲಜಾಕ್ಷಿಯದು ಹೆಚ್ಚಿನ ಪಾಲು. ದಿನಾಲು ರಾತ್ರಿ ಕಣ್ಣಿಗೆ ನಿದ್ರೆಯಿಲ್ಲದೆ ರಾಯರ ಹಾಸುಗೆಯ ಪಕ್ಕದಲ್ಲಿ ಮೋಹನ ಮತ್ತು ಜಲಜಾಕ್ಷಿ ಸರತಿಯ ಪ್ರಕಾರ ಕೂಡ್ರುತ್ತಿದ್ದರು. ಅಜ್ಜಿಗಂತೂ ಕೈಕಾಲೇ ಹೋಗಿದ್ದುವು. ಏನು ಮಾಡಲಿಕ್ಕೂ ಅವರಿಗೆ ತಿಳಿಯದಂತಾಗಿತ್ತು. ಶಾಮನಿಗೆ ರಾತ್ರಿ ನಿದ್ರೆ ಕಟ್ಟುವುದು ಎಷ್ಟುಮಾತ್ರಕ್ಕೂ ಸಾಧ್ಯವಾಗುತ್ತಿರಲಿಲ್ಲ. ಎಂದಾದರೂ ರಾತ್ರಿ ಹತ್ತು ಗಂಟೆಯ ಸಿನೇಮಾಕ್ಕೆ ಹೋಗಿ ಬಂದರೆ ಮರುದಿನ ಮುಂಜಾನೆ ಹತ್ತರವರೆಗೆ ಮಲಗಿಕೊಳ್ಳುವ ಅಭ್ಯಾಸ ಅವನದು. ಹೀಗಾಗಿ ಅವನು ರಾತ್ರಿ ತಂದೆಯ ಸೇವೆಮಾಡುವುದನ್ನು ಅಣ್ಣನಿಗೆ ಒಪ್ಪಿಸಿ, ಹಗಲೇ ಏನಾದರೂ ಉಪಚಾರ ಮಾಡುತ್ತಿದ್ದನು. ಔಷಧ ಮತ್ತು ಪೇಟೆಯ ಸಾಮಾನು ಮೊದಲಾದ ಹೊರಗಿನ ಕೆಲಸವೆಲ್ಲ ಅವನದಾಯಿತು.

ಹೀಗೆ ಮನೆಯಲ್ಲಿ ಎಲ್ಲರೂ ನಾರಾಯಣರಾಯರ ಬೇನೆಯ ವಿರುದ್ಧ ಹೋರಾಡುತ್ತಿದ್ದರೇನೋ ನಿಜ. ಆದರೆ ಜ್ವರ ಮಾತ್ರ ಸ್ವಲ್ಪೂ ಕಡಿಮೆಯಾಗಲಿಲ್ಲ. ಶಾರದಾಬಾಯಿಯವರಂತೂ ಅನ್ನ ನೀರು ಬಿಟ್ಟು ಕುಳಿತುಬಿಟ್ಟಿದ್ದರು.

ಅಂದು ಮುಂಜಾನೆ ಡಾಕ್ಟರರು ದಿನದಂತೆ ಬಂದು ನಾರಾಯಣರಾಯರನ್ನು ಪರೀಕ್ಷಿಸಿ ಹೋಗುವಾಗ ಮೋಹನನ್ನು ಕುರಿತು,

"ಜ್ವರ ಬಂದು ಇಂದಿಗೆ ಹದಿನಾಲ್ಕು ದಿನಗಳಾದುವಲ್ಲವೇ? ಇಂದು ತೆಗೆಯಬಹುದು" ಎಂದರು.

"ಹೌದೇ ಸಾರ್.?"

"ಈ ದಿನ ತೆಗೆದರೆ ಒಳ್ಳೆಯದು. ಇಲ್ಲವಾದರೆ..."

"ಇಲ್ಲದಿದ್ದರೆ ಏನು?" ಗಾಬರಿಯಿಂದ ಮೋಹನ ಕೇಳಿದ.

"ಇನ್ನೂ ಏಳೆಂಟು ದಿನ ಮುಂದುವರಿಯಬಹುದು. ಆದರೆ ಅವರಿಗೆ ಈಗಾಗಲೇ ಬಹಳೇ weakness ಬಂದು ಬಿಟ್ಟಿದೆ."

"ಹೌದು ಸರ್. ಔಷಧಕುಡಿಸಿದರೂ ಅವರಿಗೆ ಅದೇ ಆಯಾಸವಾಗುತ್ತದೆ."

"ಅದೇ ತೊಂದರೆಯಪ್ಪಾ. ಆದರೂ ನೀನೇನೂ ಗಾಬರಿಯಾಗಬೇಡ. ಬಹುತರವಾಗಿ ಇಂದು ಜ್ವರ ತೆಗೆಯಬಹುದು. ಆಗ ಅವರಿಗೆ ತುಸು ಹೆಚ್ಚೆ ತೊಂದರೆಯಾಗಬಹುದು. ಇಂದು ನಾನು ಬೇರೆ ಔಷಧ ಕೊಡುತ್ತೇನೆ" ಎಂದರು.

ಮೋಹನನ ಮುಖ ಕಳೆಗುಂದಿತು. ಅದನ್ನೆ ಗಮನಿಸಿದ ಡಾಕ್ಟರರು,

"ಏನೂ ಗಾಬರಿಯಾಗುವ ಕಾರಣವಿಲ್ಲ. ಬೇಕಾದರೆ ನಾನು ಮತ್ತೆ ಇಂದು ಸಾಯಂಕಾಲವೂ ಬಂದು ಹೋಗುತ್ತೇನೆ." ಎಂದು ಧೈರ್ಯ ಹೇಳಿಹೋದರು.

ಇಡೀ ದಿನವೆಲ್ಲ ಮೋಹನ ತಂದೆಯ ಹಾಸುಗೆಯನ್ನು ಬಿಟ್ಟು ಕದಲಲಿಲ್ಲ. ಸಂಜೆಯಾದಂತೆ ಹೃದಯ ಸ್ಪಂದನ ತೀವ್ರವಾಗತೊಡಗಿತು.

ದಿನದಂತೆ ತಂದೆಯ ಹಣೆಯ ಮೇಲೆ ಕೋಲನ್ ವಾಟರಪಟ್ಟಿಯನ್ನು ಇಡುತ್ತ ಮೋಹನ ಕುಳಿತ್ತಿದ್ದ. ರಾತ್ರಿ ಹನ್ನೊಂದು ಹೊಡೆಯಿತು. ಜಲಜಾಕ್ಷಿ ಆತನನ್ನು ಕುರಿತು,

"ಮೋನ, ಮಲಗಿಕೊಳ್ಳುವದಿಲ್ಲವೇನು?. ಇಂದು ಮಧ್ಯಾಹ್ನ ಒಂದೈದು ಮಿನಿಟು ಕೂಡ ಮಲಗಿಲ್ಲವಲ್ಲ?"ಎಂದಳು.

ಮೋಹನನಿಗೆ ಅವಳಕಡೆಗೆ ಲಕ್ಷ್ಯವಿರಲಿಲ್ಲ. ಜ್ವರದಿಂದ ಬಳಲುತ್ತ ನಿರ್ವಿಣ್ಣನಾಗಿ ಬಿದ್ದುಕೊಂಡ ತಂದೆಯ ಮುಖವನ್ನೇ ನಿರೀಕ್ಷಿಸುತ್ತ ಕುಳಿತುಬಿಟ್ಟಿದ್ದ. ಅವರು ಕಣ್ಣುಗಳನ್ನೇನೋ ತೆರೆದಿರಲಿಲ್ಲವಾದರೂ ಅವರಿಗೆ ನಿದ್ರೆಯೂ ಹತ್ತಿರಲಿಲ್ಲ. ಜ್ವರದ ಪೀಡೆಯನ್ನು ತಾಳಲಾರದೆ ಅವರು ಯಾವಾಗಲೂ ಕಣ್ಣು ಮುಚ್ಚಿಕೊಂಡೇ ಮಲಗಿರುತ್ತಿದ್ದರು. ಯಾವಾಗಾದರೊಮ್ಮೆ ಕಣ್ಣು ತೆರೆದು ನೀರನ್ನು ಮಾತ್ರ ಬೇಡುತ್ತಿದ್ದರು. ಆದರೆ ಈಗೆರಡು ದಿನದಿಂದ ವಿಶೇಷ ಏನೂ ಮಾತನ್ನೇ ಆಡಿರಲಿಲ್ಲ. ಹೆಚ್ಚುಸಾರೆ ಕಣ್ಣುಗಳನ್ನು ತೆರೆದಿರಲಿಲ್ಲ. ಅವರಿಗೆ ಅದೂ ಆಯಾಸವಾಗುತ್ತಿತ್ತು.!

ಹತ್ತು–ಹದಿನೈದು ನಿಮಿಷ ತಡೆದು ಜಲಜಾಕ್ಷಿ ಮತ್ತೆ ಮೋಹನನನ್ನು ಕೇಳಿದಳು. "ನಿದ್ರೆ ಇನ್ನೂ ಬಂದಿಲ್ಲವೇನು?" ಎಂದು. ಮೋಹನ ಗೋಣು ಅಲ್ಲಾಡಿಸಿ ಇಲ್ಲ ಎಂದು ಸೂಚಿಸಿದ. ಜಲಜಾಕ್ಷಿ ಕೂಡ ಹೆಚ್ಚು ಮಾತನ್ನಾಡಲಿಲ್ಲ.

ನಡುಮನೆಯ ಗೋಡೆಯ ಗಡಿಯಾರ ಢಣ ಢಣ ಎಂದು ಹನ್ನೆರಡುಹೊಡೆಯಿತು. ಆ ಶಾಂತ ವಾತಾವರಣದಲ್ಲಿ ಆ ಹನ್ನೆರಡು ಗಂಟೆಗಳು ಮೋಹನ ಮತ್ತು ಜಲಜಾಕ್ಷಿಯ ಕಿವಿಯಲ್ಲಿ ಹೊಕ್ಕಾಗ ಇಬ್ಬರಿಗೂ ಭೀಕರತೆಯ ಅರಿವಾಯಿತು. ಜಲಜಾಕ್ಷಿ ತಾನು ಕುಳಿತಲ್ಲಿಂದ ಎದ್ದು ಮೋಹನನ ಸಮೀಪ ಬಂದು ಕುಳಿತಳು. ಮೋಹನ ಅವಳ ಕಡೆಗೊಮ್ಮೆ ನೋಡಿದ. ಇಬ್ಬರ, ದೃಷ್ಟಿಯಲ್ಲಿಯೂ ಹೆದರಿಕೆ–ಒಡಮೂಡಿತ್ತು.

"ಮೋನ ಡಾಕ್ಟರರು ಏನು ಹೇಳಿದರು?" ಜಲಜಾ ಕೇಳಿದಳು, ಬಹುಮೆಲುವಾಗಿ.

"ಏನೂ ಇಲ್ಲ, ಈ ದಿನ..." ಮೋಹನ ಏನೋ ಹೇಳಲಿದ್ದ. ಅಷ್ಟರಲ್ಲಿ ರಾಯರು ತುಸು ಅಲುಗಾಡಿದರು. ಇಬ್ಬರ ದೃಷ್ಟಿ ಆ ಕಡೆಗೆಹರಿಯಿತು. ಜಲಜಾಕ್ಷಿ ರಾಯರ ಹತ್ತಿರ ಹೋಗಿ ಹಣೆಯ ಮೇಲೆ ಕೈಯಿಟ್ಟು ನೋಡಿದಳು.

"ಇಂದು ಜ್ವರ ಹೆಚ್ಚಿಗೆ ಬಂದಂತಿದೆ." ಜಲಜಾಕ್ಷಿ ನುಡಿದಳು.

"ಹೌದು." ಮೋಹನ ನಿಟ್ಟುಸಿರುಬಿಟ್ಟ.

"........."

"………"

ಮಾವನಿಗೆ ಚಮಚೆಯಲ್ಲಿಂದ ಎರಡು ಗುಟುಕು ಗ್ಲುಕೋಜನೀರನ್ನು ಜಲಜಾಕ್ಷಿ ಕುಡಿಸಿದಳು. ಆದರೆ ಅವರಿಗೆ ಸಮಾಧಾನವಾಗಲಿಲ್ಲ. ಮುಖವನ್ನು ಆ ಬದಿಯಿಂದ ಈ ಬದಿಗೆ, ಈ ಬದಿಯಿಂದ ಆ ಬದಿಗೆ ಹೊರಳಿಸುತ್ತಿದ್ದರು.

"ಮೋನ, ಹಣೆಯಮೇಲೆ ಬೆವರು ಬಿಡುವಂತೆ ಕಾಣುತ್ತದೆ." ಜಲಜಾಕ್ಷಿ ನುಡಿದಳು.

ಮೋಹನನೂ ತಂದೆಯ ಹಣೆಯ ಮೇಲೆ ಕೈಯಿಟ್ಟು ನೋಡಿದ.

"ಅಜ್ಜಿಯನ್ನು ಎಬ್ಬಿಸಲೇನೋ?" ಎಂದಳು ಜಲಜಾಕ್ಷಿ.

ಮೋಹನ 'ಬೇಡ' ಎಂದ.

ಹಾಗೆಯೇ ಹದಿನೈದು ನಿಮಿಷಗಳು ಕಳೆದುವು.

ನಾರಾಯಣರಾಯರು ಅಯ್ಯೋ ಎಂದು ಮೆಲುವಾಗಿ ನರಳಿದರು. ಜಲಜಾಕ್ಷಿ ಬೆಚ್ಚಿಬಿದ್ದಳು. ಗಾಬರಿಯಿಂದ "ಯಾಕ ಮಾವಾ, ಮಾವಾ!" ಎಂದಳು.

ಅಲ್ಲಿಯೇ ಪಕ್ಕದ ಕೋಣೆಯಲ್ಲಿ ತೂಕಡಿಸುತ್ತಾ ಕುಳಿತ ಶಾರದಾಬಾಯಿಯವರು ಜಲಜಾಕ್ಷಿಯ ಗಾಬರಿಯ ಧ್ವನಿಯನ್ನುಕೇಳಿ, ಕೋಣೆಯೊಳಗೆ ಧಾವಿಸಿ ಬಂದರು, "ಏನು ಜಲಜಾ?" ಎನ್ನುತ್ತಾ.

"ಮಾಮಾ ಅದೇಕೋ ಒಂದು ತೆರನಾಗಿ ಮಾಡುತ್ತಿದ್ದಾನೆ."

ಶಾರದಾಬಾಯಿಯವರು ಮಗನ ಹಣೆಯ ಮೇಲೆ ಕೈಯಿರಿಸಿ ನೋಡಿದರು. ನೋಡಿ,

"ಬೆವರು ಬಿಡುವಂತಿದೆ. ಅದಕ್ಕೇ ಕಸಿವಿಸಿಯಾಗುತ್ತಿರಬಹುದು. ನೀವು ಇಲ್ಲಿಯೇ ಕುಳಿತಿರಿ, ನಾನು ಸ್ವಲ್ಪ ಕಾಫಿ ಮಾಡಿಕೊಂಡುಬರ್ತೇನೆ" ಎಂದು ಅಡಿಗೇಮನೆಗೆ ನಡೆದರು.

ಆಗ ಇಬ್ಬರಿಗೂ ಧೈರ್ಯ ಬಂದಂತಾಯಿತು. ರಾಯರ ಮಗ್ಗುಲಲ್ಲಿಯೇ ಇಬ್ಬರೂ ಕುಳಿತುಕೊಂಡರು.

ಒಂದೆರಡು ನಿಮಿಷಗಳನಂತರ ನಾರಾಯಣರಾಯರು ಕಣ್ಣು ತೆರೆದು "ನೀಽಽರು" ಎಂದರು.

ಜಲಜಾಕ್ಷಿ ಎರಡುಚಮಚ ಗ್ಲುಕೋಜ ನೀರು ಕುಡಿಸಿದಳು.

"ಈಗ ಆರಾಮ ಅನ್ನಿಸುತ್ತದೆಯೇನು?" ಜಲಜಾಜಾಕ್ಷಿ ಮತ್ತು ಮೋಹನ ಇಬ್ಬರಮುಖದಿಂದಲೂ ಒಂದೇಮಾತು ಬಂದಿತು.

ರಾಯರು ಏನೊಂದೂ ಮಾತನಾಡಲಿಲ್ಲ. ಒಣಗಿ ಬತ್ತಿಹೋದ ಅವರ ತುಟಿಗಳು ಮಾತ್ರ ಏನೋ ಹೇಳಬೇಕೆಂಬಂತೆ ಅಲುಗಾಡಿದವು. ಅವರು ತಮ್ಮ ಸತ್ತ್ವಹೀನವಾದ ಕಣ್ಣುಗಳಿಂದ ಒಮ್ಮೆ ಅವರಿಬ್ಬರನ್ನೂ ನೋಡಿದರು, ಅಷ್ಟೇ. ಮತ್ತೆ ಕಣ್ಣುಮುಚ್ಚಿದರು.

ಶಾರದಾಬಾಯಿಯವರು ಕಾಫಿ ತಂದು ಮಗನಿಗೆ ಎರಡು ಗುಟುಕು ಕುಡಿಸಿದರು. ಮುಂದೆ ಹತ್ತು ನಿಮಿಷಗಳಲ್ಲಿ ನಾರಾಯಣರಾಯರಿಗೆ ಬೆವರು ಬರತೊಡಗಿತು. ವಸ್ತ್ರದಿಂದ ಮಗನ ಹಣೆಯನ್ನೂ ಎದೆಯನ್ನು ಒರಸುತ್ತ,

"ಇನ್ನು ಹೋಗಿರಪ್ಪ, ಮಲಗಿಕೊಳ್ಳಿರಿ. ಇನ್ನೇನೂ ಚಿಂತೆಮಾಡುವ ಕಾರಣವಿಲ್ಲ. ದೇವರು ನಮ್ಮ ಮೇಲೆ ದಯಮಾಡಿದ ಎಂದು" ಶಾರದಜ್ಜಿ ಮೊಮ್ಮಕ್ಕಳಿಗೆ ಹೇಳಿದರು.

ಇಬ್ಬರಮೊಗದಲ್ಲಿಯೂ ಗೆಲುವು ಮೂಡಿತು.

## ಇಲ್ಲ—ಸಲ್ಲ!



ಪ್ಯಾಟಿಯೊಳಗ ಅಕ್ಕಿ ಜೋಳ ಸಕ್ಕರೀ
ಚಿಮಣಿ ಎಣ್ಣಿ ಇಲ್ಲ!
ಸರಕಾರಕೊ ಕಿವಿ-ಕಣ್, ವ್ಯಾಪಾರಿಗೊ
ಹೃದಯವೆಂಬುದಿಲ್ಲ,-ಜನರೊ-
ದ್ಯಾಟ ಹೇಳಸಲ್ಲ!

– ಎಂ. ಅಕಬರ ಅಲಿ

× × × × × ×

ಮುಂದೆ ಹತ್ತು ಹದಿನೈದು ದಿನಗಳಲ್ಲಿ ನಾರಾಯಣರಾಯರ ಪ್ರಕೃತಿ ಎಷ್ಟೋ ಸುಧಾರಿಸಿತು, ಜ್ವರ ಬರುವುದು ಸಂಪೂರ್ಣ ನಿಂತಿತ್ತು. ಗಂಜಿಯನ್ನು ಬಿಟ್ಟು ಮೆತ್ತಗಿನ ಅನ್ನವನ್ನು ಉಣ್ಣಲಿಕ್ಕೆ ಡಾಕ್ಟರರು ಸೂಚಿಸಿದ್ದರು. ಆದರೂ ಮೈಯಲ್ಲಿ ಇನ್ನೂ ಅಶಕ್ತತೆ ಉಳಿದುಕೊಂಡಿತ್ತು.

ಈ ಅವಧಿಯಲ್ಲಿ ಜಲಜಾಕ್ಷಿಯು ತನ್ನ ತಂದೆಗೆ ಮಾಮಾನ ಜ್ವರದಬಗ್ಗೆ ಎರಡು-ಮೂರು ಪತ್ರಗಳನ್ನು ಬರೆದಿದ್ದಳು. ಆದರೂ ವೆಂಕಣ್ಣನಿಂದ ಯಾವ ಉತ್ತರವೂ ಬಂದಿರಲಿಲ್ಲ. ಆದರೆ ಮೊನ್ನೆ ಬರೆದ ಅವಳ ಪತ್ರದಲ್ಲಿಯ ಕೊನೆಯ ವಾಕ್ಯ "ನನ್ನ ಮಾಮಾ ದೇವರ ದಯದಿಂದ ನನಗೆ ಉಳಿದ–" ಎಂಬುದು ಅವನ ಹೃದಯಕ್ಕೆ ಮುಟ್ಟಿತ್ತು. ಅವರೆಗೂ ಜಲಜಾಕ್ಷಿಯ ಪತ್ರಗಳಿಗೆ ಅಷ್ಟೊಂದು ಮಹತ್ತ್ವವನ್ನು ಕೊಟ್ಟಿರಲೇ ಇಲ್ಲ. ಏನೋ ಇನ್‍ಫ್ಲೂಯೆಂಝಾ ಜ್ವರ ಬಂದಿರಬಹುದು ಎಂದು ತಿಳಿದಿದ್ದರು. ಆದರೆ ಮಗಳ ಆ ವಾಕ್ಯವು ವೆಂಕಣ್ಣನ ಮನದಮೇಲೆ ಹೆಚ್ಚಿನ ಪರಿಣಾಮನ್ನುಂಟುಮಾಡಿತು. ಆತ ಶಾಲೆಗೆ ಎರಡುದಿನದ ರಜೆಹಾಕಿ ಕೂಡಲೇ ಹೊರಟು ಸಾಂಗಲಿಗೆ ಬಂದುಬಿಟ್ಟ.

ವೆಂಕಣ್ಣ ಕೋಣೆಯನ್ನು ಪ್ರವೇಶಿಸಿದಾಗ ನಾರಾಯಣರಾಯರು ದಿಂಬಿಗೊರಗಿ ಮ[illegible]ದ್ದರು. ಜಲಜಾಕ್ಷಿ ಕಪ್ಪಿನಲ್ಲಿಯ ಕಾಫಿಯನ್ನು ಬಸಿಯಲ್ಲಿ ಹಾಕಿ ಕುಡಿಸುತ್ತಿದ್ದಳು.

ಬಾಗಿಲು ಹತ್ತಿರ ಒಂದುನಿಮಿಷ ನಿಂತು ಆ ದೃಶ್ಯವನ್ನು ನೋಡುತ್ತಿರುವಾಗ ವೆಂಕಣ್ಣನಿಗೆ ಅದೇನೋ ಒಂದು ತೆರನಾಗಿ ಮರುಕ ಆವರಿಸಿತು. ಬೆಳಗಿನ ಸತ್ತ್ವಹೀನಬಣ್ಣದ ಬೀಗನ ಬಡಕಲುದೇಹವನ್ನು ಕಂಡು ಆತನ ಕರುಳುನೊಂದಿತು.

"ಎಷ್ಟು ಸೊರಗಿ ಬಿಟ್ಟಿದ್ದೀರಿ"! ಎಂದು ಹೇಳುತ್ತ ವೆಂಕಣ್ಣ ಕೋಣೆಯಲ್ಲಿ ಕಾಲಿರಿಸಿದನು.

ನಾರಾಯಣರಾಯರು ಮತ್ತು ಜಲಜಾಕ್ಷಿ ಇಬ್ಬರೂ ಒಮ್ಮೆಲೇ ಬಾಗಿಲಕಡೆಗೆ ನೋಡಿದರು.

"ಹಾಂ! ನೀವು ಯಾವಾಗ ಬಂದಿರಿ? ಬರ್ರಿ ಒಳಗೆ." ಎಂದು ರಾಯರು ಬೀಗನನ್ನು ಸ್ವಾಗತಿಸಿದರು.

"ಬಹಳೇ ಇಳಿದುಬಿಟ್ಟಿದ್ದೀರಲ್ಲ? ಎಂದ ವೆಂಕಣ್ಣ.

ಜಲಜಾಕ್ಷಿ ತಂದೆಗೆ ಕೂಡ್ರಲು ಖುರ್ಚಿಯನ್ನು ತಂದು ಮಂಚದ ಸಮೀಪ ಇರಿಸಿದಳು.

"ಇಳಿದುಬಿಡುವದಲ್ಲ, ಮೇಲಕ್ಕೇ ಹೋಗಬಹುದಾಗಿತ್ತು… ನನ್ನ ಕೂಸು ಜಲಜಾ ನನ್ನನ್ನು ಉಳಿಸಿತು." ಎಂದು ರಾಯರು ಮೆಲುವಾಗಿ ನುಡಿದರು.

"ಛೇ. ಹಾಗೇಕೆ ಅನ್ನುತ್ತೀರಿ? ವೆಂಕಣ್ಣ ನುಡಿದ.

"ಇಲ್ಲ, ಬಹಳೇ ತ್ರಾಸಾಗಿತ್ತು" ರಾಯರು ಹೇಳಿದರು.

"ಜಲಜಾ ಪತ್ರ ಬರೆದಿದ್ದಳು. ಆದರೆ ಇಷ್ಟು ಸೀರಿಯಸ್ ಇರಬಹುದೆಂದು ನಾನು ಎಣಿಸಿರಲಿಲ್ಲ." ವೆಂಕಣ್ಣ ಹೇಳಿದ.

ವೆಂಕಣ್ಣ ಬಂದುದರಿಂದ ಎಲ್ಲರಿಗೂ ಸಂತೋಷವಾಯಿತು. ಮನೆಯಲ್ಲಿ ವ್ಯಾಪಿಸಿಕೊಂಡಿದ್ದ ಮ್ಲಾನತೆ ಆತನ ಬರುವಿಕೆಯಿಂದ ಅಡಗಿಹೋಗಿ, ಮನೆ ತುಂಬಿಕೊಂಡಂತಾಯಿತು.

ವೆಂಕಣ್ಣ ಮತ್ತೂ ಎರಡು ದಿನ ರಜೆ ಬೆಳೆಯಿಸಿ ಹೆಚ್ಚಿಗೆಇದ್ದು, ಹೋಗುವಾಗ ಜಲಜಾಕ್ಷಿಯನ್ನೂ ಕರೆದುಕೊಂಡು ಬೆಳಗಾವಿಗೆ ಹೋದನು.

### - ೯ -

ಗಂಡನ ಮನೆಗೆ ಬಂದು ಅದೆಷ್ಟೋ ದಿನಗಳಾದರೂ ಚಂಪಕ್ಕನಿಗೆ ವೆಂಕಣ್ಣನ ಸ್ವಭಾವವನ್ನು ಅರಿತುಕೊಳ್ಳುವದಾಗಿರಲಿಲ್ಲ. ಗಂಡನ ಬೇಕು-ಬೇಡಗಳೇನೆಂಬುದೇ ಅವಳಿಗೆ ತಿಳಿಯುತ್ತಿರಲಿಲ್ಲ. ಗಂಡನು ಹಾಸ್ಯಪ್ರಿಯನೋ, ಮುಗ್ಧನೋ. ಸಿಟ್ಟಿನವನೋ; ಯಾವ ಕಾಲಕ್ಕೆ ಆತನೊಂದಿಗೆ ಹೇಗೆ ವರ್ತಿಸಬೇಕು, ಇದು ಒಮ್ಮೊಮ್ಮೆ ಅವಳಿಗೆ ಅರ್ಥವಾಗದೇ ಹೋಗುತ್ತಿತ್ತು. ಅದರಂತೆ ವೆಂಕಣ್ಣನಿಗೂ ತನ್ನಹೆಂಡತಿಯೊಂದಿಗೆ ಹೊಂದಿಕೊಳ್ಳುವುದು ಬಹು ದುಸ್ತರವೆಂದು ಒಮ್ಮೊಮ್ಮೆ ತೋರತೊಡಗಿತು. ಅವನು ಏನಾದರೂ ಒಂದು ಹಾಸ್ಯ ಮಾಡಿದರೆ ಚಂಪಾ ಅದಕ್ಕೆ ಬೇರೊಂದು ಅರ್ಥವನ್ನು ಕಲ್ಪಿಸಿಕೊಂಡು ಗಂಟುಮೋರೆ ಹಾಕುತ್ತಿದ್ದಳು. ಅದನ್ನು ಕಂಡಾಗ ವೆಂಕಣ್ಣನ ಉತ್ಸಾಹಕ್ಕೆ ತಣ್ಣೀರೆರಚಿದಂತಾಗುತ್ತಿತ್ತು. ಎಷ್ಟೋ ಸಲ ಕುಡಿಯುತ್ತಿದ್ದ ಚಹದ ಕಪ್ಪನ್ನು ಹಾಗೆಯೇ ಬಿಟ್ಟು ಹೋಗಿಬಿಡುತ್ತಿದ್ದ. ಆಗ ಮಾತ್ರ ಅವನಿಗೆ ಪದ್ಮಾಳ ನೆನಪಾಗದೇ ಹೋಗುತ್ತಿರಲಿಲ್ಲ. ಅವನ ಮನವು ಆಗ ಅವರಿಬ್ಬರನ್ನೂ ತೂಗಿನೋಡುತ್ತಿತ್ತು. ಅಂಥ ಸಮಯದಲ್ಲಿ ಅವನಿಗರಿವಿಲ್ಲದೆ ಅವನ ಕಣ್ಣುಗಳು ತೇವವಾಗುತ್ತಿದ್ದವು. ಆಗ ಗೊತ್ತೆ ಐಂದು.

"ಹಾಗೆ ಸಿಟ್ಟಾಗಬೇಡ ವೆಂಕಾ, ಅವಳೂ ಇನ್ನೂ ಚಿಕ್ಕವಳು. ನೀನೇ ಸಂಭಾಳಿಸಿ ಸುಧಾರಿಸದಿದ್ದರೆ ಹೇಗೆ ಹೋದು. ಎಂದು ಅಳಿಯನನ್ನು ರಮಿಸುತ್ತಿದ್ದರು.

ನಿಜವಾಗಿಯೂ ಚಂಪಕ್ಕ ಒರಟು ಹುಡುಗಿಯೆಂದು ಹೇಳುವಂತಿಲ್ಲ. ಮೊದಲೇ ಹಳ್ಳಿಯಲ್ಲಿ ಬೆಳೆದವಳು, ಅದರಲ್ಲಿ ಶಿಕ್ಷಣವೂ ಕಡಿಮೆ. ಮೇಲಾಗಿ ಒಬ್ಬಳೇ ಮಗಳೆಂದು ರಾಮಣ್ಣ ಅವಳನ್ನು ತುಸು ಹೆಚ್ಚಾದ ಸಲಿಗೆಯಿಂದ ಬೆಳೆಸಿದ್ದನು. ಹೀಗಾಗಿ ಆಗಾಗ ಮನೆಯಲ್ಲಿ ಏನಾದರೂ ವಿರಸದ ಸನ್ನಿವೇಶಗಳು ನಡೆಯುತ್ತಿದ್ದವು. ಆದರೆ ಮರುಕ್ಷಣವೇ ತಾನು ತಪ್ಪಿದೆನೆಂದು ಅವಳಿಗೂ ತಿಳಿಯುತ್ತಿತ್ತು. ಇನ್ನೊಮ್ಮೆ ಹಾಗೆಂದೂ ನಡೆದುಕೊಳ್ಳಬಾರದೆಂದು ಮನದಲ್ಲಿಯೇ ಅಂದುಕೊಳ್ಳುವಳು. ಅದೆಷ್ಟೋ ಸಲ ತನ್ನ ಮೇಲೆ ಗಂಡ ಸಿಟ್ಟಾದಾಗ ಅವಳು ಅದರ ಸೇಡನ್ನು ಜಲಜಾಕ್ಷಿಯ ಮೇಲೆ ತೀರಿಸಿಕೊಳ್ಳುವಂತೆ ಅವಳ ಮೇಲೆ ಸಿಡಿಮಿಡಿಗೊಳ್ಳುತ್ತಿದ್ದಳು. ಆದರೆ ಮರುಕ್ಷಣವೇ ಪಶ್ಚಾತ್ತಾಪ ಪಡಿಸುತ್ತಿತ್ತು. ಎಷ್ಟೋ ಸಲ ದುಃಖದಿಂದ ಕಣ್ಣೀರು ಸುರಿಸಿದ್ದೂ ಉಂಟು.

"ಯಾಕೆ. ಏನಾಯ್ತು? ಯಾಕೆ ಅಳುತ್ತೀ?" ಎಂದು ಗಂಡ ಕೇಳಿದರೆ, ಏನೊಂದು ಉತ್ತರ ಹೇಳಲೂ ಅವಳಿಗೆ ತಿಳಿಯುತ್ತಿರಲಿಲ್ಲ. ಅಷ್ಟೇ ಅಲ್ಲ ಗಂಡನ ಮಾತಿನಿಂದ ಅವಳ ದುಃಖ ಹೆಚ್ಚಾಗಿ ಇನ್ನೂ ಹೆಚ್ಚಾಗಿ ಅತ್ತುದೂ ಉಂಟು. ವೆಂಕಣ್ಣನಿಗೂ ಏನು ಮಾಡಬೇಕೆಂದು ತಿಳಿಯುತ್ತಿರಲಿಲ್ಲ. ಗೌರತ್ತೆಯ ಮಾತು ಕೇಳಿ ತಾನು ಮರುಮದುವೆಗೆ ಒಪ್ಪಿದ್ದು ತಪ್ಪಾಯಿತೆಂದೇ ಅವನಿಗೆ ಎಷ್ಟೋ ಸಲ ಅನಿಸಿದೆ. ಒಂದು ದಿನ ವೆಂಕಣ್ಣ,

"ನಿನಗೆ ಆಗಾಗ ಅಳಲಿಕ್ಕೆ ಏನಾಗುತ್ತದೆ? ಎಂದು ತುಸು ಬಿರುಸಾಗಿಯೇ ಕೇಳಿದ.

ಚಂಪಾ ತುಸು ಹೆದರಿದಳು. ಏನು ಹೇಳಬೇಕೆಂದು ತಿಳಿಯದೆ ಮೌನವಾದಳು.

"ಯಾಕೆ, ಹೇಳುವುದಿಲ್ಲವೇನು? ಹೇಳು" ಅಂದ.

"ನಾನು ಏನು ಮಾಡಿದರೂ ನಿಮಗೆ ಸೇರುವುದೇ ಇಲ್ಲ. ಏನಾದರೂ ಮಾತನಾಡಿದರೆ ಸುಮ್ಮಸುಮ್ಮನೆ ಸಿಟ್ಟಾಗುತ್ತೀರಿ... ಕಂಪಿಸುವ ಧ್ವನಿಯಲ್ಲಿ ನುಡಿದಳು.

ಹೆಂಡತಿಯ ಮಾತನ್ನು ಕೇಳಿ ವೆಂಕಣ್ಣನಿಗೆ ಸಿಟ್ಟು ಹೋಗಿ ನಗುಬಂದಿತು. ಚಿಕ್ಕಮಕ್ಕಳಂತಿರುವ ಅವಳ ನಿಷ್ಕಪಟ ಮಾತುಗಳನ್ನು ಕೇಳಿ ಅವನಿಗೆ ಕನಿಕರವೂ ಅನ್ನಿಸಿತು.

ದಯಾಪೂರಿತ ದೃಷ್ಟಿಯಿಂದ ಆ ಮುಗ್ಧೆಯ ಕಡೆಗೆ ನೋಡಿದ– ನೀರು ತುಂಬಿ ತುಳುಕುತ್ತಿದ್ದ ಕಣ್ಣುಗಳು ತನ್ನ ಕಡೆಗೇ ಆಶಾಪೂರ್ಣವಾಗಿ ನೋಡುತ್ತಿದ್ದವು. ಆ ದೃಷ್ಟಿ ಅವನ ಹೃದಯವನ್ನು ಕಲುಕಿತು. ಒಮ್ಮೆಲೇ ಎದ್ದು ಹೋಗಿ ಹೆಂಡತಿಯನ್ನು ಕೈಹಿಡಿದು ಎಬ್ಬಿಸಿ ತನ್ನ ಬದಿಯಲ್ಲಿ ಕೂಡ್ರಿಸಿಕೊಂಡು ಅವಳ ಕಣ್ಣೀರನ್ನು ಒರಸಿದ! ಏನೋ ಹೇಳಬೇಕೆಂದ, ಆದರೆ ಮಾತು ಬರಲಿಲ್ಲ.

ಚಂಪಾನ ಹೃದಯ ದಿವ್ಯಸುಖವನ್ನು ಅನುಭವಿಸಿತು. ಅವಳು ಎಂದಿನಿಂದಲೂ ಬಯಸುತ್ತಿದ್ದ ದಿವ್ಯಾನಂದ ಅಂದು ಅವಳಿಗೆ ದೊರೆತಿತ್ತು.

* * *

ಗೌರತ್ತೆ ಅನೇಕ ದಿನಗಳಿಂದ ಎದುರು ನೋಡುತ್ತಿದ್ದ ಸುದಿನ ತುಸು ತಡವಾಗಿಯೇ ಒದಗಿಬಂದಿತೆಂದು ಹೇಳಬೇಕು. ಚಂಪಾ ಗಂಡನ ಮನೆಗೆ ಬಂದು ಮೂರು ವರ್ಷಕ್ಕೆ ಗಂಡುಮಗುವಿನ ತಾಯಿಯಾದಳು.

ಅಂದು ಗುರುವಾರ, ಸಾಯಂಕಾಲ ವೆಂಕಣ್ಣ ಶಾಲೆಯಿಂದ ಮನೆಗೆ ಬರುವುದರೊಳಗಾಗಿ ಮಗರಾಯನ ಶುಭಾಗಮನವಾಗಿತ್ತು. ಅಳಿಯನನ್ನು ಕಂಡ ಕೂಡಲೇ ಗೌರತ್ತೆ ಸಂಭ್ರಮದಿಂದ,

"ವೆಂಕಾ, ನಿನಗೆ ಗಂಡು ಹುಟ್ಟಿತು" ಎಂದರು.

"ಆಂ, ಏನಂದಿ?" ವೆಂಕಣ್ಣ ಕೇಳಿದ.

"ಗಂಡುಮಗ! ಚಂಪಾನ ಹೆರಿಗೆ ಬಹಳ ಹಗುರ ನೋಡು. ಒಂದೇ ಒಂದು ಹೊಳಿಗೆ ಬೇನೆ ತಿನ್ನುವದರೊಳಗಾಗಿ ಹಡೆದುಬಿಟ್ಟಳು. ಏನೂ ತ್ರಾಸಾಗಲಿಲ್ಲ." ಅಳಿಯನ ಮುಂದೆ ಇಷ್ಟೆಲ್ಲ ವಿವರಗಳನ್ನು ಹೇಳುವುದು ಅನಾವಶ್ಯಕವೆಂದು ಸಂಭ್ರಮದಲ್ಲಿದ್ದ ಗೌರತ್ತೆಯವರಿಗೆ ಹೊಳೆಯಲೇ ಇಲ್ಲ.

ಅಷ್ಟರಲ್ಲಿ ಒಳಗೆ ಕೋಣೆಯಲ್ಲಿ ಕೂಸು ಅಳುವ ಧ್ವನಿ ಕೇಳಿಸಿತು. ವೆಂಕಣ್ಣ ಆನಂದದಿಂದ ಉಬ್ಬಿಹೋದ. ಕೂಡಲೇ ರಾಮಣ್ಣನವರಿಗೂ, ನಾರಾಯಣರಾಯರಿಗೂ ಪತ್ರ ಬರೆದು ಹಾಕಿದ. ಆ ಆನಂದದ ಕ್ಷಣದಲ್ಲಿಯೂ ಆತನ ಸ್ಮೃತಿಪಟಲದಲ್ಲಿ ಪದ್ಮಳ ಚಿತ್ರ ಒಂದು ಕ್ಷಣ ಮೂಡಿಹೋಯಿತು.

ಮನೆಯಲ್ಲಿ ಎಲ್ಲರಿಗೂ ಆನಂದವೇ ಆನಂದ. ಹನ್ನೆರಡನೆಯ ದಿವಸ ಮಗುವಿನ ನಾಮಕರಣ. ಗೌರತ್ತೆಯ ಸೂಚನೆಯಂತೆ ಕೂಸಿಗೆ ಬಂಗಾರದ ಬಿಂದಲಿ ಉಡುದಾರ ಚೈನುಗಳನ್ನು ಮಾಡಿಸಿ ಆಯಿತು. ನಾಮಕರಣಕ್ಕೆ ಚಂಪಕ್ಕನ ಬಳಗವೆಲ್ಲವೂ ಬಂದಿತ್ತು. ಮಗಳ ಚೊಚ್ಚಲಬಾಣಂತಿತನ ತಮ್ಮ ಊರಲ್ಲಿಯೇ ಆಗಬೇಕೆಂದು ರಾಮಣ್ಣ ಆಗ್ರಹ ಮಾಡಿದ್ದರು. ಆದರೆ ಪಾರಿಶ್ವಾಡ ಹಳ್ಳಿ. ಮೊದಲ ಹೆರಿಗೆ ಅಲ್ಲಿ ಬೇಡ, ಬೆಳಗಾವಿಯಲ್ಲಿಯೇ ಆಗಲೆಂದು ಗೌರತ್ತೆ ಹಟ ಹಿಡಿದಿದ್ದರು. ಬಹುಶಃ ಅವರಿಗೆ ಪದ್ಮಕ್ಕನ ಹೆರಿಗೆಯ ಕಾಲಕ್ಕೆ ತ್ರಾಸಾದ ನೆನಪೇ ಈ ರೀತಿ ಹಟ ಹಿಡಿಯಲು ಕಾರಣವಾಗಿರಬಹುದು.

ನಾಮಕರಣದ ದಿವಸ ಮನೆಯೆಲ್ಲ ಸಂಭ್ರಮದಿಂದ ತುಂಬಿಹೋಯಿತು. ಆದರೆ ಸಾಂಗಲಿಯಿಂದ ಯಾರೂ ಬಂದಿರಲಿಲ್ಲವಾದ್ದರಿಂದ ಜಲಜಾಕ್ಷಿಗೆ ಹೆಚ್ಚಿನ ಕೆಡುಕೆನಿಸಿತು. ಉಳಿದವರು ಬಂದಿದ್ದರೂ ಮೋಹನನನ್ನಾದರೂ ಕಳಿಸಬಹುದಿತ್ತು ಎಂದು ಅವಳ ಮನಸ್ಸು ತವಕಿಸಿತ್ತು. ವೆಂಕಣ್ಣ ಸಾಂಗಲಿಯಿಂದ ಯಾರೂ ಬರದ್ದರಿಂದ ತುಸು ಖಿನ್ನನಾಗಿದ್ದ. ಆ ದಿನ ಮಧ್ಯಾಹ್ನ ಎರಡು ಗಂಟೆಯವರೆಗೂ ದಾರಿ ನೋಡಿ ಎಲ್ಲರೂ ಊಟಕ್ಕೆ ಕುಳಿತಿದ್ದರು. ಅವರ ಋಣಾನುಬಂಧವೇ ಕಡಿದಂತಾಗಿದೆ, ಇನ್ನು ಅವರೇಕೆ ಬರಬೇಕು? ಎಂಬ ವಿಚಾರವೂ ವೆಂಕಣ್ಣನ ತಲೆಯಲ್ಲಿ ಸುಳಿದುಹೋಯಿತು. ಮತ್ತೆ ಪದ್ಮಾಳ ನೆನಪು ಅವನನ್ನು ಆವರಿಸಿತು. ಅಂದು ಅವನಿಗೆ ಯಾಕೋ ಊಟವೇ ರುಚಿ ಎನಿಸಲಿಲ್ಲ. ಅವನ ಹೃದಯದ ಸ್ಥಿತಿ ಅಂದು ವಿಚಿತ್ರವಾಗಿದ್ದಿತು.

ಸಾಯಂಕಾಲ ಏಳು ಗಂಟೆಯ ಸುಮಾರಕ್ಕೆ ಮನೆಯಲ್ಲಿ ಕೂಸನ್ನು ತೊಟ್ಟಿಲಲ್ಲಿ ಹಾಕುವ ಸಮಾರಂಭ ಒಳ್ಳೇ ಉತ್ಸಾಹದಿಂದ ನಡೆದಿದ್ದಿತು. ಮನೆಯಲ್ಲಿ ಸಣ್ಣ ಮಕ್ಕಳ ಜಾತ್ರೆಯೇ ನೆರೆದಂತಾಗಿತ್ತು. ಆರತಿ, ಅಕ್ಷತೆ, ಹಾಡು, 'ಹೆಸರು ಹೇಳುವುದು' ಇತ್ಯಾದಿಗಳ ಸಡಗರ ನಡೆದಿತ್ತು.

ವೆಂಕಣ್ಣ ತನ್ನ ಮನೆಯಲ್ಲಿಯೇ ಪರಕೀಯನಂತಾಗಿದ್ದ. ಆ ತುಂಬಿದ ಮನೆಯಲ್ಲಿ ಅವನಿಗೆ ಜಾಗ ಇಲ್ಲವೆಂಬಂತಾಗಿತ್ತು. ಆತ ವಾಚನಾಲಯದ ಕಡೆಗೆ ಹೋಗಬೇಕೆಂದು ಕೋಟು ಹಾಕಿಕೊಂಡು ಹೊರಟ. ಅಷ್ಟರಲ್ಲಿ ಬಾಗಿಲ ಮುಂದೆ ಟಾಂಗಾ ಬಂದು ನಿಂತಿತು. "ಯಾರು?" ಎಂದುಕೊಂಡು ವೆಂಕಣ್ಣ ಹೊರಗೆ ನೋಡಿದ. ಮೋಹನ ಟಾಂಗಾದಿಂದ ಇಳಿಯುತ್ತಿದ್ದ. ಕೂಡಲೇ ಹೋಗಿ ಅವನನ್ನು ಒಳಗೆ ಕರೆದುಕೊಂಡು ಬಂದ.

"ಏನೋ, ಈಗ ಯಾವ ಟ್ರೇನಿನಿಂದ ಬಂದೆ? ಈಗ ಯಾವ ಗಾಡಿ ಇಲ್ಲವಲ್ಲ!" ಎಂದನು.

"ಟ್ರೇನು ಇರಲಿಲ್ಲ, ಮೋಟಾರಿನಿಂದ ಬಂದೇರೀ. ಇದಕ್ಕೂ ಎರಡು ತಾಸು ಮೊದಲೇ ಬರಬಹುದಿತ್ತು, ಆದರೆ ನಡುವೆ ಪಂಕ್ಚರ ಆಗಿ ತಡವಾಯಿತು." ಕೋಟು ತೆಗೆಯುತ್ತ ಮೋಹನ ಹೇಳಿದ.

"ಆಯ್ತು. ಅಂತೂ ಬಂದೆಯಲ್ಲ!" ವೆಂಕಣ್ಣ ಉದ್ಗರಿಸಿದ.

"ಯಾಕ್ರೀ ಮಾಮಾ, ಹಾಗೇಕೆ ಅನ್ನುವಿರಿ, ಬಂದೇ ಬರ..." ಮೋಹನ ಉತ್ತರಿಸಿದ.

ಅಷ್ಟರಲ್ಲಿ, ಮೋಹನ ಬಂದ ಸಮಾಚಾರವನ್ನು ಯಾರ ಮುಖದಿಂದಲೋ ಕೇಳಿ ತಿಳಿದು, ಗೌರತ್ತೆ ಹೊರಗೆ ಬಂದಿದ್ದರು.

"ಏನಪ್ಪ ಮೋಹನಾ, ಈಗ ಬಂದೆಯಾ? ಸಂತೋಷ ಆಯಿತಪ್ಪ." ಎಂದರು ಕೃತ್ರಿಮವಾಗಿ.

"ಹೌದರೀ ಅಜ್ಜೀ, ಮುಂಜಾನೆಯೇ ಹೊರಟಿದ್ದೆ. ಗಾಡಿ ತಪ್ಪಿತು. ಬಸ್ಸು ಹಿಡಿದು ಬಂದೆ. ತಡವಾಯಿತು." ಮೋಹನ ವಿವರಿಸಿದ.

"ತಡವಾದರೇನಾಯ್ತು, ಇರಲಿ. ಎಲ್ಲರೂ ಆರಾಮ ಇರುವರೇನು?"

"ಹೂಂ. ಇದ್ದಾರೆ. ಅಜ್ಜಿಯ ಮೈಯಲ್ಲಿಯೇ ನೆಟ್ಟಗಿಲ್ಲ. ಈಗ ಎಂಟು ದಿನಗಳಿಂದ ಜ್ವರ ಬರುತ್ತಿದೆ. ಎದೆಯೂ ನೋವೆಂದು ಮಲಗಿಯೇ ಬಿಟ್ಟಿದ್ದಳು."

"ಈಗ ಹೇಗಿದೆ?"

"ಔಷಧ ತೆಗೆದುಕೊಳ್ಳುವರೋ ಇಲ್ಲವೋ?" ವೆಂಕಣ್ಣ ವಿಚಾರಿಸಿದ.

"ಔಷಧ ಒಲ್ಲೆ ಎಂದೇ ಕುಳಿತಿದ್ದಳು. ಅಣ್ಣನೇ ಬಹಳ ಒತ್ತಾಯ ಮಾಡಿದನಂತರ ತೆಗೆದುಕೊಳ್ಳತೊಡಗಿದಳು. ನಿನ್ನೆಯಿಂದ ಜ್ವರ ಬರುವದು ನಿಂತಿದೆ." ಮೋಹನ ಹೇಳಿದ.

ಒಂದು ನಿಮಿಷ ಮೂವರೂ ಮೌನವಾಗಿದ್ದರು.

"ನೆಟ್ಟಗಾಗುತ್ತದೆಯೇಳು... ಏಳಪ್ಪ ಏಳು, ಕಾಲು ತೊಳೆದುಕೋ..." ಎನ್ನುತ್ತ, ಗೌರತ್ತೆ ಒಳಗೆ ನಡೆದರು.

ಮೋಹನ ಸುತ್ತಲೂ ಕಣ್ಣು ಹೊರಳಿಸಿದ; ನಡುಮನೆಯಲ್ಲಿ ಹೆಂಗಸರ ರಾಜ್ಯ ನಡೆದಿದ್ದಿತು. ಎರಡು ನಿಮಿಷ ಹಾಗೆಯೇ ಆರಾಮ ಖುರ್ಚಿಯಲ್ಲಿ ಒರಗಿಕೊಂಡಿದ್ದ. ಒಳಗಿನಿಂದ ಯಾರೋ ಹೊರಗೆ ಬಂದಂತಾಯಿತು. ಮೋಹನನ ಕಣ್ಣುಗಳು ಒಮ್ಮೆಲೇ ಅತ್ತ ಕಡೆಗೆ ಹೊರಳಿದುವು... ಯಾರೋ ನೆರೆಮನೆ ಹುಡುಗಿ ದಾಟಿಹೋಗಿದ್ದಳು.

ಹೆಂಗಸರೆಲ್ಲರೂ ತಮ್ಮ ತಮ್ಮ ಮನೆಗೆ ಹೋದ ನಂತರ ಮೋಹನನಿಗೆ ಚಂಪಕ್ಕನ ಕೋಣೆಯಲ್ಲಿ ಪ್ರವೇಶ ದೊರೆಯಿತು. ಚಂಪಕ್ಕ ಮಗುವನ್ನು ಮೋಹನನ ಕೈಯಲ್ಲಿ ಕೊಡುತ್ತ,

"ನೋಡಪ್ಪ, ಅಳಿಯ ಹೇಗಿದ್ದಾನೆ" ಎಂದಳು.

ಮೋಹನ ಕೂಸನ್ನು ತೊಡೆಯ ಮೇಲೆ ಮಲಗಿಸಿಕೊಂಡು,

"ಏನು ಹೆಸರಿಟ್ಟಿರಿ?" ಎಂದು ಕೇಳಿದ.

"ಸುರೇಶ; ಹೇಗಿದೆ? ಮೆಚ್ಚಿಕೆಯಾಯಿತೇ?"

"ಹೂಂ. ಬಹಳ ಒಳ್ಳೆಯ ಹೆಸರು. ಜಲಜಾನ ಸಿಲೆಕ್ಶನ್ ಏನು?" ಎಂದು ಕೇಳಿದ.

"ಹೂಂ. ಅತ್ತೆಯವರು ಕೃಷ್ಣ ಎಂದು ದೇವರ ಹೆಸರು ಇಡಬೇಕೆಂದರು. ತೊಟ್ಟಿಲ ಹೆಸರು ಕೃಷ್ಣನೇ ಆದರೂ ನಿಮ್ಮಂಥವರಿಗೆ ಅದು ಹಳೆಯ ಹೆಸರು ಅಂತ, ಸುರೇಶ ಎಂದು ಎರಡನೆಯ ಹೆಸರೂ ಇಟ್ಟೆವಿ" ಎಂದು ಚಂಪಕ್ಕ ವಿವರಿಸಿದಳು.

ಅಷ್ಟರಲ್ಲಿ ಕೂಸು ಅಳತೊಡಗಿತು. ಮೋಹನ ಅದನ್ನು ಚಂಪಕ್ಕನಕೈಯಲ್ಲಿಕೊಟ್ಟು ಎದ್ದುನಿಂತ.

"ಕೂಡ್ರಪ್ಪ ಮೋಹನ. ಇನ್ನು ಯಾರೂ ಹೆಂಗಸರು ಬರೋದಿಲ್ಲ..." ಚಂಪಕ್ಕ ಮುಗುಳುನಗುತ್ತ ನುಡಿದಳು.

"ಹೂಂ. ಈಗ ಬರ್ತೇನೆ." ಎಂದು ಹೇಳಿ ಮೋಹನ ಹೊರಗೆ ಬಂದು ಟ್ರಂಕಿನೊಳಗಿಂದ ಉಡುಗೊರೆಯನ್ನು ತಂದು ಚಂಪಕ್ಕನ ಕೈಯಲ್ಲಿತ್ತ.

"ಅದೇನು?" ಚಂಪಕ್ಕ ಮತ್ತು ಗೌರತ್ತೆ ಇಬ್ಬರೂ ಕೂಡಿಯೇ ಕೇಳಿದರು.

"ಏನೂ ಇಲ್ಲ." ಎಂದ.

ಚಂಪಕ್ಕನಿಗೆ ಒಂದು ಜರಿಯ ಸೀರೆ, ಖಣ, ಮಗುವಿಗೆ ರೇಶಿಮೆಯಅಂಗಿ-ಟೊಪ್ಪಿಗೆ, ವೆಂಕಣ್ಣನಿಗೆ ಜರಿಯ ಅಂಚಿನ ಧೋತರ- ಜೋಡುಉಪ್ಪರಣಿ-ಇವನ್ನು ಕಂಡು,

"ಇದೇನು, ಇಷ್ಟೆಲ್ಲ ಯಾಕಪ್ಪಾ?" ಗೌರತ್ತೆ ಕೇಳಿದರು.

ಚಂಪಕ್ಕ ಹಿಗ್ಗಿ ಹಿರೇಕಾಯಿಯಾದಳು.

"ಅದೇನೋ, ನನಗೆ ತಿಳಿಯದು." ಎನ್ನುತ್ತ ಆಚೆ-ಈಚೆ ನೋಡಿದ.

ರಾತ್ರಿ ಊಟವಾದ ಮೇಲೆ ಮೋಹನ ಪಡಸಾಲೆಯಲ್ಲಿ ಖುರ್ಚಿಯೊಂದರಲ್ಲಿ ಕುಳಿತಿದ್ದ. ವೆಂಕಣ್ಣ ಗೌರತ್ತೆಯೊಡನೆ ಏನೋ ಮಾತನಾಡುತ್ತ ಒಳಗೇ ಇದ್ದನು. ಜಲಜಾಕ್ಷಿ ಬಂದು ಮೋಹನನ ಎದುರು ನಿಂತುಕೊಂಡಳು. ಆದರೆ ಏನೂ ಮಾತನ್ನಾಡಲಿಲ್ಲ. ಒಂದೆರಡುನಿಮಿಷ ತಡೆದು ಮೋಹನ,

"ಸಿಟ್ಟು ಬಹಳೇ ಬಂದಂತಿದೆಯಲ್ಲ?..." ಎಂದು ಮೆಲ್ಲನೆ ನುಡಿದ.

ಜಲಜಾಕ್ಷಿ ಏನೂ ಉತ್ತರವನ್ನೇ ಕೊಡಲಿಲ್ಲ.

"ಯಾಕೆ? ಒಂದೂ ಮಾತನ್ನು ಆಡದಷ್ಟು ಸಿಟ್ಟು ಬಂದಿದೆಯೇನು?" ಮೋಹನ ಮತ್ತೆ ಕೇಳಿದ.

"ಸಿಟ್ಟೇ? ಯಾರ ಮೇಲೆ ಸಿಟ್ಟಾಗಬೇಕು? ಸಿಟ್ಟಾದರೂ ನನ್ನನ್ನು ಕೇಳುವವರು ಯಾರು?" ಜಲಜಾಕ್ಷಿ ತೀರ ವ್ಯಾವಹಾರಿಕವೆಂಬಂತೆ ನುಡಿದಳು...

"ಹಾಗಾದರೆ...?"

"ತಾವು ಬಂದು ನನ್ನ ಮಾನಕಾಯ್ದಿರಿ. ಬಹಳ ಥ್ಯಾಂಕ್ಸ. ಉಪಕಾರ ಹೇಗೆ ತೀರಿಸಲಿ ಎಂದು ವಿಚಾರ ಮಾಡುತ್ತಿದ್ದೆ." ಮಾತು ತೀರ ಕೊಂಕಾಗಿದ್ದಿತು.

## ಸಖಿ!



ಸೊಕ್ಕಿದ ಚಂದಿರನ ಬಲು ಚೆಲುವ
ನಿನ್ನ ಕಣ್ಣ ಕಾಂತಿಯಿಂದ ಸೋಲಿಸಿದ
ಓ! ಸಖಿ, ನಿನ್ನ ಕಡು ಚೆಲುವ
ಬಣ್ಣಿಸಲೆನಗಳವಲ್ಲ!

—ಪಂಚಾಕ್ಷರಿ ಹಿರೇಮಠ

ಅವಳ ಕೋಪದ ಮಾತಿಗೆ ಏನು ಹೇಳಬೇಕೆಂದು ಮೋಹನನಿಗೆ ತಿಳಿಯಲಿಲ್ಲ.

"ನಿನ್ನೆ ಮೊನ್ನೆ ಬಂದಿದ್ದರೆ...? ಹೌದು. ನೀನು ಬರಬೇಕಾದರೂ ಯಾರಿಗಾಗಿ?..."

ಇನ್ನು ಹಾಗೆಯೇ ಬಿಟ್ಟರೆ ಅವಳ ಕೋಪವು ವಿಕೋಪಕ್ಕೆ ಹೋಗುವದೆಂದು,

"ಹಾಗಲ್ಲ ಜಲಜಾ, ಸುಮ್ಮನೆ ಸಿಟ್ಟಾಗಬೇಡ ನಾನು ನಿನ್ನೆಯೇ ಬರುವವನಿದ್ದೆ. ಆದರೆ ಅಜ್ಜಿಯ ಮೈಯಲ್ಲಿ ನೆಟ್ಟಗಿರಲಿಲ್ಲ. ಅದನ್ನಾದರೂ ವಿಚಾರಿಸ ಬೇಡವೇ? ಸುಮ್ಮನೆ ಹೀಗೆ ಸಿಟ್ಟಾದರೆ ಹೇಗೆ?" ಮೋಹನ ಕಾರಣವನ್ನು ಹೇಳಿದ.

"ಇಂದು ಮುಂಜಾನೆ ಬಂದಿದ್ದರೆ ಏನಾಗುತ್ತಿತ್ತು" ಜಲಜಾಕ್ಷಿಯಧ್ವನಿ ಆಗಲೇ ತುಸು ಶಾಂತವಾಗಿತ್ತು.

ತಾನು ಮುಂಜಾನೆ ಹೊರಟಾಗ ಟ್ರೇನು ತಪ್ಪಿದುದು, ನಂತರ ನಡುವೆ ಬಸ್ಸು ಕೆಟ್ಟು ಹೋದುದು ಇತ್ಯಾದಿ ಎಲ್ಲವನ್ನೂ ಮೋಹನ ಹೇಳಿದ. ಅದನ್ನು ಕೇಳಿ ಜಲಜಾಕ್ಷಿ,

"ಆಯ್ತು. ನಿಮ್ಮದು ಯಾವಾಗಲೂ ಹೀಗೇನೇ."

"ಅಲ್ಲ ಜಲಜಾ. ಇದರಲ್ಲಿ ನನ್ನ ತಪ್ಪೇನು? ಹೇಳು."

ಮೋಹನನ ದೈನ್ಯವನ್ನು ಕಂಡು ಅವಳ ಕೋಪವೆಲ್ಲ ಮಾಯವಾಯಿತು.

"ಹುಂ. ಇನ್ನು ಹೊರಡುವದೆಂದು? ನಾಳೆಯೊ? ಇಂದೇ ರಾತ್ರಿ ಗಾಡಿಗೊ?." ಜಲಜಾಕ್ಷಿ ಕೊಂಕು ನಗೆಯೊಂದಿಗೆ ಕೇಳಿದಳು.

"ನೀನು ಎಂದು ಹೋಗುಅನ್ನುತ್ತೀ, ಆ ದಿನ ಹೋಗುತ್ತೇನೆ, ಮಹಾರಾಯಳೆ. ಆಯಿತಿಲ್ಲೊ?" ಮೋಹನ ನಗುತ್ತಾ ನುಡಿದ.

"ಏನಾಯ್ತು?" ಹೊರಗೆ ಬರುತ್ತಿದ್ದ ವೆಂಕಣ್ಣ ಕೇಳಿದ.

"ಏನೂ ಇಲ್ಲ. ಜಲಜಾ ನನ್ನ ಮೇಲೆ ಸಿಟ್ಟಾಗಿದ್ದಾಳೆ" ಮೋಹನ ನುಡಿದ.

"ಯಾಕೆ? ಸಿಟ್ಟು ಯಾಕೆ?

"ನಾನು ತಡಮಾಡಿ ಬಂದೆನೆಂದು.

"ಅದಕ್ಕೇನಂತೆ? ನೀನೇನು ಬೇಕೆಂತಲೇ ತಡ ಮಾಡಿರುವಿಯಾ?" ವೆಂಕಣ್ಣ ಅಳಿಯನ ಪಕ್ಷವಹಿಸಿ ಮಾತನಾಡಿದ.

"ನೋಡು..." ಎಂದು ಮೋಹನ ಜಲಜಾಕ್ಷಿಗೆ ಏನೋ ಹೇಳಬೇಕೆಂದು ಅವಳೆಡೆಗೆ ತಿರುಗಿದ. ಆದರೆ ಅವಳು ಆಗಲೇ ಅಲ್ಲಿಂದ ಹೊರಟುಹೋಗಿದ್ದಳು.

ಮರುದಿನ ಮಧ್ಯಾಹ್ನ ಎಲ್ಲರ ಊಟವೂ ಮುಗಿದಿತ್ತು. ಗೌರತ್ತೆ ನಡುಮನೆಯಲ್ಲಿ ಮಲಗಿಕೊಂಡಿದ್ದರು. ಮೋಹನ ಊಟಮಾಡಿ ಅಡ್ಡಾಗಿ ಎದ್ದು ಗಡಿಯಾರದ ಕಡೆಗೆ ನೋಡಿದ. ಎರಡೂವರೆ ಆಗಿ ಹೋಗಿತ್ತು. ಕೂಡಲೇ ಎದ್ದವನೇ ಒಳಗೆ ಹಿತ್ತಲ ಮನೆಯವರೆಗೂ ಹೋಗಿ ನೋಡಿಬಂದ. ಯಾರೂ ಕಾಣಲಿಲ್ಲ. ತಿರುಗಿ ಬರುವಾಗ ಚಂಪಕ್ಕನ ಕೋಣೆಯಲ್ಲಿ ಮಾತನಾಡುವ ಧ್ವನಿ ಕೇಳಿ; ಆತ ಹೊಸ್ತಿಲಿನವರೆಗೆ ನಡೆದ. ಕೋಣೆಯಲ್ಲಿ ಬಿದ್ದ ಆತನ ನೆರಳು ನೋಡಿ ಹೊರಗೆ ಹಣಿಕಿಕ್ಕಿ,

"ಬಾರಪ್ಪ ಮೋಹನ, ಅಲ್ಲಿಯೇ ಯಾಕೆ ನಿಂತುಕೊಂಡೆ?"ಎಂದು ಚಂಪಕ್ಕ ಕರೆದಳು.

"ಯಾಕೂ ಇಲ್ಲರೀ. ಜಲಜಾ ಕಾಣಲಿಲ್ಲ. ವೆಂಕಣ್ಣ ಮಾಮಾ ಅವರಜೊತೆ ಶಾಲೆಗೆ ಹೋದಳೇನು?" ಎಂದ.

"ಇಲ್ಲ. ಇಂದು ಶಾಲೆಗೆ ಹೋಗಿಲ್ಲ. ಇಲ್ಲೇ ಇದ್ದಾಳೆ. ನೋಡು ಜಲಜಾ ಅವನಿಗೇನುಬೇಕು? ಚಹಕ್ಕೂ ಇಸರಿಡು. ಚಹದ ಹೊತ್ತೂ ಆಯಿತಲ್ಲ" ಎಂದಳು.

"ಇಲ್ಲ. ನನಗೇನೂ ಈಗ ಚಹಬೇಡ. ಈಗ ಮ್ಯಾಟನಿ ಶೋಕ್ಕೆ ಹೋಗಬೇಕು ಅಂತಿದ್ದೆ. ಅವಳೂ ಬರ್ತಾಳೇನು ಅಂತ..." ತುಸು ತಡವರಿಸುತ್ತಾ ಮೋಹನ ನುಡಿದ.

"ಈಗೆಲ್ಲಿಯ ಸಿನೇಮಾ ಇರ್ತದೋ?"

"ಹೌದು. ಇಂಗ್ಲೀಷ ಸಿನೇಮಾ ಇರುತ್ತದೆ."

"ಹೋಗುತ್ತೀ ಏನು ಜಲಜಾ?"

ತಾಯಿಯ ಪ್ರಶ್ನೆಗೆ ಜಲಜಾಕ್ಷಿ ಉತ್ತರ ಹೇಳಲಿಲ್ಲ. ಹೋಗುವ ಇಚ್ಛೆ ಅವಳಿಗೂ ಇದ್ದಿತಾದರೂ,

"ನಾನು ಒಲ್ಲೆ"ಎಂದಳು.

ಆಗ ಚಂಪಕ್ಕನೇ "ಹೋಗಿ ಬಾ. ಪಾಪ. ಕರೀತಿದ್ದಾನೆ. ಅತ್ತೆಯವರು ಎದ್ದಮೇಲೆ ನಾನು ಹೇಳುತ್ತೇನೆ." ಎಂದಳು.

ಮೋಹನ ಒಳ್ಳೇ ಆತುರದಿಂದ ಜಲಜಾಕ್ಷಿಯ ಮುಖವನ್ನು ನೋಡುತ್ತಿದ್ದ. ಜಲಜಾಕ್ಷಿ ಮುಖ ತೊಳೆಯಲು ಬಚ್ಚಲುಮನೆಗೆ ನಡೆದಳು. ಮತ್ತೆ

ಐದೇ ನಿಮಿಷಗಳಲ್ಲಿ ಇಬ್ಬರೂ ಸಿನೇಮಾಕ್ಕೆ ಹೊರಟಿದ್ದರು.

ಅಂದು "ಶಾಲೀಮಾರ" ಟಾಕೀಜಿನಲ್ಲಿ ಆವರು ನೋಡಿದ್ದು ಟಾರ್ಝನನ ಒಂದು "ಥಾಡಸೀ ಚಿತ್ರ"ವನ್ನು.

ಸಿನೇಮ ಮುಗಿದು ಇಬ್ಬರೂ ಹೊರಗೆ ಬಂದ ನಂತರ ಮೋಹನ ಕೇಳಿದ.

"ಹುಂ. ಇನ್ನು ಎಲ್ಲಿ ಹೋಗೋಣ?"

"ಎಲ್ಲಿ ಅಂದರೇನು? ಮ.."

"ಮನೆಗೆ? ಯಾಕೆ ಗಡಿಬಿಡಿ? ಎಲ್ಲಾದರೂ ಸ್ವಲ್ಪ ಅಡ್ಡಾಡಿ ಬರೋಣ."

"ಆದರೆ ಮನೆಯಲ್ಲಿ ಹೇಳದೆ ಹೋಗುವದೇ?"

"ಅದಕ್ಕೇನಂತೆ. ನಿನ್ನನ್ನು ಹುಡುಕಲಿಕ್ಕೆ ಯಾರೂ ಹೋಗಲಾರರಲ್ಲ"!

ಇಬ್ಬರೂ ನಕ್ಕರು.

ದಾರಿಯಲ್ಲಿ ಕೆಫೆ-ಇಂಲೈಟದಲ್ಲಿ ದೋಸೆ ತಿಂದು ಕಾಫಿಕುಡಿದು, ಇಬ್ಬರೂ ಲಕ್ಷ್ಮೀದಿಬ್ಬದ ಕಡೆಗೆ ನಡೆದರು. ತುಸುದೂರ ಹೋಗುವಷ್ಟರಲ್ಲಿ ಜಲಜಾಕ್ಷಿಯ ಕ್ಲಾಸಿನ ಗೆಳತಿಯೊಬ್ಬಳು ಭೆಟ್ಟಿಯಾದಳು.

"ಇಂದು ಐದು ಘಂಟೆಗೆ ಬರ್ರೇನೆಂದು ಹೇಳಿದವಳು, ಬಂದೆಯಲ್ಲ?" ಗೆಳತಿ ಮುಗುಳುನಗೆಯಿಂದ ಕೊಂಕು ನುಡಿದಳು.

ತಾನು ಸುನಂದಾಗೆ ಹಾಗೆ ಹೇಳಿದ್ದನ್ನು ಜಲಜಾಕ್ಷಿ ಮರತೇಬಿಟ್ಟಿದ್ದಳು.

"ಹೌದು, ಬರ್ರೇನೆಂದಿದ್ದೆ. Sorry ವೇಳೆಯೇ ದೊರೆಯಲಿಲ್ಲ." ಜಲಜಾಕ್ಷಿ ಕ್ಷಮಾಯಾಚಿಸಿದಳು

"ಹೂಂ. ಹೇಗೆ ದೊರೆತೀತು? ದೊಡ್ಡವರು!" ಎಂದು ನುಡಿದು, ಕಣ್ಣುಸನ್ನೆಯಿಂದ "ಈತ ಯಾರು?" ಎಂದು ಕೇಳಿದಳು.

"ಈತ ಮೋಹನ, ನಮ್ಮ ಮಾವನ ಮಗ. ಸಾಂಗಲಿಯಿಂದ ನಿನ್ನೆ ಬಂದ." ಎಂದಳು ಜಲಜಾಕ್ಷಿ.

"ಅಂದಮೇಲೇನು...!

"ಅಲ್ಲss ಸುನಂದಾ, ಅವ ನಾಳೀ ಹೋಗುವವನು ಇಂದು ಸಿನೇಮಾಕೆ ಹೋಗಿದ್ದೆವು. Excuse ಹಾಂ!"

"ಹೌದವ್ವ. ಅವನನ್ನು ಹೇಗೆ ಬಿಟ್ಟುಬರಬೇಕು?" ಎಂದು ಹುಬ್ಬು ಹಾರಿಸಿ, ಕತ್ತು ಕೊಂಕಿಸಿ ನುಡಿದು ಆ ವೈಯಾರಿ ಹೊರಟು ಹೋದಳು.

ನಾಲ್ಕು ಹೆಜ್ಜೆ ಮುಂದೆಹೋಗಿ ನಿಂತಿದ್ದ ಮೋಹನನನ್ನು ಜಲಜಾಕ್ಷಿ ಬಂದುಕೂಡಿಕೊಂಡು,

"ಇವಳು ನಮ್ಮ ಕ್ಲಾಸಿನಲ್ಲಿಯ ತುಂಟರ ಲೀಡರ" ಎಂದು ಹೇಳಿದಳು.

"ಅವಳು ನಿನ್ನ ಗೆಳತಿ ಅಲ್ಲವೇನು ಮತ್ತೆ?"

"ಹೂಂ! ನಾಡಿನಲ್ಲಿಲ್ಲದ ತುಂಟಿ!"

ಇಬ್ಬರೂ ಮನಸಾರೆ ನಗುತ್ತ ಮುಂದೆ ನಡೆದರು.

ಬೆಳಗಾವಿಯ ರಮ್ಯಸ್ಥಳಗಳಲ್ಲಿ ಲಕ್ಷ್ಮಿದಿಬ್ಬವೂ ಒಂದೆಂದು ಹೇಳಬಹುದು. ಊರ ಪಶ್ಚಿಮದಿಕ್ಕಿಗೆ ಒಂದು ಒಂದೂವರೆಮೈಲು ಅಂತರದಲ್ಲಿ ಇರುವ ಸಣ್ಣ ದಿಬ್ಬವೇ ಲಕ್ಷ್ಮೀ ದಿಬ್ಬವೆಂದು ಹೆಸರಾಗಿದೆ. ದಿಬ್ಬದ ಓರೆಯಲ್ಲಿಯೇ ಲಕ್ಷ್ಮಿಯ ಗುಡಿಯಿದೆ. ಅದರ ಬದಿಗೆ ಒಂದು ಗಣಪತಿಯಗುಡಿಯೂ ಇದೆ. ಗುಡಿಗಳ ಸುತ್ತಲೂ ಹತ್ತೆಂಟು ಗಿಡಗಳು, ಅಲ್ಲಿಯೇ ಒಂದು

## ಕಳ್ಳವ್ಯಾಪಾರಿ



ಮಂತ್ರಿಗಿ ಅಷ್ಟು, ಅಧಿಕಾರಿಗಿಷ್ಟು
ನಡುವಿನವರಿಗೊಂದ ಚೂರ್ ಚಾರ
ಕೊಟ್ಟಾಂಗ ಮಾಡಿ, ಕಳ್ಳವ್ಯಾಪಾರದಿ
ಕಿಸೇ ತುಂಬಿದನು ಭರಪೂರ.

— ಎಂ. ಅಕಬರ ಅಲಿ

ಬಾವಿ, ಸುತ್ತಲೂ ಕೂಡ್ರಲು ಪ್ರಶಸ್ತವಾದ ಬೈಲು ಪ್ರದೇಶ. ದಿನಾಲು ಸಾಯಂಕಾಲ ವಾಯುವಿಹಾರ. ಕೈಂದು ಬಂದಜನ ಈ ಗುಡಿಗೆ ಬಂದು ಕೆಲವು ನಿಮಿಷ ಹಾಯಾಗಿಕುಳಿತು ಮರಳುವದುಂಟು. ಕೆಲವು ಉತ್ಸಾಹಿಗಳು ದಿಬ್ಬವನ್ನು ಹತ್ತಿ ಅಲ್ಲಿಯ ಬಂಡೆಗಲ್ಲುಗಳ ಮೇಲೆ ಕುಳಿತು ನಿಸರ್ಗಶೋಭೆಯ ಆನಂದವನ್ನು ಪಡೆಯುವುದೂ ಉಂಟು. ಪಶ್ಚಿಮ ಘಟ್ಟಗಳಿಂದ ಹೊರಟ ವಾಯುರಾಯ ನೇರವಾಗಿ ದಿಬ್ಬಕ್ಕೆ ಬಂದಿರುವನೇನೋ ಎಂಬಂತೆ ಗಾಳಿಯು ಭರ್ರನೆ ಬೀಸುತ್ತದೆ. ಮೊದಲ ಸಲವೇ ಅಲ್ಲಿಗೆ ಬಂದವರಿಗಂತೂ ಅದು ಇನ್ನೂ ರಮ್ಯವಾಗಿ ತೋರುವುದು.

ಮೋಹನ ಜಲಜಾಕ್ಷಿಯರು ದಿಬ್ಬವನ್ನೇರಿ ಹೋಗಿ ಒಂದು ವಿಶಾಲವಾದ ಹಾಸುಗಲ್ಲಿನಮೇಲೆ ಕುಳಿತರು. ಜಲಜಾಕ್ಷಿ ಸಾಂಗಲಿಯಲ್ಲಿಯ ಎಷ್ಟೋ ಸುದ್ದಿಗಳನ್ನು ಕೇಳುತ್ತಿದ್ದಳು. ಮೋಹನ ಹೇಳುತ್ತಿದ್ದ. ಅವರ ಮಾತಿನಲ್ಲಿ ನಾನಣ್ಣ, ಶಾರದಜ್ಜಿ, ಚಂಪಕ್ಕ, ಮೊದಲಾದವರೆಲ್ಲ ಬಂದು ಹೋದರು.

ಅವರಿಗೆ ವೇಳೆಯ ಕಲ್ಪನೆಯೇ ಇದ್ದಂತಿರಲಿಲ್ಲ. ದಿಬ್ಬವನ್ನೇರಿ ಬಂದ ಜನರು ಒಬ್ಬೊಬ್ಬರಾಗಿ ಕೆಳಕ್ಕೆ ಇಳಿದು ಹೋಗತೊಡಗಿದ್ದರು. ಸುತ್ತಲೂ ನೋಡಿ ಕೊನೆಗೆ, ಎಲ್ಲರೂ ಹೋಗಿ ತಾವಿಬ್ಬರೇ ಉಳಿದಿರುವನ್ನು ಕಂಡು ಜಲಜಾಕ್ಷಿ,

"ಇನ್ನು ಹೋಗೋಣವೇ?" ಎಂದು ಕೇಳಿದಳು.

"ಯಾಕೆ, ಬೇಸರ ಬಂದಿತೇನು?"

"ಬೇಸರ ಬಾರದಿದ್ದರೆ ಹೋಗಲೇಬಾರದೇನು? ಹಾಗೆಯೇ ಇಲ್ಲಿಯೇ ಕೂಡಬಿಡಲಿಕ್ಕಾದೀತೇ?"

"ಹೋಗೋಣ ತಡೆ, ಇನ್ನು ೫-೧೦ ನಿಮಿಷ ಬಿಟ್ಟು." ಮೋಹನ ನಸುನಕ್ಕ.

ಜಲಜಾಕ್ಷಿ ಪಡುವಣ ದಿಕ್ಕಿನಲ್ಲಿ ತೇಲುತ್ತಿದ್ದ ಕೆಂಪುಕೆಂಪಾದ ಮೋಡಗಳ ತುಂಡುಗಳನ್ನು ನೋಡುತ್ತ ಕುಳಿತಳು. ಮೋಹನ ಅವಳನ್ನೇ ನೋಡುತ್ತಿದ್ದ. ಸಾಂಗಲಿಯಲ್ಲಿ ಆ ಸಾಯಂಕಾಲ ತಾವಿಬ್ಬರೂ ಹೀಗೆಯೇ ಕುಳಿತ ಸನ್ನಿವೇಶ ಅವನಿಗೆ ಒಮ್ಮೆಲೇ ನೆನಪಾಯಿತು. ಅದರಜೊತೆಗೆ ಸಿನೇಮಾದಲ್ಲಿ ಅದೇ ನೋಡಿಬಂದ ನಾಯಕ-ನಾಯಕಿಯರ ಪ್ರೇಮಸಲ್ಲಾಪಗಳೂ ಅವನ ಕಣ್ಣ ಮುಂದೆ ಹಾಯ್ದು ಹೋದವು. ಬೀಸುತ್ತಿದ್ದ ಗಾಳಿಯಲ್ಲಿ ಜಲಜಾಕ್ಷಿಯ ಮುಂಗುರುಳುಗಳು ಹಾರಾಡುತ್ತಿದ್ದುವು. ಅವು ಅವಳ ಕೆನ್ನೆಗೆ ಮುತ್ತುಕೊಡುತ್ತವೆ ಎಂದು ಅವನಿಗೆ ತೋರಿತು.

ಆತ ಮೆಲ್ಲನೆ "ಜಲಜಾ"ಎಂದ.

"ಏನು?" ಎಂದು ಜಲಜಾಕ್ಷಿ ತನ್ನ ಮುಖವನ್ನು ಅವನಕಡೆಗೆ ಹೊರಳಿಸಿದಳು.

ಮೋಹನನಿಗೆ ತಾನೇನು ಮಾಡುತ್ತಿರುವೆನೆಂಬುದರ ಅರಿವಿಲ್ಲದೆ, ಒಮ್ಮೆಲೆ ಅವಳನ್ನು ಅಪ್ಪಿಕೊಂಡು ಅವಳ ಮುಖಕ್ಕೆ ಮುತ್ತಿಟ್ಟುಬಿಟ್ಟ!

ಆತನ ಶರೀರ ಪುಲಕಿತವಾಯಿತು!

ಜಲಜಾಕ್ಷಿ ಆತನ ಹಿಡಿತವನ್ನು ತಪ್ಪಿಸಿಕೊಂಡು ತುಸು ದೂರ ಸರಿದಳು.

ಬಾನಿನಲ್ಲಿ ತೇಲುತ್ತಿದ್ದ ಕೆಂಪು ಮೋಡಗಳ ಬಣ್ಣ ಅವಳ ಮುಖಕ್ಕೆ ಬಂದಿತ್ತು.

ಮೋಹನ ತುಸು ಹೆದರಿದ. ತಾನು ತಪ್ಪು ಮಾಡಿದೆನೆಂದು ಅವನಿಗನಿಸಿತು.

ಒಂದು ನಿಮಿಷ ಇಬ್ಬರೂ ಮೌನವಾಗಿದ್ದರು! ಜಲಜಾಕ್ಷಿಯ ಕಣ್ಣಲ್ಲಿ ನೀರೂರಿತು. ಅದನ್ನು ಕಂಡು ಮೋಹನ ಇನ್ನಷ್ಟು ಅಧೀರನಾದ.

"ಜಲಜಾ, ಕೋಪವೇ?" ತನ್ನಲ್ಲಿದ್ದ ಎಲ್ಲ ಧೈರ್ಯವನ್ನೂ ಉಪಯೋಗಿಸಿ ಆತ ಮೆಲುವಾಗಿ ಕೇಳಿದ.

ಜಲಜಾಕ್ಷಿ ಏನೂ ಮಾತನಾಡಲಿಲ್ಲ, ಕಣ್ಣಲ್ಲಿಯ ನೀರು ಹನಿಯಾಗಿ ಕೆನ್ನೆಯಿಂದ ಕೆಳಗುರುಳಿತು.

"ಜಲಜಾ, ಕ್ಷಮಿಸು. Please ." ಎನ್ನುತ್ತಾ, ತನ್ನ ಜೇಬಿನಿಂದ ಕರವಸ್ತ್ರವನ್ನು ತೆಗೆದು ಕಂಪಿಸುವ ಕೈಗಳಿಂದ ಅವಳ ಕಣ್ಣೀರು ಒರೆಸಿದ.

ಜಲಜಾಕ್ಷಿ ಆತನ ಕಡೆಗೊಮ್ಮೆ ನೋಡಿದಳು. ಆ ದೃಷ್ಟಿಯಲ್ಲಿ ಯಾವ ಭಾವವಿತ್ತೆಂಬುದು ಮೋಹನನಿಗೆ ತಿಳಿಯಲಿಲ್ಲ.

ಐದು ನಿಮಿಷಗಳು ಹಾಗೆಯೇ ಕಳೆದವು.

ಜಲಜಾಕ್ಷಿ ಎದ್ದು ನಿಂತಳು.

"ಹೋಗೋಣವೇ?" ಮೋಹನ ಕೇಳಿದ.

"ಮತ್ತೆ ಬೇಡವೇನು?"

"ಒಂದು ನಿಮಿಷ ಕೂಡ್ರು, Please".

"ಯಾತಕ್ಕೆ?" ಜಲಜಾಕ್ಷಿ ಎದ್ದುನಿಂತುಕೊಂಡೇ ಕೇಳಿದಳು.

"ನಿನಗೆ ಸಿಟ್ಟು ಬಂದಿತೇ?"

ಜಲಜಾಕ್ಷಿ ಏನೂ ಹೇಳಲಿಲ್ಲ.

"ನಿಜವಾಗಿಯೂ ಸಿಟ್ಟಾಗಿರುವಿಯಾ?"



ಜಲಜಾಕ್ಷಿ ಗೋಣು ಅಲ್ಲಾಡಿಸಿ ಇಲ್ಲವೆಂಬಂತೆ ಸೂಚಿಸಿದಳು.

ಎದ್ದುನಿಂತುಕೊಂಡೇ ಇದ್ದ ಜಲಜಾಕ್ಷಿಯ ಕೈಯನ್ನು ಹಿಡಿದೆಳೆದು ಮೋಹನ ಅವಳನ್ನು ಕೆಳಗೆ ಕೂಡ್ರಿಸಿ,

"ನಿಜವಾಗಿಯೂ ನಾನು ಎಷ್ಟು ಹೆದರಿಬಿಟ್ಟಿದ್ದೆ!" ಎಂದ.

ಜಲಜಾಕ್ಷಿ ನಕ್ಕಳು. ಮೋಹನನೂ ನಕ್ಕ.

ಮೋಹನ ಅವಳ ಬದಿಗೆ ಸರಿದು ಕೂಡ್ರುತ್ತಾ, "ಹಾಗಾದರೆ ನಿನ್ನ ಕಣ್ಣಲ್ಲಿ ನೀರೇಕೆ ಬಂದವು?" ಎಂದು ಕೇಳಿದ.

"ಇಲ್ಲ. ಆ...ದ...ರೆ..." ಅವಳು ಏನೋ ಹೇಳಬೇಕೆಂದಳು. ಆದರೆ ಹೇಳಲಾಗಲಿಲ್ಲ,

"ಆದರೆ ಏನು...?"

"ಏನೂ ಇಲ್ಲ."

"ಹೇಳುವುದಿಲ್ಲವೇ?"

"ಊಹೂಂ. ಏನೂ ಇಲ್ಲ." ಅವಳು ತನ್ನ ಮುಖವನ್ನು ಬೇರೆಕಡೆಗೆ ತಿರುಗಿಸಿದಳು.

ಮೋಹನನ ಮುಖದಲ್ಲಿ ಕಿರುನಗೆ ಮೂಡಿತು!

ಇಬ್ಬರೂ ಕೈ ಹಿಡಿದುಕೊಂಡು ಜಾರದಂತೆ ರೆಯನ್ನು ಇಳಿ ದರು.

ಜಲಜಾಕ್ಷಿ ಮೋಹನನನ್ನು ಲಕ್ಷ್ಮಿಯ ಗುಡಿಯಲ್ಲಿ ಕರೆದುಕೊಂಡು ಹೋದಳು. ದೇವಿಯ ಮುಖದಲ್ಲಿ ದಿವ್ಯಕಳೆ ನಾಟ್ಯವಾಡುತ್ತಿತ್ತು.

ಜಲಜಾಕ್ಷಿ ಭಕ್ತಿಯಿಂದ ತಲೆಬಾಗಿ ದೇವಿಗೆ ನಮಸ್ಕರಿಸಿದಳು.

ಮೋಹನ ನಿಂತುಕೊಂಡೇ ಕೈಮುಗಿದಿದ್ದ.

ಆತನೂ ತಲೆಬಾಗಿ ನಮಸ್ಕರಿಸುವಂತೆ ಅವಳು ಸೂಚಿಸಿದಳು.

ಇಬ್ಬರೂ ದೇವಿಗೆ ಸಾಷ್ಟಾಂಗನಮಸ್ಕಾರ ಹಾಕಿದರು.

- ೧೦ -

ಮುಂಜಾನೆ ಸುಮಾರು ಒಂಭತ್ತು ಹೊಡೆದಿರಬಹುದು. ನಾರಾಯಣರಾಯರು ಸ್ನಾನವನ್ನು ತೀರಿಸಿ ತಮ್ಮ ಕೋಣೆಯಲ್ಲಿ ವರ್ತಮಾನಪತ್ರವನ್ನು ಓದುತ್ತ ಕುಳಿತುಕೊಂಡಿದ್ದರು.

"ನಾನಣ್ಣ, ಮಾಮಾ ಬಂದಿದ್ದಾರೆ." ಎಂದು ಹೇಳುತ್ತಾ ಮೋಹನ ಕೋಣೆಯೊಳಕ್ಕೆ ಬಂದ.

"ಯಾರು ಧೋಂಡೋಪಂತರೇ?" ಎನ್ನುತ್ತ ಖುರ್ಚಿಯಿಂದ ಏಳತೊಡಗಿದರು.

ಅಷ್ಟರಲ್ಲಿ ಧೊಂಡೋಪಂತರೇ ಒಳಗೆಬಂದರು. ಧೋಂಡೋಪಂತರು ನಾರಾಯಣರಾಯರ ಹೆಂಡತಿ ರಮಾಬಾಯಿಯ ಅಣ್ಣ. ಸಾಂಗಲಿಯಲ್ಲಿ ಅವರಿಗೆ ಸ್ವಂತ ಹೊಲ-ಮನೆಗಳಿವೆ. ಆದರೂ ಮಕ್ಕಳಿಗೆ ಒಳ್ಳೆಯ ಶಿಕ್ಷಣ ಕೊಡಿಸಬೇಕೆಂಬ ಏಕಮೇವ ಉದ್ದೇಶದಿಂದ ಕಳೆದ ಹತ್ತು ವರ್ಷಗಳಿಂದಲೂ ಪುಣೆಯಲ್ಲಿಯೇ ಮನೆಮಾಡಿದ್ದರು. ಈಗ ಆರುತಿಂಗಳಿಂದ ಮಾತ್ರ ಪುಣೆಯ ಮನೆಯನ್ನು ತೆಗೆದುಸಾಂಗಲಿಯಲ್ಲಿ ತಮ್ಮ ಸ್ವಂತ ಮನೆಯಲ್ಲಿ ಬಂದು ನೆಲೆಸಿರುವರು. ಹೆಸರಿಗೆ ಒಂದು ಸರಾಫಿಯ ಅಂಗಡಿಯನ್ನೂ ತೆಗೆದಿರುವರು.

ಕೋಣೆಯೊಳಕ್ಕೆ ಕಾಲಿಡುತ್ತಲೇ ಧೋಂಡೋಪಂತರು,

"ಯಾಕೆ ಏನು ನಡಸಿದ್ದೀರಿ? ವಾಚನವೇನು?" ಎಂದರು.

"ಹೂಂ... ಸಂಯುಕ್ತ ಕರ್ನಾಟಕ ಬಂದಿತ್ತು..."

"ಏನು, ಅದು ಇಷ್ಟು ಬೇಗ ಬಂದಿತೇನು?" ಪಂತರು ಕುತೂಹಲದಿಂದ ಕೇಳಿದರು.

ನಾರಾಯಣರಾಯರು ನಗುತ್ತ "ಇಲ್ಲ, ಇದು ಇಂದಿನದಲ್ಲ, ನಿನ್ನೆಯದು". ಎಂದರು.

"ಅಲ್ಲಾ, ಅಷ್ಟು ಮಾಡಿ ನೀವು ಅದನ್ನೇ ಯಾಕ ಓದಬೇಕು. 'ಸಕಾಳ' ಯಾಕೆ ಓದಬಾರದು ಮುಂಜಾನೆ ಎಂಟು ಹೊಡೆಯುವುದರೊಳಗಾಗಿ ಸಕಾಳ ಮನೆಗೆ ಬಂದಿರುತ್ತದೆ."

ಧೊಂಡೋಪಂತರ ಮರಾಠಿಅಭಿಮಾನ ರಾಯರಿಗೆ ಗೊತ್ತು. ಅದನ್ನು ಹೆಚ್ಚಿಗೆ ಕೆರಳಿಸಬಾರದೆಂದು,

"ಏನಿಲ್ಲ, ಯಾವುದಾದರೂ ಅಷ್ಟೇ. ಅದನ್ನು ಓದುತ್ತೇನೆ. ಎಂದು ನುಡಿದರು.

"ಮತ್ತೇನು ವಿಶೇಷ ಸಮಾಚಾರ?" ಎಂದು ಧೋಂಡೋಪಂತರು ಕೇಳಿದರು.

ಆ ಮಾತು ಈ ಮಾತು ಮುಗಿದು ಕೊನೆಗೆ ಕಾಲೇಜಶಿಕ್ಷಣದ ಕಡೆಗೆ ಮಾತುತಿರುಗಿತು. ಅವರ ಚರ್ಚೆ ಮುಗಿಯುತ್ತಿರುವಂತೆ,

"ಅಲ್ಲಾ, ಮೋಹನ ಈ ವರ್ಷ ಬಿ.ಎ. ಅಲ್ಲವೇನು? ಆ ಮೇಲೆ ಏನು ಮಾಡಬೇಕೆಂತಾನೆ?" ಎಂದು ಪಂತರು ಕೇಳಿದರು.

"ನೋಡೋಣ. ಬಿ.ಎ.ನಾದರೂ ಮುಗಿಯಲಿ," ರಾಯರು ಹೇಳಿದರು.

## ಕಲ್ಪನೆ!



ಓರ್ವ ಭಾವುಕ ಕವಿ
ನಿನ್ನನು ಪ್ರೇಮಿಸಿದ
ತನ್ನ ಸರ್ವಸ್ವವ ನಿನ್ನ
ಪದತಲದಲಿರಿಸಲು!
ಓರ್ವ ಚಿತ್ರಕಾರ ನಿನ್ನ
ಕೃಪಾದೃಷ್ಟಿ ಬಯಸಿದ-
ಮಾನಸದ ಕ್ಯಾನ್‌ವಾಸಿನ ಮೇಲೆ
ನಿನ್ನನ್ನೇ ಚಿತ್ರಿಸಲು!

-ಪಂಚಾಕ್ಷರಿ ಹಿರೇಮಠ

"ಇನ್ನು ಮಗನ ಹೋಲಿಗೆ ಹಾಕಲಿಕ್ಕೆ ಅಡ್ಡಿಯಿಲ್ಲ." ಪಂತರು ನಗುತ್ತಾ ನುಡಿದರು.

"ಹಾಕೋಣಲ್ಲ. ಇಷ್ಟು ಅವಸರವೇಕೆ?"

"ಅವಸರವೇನು ಬಂತು? ನಮ್ಮ ಕಾಲಕ್ಕ ನಮಗೆ ಇಷ್ಟು ವಯಸ್ಸಿಗೆ ಎರಡು ಮಕ್ಕಳಾಗಿದ್ದವು" ಪಂತರು ತಮ್ಮ ಮಾತಿಗೆ ತಾವೇ ನಕ್ಕರು.

"ಹೌದು. ಖರೇ, ಈಗ ಕಾಲಬದಲಾಗಿದೆ ಅಲ್ಲವೇನು?" ರಾಯರು ಕೇಳಿದರು.

"ಹಾಗಲ್ಲ, ಇದೇವರ್ಷ ಮಾಡಿರಿ ಎಂದಲ್ಲ. ಮುಂದಿನವರ್ಷ ಮಾಡಿರಿ. ಎಲ್ಲಾ ದೃಷ್ಟಿಯಿಂದ ಕೂಡಿಬಂದರೆ ಯಾಕ ಮಾಡಬಾರದು?" ಹುಬ್ಬು ಹಾರಿಸುತ್ತ ಪಂತರು ಕೇಳಿದರು.

"ಹೂಂ"

"ಅಂದರೆ ನಾನು ಯಾಕೆ ಕೇಳುತ್ತೇನೆಂಬುದು ನಿಮಗೆ ಕಲ್ಪನೆ ಬಂದೀತೇನು?"

"ಇಲ್ಲವಲ್ಲ!"

"ನಮ್ಮ ಮಗಳು..."

"ಕಾಮಾಕ್ಷಿ?

"ಹೂಂ. ಅವಳ ಮದುವೆ ಈವರ್ಷ ಮಾಡಬೇಕೆಂತ ವಿಚಾರ. ಅವಳನ್ನು ಮೋಹನನಿಗೇ ಕೊಡಬೇಕೆಂತ ಮನೆಯಲ್ಲಿ ಎಲ್ಲರೂ ಮಾತಾಡಿದ್ದೇವೆ. ಮತ್ತೂ ವಿಶೇಷವೆಂದರೆ ಅವಳೂ ಮೋಹನನನ್ನು ಮೆಚ್ಚಿದಂತಿದೆ."

ನಾರಾಯಣರಾಯರು ಹೆಚ್ಚಿನ ಆಸ್ಥೆಯನ್ನು ತೋರಲಿಲ್ಲ. ಆದರೂ ಧೊಂಡೋಪಂತರೇ ಮುಂದುವರಿದರು,

"ಅದೂ ಅಲ್ಲದೆ ನಮಗಾದರೂ ಇರುವವಳು ಅವಳೇ ಒಬ್ಬ ಮಗಳು. ಇಲ್ಲಿಯೇ ಮನೆಯಲ್ಲಿಯೇ ಇದ್ದಂತೆ ಆಗುತ್ತದೆ."

ರಾಯರು ಏನೂ ಮಾತನಾಡಲಿಲ್ಲ.

"ಯಾಕೆ, ನಿಮ್ಮ ಅಭಿಪ್ರಾಯವೇನು?"

"ನಾವು ಎಷ್ಟರವರು? ಅವರವರ ವಿಧಿಲಿಖಿತದಂತೆ ಎಲ್ಲವೂ ಆಗುವದು."

"ಅದಂತೂ ಸರಿಯೇ ಅನ್ನರಿ. ಆದರೂ ನಮ್ಮದಂತೂ ಎಲ್ಲರ ಇಚ್ಛೆಯೂ ಹಾಗೇ ಇದೆ. ರಮಾ ಹೋದಳು ಅಂತ ದೂರ ಮಾಡಬೇಡಿರಿ. ನಮ್ಮ ಮಕ್ಕಳಿಂದ ಬಾಂಧವ್ಯ ಇನ್ನೂ ಬೆಳೆಯಲಿ ಅಂತ ನಮ್ಮಿಚ್ಛೆ. ನೀವಿಷ್ಟು ಒಪ್ಪಿಗೆ ಕೊಟ್ಟುಬಿಟ್ಟರೆ ಆಯ್ತು? ಏನಂತೀರಿ?" ಪಂತರು ಅತೀವ ಕಳಕಳಿಯಿಂದ ಕೇಳಿದರು.

ಅವರ ಪ್ರಶ್ನೆಗೆ ರಾಯರು ಉತ್ತರ ಕೊಡಬೇಕೆನ್ನುವಷ್ಟರಲ್ಲಿ ಜಲಜಾಕ್ಷಿ ಕಾಫಿ ತೆಗೆದುಕೊಂಡು ಬಂದಳು. ಅವಳನ್ನು ಕಂಡು ಪಂತರು,

"ಜಲಜಾ! ಓಹೋ, ಯಾವಾಗ ಬಂದೀಯವ್ವಾ?" ಕೇಳಿದರು.

"ನಿನ್ನೆ ಬಂದಾಳೆ. ಅವಳಿಗೂ ಈಗ ಕ್ರಿಸ್‌ಮಸ್ ಸೂಟಿ". ಎಂದರು.

"ಹೌದು. ಈಗೇನು ಕಲೀತಿದ್ದೀಯವ್ವ?" ಪಂತರು ಜಲಜಾಕ್ಷಿಯನ್ನು ಕೇಳಿದರು.

"ಈ ವರ್ಷ ಮ್ಯಾಟ್ರಿಕ್‌ರೀ ಮಾಮಾ."

ಜಲಜಾಕ್ಷಿ ಇಬ್ಬರಿಗೂ ಕಾಫಿಕೊಟ್ಟಳು. ನಾರಾಯಣರಾಯರು ಅರ್ಧಕಪ್ಪು ಕಾಫಿಯನ್ನು ಅವಳಿಗೇ ಕೊಟ್ಟರು. ಅವರ ಒತ್ತಾಯಕ್ಕೆ ಅವಳು ಕುಡಿಯಲೇಬೇಕಾಯಿತು.

ಕಾಫಿಯ ಕಪ್ಪನ್ನು ಕೆಳಗಿಡುತ್ತ ಪಂತರು,

"ಹಾಗಾದರೆ, ಏನಂದುಂತಾಯಿತು ನಿಮ್ಮ ವಿಚಾರ?" ಎಂದು ರಾಯರನ್ನು ಕೇಳಿದರು.

"ನೋಡೋಣ. ವಿಚಾರಮಾಡೋಣ. ಇಷ್ಟು ಅವಸರವೇಕೆ?"

"ನಿಮಗೆ ಬೇಕಾದರೆ ಮುಂದಿನ ವರ್ಷ ಮಾಡಲಿಕ್ಕೂ ನನ್ನದೇನೂ ಅಡ್ಡಿಯಿಲ್ಲ. ನೀವೊಮ್ಮೆ ಹಾಗೆ ಹೇಳಿಬಿಟ್ಟರೆ ನನ್ನ ಕಾಳಜಿ ತಪ್ಪಿದಂತಾಗುತ್ತದೆ."

"ನೋಡೋಣ, ಅವ್ವನನ್ನೂ ಕೇಳಬೇಕು. ಅವನನ್ನೂ ವಿಚಾರಿಸಬೇಕು"

"ಹೂಂ. ಅದೂನಿಜವೇ. ಈಗಿನ ಹುಡುಗರೇನು? ಎಲ್ಲಿಯಾದರೂ ತಾವೇ ನೋಡಿದರೂ ನೋಡಿದರೇ." ಪಂತರು ನಕ್ಕರು.

ರಾಯರಿಗೆ ಈಮಾತು ಅಷ್ಟು ಸೇರಲಿಲ್ಲವೆಂಬುದು ಅವರ ಮುಖದಿಂದ ಒಡೆದುಕಾಣುತ್ತಿತ್ತು.

"ಆಗಲಿ, ನಿಮ್ಮ ಅಭಿಪ್ರಾಯದಂತೆ ಅವರಿಬ್ಬರನ್ನು ಕೇಳುವದೂ ಒಳ್ಳೆಯದೇ. ಕೇಳಿ ತಿಳಿಸಿರಿ." ಎಂದು ಪಂತರು ಏಳಲುಅನುವಾದರು.

"ಯಾಕೆ, ಹೊರಟೇಬಿಟ್ಟಿರಿ?" ರಾಯರು ಕೇಳಿದರು.

"ಹೂಂ. ಅಂಗಡಿಗೆ ವೇಳೆಆಯಿತಲ್ಲ!" ಎಂದ್ನ

ಪಂತರು ಎದ್ದೇಬಿಟ್ಟರು. ನಾರಾಯಣರಾಯರು ಅವರನ್ನು ಬಾಗಿಲವರೆಗೂ ಕಳಿಸಿಬಂದರು.

ಮರುದಿನ ಮಧ್ಯಾಹ್ನ ಜಲಜಾಕ್ಷಿ ಅಡ್ಡಾಗಿ ಎದ್ದು ಮೈ ಮುರಿದುಕೊಳ್ಳುತ್ತಿದ್ದಳು. ಮೋಹನ ಅವಳ ಕಡೆಗೆ ಬಂದು,

"ಜಲಜಾ, ಬೇಗನೇ ಮುಖ ತೊಳೆದುಕೊಂಡು ಸಿದ್ಧಳಾಗು. ತುಸು ಹೊರಗೆಹೋಗೋಣ" ಎಂದ.

"ಎಲ್ಲಿ ಹೋಗಬೇಕು?"

"ಅದೆಲ್ಲವೂ ನಂತರ ತಿಳಿಯುವದು."

ಜಲಜಾಕ್ಷಿ ಗಡಿಯಾರದ ಕಡೆಗೆ ನೋಡಿದಳು. ಆಗಲೇ ನಾಲ್ಕು ಹೊಡೆದುಹೋಗಿತ್ತು.

"ಮ್ಯಾಟನಿ ವೇಳೆಯಂತೂ ಮುಗಿದುಹೋಗಿದೆ. ಈಗ ಎಲ್ಲಿ ಹೋಗುವದು?" ಅವಳು ಕೇಳಿದಳು.

"ಕೆಲಸಕ್ಕೆ ಹೊರಟಾಗ ಎಲ್ಲಿ ಎಂದು ಕೇಳಬಾರದು. ಸುಮ್ಮನೆ ಹೊರಡು." ಮೋಹನ ಹಿರಿಯರಂತೆ ಹೇಳಿದ.

"ಅದೆಲ್ಲ ಇದ್ದುಕೊಳ್ಳಲ್ಲಿ. ಆ ಶಾಸ್ತ್ರ ನನಗೂ ಗೊತ್ತದೆ. ಈಗೇನು ಅಂಥ ಮಹಾಕೆಲಸಕ್ಕೆ ಹೊರಟರುವಿ?"

"ಅದನ್ನೇನೂ ಕೇಳಬೇಡ. ಹೊರಡು ಎಂದರೆ ಸುಮ್ಮನೆ ಹೊರಡು."

ಜಲಜಾಕ್ಷಿಗೆ ತುಸು ಅವಮಾನವಾದಂತೆ ಅನ್ನಿಸಿತೇನೋ. ಅವಳು, "ಇಲ್ಲ ಹೋಗು. ನಾನು ಬರುವದಿಲ್ಲ."ಎಂದುಬಿಟ್ಟಳು.

"ಬರೂದಿಲ್ಲವೇ? ನೋಡು. ಕೆಲಸವಿದೆಯೆಂದು ಹೇಳುತ್ತಿದ್ದೇನೆ. ಹೋದನಂತರ ತಾನೇ ತಿಳಿಯೂದಿಲ್ಲವೇನು?" ರಮಿಸುವ ಸ್ವರದಲ್ಲಿ ಮೋಹನ ನುಡಿದ.

ಒಂದು ಕ್ಷಣ ತಡೆದು ಜಲಜಾಕ್ಷಿ "ಒಳ್ಳೇದು ಮಹಾರಾಯಾ" ಎನ್ನುತ್ತ ಎದ್ದು, ಸಿದ್ಧಳಾದಳು. ಇಬ್ಬರೂ ಹೊರಗೆಹೊರಟರು.

ದಾರಿಯಲ್ಲಿ ಕೂಡ ಮೋಹನ ಎಲ್ಲಿ ಹೋಗುವದು, ಯಾಕೆಹೋಗುವದು ಎಂಬುದನ್ನು ಹೇಳಲಿಲ್ಲ. ಜಲಜಾಕ್ಷಿಯ ಕುತೂಹಲ ತಡೆಯಲಿಲ್ಲ.

"ಈಗಲಾದರೂ ಹೇಳಬಾರದೇ, ಎಲ್ಲಿ ಅನ್ನುವದನ್ನು?" ಎಂದು ಆತನನ್ನು ಮತ್ತೆ ಕೇಳಿದಳು.

"ಇಷ್ಟು ವೇಳೆ ತಡೆದಿದ್ದಿ. ಇನ್ನೇನು ಹತ್ತು ನಿಮಿಷದಲ್ಲಿ ತಾನೇ ತಿಳಿಯುವದು." ಎಂದು ಹೇಳಿ ಮೋಹನ ಗಂಭೀರನಾಗಿ ನಡೆದನು. ಜಲಜಾಕ್ಷಿ ಉಪಾಯಗಾಣದೆ ಆತನೊಂದಿಗೆ ಸುಮ್ಮನೆ ನಡೆಯಬೇಕಾಯಿತು.

ಮೋಹನ ಧೊಂಡೋಪಂತ ಮಾಮಾ ಅವರು ಇರುವ ಗಣಪತಿಗಲ್ಲಿಗೆ ಬಂದನು.

"ಆ ನಿಮ್ಮ ಮಾಮಾನ ಮನೆಗೇನೋ? ಹಾಗಿದ್ದರೆ ಈಗಲೇ ಹೇಳು. ನಾನಂತೂ ಅವರ ಮನೆಗೆ ಬರುವದಿಲ್ಲ, ನೋಡು"

ಮೋಹನ ಅವಳ ಕಡೆಗೆ ತಿರುಗಿ ನೋಡಿದ ಮಾತ್ರ. ಏನನ್ನೂ ಮಾತನಾಡಲಿಲ್ಲ. ಅವನ ಭಾವವನ್ನರಿತು ಜಲಜಾಕ್ಷಿ ಬೀದಿಯಲ್ಲಿಯೇ ನಿಂತುಬಿಟ್ಟಳು. ಮೋಹನ ಅವಳ ಕೈಯನ್ನು ಹಿಡಿದು "ನಡೆ" ಎಂದನು. ಜಲಜಾಕ್ಷಿ ಪೋಲೀಸರ ಕೈಯಲ್ಲಿ ಸಿಕ್ಕುಬಿದ್ದ ಅಪರಾಧಿಯಂತೆ ನಡೆಯಬೇಕಾಯಿತು.

ಇಬ್ಬರೂ ಧೊಂಡೋಪಂತರ ಮನೆಗೆ ಬಂದರು. ಮೋಹನ ನೇರವಾಗಿ,

"ಕಾಮೂ, ಏನು ಮಾಡುತ್ತಿದ್ದೀ?" ಎನ್ನುತ್ತ ಒಳಗೆ ನಡೆದ.

ಆತನ ಬರವನ್ನೇ ಕಾಯುತ್ತಿದ್ದ ಕಾಮಾಕ್ಷಿ ಹಿಗ್ಗಿ,

"ನೀನು ಬಂದೆಯಾ ಮೋಹನ? ಈಗ ಅರ್ಧತಾಸಿನಿಂದಲೂ ನಿನ್ನದಾರೀ ಕಾಯ್ದು ಬೇಸತ್ತು, ನೀನು ಇನ್ನು ಬರುವದಿಲ್ಲವೇನೋ ಎಂದುಕೊಂಡಿದ್ದೆ." ಎಂದು ಸಂಭ್ರಮದಿಂದ ನುಡಿದಳು.

"ಹೌದು. ಇದಕ್ಕೂ ಮೊದಲೇ ಬರಬಹುದಾಗಿತ್ತು. ಆದರೆ ಈ ಜಲಜಾ ಬೇಗ ಹೊರಡಲಿಲ್ಲ..." ಎಂದು ಮೋಹನ ಹೇಳುತ್ತಿರುವಾಗ ಪಡಸಾಲೆಯಲ್ಲಿನಿಂತಿದ್ದ ಜಲಜಾಕ್ಷಿ ಕಾಮಾಕ್ಷಿಯ ಕಣ್ಣಿಗೆ ಬಿದ್ದಳು.

ಅವಳನ್ನು ನೋಡಿದಕೂಡಲೇ ಕಾಮಾಕ್ಷಿಯ ಮುಖ ಒಮ್ಮೆಲೇ ಇಳಿದುಬಿಟ್ಟಿತು. ಆದರೂ ಅವಳು ತನ್ನ ಮನದಭಾವವನ್ನು ಛಾಯೆಗಾಣಿಸಿ, "ಬಾ ಜಲಜಾಕ್ಷಿ. ಬೆಳಗಾವಿಯಿಂದ ಎಂದು ಬಂದೆ?" ಎಂದು ಕೇಳಿದಳು.

ಅವಳ ಆ ಕಳೆಗುಂದಿದ ಮುಖವನ್ನು ನೋಡಿ ಜಲಜಾಕ್ಷಿಗೆ ಕೆಡುಕೆನಿಸಿತು. "ಮೊನ್ನೆ ಬಂದೆ." ಎಂದಳು.

"ಕುಳಿತುಕೊಳ್ಳಿರಿ. ಈಗ ಬಂದೆ." ಎಂದು ಹೇಳಿ ಕಾಮಾಕ್ಷಿ ಒಳಗೆ ಹೋದಳು.

ಬದಿಯ ಖುರ್ಚಿಯೊಂದರ ಮೇಲೆ ಕುಳಿತುಕೊಳ್ಳುತ್ತಾ ಜಲಜಾಕ್ಷಿ ಮೋಹನನ ಕಡೆಗೆ ನೋಡಿದಳು. ಅವನ ಮುಖದಲ್ಲಿ ಕೊಂಕುಹಾಸ್ಯ ಅರಳುತ್ತಿತ್ತು.

ಕಾಮಾಕ್ಷಿ ಹೊರಗೆ ಬರಬೇಕಾದರೆ ೫-೧೦ ಮಿನಿಟುಗಳೇ ಬೇಕಾದುವು. ಅಷ್ಟುಹೊತ್ತು ಇವರಿಬ್ಬರೂ ಮೌನವಾಗಿಯೇ ಕುಳಿತಿದ್ದರು. ಜಲಜಾಕ್ಷಿಯ ಮೊಗದಲ್ಲಿ ಮಾತ್ರ ಉತ್ಸಾಹವಿರಲಿಲ್ಲ. ಮುಖ ಸಪ್ಪಗೆಮಾಡಿಕೊಂಡು ಕುಳಿತಿದ್ದಳು.

ಕಾಮಾಕ್ಷಿ ಬಂದಳು. ಅವಳು ಕಣ್ಣೊರೆಸಿಕೊಂಡು ಬಂದುದನ್ನು ಜಲಜಾಕ್ಷಿ ಗಮನಿಸಿದಳು. ಆದರೆ ಮೋಹನನಿಗೆ ಅದರ ಸುಳಿವುಕೂಡ ಹತ್ತಲಿಲ್ಲ.

"ಕಾಮೂ, ಮಾಮಿ, ಮನೆಯಲ್ಲಿರುವಂತೆ ಕಾಣುವದಿಲ್ಲವಲ್ಲ?" ಮೋಹನ ಕೇಳಿದ.

"ಹೌದು. ನಿನ್ನೆ ಸಾಯಂಕಾಲ ಊರಿಗೆ ಮಿರಜಿಗೆ ಹೋಗಿರುವಳು."

"ಮತ್ತು ಗಣೂ, ವಿಸೂ ಎಲರೂ ಎಲ್ಲಿದ್ದಾರೆ?"

"ಅವರೂ ಅವ್ವನ ಜೊತೆಗೇ ಹೋಗಿರುವರು."

"ಮಾಮಾ ಅಂಗಡಿಗೆ ಹೋಗಿರಬೇಕು"ಎಂದಳು ಜಲಜಾಕ್ಷಿ.

"ಹೌದು" ಎಂದಳು ಕಾಮಾಕ್ಷಿ.

"ಮಾಮಿ ಮಿರಜಿಗೆ ಯಾಕೆಹೋಗಿರುವರು?" ಮೋಹನ ಕೇಳಿದ.

"ಅಲ್ಲಿ ನಮ್ಮ ಮಾವಶಿಯ ಮನೆಯಲ್ಲಿ ಇಂದು ಸತ್ಯನಾರಾಯಣ ಪೂಜೆ ಇತ್ತು."

"ಮತ್ತೆ ನೀನೇಕೆ ಹೋಗಲಿಲ್ಲ?"

"ಯಾಕೋ!"

"ಯಾಕೆ, ಇಷ್ಟು ಉದಾಸೀನ...."ಎಂದು ಮೋಹನ ಕೇಳುತ್ತಿರುವಂತೆಯೇ, ಮನೆಗೆಲಸದವಳು ತಿಂಡಿಯನ್ನೂ ಚಹವನ್ನೂ ತಂದು ಮೂವರಿಗೂ ಕೊಟ್ಟು, ಮೋಹನನನ್ನೂ ಜಲಜಾಕ್ಷಿಯನ್ನೂ ಬರಬರನೆ ನೋಡಿ ಹೊರಟು ಹೋದಳು!

ಚಹಕುಡಿದಾದ ಮೇಲೆ ಒಂದೆರಡು ನಿಮಿಷಗಳಾದರೂ ಯಾರೂ ಏನೂ ಮಾತನಾಡಲಿಲ್ಲ, ಕೊನೆಗೆ ಮೋಹನನೇ ಕೇಳಿದ,

"ಕಾಮೂ, ನೀನು ಯಾಕೆ ಕರೆಕಳಿಸಿದ್ದೆಂದು ಹೇಳಲೇ ಇಲ್ಲವಲ್ಲ?"

"ಯಾಕೂ ಇಲ್ಲ, ಸಹಜ." ಎಂದಳು ಕಾಮಾಕ್ಷಿ.

"ನೀನು ಇಲ್ಲೇ ಕುಳಿತಿರು. ನಾನು ಈಗ ಇಲ್ಲಿಯೇ ಬರುತ್ತೇನೆ" ಎಂದು ಮೋಹನನಿಗೆ ಹೇಳಿ ಜಲಜಾಕ್ಷಿ ಅಲ್ಲಿಂದ ಎದ್ದಳು.

"ಇಲ್ಲ, ಇಲ್ಲ, ನಾನೂ ಬಂದೇ ಬಿಡುತ್ತೇನೆ. ತಡೆ." ಎಂದು ಜಲಜಾಕ್ಷಿಗೆ ಹೇಳಿದ ಮೋಹನ, "ಕಾಮೂ, ನಾನು ಬರುತ್ತೇನೆ. ಚಹ ಚೆನ್ನಾಗಿತ್ತು, ತುಂಬ ಥ್ಯಾಂಕ್ಸ" ಎಂದು ಎದ್ದುನಿಂತ.

"ಒಳ್ಳೇದು" ಎಂದು ಕಾಮಾಕ್ಷಿ ಹೇಳಿ, ಅವರಿಬ್ಬರನ್ನೂ ಬಾಗಿಲವರೆಗೆಕಳಿಸಿದಳು.

ಆ ಬೀದಿಯನ್ನು ದಾಟಿ ಸುಮಾರು ೨೦-೩೦ ಹೆಜ್ಜೆ ನಡೆದು ಅವರಿಬ್ಬರೂ ಬಂದಿದ್ದರು. ಮೋಹನ ಗಟ್ಟಿಯಾಗಿ ನಗುತ್ತ,

"ಹೇಗಿದೆ ಮೋಜು?" ಎಂದ.

ಆದರೆ ಜಲಜಾಕ್ಷಿ ನಗಲೂ ಇಲ್ಲ, ಏನು ಮಾತನ್ನೂ ಆಡಲಿಲ್ಲ. ಅದನ್ನು ಕಂಡು,

"ಯಾಕೆ ಅವಳನ್ನು ನೋಡಿ ಪಾಪ, ನಿನಗೆ ಬಹಳೇ ಕೆಡುಕೆನಿಸಿತಲ್ಲವೇ?" ಎಂದು ಕೇಳಿದನು

## ಸಮಯ ಸಾಧಕ



'ಗರೀಬಿ ಹಟಾವೊ' ಘೋಷಣೆ ಕೇಳಿ
ಸಮಯಸಾಧಕನುಜಗಿದೆದ್ದ;
ಪಾರ್ಟಿಯ ಕೂಡಿ, ಕಮಾಯಿ ಮಾಡಿ
ತನ್ನ ಗರೀಬಿ ಹಟಾಯಿಸಿದ!

– ಎಂ. ಅಕಬರ ಅಲಿ

"ಮತ್ತೇನು?... ಹೀಗೆ ಎಂದು ಮೊದಲೇ ತಿಳಿದಿದ್ದರೆ ನಾನೆಂದಿಗೂ ಬರುತ್ತಿರಲಿಲ್ಲ." ಎಂದಳು ಸಿಡುಕಿನಿಂದ.

"ಹಾಗೆಂದೇ. ನಾನೂ ನಿನಗೆ ಮೊದಲು ಹೇಳಿರಲಿಲ್ಲ." ಎಂದು ನಕ್ಕ ಮೋಹನ.

"ಸಾಕು. ಇದೇನುಚಂದ? ಪಾಪ ಅವಳೆಷ್ಟು ನಿರಾಸೆಪಟ್ಟಳೋ!"

"ಅಂದರೆ ಅವಳು ಮಾಡುವದು ಚಂದವೇನು? ಇದು ನೋಡು." ಎನ್ನುತ್ತ ತನ್ನ ಪ್ಯಾಂಟಿನ ಕಿಸೆ



ಯಲ್ಲಿಂದ ಕಾಮಾಕ್ಷಿ ತನಗೆ ಕೊಟ್ಟು ಕಳಿಸಿದ್ದ ಪತ್ರವನ್ನು ಅವಳಿಗೆ ಓದಲು ಕೊಟ್ಟ. ಪತ್ರದಲ್ಲಿ–

ಪ್ರೇಮದ ನನ್ನ ಮೋಹನ,

ಇಂದು ಸಾಯಂಕಾಲ ನಾಲ್ಕು ಗಂಟೆಗೆ ನೀನು ತಪ್ಪದೆ ನಮ್ಮಮನೆಗೆ ಬಾ. ನಿನ್ನಕೂಡ ಬಹಳೇ ಮಾತನಾಡುವದಿದೆ. ನಿನ್ನ ದಾರಿಯನ್ನೇ ಕಾಯುತ್ತಿರುವೆನು. ತಪ್ಪಿಸಬೇಡ. Please. ನೀನು ಒಪ್ಪಿದರೆ ಡಾ. ಕೋಟನೀಸ ಸಿನೇಮಾಕ್ಕೂ ಹೋಗೋಣ. ನೀನು ಬಂದೇ ಬರುತ್ತೀಯೆಂದು ನಂಬಿದ್ದೇನೆ. ಬರುತ್ತೀಯಲ್ಲವೇ?

ನಿನ್ನ ಪ್ರೇಮ ಭಿಕ್ಷು!

–ಕಾಮೂ.

–ಎಂದು ಬರೆದುದನ್ನು ಜಲಜಾಕ್ಷಿ ಓದಿಮುಗಿಸಿದಳು.

"ನೋಡು ಅವಳು ಹೀಗೆ ಬರೆಯಬೇಕೇ?" ಎಂದು ಮೋಹನ ಕೇಳಿದ.

"ಹೂಂ. ಇರಲಿ ಮುಗಿಸೋಣ್ವ. ನೀನು ಬಹಳ ಬುದ್ಧಿವಂತ!"

"ಅಂದರೇನು? ನಾನು ಈಗಲೇ ತಿರುಗಿಹೋಗಿ ಅವಳಿಗೆ ಪ್ರೇಮಭಿಕ್ಷೆಯನ್ನು ನೀಡಲೇನು?" ಮೋಹನ ನಾಟಕೀಯವಾಗಿ ನುಡಿದ.

ಜಲಜಾಕ್ಷಿ ಏನೂ ಉತ್ತರವನ್ನೀಯಲಿಲ್ಲ. ಆತನ ಕೈಯ ಕಿರಿಬೆರಳನ್ನು ಜೋರಾಗಿಚಿವುಟಿದಳು.

"ಅಯ್ಯೋ, ತಪ್ಪಾಯ್ತು, ಮಹಾರಾಯಳೆ."

ಇಬ್ಬರೂ ಮನಃಪೂರ್ವಕ ನಕ್ಕರು.

ಅವರೀಗ 'ಪದ್ಮಾ' ಥಿಯೇಟರ ಸಮೀಪ ಬಂದಿದ್ದರು.

"[illegible]ಜಾ, ಡಾ. ಕೋ[illegible]ಸ ನೋ[illegible]ಣವೇ? ಬಹಳೇ ಚೆನ್ನಾಗಿದೆಯಂತೆ," ಮೋಹನ ಕೇಳಿದ,

"ಛೇ. ಈಗ ಬೇಡ. ಬೇಕಾದರೆ ನಾಳೆ..."

"No, no ಇಂದೇ ನೋಡೋಣ."

ಅವನ ಒತ್ತಾಯಕ್ಕೆ ಜಲಜಾ ಮಣಿದಳು.

ಸಿನೇಮಾ ಬಿಟ್ಟಮೇಲ ಇಬ್ಬರೂ ಮೌನವಾಗಿ ಮನೆಯಕಡೆಗೆ ನಡೆದಿದ್ದರು. ಆ ದುಃಖಾಂತ ಚಿತ್ರ ಅವರಿಬ್ಬರ ಮನದಮೇಲೂ ಸಾಕಷ್ಟು ಪರಿಣಾಮವನ್ನುಂಟು ಮಾಡಿದಂತಿತ್ತು.

ದಾರಿಯಲ್ಲಿ ಮೋಹನ, "ನಿನಗೆ ಚಿತ್ರ ಹೇಗನಿಸಿತು?" ಎಂದು ಕೇಳಿದ.

ಜಲಜಾಕ್ಷಿ ನಿಟ್ಟುಸಿರೊಂದನ್ನು ಮಾತ್ರ ಬಿಟ್ಟಳು,

"ಯಾಕೆ ಬಹಳ ಕೆಡುಕೆನಿಸಿತೇ?"

"ಇಲ್ಲ, ಸಮಾಧಾನವೆನಿಸಿತು."

"ಹಾಂ! ಇದೇನು ಹೇಳುತ್ತಿರುವೆ?"

"ಹೌದು, ನಿಜವಾಗಿಯೂ ಸಮಾಧಾನವೆನಿಸಿತು, ಅವರ ಆ ನಿರ್ವ್ಯಾಜಪ್ರೇಮ ಸ್ತುತ್ಯವಾದುದು"

"ಹೌದು. ನಿಜವಾದ ಪ್ರೇಮವೆಂದರೆ ಹಾಗೆಯೇ ಇರಬೇಕು. ಅದಕ್ಕೆ . ಕುಲ–ಗೋತ್ರ–ಅದು–ಇದು ಯಾವುದೂ ಅಡ್ಡಿ ಬರಬಾರದು."

ಟಾವರಕ್ಲಾಕು ಢಣ್ ಎಂದು ಒಂಭತ್ತೂವರೆ ಗಂಟೆಯನ್ನು ಬಾರಿಸಿತು.

ಅವರು ಬೇಗ ಬೇಗ ಹೆಜ್ಜೆ ಹಾಕಿದರು.

-೧೧-

ಮುಂದೆ ನಾಲ್ಕುದಿನಗಳೂ ಸಂಪೂರ್ಣವಾಗಿ ಕಳೆದಿರಲಿಲ್ಲ. ಒಂದು ಸಾಯಂಕಾಲ ಜಲಜಾಕ್ಷಿ ಮನೆಯ ಹಿಂಬದಿಯ ತುಳಸೀಕಟ್ಟೆಯಮೇಲೆ ಒಬ್ಬಳೇ ಕುಳಿತಿದ್ದಳು. ಮನೆಯಲ್ಲಿ ಯಾರೂ ಇರಲಿಲ್ಲ. ಶಾರದಾಬಾಯಿಯವರು ಏನೋ ಕಾರಣದಿಂದ ನೆರೆಮನೆಗೆ ಹೋಗಿದ್ದರು. ಮನೆಯಲ್ಲಿ ಒಬ್ಬಳೇ ಬೇಸರಬಂದುದರಿಂದ ಜಲಜಾಕ್ಷಿ ಕೋಣೆಯಲ್ಲಿಂದ ಎದ್ದುಹೋಗಿ ಹಿತ್ತಿಲಲ್ಲಿ ಕುಳಿತಿದ್ದಳು.

ಅಷ್ಟರಲ್ಲಿ ಮೋಹನ ಬಂದ.

"ಯಾಕೆ, ಇಷ್ಟು ಹೊತ್ತು ಎಲ್ಲಿ ಹೋಗಿದ್ದಿ?" ಎಂದು ಜಲಜಾಕ್ಷಿ ಸಹಜವಾಗಿಕೇಳಿದಳು.

"ಬೆಕ್ಕು ಕಣ್ಣು ಮುಚ್ಚಿ ಹಾಲು ಕುಡಿದರೂ ಅದು ಎರಡನೆಯವರಿಗೆ ತಿಳಿಯುತ್ತದೆಯಲ್ಲವೇ?" ಎಂದು ಬಿರುಸಾಗಿ ಕೇಳಿದ.

"ಏನು? ಹಾಗೇಕೆ ಕೇಳುತ್ತಿರುವಿ? ನಾನೇನೂ ನಿನ್ನನ್ನು ಬಿಟ್ಟು ತಿಂದಿಲ್ಲವಲ್ಲ!" ಜಲಜಾಕ್ಷಿ ತಿಳಿನಗು ವಿನೊಂದಿಗೆ ನುಡಿದಳು.

"ಜಲೀ, ಇದು ಚೇಷ್ಟೆಯಲ್ಲ. ನೀನು ಎಲ್ಲದಕ್ಕೂ ಹೀಗೆಯೇ. ಅದಕ್ಕಾಗಿಯೇ ನಾನು ಮೋಸಹೋದೆ."

ಜಲಜಾಕ್ಷಿ ತುಸು ಗಂಭೀರಳಾದಳು. "ಮೋಹನ ನಿನಗೆ ಏನು ಹೇಳಬೇಕಾಗಿದೆಯೋ. ಅದನ್ನು ಸ್ಪಷ್ಟವಾಗಿ ಹೇಳು. ಹೀಗೆ ನುಡಿದರೆ ನನಗೇನು ಅರ್ಥವಾಗಬೇಕು?"

"ಹೇಗೆ ಅರ್ಥವಾದೀತು? ಇನ್ನೂ ಚಿಕ್ಕ ಮಗು, ಪಾಪ! ಮೂರ್ತಿ ಚಿಕ್ಕದಾದರೂ ಕೃತಿ ಸಣ್ಣದಲ್ಲ."

"ಎಂಥ ಕೃತಿ"

"ಮೋಸಗೊಳಿಸುವದು. ಇನ್ನೊಬ್ಬರ ಭೋಳೆ ಸ್ವಭಾವದ ಲಾಭ ಪಡೆದುಕೊಂಡು ಅವರನ್ನು ಹಾಳು ಮಾಡುವದು. ಮತ್ತೆ ಇನ್ನೂ ಏನುಬೇಕು?"

"ನಿನಗೆ ಯಾರು ಮೋಸ ಮಾಡಿದರು?"

"ನೀನು, ನೀನು, ನೀನು! ನೀನು ನನ್ನನ್ನು ಠಕ್ಕಿಸಿದೆ!" ಧ್ವನಿಯಲ್ಲಿ ಕಠೋರತೆ ತುಂಬಿತ್ತು. ಜಲಜಾಕ್ಷಿ ಆ ಧ್ವನಿಗೆ ಒಮ್ಮೆಲೇನಡುಗಿದಳು.

"ನೀನು ನನ್ನನ್ನು ಠಕ್ಕಿಸಿದೆ. ಒಮ್ಮೆ ಏಕೆ ಸಾವಿರ ಸಲ ಹೇಳುತ್ತೇನೆ..."

ಜಲಜಾಕ್ಷಿ ತನ್ನೆರಡೂ ಕೈಗಳಿಂದ ಕಿವಿಗಳನ್ನು ಮುಚ್ಚಿಕೊಂಡಳು.

"ಮೇಲೆ ಈ ಸಭ್ಯತನವೇಕೆ?" ಎಂದು ನುಡಿದ ಮೋಹನ ಸರಕ್ಕನೆ ಅವಳು ಉಟ್ಟುಕೊಂಡಿದ್ದ ವಸ್ತ್ರವನ್ನು ತುಸು ಮೇಲೆತ್ತಿ ಅವಳ ಎರಡೂ ಕಾಲುಗಳನ್ನು ಪರೀಕ್ಷಿಸಿದನು.

ಅವಳ ಬಲಗಾಲಿನ ತೊಡೆಯಮೇಲೆ ಅವಳ ಕೋಮಲ ಗೌರವರ್ಣವನ್ನೂ ಧಿಕ್ಕರಿಸಿ ಬಿಳಿಯ ತೊನ್ನಿನ ಕಲೆ ಮಿಂಚುತ್ತಿತ್ತು.

ಇಬ್ಬರ ದೃಷ್ಟಿಗಳೂ ಕ್ಷಣಕಾಲ ಅಲ್ಲಿಯೇ ಕೇಂದ್ರೀಕೃತವಾದವು.

**ಲುಂಗಿಯ ಫಜೀತಿ!**



ಸೀರೆಯಂಥ ಲುಂಗಿಯನುಟ್ಟುಕೊಂಡು
ಬ್ಲ್ಯಾಜಪೀಸ–ಬುಶ್‌ಕೋಟ್ ಧರಿಸಿ
ಹೊಂಟ ಆಸಾಮಿಯ ಬೆಂಬತ್ತಿದ ಕುಳ
ಕೆಮ್ಮಿ ತು ಖ್ಯಾಕರಿಸಿ,–ಯಾವುದೊ
ಹುಡಿಗೆಯೆಂದೆ ಭ್ರಮಿಸಿ!

– ಎಂ. ಅಕಬರ ಅಲಿ

ಮೋಹನನ ಆಕ್ರೋಶದ ಕಾರಣ ಈಗ ಜಲಜಾಕ್ಷಿಗೆ ಗೊತ್ತಾಯಿತು. ಇಷ್ಟುವೇಳೆ ಏನು ಮಾತನಾಡಲಿಕ್ಕೂ ತಿಳಿಯದೆ ಕುಳಿತವಳು ಮೆಲ್ಲಗೆ ಕೇಳಿದಳು.

"ಹೌದು. ನಿನಗೆ ಇದು ಗೊತ್ತಿರಲಿಲ್ಲವೇ?" ಅವಳ ಧ್ವನಿಯಲ್ಲಿ ಅಚ್ಚರಿ, ಸೋಲು, ದುಃಖ ಎಲ್ಲವೂ ಬೆರೆತಿದ್ದವು.

"ಹೂಂ" ಎಂದು ತುಚ್ಛವಾಗಿ ಹೂಂಕರಿಸಿ, "ನನಗೆ ಗೊತ್ತಿರಲಿಲ್ಲವೇ?" ಎಂದು ಮೋಹನ ಪ್ರತಿ ನುಡಿದ.

ಕ್ಷಣಕಾಲ ತಡೆದು "ಈಗ ಹೇಗೆ ಗೊತ್ತಾಯಿತು? ಯಾರು ಹೇಳಿದರು?" ಜಲಜಾಕ್ಷಿ ಕೇಳಿದಳು.

"ಯಾರು ಬೇಕಾದವರು ಹೇಳಿದರು. ಅದು ನಿನಗೇಕೆ? ನೀನು ಬಚ್ಚಿಟ್ಟಿದ್ದೆಯಲ್ಲ!"

"ಮೋನ, ನಿನಗೆ ನಿಜವಾಗಿಯೂ ಗೊತ್ತಿರಲಿಲ್ಲವೇ?... ಹಾಗಾದರೆ...ನೀನು ಅರಿಯದೆ..." ಜಲಜಾಕ್ಷಿಗೆ ಮುಂದೆ ಮಾತು ಬರಲಿಲ್ಲ. ಇಷ್ಟು ಕಾಲ ತಡೆದುಕೊಂಡದುಃಖ ಉಕ್ಕಿಬಂತು. ಕಣ್ಣುಗಳು ನೀರಿನಿಂದತುಂಬಿದವು. ತನ್ನ ಮೊಣಕಾಲುಗಳಲ್ಲಿ ಮುಖವನ್ನು ಅಡಗಿಸಿಕೊಂಡಳು. ನೀರು ಕಣ್ಣಿನಿಂದ ಹರಿಯತೊಡಗಿತು.!

ಮೋಹನನಿಗೆ ಏನು ಮಾಡಲಿಕ್ಕೂ ತಿಳಿಯಲಿಲ್ಲ. ಆತನ ಮನಸ್ಸು ಸಂಪೂರ್ಣ ವ್ಯಗ್ರವಾಗಿ ಬಿಟ್ಟಿತ್ತು. ಇಷ್ಟುವೇಳೆ ಯಾವುದೊ ಆವೇಶದಿಂದ ಮಾತನಾಡಿದ್ದನೇನೋ ನಿಜ. ಆದರೆ ಜಲಜಾಕ್ಷಿಯ ಆಗಿನ ಸ್ಥಿತಿಯನ್ನು ಆತನಿಂದ ನೋಡಲಾಗಲಿಲ್ಲ. ಅಲ್ಲಿ ನಿಲ್ಲಲೂ ಆಗಲಿಲ್ಲ. ಏನು ಮಾತೂ ಬರಲಿಲ್ಲ. ಹಾಗೆಯೇ ವಿಷಣ್ಣವದನದಿಂದ ಹೊರಗೆ ನಡೆದು ಬಿಟ್ಟನು.

ಎದುರಿಗೆ ಬರುತ್ತಿದ್ದ ಅಜ್ಜಿ- ಆತನ ಮುಖವನ್ನು ಕಂಡು ತುಸು ಗಾಬರಿಗೊಂಡರು. "ಯಾಕೋ, ಏನಾಯಿತು?" ಎಂದು ಕೇಳಿದರು. ಆದರೆ ಮೋಹನ ಏನೂ ಉತ್ತರಹೇಳದೆ ಹಾಗೆಯೇ ದಾಟಿಹೋದನು.

ಶಾರದಾಬಾಯಿಯವರು ಹಿತ್ತಲಲ್ಲಿ ಬಂದರು. ಅಲ್ಲಿ ಜಲಜಾಕ್ಷಿ ಅಳುತ್ತ ಕುಳಿತ್ತಿದ್ದಾಳೆ. ಅವಳನ್ನು ನೋಡಿ ಅವರಿಗೆ ಅಚ್ಚರಿಯೇ ಆಯಿತು. ಗಾಬರಿಯಿಂದ ಅವಳ ಹತ್ತಿರ ಬಂದು ಕುಳಿತು,

"ಜಲಜಾ, ಏನಾಯ್ತು? ಯಾಕೆ ಅಳುತ್ತಿರುವಿ ಎಂದು ಅವಳ ತಲೆಯನ್ನು ಮೇಲಕ್ಕೆ ಎತ್ತುತ್ತ ಕೇಳಿದರು. ಜಲಜಾಕ್ಷಿ ಕಣ್ಣೀರನ್ನು ಒರಸಿಕೊಳ್ಳುತ್ತ,

"ಏನೂ ಇಲ್ಲ" ಎಂದಿಷ್ಟೇ ಹೇಳಿ, ಅಲ್ಲಿಂದ ಎದ್ದು ಮಾಮಾನ ಕೋಣೆಗೆಹೋಗಿ ಅಲ್ಲಿ ಕಾಟಿನ ಮೇಲೆ ಬಿದ್ದುಕೊಂಡಳು.

ಶಾರದಾಬಾಯಿಯವರಿಗೆ ಮೊಮ್ಮಗಳ ನಡತೆಯ ಅರ್ಥವೇ ಆಗಲಿಲ್ಲ. ಆದರ ಜೊತೆಗೆ ತುಸು ಬೇಸರವೂ ಬಂದಿತು. "ಏನು" ಎಂದು ಕೇಳಿದರೂ ಅವನೂ ಏನೂ ಹೇಳಲಿಲ್ಲ; ಇವಳೂ ಹೇಳುವುದಿಲ್ಲ–ಎಂದು ತಮ್ಮಷ್ಟಕ್ಕೇ ಅಂದುಕೊಂಡರು.

ರಾತ್ರಿ ಊಟಕ್ಕೆ ಕುಳಿತಾಗ ದಿನಾಲು ಹರಟೆ ಹೊಡೆಯುತ್ತ ಊಟವನ್ನೇ ಮರೆತುಬಿಡುತ್ತಿದ್ದ ಜಲಜಾಕ್ಷಿ ಇಂದು ಮೌನಧರಿಸಿದ್ದಳು. ಮೋಹನನೂ ಗಂಭೀರನಾಗಿಯೇ ಇದ್ದನು. ಶಾಮ ಮಾತ್ರ ಎಂದಿನಂತೆಯೇ ಇದ್ದ. ಆದರೂ ಆತನೊಬ್ಬನೇ ಎಷ್ಟು ಮಾತನಾಡುವನು? ಇದನ್ನು ಕಂಡು ನಾರಾಯಣರಾಯರು,

"ಯಾಕೆ ಜಲಜಾ, ಇಂದು ಅದೇಕೋ ಸಪ್ಪಗೆ ಇದ್ದೀ?" ಎಂದು ಕೇಳಿದರು.

ಜಲಜಾಕ್ಷಿ ಎಲೆಯಮೇಲೆ ಕುಳಿತಿದ್ದರೂ, ಊಟದ ಕಡೆಗೆ ಅವಳ ಗಮನವಿರಲಿಲ್ಲ. ಅನ್ನ ಎಲೆಯಲ್ಲಿ ಹಾಗೇ ಕುಳಿತಿತ್ತು. ಆದಲೂ ಅವಳು ಮಾವನ ಪ್ರಶ್ನೆಗೆ "ಏನೂ ಇಲ್ಲ" ಎಂದಿಷ್ಟೇ ಹೇಳಿದಳು.

"ಏನೋಪ್ಪ. ಇಂದು ಸಾಯಂಕಾಲದಿಂದ ಅವಳು ಮತ್ತು ಮೋಹನ ಇಬ್ಬರೂ ಹೀಗೆಯೇ ಇದ್ದಾರೆ..." ಎಂದು ಮಜ್ಜಿಗೆಬಡಿಸುತ್ತ ಶಾರದಾಬಾಯಿಯವರು ನುಡಿದರು.

ರಾಯರು ನಸುನಕ್ಕು "ಇನ್ನೂ ಚಿಕ್ಕ ಮಕ್ಕಳಂತೆ ಜಗಳವಾಡುತ್ತೀರೇನೊ? ನಾಳೆ ಹೇಗೆ?" ಎಂದರು.

× × ×

ಮುಂದೆ ಜಲಜಾಕ್ಷಿ ಏಳೆಂಟು ದಿನಗಳವರೆಗೆ ಸಾಂಗಲಿಯಲ್ಲಿ ಕಳೆದರೂ ಮೋಹನನಕೂಡ ಮಾತನಾಡುವ ಪ್ರಸಂಗವನ್ನೇ ತಪ್ಪಿಸಲು ಪ್ರಯತ್ನಿಸುತ್ತಿದ್ದಳು. ಆಗೆಲ್ಲ ಅವಳು ಖಿನ್ನಳಾಗಿಯೇ ಇದ್ದಳು. ಮಾವನಾನ ಜೊತೆಗೆ ಮಾತನಾಡುವಾಗ ಮಾತ್ರ ಕೃತಕ ಉಲ್ಲಾಸವನ್ನು ತೋರಿಸುತ್ತಿದ್ದಳು. ಅವಳು ಮೊದಲಿನಂತಿಲ್ಲ ಎಂಬುದನ್ನು ರಾಯರೂ ಗುರುತಿಸಿದರು. ಆದರೆ ಅದರ ಕಾರಣ ತಿಳಿಯಲಿಲ್ಲ. ಒಂದೆರಡು ಸಲ "ಜಲಜಾ, ನಿನಗೇನಾಗಿದೆ? ನನ್ನ ಮುಂದೆ ಹೇಳಬಾರದೇ?" ಎಂದು ಕೇಳಿದ್ದರು. ಆದರೆ ಅವಳು "ಏನೂ ಆಗಿಯೇ ಇಲ್ಲ. ಅಂದ ಮೇಲೆ ಏನೆಂದು ಹೇಳಲಿ?" ಎಂದು ಉತ್ತರಿಸಿದ್ದಳು.

ಮೋಹನನ ಮನಃಸ್ಥಿತಿಯೂ ವಿಚಿತ್ರವಾಗಿದ್ದಿತು. ಅಂದು ಧೋಂಡೋಪಂತಮಾಮಾ ತನಗೆ ಜಲಜಾಕ್ಷಿಯ ಲ್ಯುಕೋಡರ್ಮಾದ ಬಗ್ಗೆ ಬಹು ಸೂಚ್ಯವಾಗಿ ತಿಳಿಸಿದ್ದರು. ನಾರಾಯಣರಾಯರ ಮನೆಯಡಾಕ್ಟರರಾದ ಡಾ.

ಹುರಾಳೆ ಅವರೇ ಏನೋ ಮಾತುಬಂದು ಜಲಜಾಕ್ಷಿಯ ವಿಚಾರ ತಿಳಿಸಿದ್ದರೆಂದು ಧೋಂಡೋಪಂತರು ಹೇಳಿದ್ದರೂ, ಮೊದಲು ಅವನು ಅದನ್ನು ನಂಬಲೇಇಲ್ಲ. ಈಗ ಧೋಂಡೋಪಂತಮಾಮಾನ ಬಗ್ಗೆ ಅವನಿಗೆ ಒಳ್ಳೆಯ ಅಭಿಪ್ರಾಯವೇನೂ ಉಳಿದಿಲ್ಲವಾದರೂ ಜಲಜಾಕ್ಷಿ ತನ್ನನ್ನೇಕೆ ಹೀಗೆ ಮೋಸಗೊಳಿಸಿದಳೆಂದು ಅವನು ಕೇಳಿಕೊಳ್ಳುವನು.

ಇದು ನಾನಣ್ಣನಿಗಾದರೂ ಗೊತ್ತಿದೆಯೆ? ಗೊತ್ತಿಲ್ಲದೆ ಹೇಗೆ? ಅವರೇ ಡಾಕ್ಟರರ ಮುಂದೆ ಹೇಳುವಂತೆ. ಹಾಗಿದ್ದರೆ...ಹಾಗಿದ್ದರೆ ಅವರೇಕೆ ತನಗೆ ಹೇಳಲಿಲ್ಲ?-ಎಂಬ ವಿಚಾರ ಮೋಹನನಿಗೆ ಬಗೆಹರಿಯಲಿಲ್ಲ.

ಅಂತೂ ಎಳೆಂಟುದಿನಗಳು ಹೇಗೋ ಕಳೆದು ಹೋದವು. ಕ್ರಿಸ್‌ಮಸ್‌ರಜೆ ಮುಗಿಯಿತು. ಈ ಸಲ ಮ್ಯಾಟ್ರಿಕ್ ಪರೀಕ್ಷೆ. ಸೂಟಿ ಮುಗಿದ ಕೂಡಲೇ ಬಂದು ಬಿಡು ಎಂದು ವೆಂಕಣ್ಣ ಮಗಳಿಗೆ ಮೊದಲೇ ಹೇಳಿ ಕಳಿಸಿದ್ದರು. ಅಲ್ಲದೆ ಬೇಗ ಬಂದುಬಿಡು ಎಂಬ ಪತ್ರವೂ ಬಂದಿತು. ಜಲಜಾಕ್ಷಿಗೆ ಅದು ಗುಪ್ತ ವರದಾನವಾಗಿ ಕಂಡಿತು. ಬೆಳಗಾವಿಗೆ ಹೊರಡಲು ಅವಳಿಗೆ ಹೆಚ್ಚಿಗೆ ಕಾರಣ ಬೇಕೆನಿಸಲಿಲ್ಲ.

"ಶಾಲೆ ಆರಂಭವಾದರೇನಾಯಿತು? ಇನ್ನೆರಡು ದಿನ ತಡೆದು ಹೋಗು" ಎಂದು ನಾನಣ್ಣ ಮಾಮಾಹೇಳಿದರೂ, ಕೇಳದೆ ಅವಳು ಬೆಳಗಾವಿಗೆ ಹೊರಟುಬಿಟ್ಟಳು

- ೧೨ -

ಬೆಳಗಾವಿಗೆ ಬಂದ ನಂತರ ಜಲಜಾಕ್ಷಿಯ ಮನಃಸ್ಥಿತಿಯೂ ವಿಚಿತ್ರವಾಗಿದ್ದಿತು. ಅವಳು ಹೆಚ್ಚಾಗಿ ಮೌನವಾಗಿಯೇ ಇರುತ್ತಿದ್ದಳು. ಉದಾಸೀನತೆ ಅವಳನ್ನು ಆವರಿಸಿಬಿಟ್ಟಿತ್ತು.ಒಬ್ಬಳೇ ಇದ್ದಾಗಲೆಲ್ಲ ಅವಳು ಹಿತ್ತಲಿನಲ್ಲಿ ಕಟ್ಟೆಯ ಮೇಲೆ ಕುಳಿತುಕೊಂಡಿರುತ್ತಿದ್ದಳು. ಆಗ ತನ್ನ ಬಾಲ್ಯದ ಅದೆಷ್ಟೋ ನೆನಹುಗಳು ಬಂದು ಅವಳ ಮನಕ್ಕೆ ಕೆಲಸಲ ಆನಂದವಾದರೆ, ಅನೇಕ ಸಲದುಃಖವೂ ಆಗುತ್ತಿತ್ತು. ಆಗ ಅಳಿದುಹೋದ ತಾಯಿ ಪದ್ದಕ್ಕನ ನೆನಪು ಕಾಡುತ್ತಿತ್ತು. "ತನ್ನ ತಾಯಿ ಇದ್ದರೆ ಈಗ ಹೀಗಾಗುತ್ತಿತ್ತೇ?"...ಎಂದು ಅವಳ ಕರುಳು ಯೋಚಿಸುತ್ತಿತ್ತು.

"ಸಾಂಗಲಿಯಿಂದ ಬಂದಾಗಿನಿಂದ ಅದೇಕೋ ಸಪ್ಪೆಯಾಗಿದ್ದಾಳೆ" ಎಂದುಕೊಂಡಳು ಚಂಪಕ್ಕ. ಗೌರತ್ತೆ ಮಾತ್ರ ಒಂದೆರಡು ಸಲ "ಯಾಕೆ ಜಲಜಾ, ಮೈಯಲ್ಲಿ ಆರಾಮವಿಲ್ಲವೇನು?" ಎಂದು ಕೇಳಿದ್ದರು. ನಿಜವಾಗಿಯೂ ಜಲಜಾಕ್ಷಿ ತನ್ನ ಮನದ ದುಗುಡವನ್ನು ಯಾರ ಮುಂದೆಯಾದರೂ ಹೇಳುವಂತಿದ್ದರೆ ಅದು ಗೌರತ್ತೆಯ ಮುಂದೆ ಮಾತ್ರ. ಗೌರತ್ತೆಗೆ ಅದನ್ನು ಕೇಳುವಮನವೂ ಇದೆ, ಕೇಳಿ ಕನಿಕರಪಡುವ ಹೃದಯವೂ ಇದೆ. ಆದರೂ ಜಲಜಾಕ್ಷಿ ಅವರಮುಂದೆ ಕೂಡ ಹೇಳಬಯಸಲಿಲ್ಲ. ಅವರಮನಕ್ಕೂ ಯಾಕೆ ನೋವನ್ನುಂಟುಮಾಡಬೇಕು? ಎಂದು ಅವಳ ವಿಚಾರ. ಅದಕ್ಕೆ ಅವಳು "ಏನೂ ಇಲ್ಲ. ಚೆನ್ನಾಗಿಯೇ ಇದ್ದೇನೆ" ಎಂದು ಹೇಳಿ ಪ್ರಯತ್ನಪೂರ್ವಕವಾಗಿ ನಕ್ಕಿದ್ದಳು ಮಾತ್ರ!

ಇನ್ನು ವೆಂಕಣ್ಣನಿಗಂತೂ ಅದೆಲ್ಲವನ್ನು ಗಮನಿಸಲಿಕ್ಕೆ ಬಿಡುವೇಇಲ್ಲ. ಇತ್ತೀಚೆ ಅವನು ಮನೆಯಲ್ಲಿರುವುದೇ ಅಪರೂಪವಾಗಿತ್ತು. ಅವನ ಇಪ್ಪತ್ತುವರ್ಷಗಳ ಅವ್ಯಾಹತವಾದ ಪ್ರಾಮಾಣಿಕ ಕೆಲಸವನ್ನು ಮೆಚ್ಚಿ ಶಾಲೆಯಆಡಳಿತ ವರ್ಗದವರು ಅವನಿಗೆ ಉಪಮುಖ್ಯಾಧ್ಯಾಪಕನ ಹುದ್ದೆಯನ್ನು ಕೊಡಮಾಡಿದ್ದರು.

## ಶಿಕ್ಷಣ—ರಾಜಕೀಯ!




ಶಿಕ್ಷಣರಂಗಕೆ ರಾಜಕೀಯ ಹೊಲೆ
ಸಲ್ಲದೆಂಬ ಶಿಕ್ಷಣದ ಕಲಿ
ಅದರ ಗತ್ತುಗಾರಿಕೆಯನೆ ಬಳಸಿದ
ಮಡಿ(Muddy)ನಂತಿಕೆ
ಕಾಯುವಲಿ,-ಬೇಯಿಸಿ
ಕೊಳ್ಳಲಿಕ್ಕೆ ತನ್ನಯ ಬ್ಯಾಳಿ!

— ಎಂ ಅಕಬರ ಅಲಿ

ಆದರಿಂದ ಅವನ ಹೊಣೆಗಾರಿಕೆಯೂ ಹೆಚ್ಚಿತ್ತು. ದಿನದ ಬಹುವೇಳೆಯನ್ನು ವೆಂಕಣ್ಣಮಾಸ್ತರು ಶಾಲೆಯಲ್ಲಿಯೇ ಕಳೆಯಬೇಕಾಗುತ್ತಿತ್ತು.

ಜಲಜಾಕ್ಷಿ ಸಾಂಗಲಿಯಿಂದ ಬಂದ ನಂತರ ಒಂದೂ ಪತ್ರವನ್ನೇ ಬರೆದಿರಲಿಲ್ಲ ಬರೆಯಬೇಕೆಂದು ಎರಡೆರಡು ಸಲ ಅಂದುಕೊಂಡರೂ ಬರೆದಿರಲಿಲ್ಲ. ಮುಂದೆ ಹತ್ತು-ಹನ್ನೆರಡು ದಿನಗಳ ನಂತರ ನಾನಣ್ಣಮಾಮಾನಿಂದ ಅವಳಿಗೇ ಒಂದು ಪತ್ರ ಬಂದಿತು.

ನನ್ನ ಮುದ್ದು ಜಲಜಾ,

ನೀನು ಇಲ್ಲಿಂದ ಹೋದ ಮೇಲೆ ಒಂದಾದರೂ ಪತ್ರವನ್ನು ಬರೆಯಬಾರದೇ? ನೀನು ಯಾಕೆ ಬರೆಯಲಿಲ್ಲವೆಂಬುದು ನನಗೆ ಈಗತಿಳಿಯಿತು. ಈಗ ನನ್ನ ಸ್ಥಿತಿ ಹೇಗಾಗಿರಬಹುದೆಂಬುದನ್ನು ನೀನೇ ವಿಚಾರಿಸು. ಕೂಡಲೇ ಹೊರಟು ಬಂದುಬಿಡಲೇ ಎಂದೆನಿಸುತ್ತಿದೆ. ಆದರೂ ಬರಲಾರದವನಾಗಿದ್ದೇನೆ.

ಆ ಮೂರ್ಖ ಧೋಂಡೋಪಂತನ ಮಾತು ಕೇಳಿ ಈ ಹುಚ್ಚ ಮೋನ್ಯಾ ಏನೂ ವಿಚಾರಮಾಡದೆ ತಲೆ ಕೆಡಿಸಿಕೊಂಡ. ನಿನ್ನ ಕೋಮಲಹೃದಯ ಎಷ್ಟು ವ್ಯಥೆಪಟ್ಟಿರಬಹುದೆಂದು ನಾನು ಊಹಿಸಬಲ್ಲೆ. ಎಲ್ಲ ದುಃಖವನ್ನೂ ನಿನ್ನ ಹೃದಯದಲ್ಲಿಯೇ ಅಡಗಿಸಿಕೊಂಡುಬಿಟ್ಟೆ. ಹುಚ್ಚು ಹುಡುಗಿ, ನನ್ನ ಮುಂದೂ ಹೇಳಬಾರದೇ?

ಜಲಜಾ, ನಿನ್ನ ಪದ್ದಕ್ಕ ತನ್ನ ಅಂತ್ಯಕಾಲಕ್ಕೆ ನನ್ನ ಕಡೆಯಿಂದ ವಚನ ತೆಗೆದುಕೊಂಡಿದ್ದಳು. ಏನೆಂದು ಗೊತ್ತೇ? 'ನಾನಣ್ಣಾ, ನನ್ನ ಜಲೀದು ಎಲ್ಲಾ ನಿನ್ನನ್ನೇ ಕೂಡಿದೆ' ಎಂದು. ಅದು ನಿನಗೆ ಗೊತ್ತಿರಲಿಕ್ಕಿಲ್ಲ. ಆದರೆ ಅವಳ ಆ ಅಶ್ರುಪೂರಿತನೇತ್ರಗಳು ಈಗಲೂ ನನ್ನ ಕಣ್ಣಮುಂದೆ ಕಟ್ಟಿವೆ. ನಾನೆಂದಿಗೂ ಅವಳನ್ನು ಮರೆಯಲಾರೆ. ಅವಳ ಮಾತನ್ನೂ ಮರೆಯಲಾರೆ! ಜಲಜಾ, ನಾನಿರುವವರೆಗೆ ನೀನು ಯಾವುದಕ್ಕೂ ಯೋಚಿಸಬೇಡ. ನಾನು ಎಲ್ಲವನ್ನೂ ಸರಿಪಡಿಸುತ್ತೇನೆ. ನೀನು ಯಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳಬೇಡ. ಎಲ್ಲವೂ ಒಳಿತಾಗುವುದು.

ನಿನ್ನ
ಮಾಮಾ"

ಪತ್ರವನ್ನು ಓದುತ್ತಿರುವಾಗ ಜಲಜಾಕ್ಷಿ ಬೆಳಗಾವಿಯಲ್ಲಿರಲಿಲ್ಲ. ಅವಳ ಮನವೆಲ್ಲ ಸಾಂಗಲಿಯಲ್ಲಿ ನಾನಣ್ಣ ಮಾಮಾನ ಸುತ್ತ ತಿರುಗುತ್ತಿತ್ತು. ಮಾಮಾನ ವಾತ್ಸಲ್ಯವನ್ನು ಕಂಡು ಅವಳ ಹೃದಯ ಮಿಡುಕಿತು. ಜಲಜಾಕ್ಷಿ ಪತ್ರವನ್ನು ಮತ್ತೆ ಮತ್ತೆ ಓದಿದಳು. ಓದಿದಂತೆ ಅವಳ ದುಗುಡವೆಲ್ಲ ಕಣ್ಣೀರಾಗಿ ಹರಿದು ಹೃದಯವು ಹಗುರಾದಂತೆ ಅನ್ನಿಸಿತು.

ಮರುದಿನ ಸಂಕ್ರಮಣದ ಮೊದಲ ದಿನ. ಭೋಗಿಯ ಹಬ್ಬ. ಮದುವೆಯಾಗಿ ಹೋಗಿದ್ದ ನೆರಮನೆ ಕುಸುಮಾ ಸಂಕ್ರಮಣದ ಹಬ್ಬಕ್ಕಾಗಿ ತವರುಮನೆಗೆ ಬಂದಿದ್ದಳು. ಅಂದು ಅವಳು ಎರೆದುಕೊಂಡು ಹೊಸ ಸೀರೆ ಉಟ್ಟುಕೊಂಡು ಜಲಜಾಕ್ಷಿಯನ್ನು ಗುಡಿಗೆ ಹೋಗುವುದಕ್ಕಾಗಿ ಕರೆಯಲಿಕ್ಕೆ ಬಂದಳು. ಜಲಜಾಕ್ಷಿಯೂ ಎರೆದುಕೊಂಡಿದ್ದಳು. ಹೊಸ ಸೀರೆಯನ್ನೂ ಉಟ್ಟುಕೊಂಡಿದ್ದಳು. ಆದರೂ ಅವಳ ಮುಖದಲ್ಲಿ ಕಾಂತಿ ಮಾತ್ರ ಇರಲಿಲ್ಲ. ಅಲ್ಲಿ ಒಂದುರೀತಿಯ ದುಗುಡ ಆವರಿಸಿದಂತೆ ಕುಸುಮಾಗೆ ಭಾಸವಾಯಿತು. ಮನೆಯಲ್ಲಿ ಮಲತಾಯಿಯ ಸಂಗಡ ಏನಾದರೂ ಮನಸ್ತಾಪವಾಗಿರಬಹುದು ಎಂದು ಅವಳು ಊಹಿಸಿದಳು.

ದೇವರ ಗುಡಿಯಲ್ಲಿ ಕುಳಿತುಕೊಂಡಾಗ ಕುಸುಮಾ'

"ಜಲಜಾ, ಮುಖ ಏಕೋ ಬಾಡಿದೆಯಲ್ಲ? ಚಂಪಕ್ಕನವರು ಏನಾದರೂ ಅಂದರೇನು?"

"ಛೇ. ಇಲ್ಲ, ಪಾಪ, ಅವರೇನೂ ಅಂದಿಲ್ಲ"

"ಮತ್ತೆ ಹೀಗೇಕೆ ಇರುವಿ?"?

"ಹೇಗೆ? ಇರುವಂತೆಯೇ ಇದ್ದೇನೆ?."

"ಇಲ್ಲ. ನೀನು ಮೊದಲಿನಂತೆ ಇಲ್ಲ. ನಿನಗೇನಾಗಿದೆ? ಹೇಳುವುದಿಲ್ಲವೇ?" ಕಳಕಳಿಯಿಂದ ಕೇಳಿದಳು.

ಜಲಜಾಕ್ಷಿ ಕಣ್ಣೆತ್ತಿ ಗೆಳತಿಯನ್ನೊಮ್ಮೆ ನೋಡಿದಳು. ಮೊದಲಿನಿಂದಲೂ ತನ್ನ ಹೃದಯವನ್ನು ಅರಿತ ಅಪ್ತಸ್ನೇಹಿತೆ. ಅವಳಿಗೆ ಗೊತ್ತಿಲ್ಲದುದು ಯಾವುದೂ ಇರಲಿಲ್ಲ. ಜಲಜಾಕ್ಷಿ ಎಲ್ಲವನ್ನೂ ಅವಳ ಮುಂದೆ ಹೇಳುತ್ತ ಬಂದಿದ್ದಳು. ಅಂಥ ಕುಸುಮಾ ಈಗ "ನನ್ನ ಮುಂದೆ ಹೇಳುವುದಿಲ್ಲವೇ?" ಎಂದು ತನ್ನನ್ನು ಕೇಳುತ್ತಿದ್ದಾಳೆ.

"ಕುಸುಮಾ !"

ಕುಸುಮೆ ಅವಳ ಕೈಗಳೆರಡನ್ನೂ ತನ್ನ ಕೈಯಲ್ಲಿ ತೆಗೆದುಕೊಂಡು "ಜಲಜಾ, ನನ್ನ ಮುಂದೆ ಹೇಳದಂಥದ್ದಿದೆಯೆ?" ಎಂದಳು. ಅವಳ ಧ್ವನಿಯಲ್ಲಿ ಕಾತರವಿತ್ತು. ಸಹಾನುಭೂತಿಯಿತ್ತು.

"ಕುಸುಮಾ, ನಿನಗೆ ಎಲ್ಲವೂ ಗೊತ್ತೇ ಇದೆ...." ಎಂದು ಆರಂಭಿಸಿ ಜಲಜಾಕ್ಷಿ ತನ್ನ ರೋಗದ ವಿಷಯ ಮೋಹನನಿಗೆ ತಿಳಿದು ಆತ ಅಂದು ವರ್ತಿಸಿದ ರೀತಿಯನ್ನು ಸಂಕ್ಷಿಪ್ತವಾಗಿ ವಿವರಿಸಿ, ಪತ್ರಲಲ್ಲಿ ಹುದುಗಿ

ಇಟ್ಟುಕೊಂಡಿದ್ದ ಸಾವಣ್ಣಮಾಮಾನ ಪತ್ರವನ್ನು ಅವಳಿಗೆ ಓದಲು ಕೊಟ್ಟಳು,

"ಇದೇನು? ಮೋಹನ ಬರೆದಿರುವನೇ?" ಕುಸುಮಾ ಕೇಳಿದಳು,

"ಇಲ್ಲ. ಮಾಮಾಬರೆದಿದ್ದಾನೆ. ನಿನ್ನೆ ಬಂತು."

ಕುಸುಮಾ ಪತ್ರವನ್ನು ಮನದಲ್ಲಿಯೇ ಓದಿದಳು. ಓದಿ ಮುಗಿಸಿದಾಗ ಅವಳಿಗೆ ಕೂಡ ಕರುಳು ಕೊರೆಯಿತು. ಮುಖವೆತ್ತಿ ಜಲಜಾಕ್ಷಿಯ ಕಡೆ ನೋಡಿದಳು, ಅವಳ ಕಣ್ಣು ತೇವವಾಗಿದ್ದುವು,

"ಜಲಜಾ, ನಿನ್ನ ಮಾಮಾ ನಿನ್ನ ದೊಡ್ಡ ಭಾಗ್ಯನಿಧಿ" " ಎಂದಳು.

ಜಲಜಾಕ್ಷಿಯ ಕಣ್ಣುಗಳಿಂದ ನೀರು ಹರಿದವು.

"ಅಳಬೇಡ ಜಲಜಾ, ಎಲ್ಲವೂ ಒ... ...ವುದು' ಎಂದು ಕುಸುಮಾ ಸಮಾಧಾನ ಹೇಳಿದಳು,

-೧೩-

ಜಲಜಾಕ್ಷಿ ಪ್ರತಿ ಹ... ...ದಿನಗಳಿಗೊಮ್ಮೆ ಮಾಮಾಗೆ ಪತ್ರಬರೆಯುತ್ತಿದ್ದಳು, ಪ್ರತಿಯೊಂದರಲ್ಲಿಯೂ "ನಾನು ಚೆನ್ನಾಗಿದ್ದೇನೆ. ನನ್ನ ಸಲುವಾಗಿ ಚಿಂತಿಸಬೇಡ" ಎಂದೇ ಬರೆಯುತ್ತಿದ್ದಳು. ಅವರಿಂದಲೂ ಆಗಾಗ ಪತ್ರಗಳು ಬರುತ್ತಿದ್ದವು.

ಮಾರ್ಚತಿಂಗಳಲ್ಲಿ ಅವಳ ಮ್ಯಾಟ್ರಿಕ್ ಪರೀಕ್ಷೆ ಮುಗಿಯಿತು. ಪಾಸಾಗಬಹುದೆಂದು ಅವಳು ಎಣಿಸಿದ್ದಳು. ಪೇಪರುಗಳು ಸಾಧಾರಣ ಚೆನ್ನಾಗಿಯೇ ಆಗಿದ್ದವು. ಪರಿಣಾಮ ಜೂನ ತಿಂಗಳಲ್ಲಿ ತಿಳಿಯಲಿದ್ದಿತು. ಮುಂದೆ ಕಾಲೇಜಿಗೆ ಹೋಗಬೇಕೆಂದು ಅವಳಿಗೂ ಆಸೆ. ವೆಂಕಣ್ಣನೂ ಕಳಿಸಲು ಸಿದ್ಧನಿದ್ದನು.

ಪರೀಕ್ಷೆ ಮುಗಿದಮೇಲೆ ಪ್ರತಿ ಸಲದಂತೆ ಈ ವರ್ಷ ಜಲಜಾಕ್ಷಿ ಸಾಂಗಲಿಗೆ ಹೋಗಲಿಲ್ಲ. ಶಾಮು ಪತ್ರವನ್ನೂ ಬರೆದಿದ್ದ. "ಪರೀಕ್ಷೆ ಮುಗಿದ ಕೂಡಲೇ ನೀನು ಯಾಕೆ ಸಾಂಗಲಿಗೆ ಬರಲಿಲ್ಲ? ಕೂಡಲೇ ಹೊರಟು ಬಾ. ನಿನ್ನ ಭೆಟ್ಟಿಯಾಗಿ ಬಹಳ ದಿನಗಳಾದುವು" ಎಂದು ತಕರಾರು ಮಾಡಿದ್ದ. ಅದಕ್ಕೆ ಜಲಜಾಕ್ಷಿಯು "ಹೌದು, ನಿನಗೆ ನನ್ನನ್ನು ನೋಡಬೇಕೆನ್ನಿಸಿದರೆ ನೀನೇ ಒಂದು ಸಲ ಬಂದು



ಹೋಗು. ನೀನು ಒಮ್ಮೆಯೂ ಬೆಳಗಾವಿಗೆ ಬರಬಾರದೆಂದು ಇದೆಯೇನು?" ಎಂದು ಉತ್ತರ ಬರೆದಿದ್ದಳು,

ಆ ದಿವಸ ಮಧ್ಯಾಹ್ನ ಜಲಜಾಕ್ಷಿ ಯಾವುದೋ ಕಾದಂಬರಿಯನ್ನು ಓದುತ್ತಾ ಕುಳಿತವಳು ಹಾಗೇ ನಿದ್ರೆ ಹೋಗಿದ್ದಳು. ಅಷ್ಟರಲ್ಲಿ ಗೌರತ್ತೆಯವರು ಅಲ್ಲಿಗೆ ಬಂದು ಅವಳನ್ನು ಎಬ್ಬಿಸಿ,

"ಜಲಜಾ, ಸಾಂಗಲಿಯಿಂದ ಪತ್ರ ಬಂದಿದೆಯಂತೆ ನೋಡು" ಎಂದರು,

"ಯಾರಿಗೆ? ಏನೆಂದು?"

"ನಿಮ್ಮ ಮಾಮಾನಿಗೆ ಜಡ್ಡಾಗಿದೆಯಂತೆ. ನಿನ್ನನ್ನು ಕೂಡಲೇ ಕಳಿಸು ಎಂದು ಬರೆದಿದ್ದಾರಂತೆ."

"ಆಂ? ಮಾಮಾನಿಗ ಅಜಾರಿಯೆ?"

"ಹೂಂ, ಮೋಹನನೇ ಬರೆದಿರುವನಂತೆ. ಇಲ್ಲಿದೆ ನೋಡು ಪತ್ರ. ವೆಂಕಣ್ಣ ಇದೀಗ ಕೊಟ್ಟು ಶಾಲೆಗೆ ಹೋದ. ನಿನ್ನನ್ನು ಸಾಂಗಲಿಗೆ ಕಳಿಸಿಕೊಡು ಎಂದೂ ಹೇಳಿ ಹೋದ" ಎಂದರು.

ಜಲಜಾಕ್ಷಿ ಏನೂ ಮಾತನಾಡುವ ಸ್ಥಿತಿಯಲ್ಲಿರಲಿಲ್ಲ

ಮೋಹನ ತನ್ನನ್ನು ಕಳಿಸಿ ಕೊಡಿರಿ ಎಂದು ಯಾಕೆ ಬರೆಯಬೇಕು? ತನಗೆ ಬರೆಯದೆ ತಂದೆಗೆ ಯಾಕೆ ಬರೆದ? ನನಗೆ ಬರೆದರೆ ನಾನು ಹೋಗಲಿಕ್ಕಿಲ್ಲವೆಂದು ಭಾವಿಸಿದನೇ?.. ಅವಳಿಗೆ ಯಾವುದೂ ತಿಳಿಯಲಿಲ್ಲ. ಏನೇ ಆದರೂ ಹೋಗಿಬರಬೇಕು ಎಂದು ಅವಳು ಬಯಸಿದಳು.

ಮರುದಿನ ಮುಂಜಾನೆ ಗಾಡಿಯಿಂದ ಹೊರಟು ಸಾಂಗಲಿಯನ್ನು ಸೇರಿದಳು. ಗಾಡಿಯಿಂದ ಇಳಿಯುತ್ತಿರುವಂತೆಯೇ ನಿಲ್ದಾಣದಲ್ಲಿ ಮೋಹನನನ್ನು ಕಂಡಳು. ಅವಳು ಇದೇ ಗಾಡಿಗೆ ಬರಬಹುದೆಂದು ಆತ ಊಹಿಸಿ ನಿಲ್ದಾಣಕ್ಕೆ ಬಂದಿದ್ದ. ಅವನನ್ನು ಕಂಡಕೂಡಲೇ ಏನು ಮಾತನಾಡಬೇಕೆಂದು ಅವಳಿಗೆ ತಿಳಿಯಲಿಲ್ಲ. ಮೋಹನನಿಗೂ ಅಷ್ಟೇ. ಆತನ ಮುಖ ಮಾತ್ರ ನಿಸ್ತೇಜವಾಗಿತ್ತು. ಒಂದು ನಿಮಿಷ ಇಬ್ಬರೂ ಏನೂ ಮಾತನಾಡಲಿಲ್ಲ. ಕೊನೆಗೆ ಜಲಜಾಕ್ಷಿಯೇ,

"ಮಾವನಿಗೆ ಏನಾಗಿದೆ? ಈಗ ಹೇಗಿದೆ?" ಎಂದು ಕೇಳಿದಳು.

"ಈಗ ಸೆಟ್ಟಾಗಿದ್ದಾನೆ" ಮೋಹನ ಚುಟುಕಿನಲ್ಲಿ ಉತ್ತರಿಸಿದ.

ಹೆಚ್ಚಿಗೆ ಮಾತು ಆಡದೆ ಇಬ್ಬರೂ ಮನೆ ಸೇರಿದರು.

ಜಲಜಾಕ್ಷಿ ನೇರವಾಗಿ ಮಾವನ ಕೋಣೆಗೇ ಹೋದಳು. ಅವರು ಕಾಟಿನ ಮೇಲೆ ಒರಗಿಕೊಂಡಿದ್ದರು. "ಮಾಮಾ" ಎನ್ನುತ್ತಾ ಜಲಜಾಕ್ಷಿ ಅವರತ್ತ ಧಾವಿಸಿದಳು.

ಜಲಜಾಕ್ಷಿಯನ್ನು ಕಾಣುತ್ತಲೇ ಅವರಮುಖ ಅಗಲವಾಯಿತು. "ಜಲಜಾ, ಬಂದೆಯಾ?" ಎನ್ನುತ್ತ ಎದ್ದು ಕುಳಿತರು.

ಇಬ್ಬರ ಹೃದಯಗಳೂ ತುಂಬಿ ಬಂದವು.

ನಾರಾಯಣರಾಯರಿಗೆ ಗಾಬರಿಯಾಗುವಂಥ ಜಡ್ಡೇನೂ ಆಗಿರಲಿಲ್ಲ. ಏನೋ ತುಸು ಕೆಮ್ಮು–ಜ್ವರ. ಆದರೂ ಜಲಜಾಕ್ಷಿಯನ್ನು ಕಾಣಬೇಕೆಂದು, ಸಾಂಗಲಿಗೆ ಕರೆಸಬೇಕೆಂದೂ ಅವರು ಮೋಹನನಿಂದ ಹಾಗೆ ಪತ್ರ ಬರೆಯಿಸಿದ್ದರು.

ಜಲಜಾಕ್ಷಿಯು ಬೆನ್ನ ಮೇಲೆ ಕೈಯಾಡಿಸುತ್ತ ರಾಯರು "ಎಷ್ಟು ಸೊರಗಿಬಿಟ್ಟಿದ್ದೀಯೇ ಜಲಜಾ" ಎಂದರು.

ಮರುದಿನದಿಂದ ರಾಯರ ಬಾಟಲಿಯ ಜೊತೆಗೆ ಔಷಧಕ್ಕಾಗಿ ಜಲಜಾಕ್ಷಿಯ ಬಾಟಲಿಯೂ ಡಾಕ್ಟರರ ಕಡೆಗೆ ಹೋಯಿತು.

× × ×

ಮೋಹನನ ಸ್ಥಿತಿ ಬಹಳೇ ವಿಚಿತ್ರವಾಗಿದ್ದಿತು. ಅದರಲ್ಲಿಯೂ ಜಲಜಾಕ್ಷಿ ಸಾಂಗಲಿಗೆ ಬಂದ ನಂತರ ಅವನ ಮನಸ್ಸಿಗೆ ನೆಮ್ಮದಿಯೇ ಉಳಿಯಲಿಲ್ಲ. ಯಾವಾಗಲೂ ಯೋಚನೆಯೇ ಯೋಚನೆ. ಜಲಜಾಕ್ಷಿಯ ಬಗ್ಗೆ ಇದ್ದ ಅವನ ಆಕರ್ಷಣೆ ಕಡಿಮೆಯೇನೂ ಆಗಿರಲಿಲ್ಲ. ಅವಳ ಸೌಂದರ್ಯಕ್ಕಿಂತ ಅವಳ ಸ್ನೇಹ ಅವನನ್ನು ಬಂಧಿಸುತ್ತಿತ್ತು. ತಂದೆಯ ಆಶಯವೂ ಅದೇ ಎಂದು ಅವನಿಗೆ ಎಂದೋ ತಿಳಿದಿತ್ತು. ಆದರೂ ಅವಳ ಲ್ಯೂಕೋಡರ್ಮಾ ಅಡ್ಡ ಬರುತ್ತಿತ್ತು.

ಈಗ ಜಲಜಾಕ್ಷಿಯ ತೊನ್ನಿನ ವಿಷಯ ಎಲ್ಲರಿಗೂ ತಿಳಿದಿತ್ತು. ಶಾರದಜ್ಜಿಗೂ ಅದೊಂದು ಸಮಸ್ಯೆಯೇ ಆಗಿಬಿಟ್ಟಿತ್ತು. ಜಲಜಾಕ್ಷಿಗಾಗಿ ಅವರ ಕರುಳು ಕೊರೆಯುತ್ತಿತ್ತು. ಸ್ವತಃ ಮಗಳ ಮಗಳು, ಅವಳ ಜೀವನ



## ಅದೆಷ್ಟು ಕಾಲ!

ಈ ನಾಚಿಕೆ, ಈ ಲಜ್ಜೆ
ಇನ್ನೂ ಅದೆಷ್ಟು ಕಾಲ ಗೆಳತಿ!
ಬೇರಿಲ್ಲದಿಪ್ಪಂತೆ
ನನ್ನೊಳಗೇ ಒಂದಾಗುವುದೆಂದು?

—ಸಂಚಾಕ್ಷರಿ ಹಿರೇಮಠ

ಹೀಗಾದುದನ್ನು ನೆನೆದಾಗ ಅವರು ಕಣ್ಣೀರುಸುರಿಸಿದುದೂ ಉಂಟು. ಆದರೆ ಮೋಹನ ಅವಳನ್ನು ಮದುವೆ ಆಗುವುದು ಮಾತ್ರ ಒಪ್ಪಿಗೆಯಿಲ್ಲ. ತನ್ನ ಮಗನ ಮನೆತನ ಮುಂದೆ ಜಾಜ್ವಲ್ಯವಾಗಿ ಬೆಳಗಬೇಕೆಂದು ಅವರು ಆಶಿಸುವುದು ಸ್ವಾಭಾವಿಕ. ಹಾಗೆ ವಿಚಾರಿಸಿದಾಗ ಅವರ ದೃಷ್ಟಿಯಲ್ಲಿ ಜಲಜಾಕ್ಷಿ ಯೋಗ್ಯ ವಧುವಲ್ಲ! ಆದರೆ ಅದರ ಜೊತೆಗೆ ಇನ್ನೂ ಒಂದು ವಿಚಾರ ಬರುತ್ತಿತ್ತು. "ಮೋಹನ ಜಲಜಾಕ್ಷಿ ಚಿಕ್ಕಂದಿನಿಂದಲೂ ಕೂಡಿ ಆಡಿ ಹೊಂದಿಕೊಂಡು ಬೆಳೆದವರು. ಅವರಿನ್ನೂ ಬಾಲ್ಯಾವಸ್ಥೆಯಲ್ಲಿರುವಾಗಲೇ ಅವರನ್ನು ಪತಿ–ಪತ್ನಿಯರೆಂದುಕರೆಯಲಾಗಿತ್ತು. ತಮ್ಮ ಮಗಳು ಪದ್ದಕ್ಕ ಸಾಯುವ ಕಾಲಕ್ಕೆ ಕೂಡ ಅದನ್ನೇ ನೆನೆದಳು. ನಾನಾ ಈಗಲೂ ಅದನ್ನೇ ನಿರ್ಧರಿಸಿದ್ದಾನೆ" ಹೀಗೆ ಯೋಚಿಸಿದಾಗ ಮಾತ್ರ ಶಾರದಾಬಾಯಿಯವರ ಮನಸ್ಸು ಅಡಕೊತ್ತಿನಲ್ಲಿ ಸಿಕ್ಕ ಅಡಕೆಯಂತಾಗುತ್ತಿತ್ತು!...ಆದರೂ ಮದುವೆಗೆ ಒಪ್ಪಿಗೆಯನ್ನು ಕೊಡಲು ಮಾತ್ರ ಅವರ ಮನಸ್ಸು ಹಿಂಜರಿಯುತ್ತಿತ್ತು.

ನಾರಾಯಣರಾಯರಂತೂ ಚಿಂತಾಗ್ರಸ್ತರೇ ಆಗಿದ್ದರು. ಪದ್ದಕ್ಕ ಇನ್ನೂ ಇರುವಾಗಲೇ ಜಲಜಾಕ್ಷಿಯ ಕಾಲಿನಕಲೆಯ ವಿಚಾರ ಅವರಿಗೆ ತಿಳಿದಿತ್ತು. ಅದು ಸಾಮಾನ್ಯ ಕಲೆಯಿರಲಾರದೆಂದೂ ಅವರು ಊಹಿಸಿದ್ದರು. ಬಹುಶಃ ಪದ್ದಕ್ಕನಿಗೂ ತಿಳಿದಿತ್ತು. ಆ ಕೊರಗೂ ಅವಳ ಪ್ರಕೃತಿ ಕೆಡಲು ಕಾರಣವಾಗಿರಬೇಕು. ಅವಳು ಸಾಯುವಾಗಲೂ ಅದನ್ನೇ ಚಿಂತಿಸುತ್ತಿದ್ದಳು. "ನನ್ನ ಜಲೀದು ಎಲ್ಲಾ ನಿಮ್ಮನ್ನ ಕೊಡೇದ" ಎಂಬ ಅವಳ ಕೊನೆಯಮಾತು ನಾರಾಯಣರಾಯರ ಹೃದಯವನ್ನು ಇಂದಿಗೂ ಮಿಡಿಯುತ್ತದೆ.

ನಾರಾಯಣರಾಯರ ಮನೆತನದಲ್ಲಿ ತೊನ್ನು ಯಾರಿಗೂ ಇರಲಿಲ್ಲ. ದುರ್ದೈವೀ ಜಲಜಾಕ್ಷಿಗೆ ಅದು ಎಲ್ಲಿಂದ ಅಂಟಿಕೊಂಡಿತು? ವೆಂಕಣ್ಣನ ಮನೆತನದಲ್ಲಿ ಯಾರಿಗಾದರೂ ಇದ್ದಿರಬಹುದೇ? ಇದ್ದಾಗ್ಯೆ ಅದು ವಂಶಪರಂಪರೆಯಾಗಿ ಬರುವುದೇ? ಯಾರು ಬಲ್ಲರು? ಸಮಾಜದಲ್ಲಿ ಮಾತ್ರ ಹಾಗೆ ಇರುವವರನ್ನು ಜನ ಬಹಳ ಹೀನವಾಗಿ ಕಾಣುವರು. ಅದಕ್ಕೇನಾದರೂ ಕಾರಣ ಇರಬಹುದೇ?...ರಾಯರು ತಮ್ಮ ಪರಿಚಯದ ಒಬ್ಬಿಬ್ಬರು ಡಾಕ್ಟರರನ್ನು ಕೇಳಿದ್ದರು. ತಮ್ಮ ಫ್ಯಾಮಿಲಿ ಡಾಕ್ಟರ ಡಾ. ಮರಾಠೆ ಅವರು ಅಷ್ಟೊಂದು ಉತ್ತೇಜನಕರವಾಗಿ ಮಾತನಾಡಿರಲಿಲ್ಲ. ಕೊನೆಗೆ ಒಂದು ದಿನ ಆಫೀಸಿಗೆ ರಜೆ ಹಾಕಿ ಮಿರಜೆಯ ಮಿಶನ್ ಆಸ್ಪತ್ರೆಯ ಮುಖ್ಯಸ್ಥ ಡಾ. ಕೋಯಿಲೋ ಅವರನ್ನೇ ಕೇಳಬೇಕೆಂದು ಜಲಜಾಕ್ಷಿಯನ್ನು ಕರೆದುಕೊಂಡು ಮಿರಜೆಗೆ ಹೋದರು.

ಡಾ. ಕೋಯಿಲೋ ಅವರು ಆಸ್ಪತ್ರೆಯ ಮುಖ್ಯ ವೈದ್ಯರು. ವೈದ್ಯಶಾಸ್ತ್ರದಲ್ಲೂ ಶಸ್ತ್ರಶಾಸ್ತ್ರದಲ್ಲೂ ತುಂಬ ಖ್ಯಾತಿಯನ್ನು ಗಳಿಸಿದ ನಿಷ್ಣಾತ ಡಾಕ್ಟರರು. ಇಷ್ಟಾದರೂ ತುಂಬ ನಿಗರ್ವಿಯಾದ ಮನುಷ್ಯ. ನಾರಾಯಣ ರಾಯರನ್ನು ಅವರು ತುಂಬ ಆದರದಿಂದ ಬರಮಾಡಿಕೊಂಡರು.

ರಾಯರು ತಮ್ಮ ಸಮಸ್ಯೆಯನ್ನು ವಿವರಿಸಿದರು. ಡಾ. ಕೋಯಿಲೋ ಎಲ್ಲವನ್ನೂ ಕೇಳಿಕೊಂಡ ನಂತರ, ಜಲಜಾಕ್ಷಿಯನ್ನು ಸ್ವತಃ ಪರೀಕ್ಷಿಸಿದರು. ಅಷ್ಟೇ ಅಲ್ಲದೆ ತಮ್ಮ ಆಸ್ಪತ್ರೆಯ ತ್ವಚರೋಗ ತಜ್ಞ ಡಾ. ಪಿಂಟೋ ಅವರನ್ನೂ ಕರೆಯಿಸಿ ಜಲಜಾಕ್ಷಿಯನ್ನು ಅವರಿಗೂ ತೋರಿಸಿದರು. ಇಬ್ಬರೂ ಅವಳನ್ನು ಪರೀಕ್ಷಿಸಿದ ನಂತರ ಅವಳನ್ನು ಕೋಣೆಯ ಹೊರಗೆ ಕಳಿಸಿ, ನಾರಾಯಣ ರಾಯರಿಗೆ ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಅದು ಲ್ಯೂಕೋಡರ್ಮಾ (ತೊನ್ನು) ಅಹುದೆಂದೇ ಇಬ್ಬರೂ ಅಭಿಪ್ರಾಯಪಟ್ಟರು. ಕಳೆದ ಹತ್ತು ಹನ್ನೆರಡು ವರ್ಷಗಳಿಂದ ವಿಶೇಷ ಏನೂ ಬೆಳೆದಿಲ್ಲವೆಂಬುದನ್ನು ಗಮನಿಸಿದರೂ ಅದು ಮುಂದೆ ಬೆಳೆಯಲಾರದೆಂದು ಹೇಳಲು ಸಾಧ್ಯವಿಲ್ಲ ಎಂಬುದು ಅವರ ಅಭಿಪ್ರಾಯ.

"ಆದರೂ ನೀವೇನೂ ಹೆದರಬೇಕಾಗಿಲ್ಲ. ಅದರಿಂದ ರೋಗಿಗೆ ಏನೂ ಬಾಧೆಯಿಲ್ಲ. ಅಷ್ಟೇ ಅಲ್ಲ, ಬಹಳಷ್ಟು ಜನರು ತಿಳಿದಂತೆ ಅದು ಸಾಂಕರೋಗವೂ ಅಲ್ಲ" ಎಂದು ಡಾ. ಕೋಯಿಲೋ ಸ್ಪಷ್ಟವಾಗಿ ಹೇಳಿದರು.

ನಾರಾಯಣರಾಯರು ತುಸು ಸಂಕೋಚಪಟ್ಟುಕೊಳ್ಳುತ್ತ, "ಮದುವೆ ಮಾಡಿದರೆ...?" ಎಂದು ಕೇಳಿದರು.

"ಓಹೋ, ಅವಶ್ಯ ಮಾಡಬಹುದು. It won't come in the way of marital life" ಎಂದರು.

"ಮುಂದೆ ಸಂತತಿಗೆ ಇದು ಅಂಟಬಹುದೇ?" ನಾರಾಯಣರಾಯರು ಅನುಮಾನಿಸುತ್ತ ಕೇಳಿದರು.

"ಓ!" ಡಾಕ್ಟರರು ಧ್ವನಿಯೆಳೆದು, "ಅದು ಮಾತ್ರ ನಿಶ್ಚಿತವಿಲ್ಲ. ಬಹುಶಃ ಬರಬಹುದು, ಬರಲಿಕ್ಕೂ ಇಲ್ಲ" ಎಂದರು.

ಒಂದು ಕ್ಷಣ ತಡೆದು ನಾರಾಯಣರಾಯರು "ಆಯ್ತು, ಅದಕ್ಕೇನಾದರೂ ನಿವಾರಣೆಯ ಉಪಾಯ" ಕೇಳಿದರು,

"ಕೆಲವು ಔಷಧಗಳು ಬಂದಿವೆ. ಪ್ರಯೋಗ ಮಾಡಿ ನೋಡಿರಿ. ಆದರೆ ನಾನು ಗ್ಯಾರಂಟೀ ಕೊಡಲಾರೆ" ಎಂದು ಹೇಳಿ ಡಾಕ್ಟರರು ಚೀಟಿಯಲ್ಲಿ ಕೆಲವು ಔಷಧಗಳನ್ನು ಬರೆದು ಕೊಡುತ್ತ "ಎರಡು ತಿಂಗಳು ಬಿಟ್ಟು ಬಂದು ಮತ್ತೆ ಭೆಟ್ಟಿಯಾಗಿರಿ" ಎಂದರು.

ರಾಯರು ಡಾಕ್ಟರರಿಗೆ ಕೃತಜ್ಞತೆಗಳನ್ನು ಸಲ್ಲಿಸಿ ಹೊರಗೆ ಬಂದರು.

ಸಣ್ಣ ಮುಖ ಮಾಡಿಕೊಂಡು ಕೋಣೆಯ ಹೊರಗೆ ಬೆಂಚಿನ ಮೇಲೆ ಕುಳಿತುಕೊಂಡ ಜಲಜಾಕ್ಷಿಯನ್ನು ಕಂಡು ನಾರಾಯಣರಾಯರ ಹೃದಯ ಮರುಗಿತು. ಆದರೂ ತಮ್ಮ ಆಂತರ್ಯವನ್ನು ಹೊರಗೆ ತೋರಗೊಡದೆ ಅವಳ ಹತ್ತಿರ ಬಂದು, "ಹುಂ, ಇನ್ನು ಹೋಗೋಣ ನಡೆ" ಎಂದು ಅವಳ ಬೆನ್ನ ಮೇಲೆಕೈಯಿಟ್ಟರು.

ಜಲಜಾಕ್ಷಿ ತನ್ನ ಮಾಮಾನ ಕಡೆಗೆ ನೋಡಿದಳು. ಅದು ಪ್ರಶ್ನಾರ್ಥಕ ದೃಷ್ಟಿಯೆಂದು ಭಾವಿಸಿದ ರಾಯರು,

"ಔಷಧ ಬರೆದು ಕೊಟ್ಟಿರುವರು. ಏನೂ ಚಿಂತೆ ಬೇಡ ಎಂದಿರುವರು. ಅದು ರೋಗವೇ ಅಲ್ಲವೆಂದೂ ಹೇಳಿರುವರು. "Be cheerful" ಎಂದರು.

ಜಲಜಾಕ್ಷಿ ಸುಮ್ಮನೇ ಇದ್ದಳು.

ನಾರಾಯಣರಾಯರು ಮನೆಗೆ ಬಂದ ಮೇಲೆ ತಾಯಿಯ ಮುಂದೆಯೂ ಅದನ್ನೇ ಹೇಳಿದರು. ಅದನ್ನು ಕೇಳಿದ ಶಾರದಾಬಾಯಿಯವರು,

"ಹಾಗೆಯೇ ಆಗಲಿ, ಅವರ ಬಾಯಹರಕೆಯಿಂದ" ಎಂದು ಹೇಳಿ ಕುಲದೈವವನ್ನೂ ಬೇಡಿಕೊಂಡರು.

ಇದೆಲ್ಲವೂ ಮೋಹನನಿಗೂ ತಿಳಿಯದೇ ಇರಲಿಲ್ಲ. ಆದರೆ ಅವನು ಸಂಕೋಚದ ಮುದ್ದೆಯಾಗಿದ್ದನು. ನೇರವಾಗಿ ಜಲಜಾಕ್ಷಿಯ ಎದುರಿಗಾಗಲಿ, ತಂದೆಯ ಎದುರಿಗಾಗಲಿ ಆತ ಈ ಮಾತನ್ನೇ ಆಡಲಾರದವನಾಗಿದ್ದ ಅಷ್ಟೇಅಲ್ಲ, ಜಲಜಾಕ್ಷಿಯ ಜೊತೆ ಮೊದಲಿನಂತೆ ಸಲಿಗೆಯಿಂದ ಮಾತನಾಡಲು ಅವನಿಗೆ ಸಾಧ್ಯವೇ ಆಗುತ್ತಿರಲಿಲ್ಲ. ಎಷ್ಟೋಸಲ ಏನಾದರೂ ಮಾತನಾಡಬೇಕೆಂದು ಪ್ರಯತ್ನಿಸಿದ. ಆದರೆ ಅವಳ ಹತ್ತಿರ ಇರುವಾಗ ಏನು ಆಡಬೇಕೆಂದೂ ಅವನಿಗೆ ತಿಳಿಯದಂತಾಗುತ್ತಿತ್ತು.

ಒಟ್ಟಿನಲ್ಲಿ ಸಂಕೋಚದ ಅಡ್ಡಗೋಡೆ ಅವರ ಮಧ್ಯ ಬೆಳೆದುಬಿಟ್ಟಿತ್ತು.

ನಿಜವಾಗಿ ನೋಡಿದರೆ ತಾನು ಜಲಜಾಕ್ಷಿಯನ್ನು ಮದುವೆಯಾಗುವುದಿಲ್ಲವೆಂದು ಮೋಹನ ತಂದೆಯ ಎದುರಿಗೆ ಹೇಳಿರಲಿಲ್ಲ. ಜಲಜಾಕ್ಷಿಯ ಮುಂದೆಯೂ ಹೇಳಿರಲಿಲ್ಲ. ಅವಳು ತನ್ನ ಮುಂದೆ ಮೊದಲೇ ಯಾಕೆ ಹೇಳಲಿಲ್ಲ ಎಂಬುದೇ ಅವನ ಮನಸ್ತಾಪಕ್ಕೆ ಮುಖ್ಯ ಕಾರಣವಾಗಿತ್ತು.

ತನ್ನ ಮನದಲ್ಲಿರುವುದನ್ನು ಅವಳಿಗೆ ಹೇಳಿ ಬಿಡಬೇಕೆಂದು ಹಾತೊರೆಯುತ್ತಿದ್ದ ಅವನು ಅಂದು ಅವಳಿದ್ದ ಕೋಣೆಗೆ ಬಂದನು.

ಕೋಣೆಯಲ್ಲಿ ಜಲಜಾಕ್ಷಿ ಒಬ್ಬಳೇ ಏನೋ ಓದುತ್ತ ಕುಳಿತಿದ್ದಳು. ಮೋಹನ ಹೋಗಿ ಸುಮ್ಮನೆ ಅವಳೆದುರು ನಿಂತನು. ಏನು ಮಾತನಾಡಬೇಕು, ಹೇಗೆ ಆರಂಭಿಸಬೇಕು ಎಂಬುದೇ ಆತನಿಗೆ ತಿಳಿಯದಂತಾಯಿತು. ಜಲಜಾಕ್ಷಿ ಆತನ ಮುಖವನ್ನೊಮ್ಮೆ ನೋಡಿದಳು ಮಾತ್ರ. ಅವಳು ಏನನ್ನೂ ಮಾತನಾಡಲಿಲ್ಲ. ಅಷ್ಟೇ ಅಲ್ಲ, ಅಲ್ಲಿ ನಿಲ್ಲದೆ ಹೊರಗೆ ಹೊರಟಳು.

"ಜಲಜಾ" ಎಂದು ಮೋಹನ ಕೂಗಿದ್ದ

ಆದರೆ ಅವಳು ತಿರುಗಿ ಬರಲಿಲ್ಲ. ಮೋಹನನ ಮುಖದ ಮೇಲೆ ಏಟು ಬಿದ್ದಂತಾಯಿತು.!

ಜಲಜಾಕ್ಷಿ ನೇರವಾಗಿ ನಾರಾಯಣರಾಯರ ಕೋಣೆಗೆ ಹೋದಳು. ಅಲ್ಲಿ ಯಾರೂ ಇರಲಿಲ್ಲ. ಗೋಡೆಯ ಮೇಲೆ ನಾರಾಯಣರಾಯರು ಮತ್ತು ಪದ್ದಕ್ಕ ಚಿಕ್ಕವರಿರುವಾಗ ತೆಗೆಯಿಸಿದ ಫೋಟೋ ಒಂದಿದ್ದಿತು. ಅದರ ಎದುರಿಗೆ ಹೋಗಿ ನಿಂತಾಗ ಜಲಜಾಕ್ಷಿಯ ಕಣ್ಣುಗಳು ತೇವಗೊಂಡವು.

ಪ್ರತಿದಿನ ಸಾಯಂಕಾಲ ನಾರಾಯಣರಾಯರು ಆಫೀಸಿನಿಂದ ಬಂದನಂತರ ಜಲಜಾಕ್ಷಿಯೊಂದಿಗೆ ತಾಸರ್ಧ ತಾಸು ಸಮೀಪದಲ್ಲಿಯೇ ಎಲ್ಲಿಯಾದರೂ ಅಡ್ಡಾಡಿ ಬರುತ್ತಿದ್ದರು. ಅಂದು ಮನೆಗೆ ಬರುತ್ತಲೇ,

"ಜಲಜಾ, ಇಂದು ನನಗೇಕೋ ಬೇಸರ. ನಾನು ತಿರುಗಾಡಲಿಕ್ಕೆ ಬರುವುದಿಲ್ಲ. ನೀನೂ ಮೋಹನ ಹೋಗಿ ಬರ್ರಿ. ಈ ಹೊತ್ತು ಅವನೂ ಹೊರಟಿದ್ದಾನೆ, ನೋಡು" ಎಂದು ಕಾಲಲ್ಲಿ ಬೂಟು ಹಾಕಿಕೊಳ್ಳುತ್ತಿದ್ದ ಮೋಹನನಿಗೂ ಕೇಳಿಸುವಂತೆ ಹೇಳಿದರು. ಆತ ಒಪ್ಪಿ ಜಲಜಾಕ್ಷಿಗಾಗಿ ತಡೆದ.

ಆದರೆ ಜಲಜಾಕ್ಷಿ "ನಾನೂ ಇಂದು ಒಲ್ಲೆ. ಅವನು ಹೋಗಲಿ ಬೇಕಾದರೆ" ಎಂದುಬಿಟ್ಟಳು.

ರಾಯರು ಏನೂ ಮಾತನಾಡದೆ ಒಳಗೆ ಹೊರಟು ಹೋದರು. ಜಲಜಾಕ್ಷಿಯ ದೃಷ್ಟಿ ಮೋಹನನ ಕಡೆಗೆ ಹರಿಯಿತು. ಆತ ಅವಳನ್ನೇ ದೃಷ್ಟಿಸುತ್ತಿದ್ದ. ಮುಖದಲ್ಲಿ ದೈನ್ಯ ಮೂಡಿತ್ತು.

ಎರಡು ನಿಮಿಷ ಹಾಗೆಯೇ ನಿಂತುಕೊಂಡಿದ್ದು ಮೋಹನ ಕೊನೆಗೆ ಒಬ್ಬನೇ ಹೊರಗೆ ಹೊರಟ.

ಹಿಂದಿನಿಂದ "ತಡೀ, ನಾನೂ ಬರುತ್ತೇನೆ" ಎಂದು ನುಡಿದ ಜಲಜಾಕ್ಷಿ ಕಾಲಿನಲ್ಲಿ ಚಪ್ಪಲಿ ಹಾಕಿಕೊಂಡು ಹೊರಟೇಬಂದಳು.

ನಾರಾಯಣರಾಯರಿಗೆ ಸಮಾಧಾನವಾಯಿತು. ದೂರಸರಿಯುತ್ತಿದ್ದ ಇಬ್ಬರನ್ನೂ ಮತ್ತೆ ಕೂಡಿಸಬೇಕೆಂದು ಅವರ ಮನಸ್ಸು ಹಾತೊರೆಯುತ್ತಿತ್ತು. ಆದರೆ ಅದಕ್ಕೆ ಒತ್ತಾಯ ಬೇಡ. ಅದು ತಾನಾಗಿಯೇ ನಡೆಯಲಿ ಎಂದು ಅವರ ವಿಚಾರ.

ಆದರೆ ಅಂದು ಮೋಹನ ಮತ್ತು ಜಲಜಾಕ್ಷಿ ಒಂದು ತಾಸು ಅಲೆದು ಬಂದರೂ, ದಾರಿಯಲ್ಲಿ ಒಬ್ಬರೂ ಒಂದು ಮಾತನ್ನೂ ಆಡಲಿಲ್ಲವೆಂದೂ ನಾರಾಯಣರಾಯರಿಗೆ ಹೇಗೆ ತಿಳಿಯಬೇಕು?

ಮರುದಿನ ಮನೆಯಲ್ಲಿ ಶಾರದಾಬಾಯಿಯವರನ್ನು ಮಾತ್ರ ಬಿಟ್ಟು ಎಲ್ಲರ ಊಟವೂ ಆಗಿತ್ತು. ಮೋಹನನ ಪರೀಕ್ಷೆಯೂ ಮುಗಿದಿತ್ತು. ಆತ ಲೈಬ್ರರಿಯಿಂದ ತಂದ ಪುಸ್ತಕವೊಂದನ್ನು ತಿರುಗಿ ಕೊಡಲು ಕಾಲೇಜಿಗೆ ಹೊರಟಿದ್ದ. ನಾರಾಯಣರಾಯರು ಬಂದು,

"ಮೋಹನ, ಶಾಮ ಇಂದು ಔಷಧ ತಂದಿಲ್ಲ.ನೀನು ಹೋಗಿ ತಗೊಂಡು ಬಾ" ಎಂದರು.

"ಯಾರ ಔಷಧ? ನಿನ್ನದೇ?"

"ನನ್ನದಲ್ಲ. ಜಲಜಾಕ್ಷಿಯ ಔಷಧ. ನಾನು ಔಷಧ ಬಿಟ್ಟು ನಾಲ್ಕು ದಿನಗಳಾದವು" ಎಂದರು.

"ಒಳ್ಳೇದು" ಎಂದು ಹೇಳಿ ಮೋಹನ ದವಾಖಾನೆಗೆ ಹೋಗಿ ಜಲಜಾಕ್ಷಿಯ ಔಷಧ ತೆಗೆದುಕೊಂಡು ಬಂದ. ಅವಳಿದ್ದಲ್ಲಿಗೆ ಬಂದು,

"ಡಾಕ್ಟರರು ನಾಳೆ ನಿನಗೇ ಬಂದು ಹೋಗಲು ಹೇಳಿರುವರು" ಎಂದು ಹೇಳಿದ,

ಅವನ ಮಾತಿಗೆ ಜಲಜಾಕ್ಷಿ ಏನೊಂದೂ ಮಾತನಾಡಲಿಲ್ಲ, ಅಷ್ಟೇ ಅಲ್ಲ, ಮುಖವೆತ್ತಿ ಆತನ ಕಡೆಗೆ ನೋಡಲೂ ಇಲ್ಲ. ಮೋಹನನ ಕೋಪಕೆ ಎಣೆ ಉಳಿಯಲಿಲ್ಲ,

"ಯಾಕೆ ಒಂದೂ ಮಾತು ಆಡುವುದಿಲ್ಲವೇನು?" ಎಂದು ಜೇಬಿನೊಳಗಿನ ಔಷಧದ ಬಾಟಲಿಯನ್ನು ತೆಗೆದು ಟೇಬಲ್ಲಿನ ಮೇಲೆ ಅಪ್ಪಳಿಸಿದನು. ಅದು ಉರುಳಿ ನೆಲಕ್ಕೆ ಬಿದ್ದು ಒಡೆದು ಚೂರು ಚೂರಾಯಿತು!

ಜಲಜಾಕ್ಷಿ ಮುಖವೆತ್ತಿ ಆತನ ಕಡೆ ನೋಡಿ, ಏನೂ ಮಾತನಾಡದ ಅಲ್ಲಿಂದ ಎದ್ದು ಹೊರಗೆ ನಡೆದು ಬಿಟ್ಟಳು.

ಮೋಹನನ ಬುದ್ಧಿ ಅವನ ಅಧೀನದಲ್ಲಿರಲಿಲ್ಲ.ಏನೂ ವಿಚಾರ ಮಾಡದೆ ಭಾವೋದ್ವೇಗದಿಂದ ಧಾವಿಸಿ ಹೋಗಿ ಅವಳ ರಟ್ಟೆಯನ್ನು ಗಟ್ಟಿಯಾಗಿ ಹಿಡಿದು, ಎಳೆದು ತಂದು ಕಾಟಿನ ಮೇಲೆ ಕೂಡ್ರಿಸಿದನು. ಜಲಜಾಕ್ಷಿ ಹೆದರಿದಳು. ಮೋಹನನ ಹೃದಯವೂ ಜೋರಾಗಿ ಬಡಿದುಕೊಳ್ಳುತ್ತಲಿತ್ತು.

ಮೋಹನ ಏನೂ ಮಾತನಾಡಲಿಲ್ಲವಾದರೂ, ಆತನ ಕಣ್ಣಿನಿಂದ ನೀರಹನಿಗಳು ಉದುರಿದವು. ಆತ ಮುಖ ಮುಚ್ಚಿಕೊಂಡು ಕುಳಿತ.

ಜಲಜಾಕ್ಷಿ ಅಲ್ಲಿಂದ ಎದ್ದು ಹೋದಳು.

ಅವಳು ಹೋಗಿ ಹತ್ತು ನಿಮಿಷಗಳಾಗಿರಬಹುದು. ಮೋಹನ ಮೊಣಕಾಲುಗಳಲ್ಲಿ ಹುದುಗಿಸಿಕೊಂಡಿದ್ದ ಮುಖವನ್ನು ಮೇಲೆತ್ತಿ ನೋಡಿದನು. ಜಲಜಾಕ್ಷಿ ಅಲ್ಲಿರಲ್ಲಿಲ್ಲ. ಅವನಿಗೆ ಅಲ್ಲಿ ಕೂಡ್ರಲಾಗಲಿಲ್ಲ. ಹಾಗೆಯೇ ಹೊರಗೆ ಹೋಗಿಬಿಟ್ಟ.

ಮೋಹನ ತಿರುಗಿ ಮನೆಗೆ ಬಂದಾಗ ನಾಲ್ಕು ಹೊಡೆದು ಹೋಗಿದ್ದಿತು. ಬಂದವನೇ ಮನೆಯಲ್ಲೆಲ್ಲ ಸುತ್ತು ಹಾಕಿ ಜಲಜಾಕ್ಷಿಯನ್ನು ಹುಡುಕಿದ. ಎಲ್ಲಿಯೂ ಅವಳು ಕಾಣಲಿಲ್ಲ. ಶಾಮನ ಕೋಣೆಗೆ ಹೋಗಿ ಆತನನ್ನು ಕೇಳಿದ,

"ಶಾಮೀ, ಜಲಜಾ ಎಲ್ಲಿ?"

"ಅವಳು ಊರಿಗೆ ಹೋದಳು."

"ಎಲ್ಲಿ? ಯಾವಾಗ?" ಧ್ವನಿಯಲ್ಲಿ ಕಾತುರತೆ, ಆತುರತೆಗಳಿದ್ದವು.

"ಎರಡು ಗಂಟೆಯ ಗಾಡಿಗೆ ಬೆಳಗಾವಿಗೆ ಹೋದಳು. ..."

ಮೋಹನನ ಮುಖದಲ್ಲಿ ವಿಲಕ್ಷಣವಾದ ನಗೆಯೊಂದು ಮಿಂಚಿ ಮಾಯವಾಯಿತು.

ಅಷ್ಟರಲ್ಲಿ ಟೇಬಲ್ಲಿನ ಮೇಲೊಂದು ಪಾಕೀಟು ಕಾಣಿಸಿತು. ಅದರ ಮೇಲೆ "ಮಾಮಾನಿಗೆ" ಎಂದು ಬರೆದಿತ್ತು.

"ಆ ಪಾಕೀಟು ಎಲ್ಲಿಯದೊ?" ಎನ್ನುತ್ತ ಅದನ್ನು ತೆಗೆದುಕೊಂಡು ಕವ್ಹರು ಒಡೆದು ಓದತೊಡಗಿದ. ಓದಿದಂತೆ ತಲೆ ತಿರುಗಿದಂತಾಯಿತು... "ಬೆಳಗಾವಿಯಿಂದ ಕೂಡಲೇ ಹೊರಟು ಬಾ" ಎಂದು ಪತ್ರ ಬಂದಿತ್ತು. ನಿನ್ನನ್ನು ಕಾಣದೆ, ನಿನ್ನ ಅಪ್ಪಣೆಯನ್ನು ಪಡೆಯದೆ ಹೋಗಬೇಕಾದರೆ ನನ್ನ ಕಾಲುಗಳೇ ಏಳುತ್ತಲೊಲ್ಲವು. ತಲೆ ಶೂಲಿಕಡಿಮೆ ಇದೆ. ಬೇಡವೆಂದರೂ ಮೋಹನ ಮೂರು ದಿನದ ಔಷಧ ತಂದುಕೊಟ್ಟಿರುವನು....ನೀನು ಬಾ ಎಂದಾಗ ಬಂದೇ ಬರುವೆನು" ಎನ್ನುವ ಪತ್ರದಲ್ಲಿಯ ಜಲಜಾಕ್ಷಿಯ ಮಾತುಗಳು ಮೋಹನನ ಹೃದಯವನ್ನು ತಿವಿದವು.

ಪತ್ರಓದಿ ಮೋಹನ ಕೋಣೆಯಿಂದ ಹೊರಗೆ ನಡೆದ,

"ಉರಿಯುವ ಬಿಸಿಲಿನಲ್ಲಿ ಎಲ್ಲಿ ತಿರುಗಲಿಕ್ಕೆ ಹತ್ತಿದ್ದೀಯೊ? ಅವಳು ಹೋದರೆಹೋಗಲಿ. ಹೋಗುವವರಿಗೆ ಬೇಡ ಎಂದರೆ ನಿಲ್ಲುತ್ತಾರೆಯೆ?..." ಎಂದು ಶಾರದಜ್ಜಿ ಒಳಗಿನಿಂದ ಬಂದರು.

ಮೋಹನ ನೇರವಾಗಿ ಊರ ಹೊರಗಿನ ಬಯಲಲ್ಲಿ ಒಂದು ಗಿಡವೊಂದರ ಕೆಳಗೆ ಕುಳಿತುಕೊಂಡ. ಅವನ ಶರೀರ ಆಯಾಸಗೊಂಡಿತ್ತು. ಹೃದಯ ನೋವಿನಿಂದ ಭಾರವಾಗಿತ್ತು; ಬುದ್ಧಿಗೆ ಏನೂ ತಿಳಿಯದಂತಾಗಿತ್ತು!

ಕೆಲ ಸಮಯದ ನಂತರ ಇದೆಲ್ಲ ಏನಾಯಿತು? ಎಂದು ಆತ ವಿಚಾರಿಸತೊಡಗಿದ. ಇದರಲ್ಲಿ ತಪ್ಪು ಯಾರದು? ಯಾವುದು ತಪ್ಪು? ಹೇಗೆ ಸರಿಪಡಿಸಬೇಕು? ಯಾವುದೂ ಅವನಿಗೆ ಹೊಳೆಯದಂತಾಯಿತು.

ಚಿಕ್ಕಂದಿನಲ್ಲಿ ಜಲಜಾಕ್ಷಿಯೊಂದಿಗೆ ಕೂಡಿಆಡಿದ ಕ್ಷಣಗಳು ನೆನಪಾದವು. ಅಂದಿನಿಂದಲೂ ಅವಳ ಬಗ್ಗೆ ಆತನಲ್ಲಿ ಏನೋ ಒಂದು ಒಲವು. ಮುಂದೆ ಅದರ ರೀತಿ ಬೇರೆಯಾಯಿತು. ಚಿಕ್ಕಂದಿನಿಂದಲೂ ತಮ್ಮನ್ನು ಎಲ್ಲರೂ ಗಂಡ-ಹೆಂಡತಿ ಎಂದೇ ಚೇಷ್ಟೆ ಮಾಡುತ್ತಿದ್ದರು. ಆಗ ಆ ಚೇಷ್ಟೆಯ ಅರ್ಥವಾಗುತ್ತಿರಲಿಲ್ಲ. ತಾವು ಗಂಡ-ಹೆಂಡತಿ ಆಗಿ ಆಟಆಡಿದ್ದೂ ಉಂಟು. ಎಷ್ಟೋ ಸಲ ಆಟವು ಹೊಡೆದಾಟಕ್ಕೆ ಬಂದಾಗ "ನಾನು ನಿನ್ನ ಗಂಡನೇ ಆಗೋದಿಲ್ಲ ಹೋಗು" ಎಂದು ತಾನು ಅವಳಿಗೆಂದಾಗ ಅವಳು "ಹೋಗೋ, ನಿನ್ನ ಯಾರು ಮಾಡಿಕೋತಾರ??" ಎಂದು ಅಣಕಿಸಿದ್ದೂ ಉಂಟು.

ಆ ಆಟದ ದಿನಗಳು ಮುಗಿದವು. ಮುಂದೆ ಆ ಚೇಷ್ಟೆ ನಿಜವಾದರೆ ನಿಜವಾಗಲಿ,! ಎಂದು ತನಗೆ ತೋರತೊಡಗಿತು. ಆಗ ಜಲಜಾಕ್ಷಿಯತ್ತ ನೋಡುವ ದೃಷ್ಟಿ ಬದಲಾಗತೊಡಗಿತು. ಅಂದು ಬೆಳಗಾವಿಯಲ್ಲಿ ಅವಳನ್ನು ಅಪ್ಪಿ ಮುದ್ದಿಸಿದಾಗ ಮುಂದೆ ತಾವು ನಿಜವಾಗಿಯೂ ಗಂಡ-ಹೆಂಡತಿಯಾಗಿಯೇ ಬಾಳುವೆವೆಂದೇ ಆತ ನಿರ್ಧರಿಸಿದ್ದ.

ಆದರೆ? ಅವಳ ಲ್ಯುಕೋಡರ್ಮಾ! ಆ ವಿಚಾರ ತಿಳಿಯುತ್ತಲೇ ಅವನಿಗೆ ಆಘಾತವಾಯಿತು. ಆದರೆ ಅವಳ ರೋಗವೇ ನಿಜವಾಗಿ ತಮ್ಮ ಮಧ್ಯೆ ಬಂದಿದೆಯೇ? ಅಥವಾ ಅವಳು ಅದರ ಬಗ್ಗೆ ತನಗೆ ಮೊದಲು ಹೇಳಲಿಲ್ಲವೆಂಬುದೇ? ...ಆದರೆ ಅವಳೇ ದೂರ ಹೋಗುತ್ತಿರುವಳು. ನಾನೇನೂ ಅವಳಿಗೆ ಹಾಗೆ ಅಂದಿಲ್ಲ. ಅಂದು ಹಾಗೆ ಕೇಳಿದ್ದೇ ತಪ್ಪಾಯಿತೇ? ಅವಳಿಗೆ ಇಷ್ಟೇಕೆ ಒಣಅಭಿಮಾನ?

ಇಂದು ಹಾಗೆ ಹೇಳದೆಕೇಳದೆ ಊರಿಗೇಕೆ ಹೋಗಬೇಕು? ಅದರಿಂದ ನಾನಣ್ಣ ತನ್ನ ಮೇಲೆ ಕೋಪಗೊಳ್ಳಬಹುದು. ಮತ್ತೆ ಹೆಚ್ಚಿನ ರಗಳೆಯೇ ಉಂಟಾಗುವುದೋ ಏನೋ? ಇನ್ನೂ ಏನೇನು ಆಗಲಿದೆಯೋ ನಾನಣ್ಣನನ್ನು ಹೇಗೆ ಎದುರಿಸುವುದು?

ಸಾಯಂಕಾಲದ ತಂಪು ಗಾಳಿ ಸುಳಿಯಿತು. ಆದರೂ ಆತನ ಸಮಸ್ಯೆ ಬಗೆಹರಿಯಲಿಲ್ಲ.

## -೧೪-

ಜಲಜಾಕ್ಷಿ ಬೆಳಗಾವಿಗೆ ಬಂದು ಇನ್ನೂ ನಾಲ್ಕು ದಿನಗಳೂ ಕಳೆದಿರಲಿಲ್ಲ. "ಮೋಹನ ಅಲ್ಲಿ ಬಂದಿದ್ದಾನೆಯೇ? ಜರೂರ ತಿಳಿಸಿರಿ" ಎಂದು ಸಾಂಗಲಿಯಿಂದ ಶಾಮನ ತಾರು ಬಂದಿತು!

ಮನೆಯಲ್ಲಿ ಎಲ್ಲರಿಗೂ ಗಾಬರಿ. ಏನು, ಯಾಕೆ ಎಂಬುದು ಯಾರಿಗೂ ತಿಳಿಯುವಂತಿರಲಿಲ್ಲ. ಜಲಜಾಕ್ಷಿಗೆ ಮಾತ್ರ ಭೀತಿಆವರಿಸಿಕೊಂಡಿತು. ತನ್ನ ಸಲುವಾಗಿ ನಾನಣ್ಣ ಮಾಮಾ ಮೋಹನನಿಗೆ ಏನಾದರೂ ಅಂದಿರಬಹುದೇ? ಆತ ಸಿಟ್ಟಾಗಿ ಎಲ್ಲಿಯಾದರೂ ಹೇಳದೇ ಕೇಳದೇ ಹೋಗಿರಬಹುದೇ? ಅಥವಾ... ಮುಂದಿನ ವಿಚಾರ ಜಲಜಾಕ್ಷಿಗೆ ಸಹನವಾಗಲಿಲ್ಲ. ಗಡಗಡನೆ ನಡುಗಿಬಿಟ್ಟಳು.

ವೆಂಕಣ್ಣ ಕೂಡಲೇ ಮರುತಾರು ಕಳಿಸಿದ. "ಮೋಹನ ಇಲ್ಲಿ ಬಂದಿಲ್ಲ. ಏನೆಂಬುದನ್ನು ಸವಿಸ್ತಾರವಾಗಿ ಕೂಡಲೇ ತಿಳಿಸಿರಿ. ಎಲ್ಲರಿಗೂ ಚಿಂತೆಯಾಗಿದೆ." ಎಂದು. ಆದರೆ ಮುಂದೆ ನಾಲ್ಕು ದಿನಗಳಾದರೂ ಉತ್ತರವೇ ಇಲ್ಲ.

ಐದನೆಯ ದಿನ ಶಾಮನಿಂದ ಒಂದು ಪತ್ರ ಬಂದಿತು. ಅದರ ಸಾರಾಂಶ ಇಷ್ಟೇ: "ನಾನಣ್ಣನಿಗೂ ಮೋಹನನಿಗೂ ಆ ಸಾಯಂಕಾಲ ತುಸು ಮನಸ್ತಾಪವಾಯಿತು. ಆ ರಾತ್ರಿಯಿಂದಲೇ ಮೋಹನ ಕಾಣೆಯಾಗಿದ್ದಾನೆ. ಊರಲ್ಲಿ ಎಲ್ಲ ಕಡೆಗೂ ಹುಡುಕಿ ಆಯಿತು. ೫-೬ ದಿನ ನಾನಣ್ಣ ಆಫೀಸಿಗೂ ಹೋಗಿಲ್ಲ. ಊಟವನ್ನೂ ಸರಿಯಾಗಿ ಮಾಡುತ್ತಿಲ್ಲ. ಯಾರೊಡನೆಯೂ ವಿಶೇಷ ಮಾತನ್ನೇ ಆಡಿಲ್ಲ! ಅಜ್ಜಿ ದುಃಖದಿಂದ ಸಣ್ಣಾಗಿ ಹೋಗಿದ್ದಾಳೆ. ನನಗೆ ಏನು ಮಾಡಬೇಕೆಂಬುದೇ ತಿಳಿಯದಾಗಿದೆ..."

ಶಾಮನಿಗೆ ತಿಳಿಯದಂತೆ ಉಳಿದ ಯಾರಿಗೂ ಏನೂ ತಿಳಿಯಲೂ ಇಲ್ಲ. ತಿಳಿಯುವಂತೆಯೂ ಇರಲಿಲ್ಲ.

"ಎಲ್ಲಿಯಾದರೂ ಹೋಗಿದ್ದಾನು? ಬಂದಾನು ನಾಲ್ಕು ದಿನಗಳಲ್ಲಿ" ಎಂದರು ಗೌರತ್ತೆ.

"ಪಾಪ, ಹೀಗೇಕಾಯಿತಪ್ಪ" ಎಂದು ಚಂಪಕ್ಕ ಸಹಾನುಭೂತಿ ತೋರಿದಳು. ಆದರೆ ವೆಂಕಣ್ಣನಿಗೆ ಹೀಗೆಯೇ ಎಂದು ಯಾವುದೂ ಹೊಳೆಯಲಿಲ್ಲ.

ಆದರೆ ಇದೆಲ್ಲವೂ ತನ್ನಸಲುವಾಗಿಯೇ ನಡೆದಿದೆಯೆಂದು ಜಲಜಾಕ್ಷಿ ತಿಳಿದುಕೊಂಡಳು. ಆದರೆ ಹಾಗೆ ಹೇಳುವ ಧೈರ್ಯವೂ ಅವಳಿಗೆ ಇರಲಿಲ್ಲ. ನಾನಣ್ಣ ಮಾಮಾನನ್ನು ಬಿಟ್ಟರೆ ಬೇರೆ ಯಾರಮುಂದೆಯೂ ಹೇಳುವ ಮನಸ್ಸು ಇರಲಿಲ್ಲ.

ಮಾಮಾನ ಸ್ಥಿತಿಯನ್ನು ಕೇಳಿದಾಗಿನಿಂದ ಜಲಜಾಕ್ಷಿಗೆ ಅವರನ್ನು ಕಾಣಬೇಕೆಂದು ಮನಸ್ಸು ಬಹಳೇ ಕೊರೆಯಹತ್ತಿತ್ತು. ತಾನು ಅವರ ಹತ್ತಿರವಿದ್ದರೆ ಅವರ ಮನಸ್ಸಿನ ದುಃಖ ಕಡಿಮೆಯಾಗಬಹುದೆಂದು ಅವಳು ವಿಚಾರಿಸಿದಳು. ಅವರ ತೊಡೆಯಲ್ಲಿ ಮುಖವನ್ನಡಗಿಸಿ ಒಮ್ಮೆ ಸಾಕಷ್ಟು ಅತ್ತುಬಿಡಬೇಕು ಎನ್ನಿಸಿತವಳಿಗೆ.

ಮೊದಲೇ ದುಃಖದಿಂದ ಒಳಗೇ ಬೆಂದು ಹೋಗಿದ್ದ ಅವಳು ಈಗಂತೂ ಅರೆಹುಚ್ಚಿಯಂತಾದಳು. ಈ ಎಲ್ಲ ಅನಾಹುತಕ್ಕೆ ತಾನೇ ಕಾರಣ ಎಂದು ಅವಳು ತನ್ನನ್ನೇ ದೂಷಿಸಿಕೊಳ್ಳತೊಡಗಿದಳು. ಆತನ ಜೊತೆಗೆ ತಾನಾದರೂ ಯಾಕೆ ಹಾಗೆ ವರ್ತಿಸಬೇಕಾಗಿತ್ತು? ರೋಗಗ್ರಸ್ತಳಾದ ತನ್ನನ್ನು ಆತ ನಿರಾಕರಿಸಿದರೆ ಅವನ ತಪ್ಪೇನು? ಮುಖ್ಯ ತಪ್ಪೆಲ್ಲ ತನ್ನದೇ ಆಗಿದೆ. ತಾನು ಹುಟ್ಟಿದೆನಾದರೂ ಯಾತಕ್ಕೆ? ತನ್ನಿಂದ ಯಾರಿಗೆ ಸುಖವಿದೆ? ತನ್ನ ತಾಯಿಯ ಜೊತೆಗೆ ತಾನೂ ಸತ್ತು ಹೋಗಿದ್ದರೆ ಒಳಿತಾಗುತ್ತಿತ್ತು ಎಂದುಕೊಂಡಳು....ಈಗಾದರೂ ಏನಾಯಿತು? ಅಂದರೆ ಆತ್ಮಹತ್ಯೆ ಮಾಡಿಕೊಳ್ಳಬೇಕು...ಈ ವಿಚಾರ ಬಂದಾಗ ನಡುಗಿಬಿಟ್ಟಳು. ಆ ವಿಚಾರವನ್ನು ಹತ್ತಿಕ್ಕಲು ಯತ್ನಿಸಿದಂತೆ ಅದು ಇನ್ನೂ ಹೆಚ್ಚೇ ಆಗುತ್ತಿತ್ತು. ಆದರೆ ಸಾಯುವ ಸಾಹಸ ಮಾತ್ರ ಮಾಡಲಾಗಲಿಲ್ಲ. ಇಷ್ಟಾಗಿ ತಾನು ಸತ್ತರೆ ಅದರಿಂದ ಈಗ ಯಾರಿಗೆ ಹಿತವಾದೀತು? ಮಗನಿಂದ ಅಗಲಿ ಮೊದಲೇ ಕೊರಗುತ್ತಿರುವ ಪ್ರೀತಿಯ ಮಾಮಾನ ದುಃಖಾಗ್ನಿಗೆ ಘೃತ ಹುಯ್ದಿಸಿದಂತೆಯೇ ಅಲ್ಲವೇ?... ಮಾಮಾನ ವಿಚಾರ ಬಂದು ಅವಳನ್ನು ಅಂಥ ಸಾಹಸದಿಂದ ಪರಾವೃತ್ತಗೊಳಿಸಿತು.

ಅವಳ ಜೀವನದಲ್ಲಿ ಆಶೆ ಆಕಾಂಕ್ಷೆಗಳ ಹೋಳಿಯಾಯಿತೀಗ! ಮನೆಯಲ್ಲಿ ಅವಳು ಮಾತನಾಡುವುದೇ ಕಡಿಮೆಯಾಯಿತು. ಕೆಲಸವನ್ನು ಮಾಡುತ್ತಿದ್ದರೆ ಅದರ ಕಡೆಗೆ ಲಕ್ಷ್ಯವೇ ಇರುತ್ತಿರಲಿಲ್ಲ.

ಒಂದು ದಿವಸ ಜಲಜಾ ನೀರು ಜಗ್ಗುತ್ತಿದ್ದಳು. ಕೆಳಗೆ ಮುಖ ಹಾಕಿಕೊಂಡು ಹಾಗೆಯೇ ಕೊಡವನ್ನು ಜಗ್ಗಿಯೇ ಜಗ್ಗುತ್ತಿದ್ದಳು. ಕೊಡವು ಮೇಲ ಬಂದುದರ ಅರಿವೇ ಇರಲಿಲ್ಲ. ಹಾಗೆಯೇ ಹಗ್ಗವನ್ನು ಎಳೆದಳು. ಕೊಡವು ಹೋಗಿ ಗಡಗಡಿಗೆ ಅಪ್ಪಳಿಸಿ ಮೈಮೇಲೆಲ್ಲ ನೀರು ಉಗ್ಗಿತು! ಗಾಬರಿಯಾಗಿ ಒಮ್ಮೆಲೇ ಕೈಯಲ್ಲಿಯ ಹಗ್ಗವನ್ನೇ ಬಿಟ್ಟುಬಿಟ್ಟಳು. ಕೊಡ ಮತ್ತು ಹಗ್ಗ ಎರಡೂ ಬಾವಿಯಲ್ಲಿ ಬಿದ್ದುಬಿಟ್ಟವು!

ಆ ಸಪ್ಪಳವನ್ನು ಕೇಳಿ ಅಡುಗೆ ಮಾಡುತ್ತಿದ್ದ ಗೌರತ್ತೆ ಗಾಬರಿಯಾಗಿ ಓಡಿಬಂದರು. ಜಲಜಾಕ್ಷಿ ಹುಚ್ಚಿಯಂತೆ ಪೆಚ್ಚು ಮುಖ ಮಾಡಿಕೊಂಡು ಹೌಹಾರಿ ನಿಂತಿದ್ದಳು. ಅವಳನ್ನು ನೋಡಿ ಗೌರತ್ತೆಯ ಕರುಳು ಅಯ್ಯೋ ಅಂದಿತು.

"ಏನಾಯಿತು ಜಲಜಾ?" ಎಂದು ಕಳಕಳಿಯಿಂದ ಕೇಳಿದರು.

ಅವರನ್ನು ಕಂಡು ಜಲಜಾಕ್ಷಿಯ ದುಃಖದಕಟ್ಟೆ ಒಡೆಯಿತು. ಕಣ್ಣೀರಕೋಡಿ ಹರಿಯತೊಡಗಿತು.!

ಇನ್ನೊಂದು ಸಲ ಹೀಗೆಯೇ ನಡೆಯಿತು. ಚಂಪಕ್ಕ 'ಹೊರಗೆ' ಕೂತಿದ್ದಳು. ಒಲೆಯ ಮೇಲೆ ಅನ್ನಕ್ಕೆ ಇಟ್ಟು "ಸ್ವಲ್ಪ ನೋಡುತ್ತಿರು. ಈಗ ಬರುತ್ತೇನೆ" ಎಂದು ಜಲಜಾಕ್ಷಿಗೆ ಹೇಳಿ ಗೌರತ್ತೆಯವರು ಅಂದು ಸಾಯಂಕಾಲ ನೆರೆಮನೆಗೆ ಹೋಗಿದ್ದರು. ಬೇಗನೇ ಬರಲಾಗಲಿಲ್ಲ. ಜಲಜಾಕ್ಷಿ ಅನ್ನ ಇಳಿಸಿ ಪಲ್ಯ ಮತ್ತು ಗೊಡ್ಡುಸಾರುಗಳನ್ನು ಮಾಡಿದಳು.

ರಾತ್ರಿ ಊಟಕ್ಕೆ ಕುಳಿತ ವೆಂಕಣ್ಣ ನಗುತ್ತಲೇ,

"ಯಾಕೆ ಅತ್ತೆ-ಅರವತ್ತರ ಅರವು-ಮರವು ಸುರುವಾಯಿತೇನು ?" ಎಂದನು.

ಊಟಕ್ಕೆ ಬಡಿಸುತ್ತಿದ್ದ ಗೌರತ್ತೆ,

"ಯಾಕೆ? ಏನಾಯಿತು? ಇಂದು ಸಾರು-ಪಲ್ಯ ಜಲಜಾ ಮಾಡಿದ್ದಾಳೆ" ಎಂದರು.

"ಹೂಂ" ಎಂದಿಷ್ಟೇ ಅಂದು ವೆಂಕಣ್ಣ ಸಾರು-ಅನ್ನ ಬದಿಗೆ ಸರಿಸಿ ಮೊಸರು ಅನ್ನ ಉಂಡು ಎದ್ದು ಕೈ ತೊಳೆದ.

ಜಲಜಾಕ್ಷಿ ಅಡಿಗೆ ಮಾಡಿದುದು ಅದೇ ಮೊದಲ ಸಲವೇನೂ ಅಲ್ಲ. ಆದರೆ ಅಂದು ಮಾತ್ರ ಪಲ್ಯ ಉಪ್ಪಿಲ್ಲದೆ ಸಪ್ಪಗಾಗಿದ್ದರೆ ಪಲ್ಯದ ಉಪ್ಪು ಸಾರಿಗೆ ಸೇರಿಕೊಂಡಿತ್ತು.

ಆ ವಿಷಯ ಯಾರೂ ಏನೂ ಮಾತನಾಡಲಿಲ್ಲ. ಜಲಜಾಕ್ಷಿ ಮಾತ್ರ ಅಂದು ಊಟವನ್ನೇ ಮಾಡಲಿಲ್ಲ. ಗೌರತ್ತೆ ಒಂದು ಗುಟುಕು ನೀರನ್ನೂ ಕುಡಿಯಲಿಲ್ಲ.

ರಾತ್ರಿ ಒಂದು ಹೊಡೆದು ಹೋಗಿತ್ತು, ಗೌರತ್ತೆಗೆ ನಿದ್ರೆಬರಲೊಲ್ಲದು. ಎದ್ದು ಕುಳಿತು ಕಡ್ಡಿ ಕೊರೆದು ದೀಪ

ಹಚ್ಚಿದರು. ಬದಿಯ ಜಲಜಾಕ್ಷಿಯ ಕೋಣೆಯಲ್ಲಿಂದ ಬಿಕ್ಕುವ ಧ್ವನಿ ಕೇಳಿದಂತಾಯಿತು. ಗೌರತ್ತೆಯವರು ಸಪ್ಪಳ ಮಾಡದೆ ಎದ್ದು ಹೋಗಿ ಕೋಣೆಯ ಬಾಗಿಲು ನೂಕಿದರು. ಕೋಣೆಯಲ್ಲಿ ಗಾಢವಾದ ಕತ್ತಲೆ ಕವಿದಿತ್ತು. ಏನೂ ಕಾಣುವಂತಿರಲಿಲ್ಲ. ಅವರು ತಿರುಗಿ ಬಂದು ದೀಪ ವನ್ನು ತಂದು ನೋಡುತ್ತಾರೆ, ಜಲಜಾಕ್ಷಿಯ ಹಾಸುಗೆ ಬರಿದು, ಅವರಿಗೆ ಗಾಬರಿಯಾಯಿತು. ಇನ್ನೊಂದು ಹೆಜ್ಜೆ ಮುಂದಿಟ್ಟರು. ಕೋಣೆಯ ಬೇರೆ ಬದಿಗಿದ್ದ ಕುರ್ಚಿಯ ಮೇಲೆ ಕುಳಿತು ಮೇಜಿನ ಮೇಲೆ ತಲೆಯಿಟ್ಟುಕೊಂಡು ಜಲಜಾಕ್ಷಿ ಬಿಕ್ಕುತ್ತಿದ್ದಳು!

"ಜಲಜಾ!" ಎಂದರು ಗೌರತ್ತೆ ಸಾವಕಾಶವಾಗಿ.

ಜಲಜಾಕ್ಷಿ ಗಾಬರಿಯಾಗಿ ಒಮ್ಮೆಲೇ ತಿರುಗಿ ನೋಡಿದಳು.

"ಇನ್ನೂ ಮಲಗಿಕೊಂಡಿಲ್ಲವೇನು?"

ಜಲಜಾಕ್ಷಿ ಏನೂ ಮಾತನಾಡದೆ ಕಣ್ಣೊರಸಿಕೊಂಡು ಎದ್ದು ಹೋಗಿ ಕಾಟಿನ ಮೇಲೆ ಮಲಗಿಕೊಂಡಳು.

ಗೌರತ್ತೆಯವರು ದೀಪವನ್ನು ಟೇಬಲ್ಲಿನ ಮೇಲೆ ಇಟ್ಟು ಮೊಮ್ಮಗಳ ಬದಿಯಲ್ಲಿ ಬಂದು ಕುಳಿತರು. ಅವಳ ತಲೆಯನ್ನು ನೇವರಿಸುತ್ತ, "ಅಷ್ಟು ಸಣ್ಣ ತಪ್ಪಿಗೆ ಇಷ್ಟು ಮನಸ್ಸಿಗೆ ಹಚ್ಚಿಕೊಳ್ಳಬೇಕೇನು?" ಎಂದು ಕೇಳಿದರು.

ಜಲಜಾಕ್ಷಿ ಅವರ ತೊಡೆಯಮೇಲೆ ತಲೆಯಿಟ್ಟು ಮೌನವಾಗಿ ಕಣ್ಣೀರು ಸುರಿಸಿದಳು.

ಐದು ಮಿನಿಟು ತಡೆದು ಗೌರತ್ತೆಯವರು "ಕತ್ತಲೆಯಲ್ಲಿ ಏನು ಮಾಡುತ್ತಿದ್ದೆ?" ಎಂದು ಕೇಳಿದರು.

ಈಗಲೂ ಅವಳು ಮಾತನಾಡಲಿಲ್ಲ.

"ಟಾಕು ಹಿಡಿದುಕೊಂಡಿದ್ದೆಯಲ್ಲ, ಏನು ಬರೆಯುತ್ತಿದ್ದೆ?" ಎಂದರು ಮತ್ತೆ ಗೌರತ್ತೆ.

ಹೌದು ಎಂಬಂತೆ ಗೋಣು ಅಲ್ಲಾಡಿಸಿ ಜಲಜಾಕ್ಷಿ "ನಾನಣ್ಣ ಮಾಮಾಗೆ ಪತ್ರ ಬರೆಯಬೇಕೆಂದೆ..." ಎಂದು ಬಿಕ್ಕಿದಳು.

"ಮತ್ತೆ ಬರೆದೆಯೇನು?"

"ಏನು ಬರೆಯಲಿ?"...

ಜಲಜಾಕ್ಷಿಯ ದುಃಖ ಮತ್ತೆ ಉಕ್ಕಿತು. ಕಣ್ಣೀರು ಹರಿಯತೊಡಗಿದವು.

ಗೌರತ್ತೆಯವರ ಹೃದಯ ನೊಂದಿತು. ಅವರ ಕಣ್ಣುಗಳೂ ತೇವವಾದವು. ಮೋಹನ ಮನೆ ಬಿಟ್ಟು ಹೋದುದೇ ಅವಳ ದುಃಖಕ್ಕೆ ಕಾರಣವೆಂದು ಅವರಿಗೂ ತಿಳಿಯದೆ ಇಲ್ಲ. ಆದರೆ ಅವರಾಗಲಿ, ಯಾರೇ ಆಗಲಿ, ಏನೂ ಮಾಡುವಂತಿರಲಿಲ್ಲ.

ಮೊಮ್ಮಗಳ ಬೆನ್ನ ಮೇಲೆ ಕೈಯಾಡಿಸುತ್ತ ಅವರೂ ಕಣ್ಣೀರು ಸುರಿಸಿದರು.

× × ×

ಮುಂದೆ ಸುಮಾರು ೧೫ ದಿನಗಳ ನಂತರ "ಅಜ್ಜಿಗೆ ಬಂದ ಜ್ವರ ತೆಗೆದಿಲ್ಲ. ಬಹಳೇ ಅಶಕ್ತತೆ ಬಂದಿದೆ, ಮನೆ ಬಿಕೋ ಎನ್ನುತ್ತಿದೆ" ಎಂದು ಶಾಮಿ ಬರೆದಿದ್ದ.

ಅದನ್ನು ಓದಿ ಜಲಜಾಕ್ಷಿಯ ಕರುಳು ಕಿತ್ತಿ ಬಂದಂತಾಯಿತು. ಎಂಟು ದಿವಸ ಹೋಗಿಬರಲೇ? ಎಂದುಕೊಂಡಳು. "ಆದರೆ ಯಾವ ಮುಖದಿಂದ ಹೋಗಲಿ?" ಎನ್ನಿಸಿತವಳಿಗೆ.

ವೆಂಕಣ್ಣ "ಹೋಗಿ ಬರುತ್ತೀಯಾ ಕೆಲವು ದಿವಸ?" ಎಂದು ಕೇಳಿದ.

ಆಗಲೂ ಜಲಜಾಕ್ಷಿ ಮೌನವಾಗಿದ್ದಳು. ವೆಂಕಣ್ಣ ಹೆಚ್ಚು ಒತ್ತಾಯ ಮಾಡಲಿಲ್ಲ. ತಾನೇಹೋಗಿ ಬರಬೇಕು ನಾಲ್ಕು ದಿವಸ ಎಂದರೆ, ಅವು ಶಾಲೆಯ ಆರಂಭದ ದಿನಗಳು. ಸ್ಕೂಲಿಗೆ ಹೊಸದಾಗಿ ಹುಡುಗರು ಹೆಸರು ಹಚ್ಚುವ ದಿನಗಳು. ಕೆಲಸ ತುಂಬ ಹೆಚ್ಚಾಗಿತ್ತು. ನಿರುಪಾಯನಾಗಿ ಸುಮ್ಮನಾದ.

ಮುಂದೆ ಮೂರನೆಯ ದಿನವೇ ಸಾಂಗಲಿಯಿಂದ ಎರಡು ಸಾಲಿನ ಪತ್ರವೊಂದು ಬಂದಿತು. "ನಿನ್ನೆ ರಾತ್ರಿ ಅವ್ವ ಹೋಗಿಬಿಟ್ಟಳು" ಎಂದು ನಾರಾಯಣರಾಯರು ಲೀಗನಿದೆ ಬರೆದಿದ್ದರು.



## -೧೫-

ಮೋಹನ ಮನೆ ಬಿಟ್ಟು ಹೋಗಿ ಈಗ ಸುಮಾರು ಮೂರು ವರ್ಷಗಳೇ ಸಂದಿವೆ.

ಈ ಅವಧಿಯಲ್ಲಿ ನಾರಾಯಣರಾಯರ ಜೀವನದಲ್ಲಿ ಸಾಕಷ್ಟು ಬದಲಾವಣೆಯಾಗಿದೆ. ಅವಧಿಗಿಂತ ಮೊದಲೇ ಕೆಲಸದಿಂದ ನಿವೃತ್ತವೇತನವನ್ನು ಪಡೆದು, ಕೆಲಸದ ಭಾರವನ್ನು ಇಳಿಸಿಕೊಂಡಿರುವರು. ಮೊದಲೇ ಕೋಮಲವಾಗಿದ್ದ ಅವರ ಹೃದಯವೀಗ ಇನ್ನೂ ಹಣ್ಣಾಗಿದೆ. ಆದರಂತೆಯೇ ಅವರ ದೇಹದಸ್ಥಿತಿಯಲ್ಲಿಯೂ ವ್ಯತ್ಯಾಸವನ್ನು ಗುರುತಿಸಬಹುದಾಗಿದೆ. ಶರೀರವೆಲ್ಲ ಶಿಥಿಲವಾಗಿದೆ. ಕೂದಲು ಬೆಳ್ಳಗಾಗಿವೆ. ಮುಖಕ್ಕೆ ಸುಕ್ಕು ಸೇರಿಕೊಂಡಿದೆ. ಅವರಿಗೆ ಆಹಾರ–ವಿಹಾರ ಯಾವುದರಲ್ಲಿಯೂ ಹೆಚ್ಚಿನ ಆಸಕ್ತಿ ಉಳಿದಿಲ್ಲ. ಇದು ಬೇಕು, ಅದು ಬೇಡ ಎಂದು ಅವರೆಂದುದೇ ಇಲ್ಲ.

ಸಾಂಗಲಿಯನ್ನು ಬಿಟ್ಟು ಶಹಾಪೂರಿಗೆ ಬಂದು ಅಲ್ಲಿಯ ಆಚಾರ್ಯಗಲ್ಲಿಯಲ್ಲಿಯ ತಮ್ಮ ಸ್ವಂತ ಮನೆಯಲ್ಲಿ ನಿಂತಂದಿನಿಂದ ಜಲಜಾಕ್ಷಿ ಮಾವನ ಹತ್ತಿರವೇ ಹೆಚ್ಚಾಗಿ ಇರುತ್ತಿದ್ದುದಲ್ಲದ ಅವರ ಊರುಗೋಲಿನಂತಾಗಿರುವಳು. ಜಲಜಾಕ್ಷಿ ಒಂದು ತಾಸು ಇರದಿದ್ದರೆ ಅವರ ಯಾವ ಕೆಲಸವೂ ನಡೆಯುವಂತಿಲ್ಲ. ಸ್ನಾನಕ್ಕೆ ಎಬ್ಬಿಸಬೇಕು ಜಲಜಾಕ್ಷಿ; ಊಟಕ್ಕೆ ಬದಿಗೆ ಕುಳಿತಿರಬೇಕು ಜಲಜಾಕ್ಷಿ;ಹೊರಗೆ ತಿರುಗಾಡಲು ಹೊರಟರೆ ಶರ್ಟು ಕೋಟು ತೊಡಿಸಿ ಜೊತೆಗೆ ನಡೆಯಬೇಕು ಜಲಜಾಕ್ಷಿ; ರಾತ್ರಿಯಾದರೆ "ಮಾವಾ ವೇಳೆಯಾಯಿತು. ಮಲಗುವುದಿಲ್ಲವೆ?" ಎಂದು ಎಚ್ಚರಿಸಬೇಕು ಜಲಜಾಕ್ಷಿ; ಮತ್ತೆ ಮುಂಜಾನೆ ಕಾಫಿಯ ಕಪ್ಪಿನೊಂದಿಗೆ ಎಬ್ಬಿಸಬೇಕು ಜಲಜಾಕ್ಷಿಯೇ! ಹೀಗೆ ಅವರ ಜೀವನದ ಬಹುಭಾಗವನ್ನು ಜಲಜಾಕ್ಷಿ ವ್ಯಾಪಿಸಿಬಿಟ್ಟಿದ್ದಾಳೆ. ಒಟ್ಟಿನಲ್ಲಿ ನಾರಾಯಣರಾಯರ ಬೆಂದ ಹೃದಯಕ್ಕೆ ಬೆಣ್ಣೆಯಂತಿದೆ ಜಲಜಳ ವಾತ್ಸಲ್ಯ! ಅವರಿಗಾಗಿ ಅವಳು ಮರಗುತ್ತಾಳೆ; ಅವಳನ್ನು ಕಂಡು ಅವರ ಹೃದಯ ಮರಗುತ್ತದೆ.

ವೆಂಕಣ್ಣನೂ ಮಗಳ ಸಲುವಾಗಿ ಬಹಳ ಚಿಂತಿಸುತ್ತಾನೆ. ಆದರೂ ಆತ ಏನೂ ಮಾಡಲಾರದವನಾಗಿದ್ದ. ಮೊದಲು ಜಲಜಾಕ್ಷಿಯನ್ನು ಮದುವೆಯಾಗಲು ಒಪ್ಪಿದ್ದರೂ ಈಗ ತಿರಸ್ಕರಿಸಿ ತಂದೆಯನ್ನು ಎದುರು ಹಾಕಿಕೊಳ್ಳಲಾರದೆ ಮೋಹನ ಓಡಿ ಹೋಗಿರುವನೆಂದು ಆತನೂ ತಿಳಿದಿದ್ದಾನೆ. ಹಾಗೆಂದು ನಾರಾಯಣರಾಯರೇ ಆಗಲಿ, ಬೇರೆ ಯಾರೇ ಆಗಲಿ ಅವನಿಗೆ ಹೇಳಿರದಿದ್ದರೂ, ಅದು ಬಹುಶಃ ಎಲ್ಲರಿಗೂ ತಿಳಿದ ವಿಚಾರವಾಗಿತ್ತು. ಮಗಳರೋಗ ಅವನಿಗೊಂದು ದೊಡ್ಡ ಚಿಂತೆಯಾಗಿದೆ. ಔಷಧೋಪಚಾರಕ್ಕೆ ಅದು ಮಣಿದಿರಲಿಲ್ಲ. ಗೌರತ್ತೆಯವರ ಹರಕೆಯನ್ನೂ ಯಾವ ದೇವರೂ ಈಡೇರಿಸಿರಲಿಲ್ಲ. ಅಂತೂ ಎಲ್ಲರಿಗೂ ಅದೊಂದು ಬಿಡಿಸಲಾರದ ಸಮಸ್ಯೆಯಾಗಿ ಸದಾ ಕಾಲ ಹೃದಯವನ್ನು ಕೊರೆಯುತ್ತಿದ್ದಿತು.

ಜಲಜಾಕ್ಷಿ ಈಗ ಹೆಚ್ಚಾಗಿ ನಾನಣ್ಣ ಮಾವನ ಜೊತೆಯಲ್ಲಿ ಶಹಪೂರದಲ್ಲಿಯೇ ಇರುತ್ತಿದ್ದಳಾದರೂ ಅವಳ ಮನಸ್ಸು ಮನೆಯಲ್ಲಿ ಗೌರತ್ತೆ ಮತ್ತು ಪುಟ್ಟತಮ್ಮ ಸುರೇಶರ ಸಲುವಾಗಿ ಬೆಳಗಾವಿಯಕಡೆಗೆ ಎಳೆಯುತ್ತಿತ್ತು. ವಾರದಲ್ಲಿ ಒಂದೆರಡು ಸಲವಾದರೂ ಬೆಳಗಾವಿಯ ಮನೆಗೆ ಬಂದು ಅಜ್ಜಿಯನ್ನು ಕಂಡು, ತಮ್ಮನಿಗೆ ಲಲ್ಲೆಮಾಡಿ ಬರುತ್ತಿದ್ದಳು, ಆದರೆ ನೆರೆಮನೆ ಕುಸುಮೆಯವರು ಮನೆಗೆ ಬಂದಾಗ ಮಾತ್ರ ಎರಡು ದಿನ ಅಲ್ಲಿಯೇ ಕಳೆಯುತ್ತಿದ್ದಳು.

ಆದರೆ ಈ ಸಲ ಕುಸುಮೆಯನ್ನೇ ಎರಡು ದಿನ ಶಹಾಪೂರಿನಲ್ಲಿ ಇರಿಸಿಕೊಂಡಿದ್ದಳು. ಆ ಎರಡು ದಿನ ಕುಸುಮೆಯು ಮಗುವನ್ನು ಎತ್ತಿಕೊಂಡು ಕೆಳಗೆ ಇಳಿಸಿರಲೇ ಇಲ್ಲವೆಂದರೆ ತಪ್ಪಲ್ಲ. ಕುಸುಮೆ ಅವಳ ಜೊತೆಗೆ ಇದ್ದ ಆ ಎರಡು ದಿವಸ ಅವಳ ಮನಸ್ಸಿಗೆ ದೊರೆತ ನೆಮ್ಮದಿಗೆ ಮಿತಿಯಿಲ್ಲ. ಅವಳ ಉತ್ಸಾಹವನ್ನು ಕಂಡು ನಾನಣ್ಣಮಾವಾ ಕೂಡ ಸಂತೋಷಪಟ್ಟರು. ಆದರೆ ಜೊತೆಗೆ ಅವರ ಹೃದಯದಲ್ಲಿ ಕನಿಕರ–ವೇದನೆಗಳೂ ಉಂಟಾದುವು.

ಮೂರನೆಯ ದಿನ ಸಾಯಂಕಾಲ ಕುಸುಮೆಯ ಗಂಡ ಅವಳನ್ನು ಕರೆದುಕೊಂಡು ಹೋಗಲು ಸ್ವತಃ ಬಂದರು. ನಡುವಿನ ದೊಡ್ಡಕೋಣೆಯಲ್ಲಿ ಎಲ್ಲರೂ ಕಾಫಿ ಕುಡಿಯುತ್ತ ಕುಳಿತಿದ್ದರು. ನಾರಾಯಣರಾಯರು ಅವರ ಸಂಗಡ ಮಾತನಾಡುತ್ತ ಕುಳಿತಿದ್ದರು. ಮಾತಿನಲ್ಲಿ ನಾಡಕರ್ಣಿಯವರ ಊರು, ವಿದ್ಯಾಭ್ಯಾಸ, ನೌಕರಿ, ಅವರ ಮೇಲಧಿಕಾರಿ ಮೊದಲಾದ ವಿಷಯಗಳು ಬಂದು ಹೋದವು.

"ಮುಂಬಯಿಯಲ್ಲಿ ಮನೆಯ ತೊಂದರೆ ಬಹಳೇ ಇರಬಹುದಲ್ಲವೇ?" ನಾರಾಯಣರಾಯರು ಕೇಳಿದರು.

"ಇರದೆ ಏನ್ರೀ? ನಾನು ಎರಡು ರೂಮುಗಳನ್ನು ದೊರಕಿಸಬೇಕಾದರೆ ಸಾಕುಸಾಕಾಯಿತು" ಎಂದರು.

"ಬಾಡಿಗೆ ಕೂಡ ಹೆಚ್ಚೇ ಇರಬಹುದು."

"ಹೆಚ್ಚು! ಕೇಳುವುದೇನು? ಮತ್ತೆ ಬಾಡಿಗೆಗಿಂತ ಪಗಡಿಯದೇ ಕಠಿಣ!"

"ಕಠಿಣರೇಪಾ".

"ನಾನು ನೋಡ್ರಿ. ಎರಡು ರೂಮು ದೊರಕಿಸಬೇಕಾದರೆ ಮೂರು ಸಾವಿರ ಲಂಚ ಕೊಡಬೇಕಾಯಿತು" ಎಂದರು ನಾಡಕರ್ಣಿ.

ಅಷ್ಟರಲ್ಲಿ ಶಾಮ ಕೈಯಲ್ಲಿ ಪುಸ್ತಕಗಳನ್ನು ಹಿಡಿದುಕೊಂಡು ಕಾಲೇಜದಿಂದ ಬಂದ. ಆತ ಬೆಳಗಾವಿಯಲ್ಲಿಯೇ ಆರಂಭವಾದ "ಲಿಂಗರಾಜ ಕಾಲೇಜ"ನಲ್ಲಿ ಬಿ. ಎ. ಓದುತ್ತಿದ್ದ. ಅವನನ್ನು ನೋಡಿ ನಾಡಕರ್ಣಿ ತುಸು ಆಶ್ಚರ್ಯಯುಕ್ತ ಸ್ವರದಿಂದ,

"ಇವ...ರು...?" ಎಂದರು.

"ಈತ ನನ್ನ ಮಗ. ಇಲ್ಲಿಯೇ ಬಿ. ಎ. ಫೈನಲ್ ಓದುತ್ತಾನೆ. " ಎಂದು ನಾರಾಯಣರಾಯರು ಹೇಳಿ, "ಬಾ ಶಾಮಿ, ಕುಳಿತುಕೋ. ಇವರು ನಮ್ಮ ಕುಸುಮಕ್ಕನ ಗಂಡ. ವಿ. ನಾಡಕರ್ಣಿಯವರು" ಎಂದರು.

"ನಮಸ್ಕಾರ ಸಾರ್" ಎಂದು ಶಾಮ ನಾಡಕರ್ಣಿ ಅವರಿಗೆ ಕೈ ಮುಗಿದ.

ನಾಡಕರ್ಣಿಯವರು ಪ್ರತಿ ನಮಸ್ಕಾರ ಹೇಳಿ "ನಿಮ್ಮನ್ನು ಎಲ್ಲಿಯೋ ನೋಡಿದಂತೆ ಅನಿಸುತ್ತದೆ" ಎಂದರು ತಡವರಿಸುತ್ತ.

"ಹೀಗೇನು. ಕ್ಷಮಿಸಿರಿ. ನನಗೇನೂ ಲಕ್ಷಕ್ಕೆ ಬರಲೊಲ್ಲದು." ಎಂದು ಶಾಮ ತಪ್ಪಿತಸ್ಥನಂತೆ ನುಡಿದ.

ಜಲಜಾಕ್ಷಿ ಶಾಮನಿಗೂ ಕಾಫಿ ತಿಂಡಿ ತಂದಿತ್ತಳು.

ಮಾತು ಮತ್ತೆ ಬೇರೆ ವಿಷಯದ ಕಡೆಗೆ ತಿರುಗಿತು.

ಆರು ಹೊಡೆಯುತ್ತ ಬಂದಾಗ, "ಕತ್ತಲೆಯಾಗುತ್ತದೆ. ಮತ್ತೆ ಬರುತ್ತೇವೆ" ಎಂದು ನಾಡಕರ್ಣಿಯವರು ಹೊರಡಲನುವಾದರು, ನಾರಾಯಣರಾಯರು ಜಲಜಾಕ್ಷಿ, ಶಾಮ ಎಲ್ಲರೂ ಶಹಾಪೂರಿನ ಪೋಸ್ಟಾಫೀಸಿನವರೆಗಹೋಗಿ ನಾಡಕರ್ಣಿ ದಂಪತಿಗಳನ್ನು ಕಳುಹಿಸಿ ಬಂದರು.

× × ×

ಮರುದಿನ ಮಧ್ಯಾಹ್ನ ಕುಸುಮಾ ಜಲಜಾಕ್ಷಿಯ ಕಡೆಗೆ ಧಾವಿಸಿ ಬಂದಳು. ಅವಳೊಂದು ಸಮಾಚಾರವನ್ನು ಉತ್ಸಾಹದಿಂದ ಹೇಳಲೆಂದು ಬಂದಿದ್ದಳು. ಅವಳ ಗಂಡನ ಆಫೀಸಿನಲ್ಲಿ ಶಾಮನಂಥವರೇ ಒಬ್ಬರು ಇದ್ದಾರೆ. ಅವರ ಹೆಸರೇನೋ ನೆನಪಿಲ್ಲ. ಆದರೆ ನಿನ್ನೆ ಶಾಮನನ್ನು ಕಂಡ ಕೂಡಲೇ ನಾಡಕರ್ಣಿ ಅವರಿಗೆ ಆತನದೇ ನೆನಪಾಯಿತು. ಆತ ಶಾಮನ ಅಣ್ಣ ಆಗಿರಬಹುದೇ? ಎಂದು ನಾಡಕರ್ಣಿಯವರ ಸಂದೇಹ.

ಜಲಜಾಕ್ಷಿಯ ಕಥೆಯನ್ನು ಕುಸುಮೆಯಿಂದ ಕೇಳಿ ತಿಳಿದ ನಾಡಕರ್ಣಿಯವರು ತಮ್ಮ ತರ್ಕದ ಕುದುರೆಯನ್ನೇರಿ ಹೊರಟಿದ್ದರು.

ಜಲಜಾಕ್ಷಿ ಕುಸುಮೆ ಹೇಳಿದುದೆಲ್ಲವನ್ನೂ ಮೌನವಾಗಿ ಕೇಳಿ ನಿಟ್ಟುಸಿರುಬಿಟ್ಟಳು. ಅವಳ ಮುಖದ ಮೇಲೆ ಮತ್ಯಾವ ಬದಲಾವಣೆಯನ್ನೂ ಕುಸುಮೆ ಗಮನಿಸಲಿಲ್ಲ. ತಾನು ಹೇಳುವುದನ್ನು ಕೇಳಿದ ಮೇಲೆ ಜಲಜಾ ಸಂತೋಷ–ಸಂಭ್ರಮದಿಂದ ಹಿಗ್ಗಬಹುದೆಂದೂ ಕುಸುಮಾ ತಿಳಿದು, ಅಷ್ಟೊಂದು ಉತ್ಸಾಹದಿಂದ ಎಲ್ಲವನ್ನೂ ಹೇಳಿದ್ದಳು. ಆದರೆ ಜಲಜಾಕ್ಷಿ ಯಾವ ಪ್ರತಿಕ್ರಿಯೆಯನ್ನೂ ತೋರಲಿಲ್ಲ. ಅದನ್ನು ಕಂಡು ಕುಸುಮಾ.

"ಯಾಕೆ ಜಲಜಾ, ನಿನಗೇನೆನ್ನಿಸಿತು?" ಎಂದು ಕೇಳಿದಳು.

"ಏನೆನ್ನಿಸಬೇಕು ಕುಸುಮಾ?"

"ಅವನೇ ನಿನ್ನ ಮೋಹನ ಆಗಿದ್ದರೆ?..."

"ರ?"

"ತಿರುಗಿ ಬರಲಾರನೆ?"

"ನಾನೇನು ಹೇಳಲಿ? ಮನಸ್ತಾಪ ಮಾಡಿಕೊಂಡು ಹೋಗಿದ್ದಾನೆ, ಬರಬೇಕಾಗಿದ್ದರೆ ಇಷ್ಟು ದಿವಸಬಾರದೆ ಇರುತ್ತಿದ್ದನೆ?"

ಹೀಗೆ ನಿರಾಶಾಯುಕ್ತಳಾಗಿ ಮಾತನಾಡಿದ್ದರೂ ಅವಳ ಅಂತರ್ಯದಲ್ಲಿ "ಆತನೇ ಮೋಹನನಾಗಿರಲಿ ದೇವರೇ, ತಿರುಗಿ ಬರುವಂಥ ಬುದ್ಧಿ ಹುಟ್ಟಲಿ. ಬರಲಿ, ಬಾರದಿರಲಿ. ಎಲ್ಲಾದರೂ ಸುಖರೂಪವಾಗಿದ್ದರೂ ಸಾಕು" ಎಂದು ಪ್ರಾರ್ಥಿಸಿದಳು. ಅವಳ ಮನಸ್ಸು ಮೋಹನ ಇಂದಿಲ್ಲ, ನಾಳೆ ಎಂದಾದರೂ ಒಂದು ದಿನ ಬಂದೇ ಬರುವನೆಂದು ಹೇಳುತ್ತಿತ್ತು.

ಇಬ್ಬರೂ ಒಂದೆರಡು ನಿಮಿಷ ಮೌನವಾಗಿ ಕುಳಿತಿದ್ದರು.

ಬಾಗಿಲ ಹತ್ತಿರ ಏನೋ ಸದ್ದಾದಂತಾಯಿತು. ಜಲಜಾಕ್ಷಿ ಎದ್ದು ಹೋಗಿ ನೋಡಿದಳು. ಬಾಗಿಲಲ್ಲಿ ನಾರಾಯಣರಾಯರು ನಿಂತಿದ್ದಾರೆ. ಅವರ ಮುಖ ನೋಡಿ ಅವರು ತಮ್ಮ ಮಾತು ಕೇಳಿರಬೇಕೆಂದು ಜಲಜಾಕ್ಷಿ ಊಹಿಸಿದಳು. ಅವರು ಆ ಕಡೆಗೆ ನಡೆದರು,

"ಮಾವಾ" ಎಂದಳು ಜಲಜಾಕ್ಷಿ.

"ಆಂ? ಏನು?"

"ಕುಸುಮಾ ಬಂದಿದ್ದಾಳೆ."

"ಆಂ? ಹೌದು. ಒಳ್ಳೇದು. ಕೂಡ್ರಿ." ಎನ್ನುತ್ತ ಪಡಸಾಲೆಯತ್ತ ನಡೆದರು.

ಕುಸುಮಾ ತಿರುಗಿಹೋದನಂತರ ಜಲಜಾಕ್ಷಿ ಮಾವನ ಕೋಣೆಗೆ ಬಂದಳು. ಅವರು ಕಣ್ಣು ಮುಚ್ಚಿ

ಕೊಂಡು ಕಾಟಿನ ಮೇಲೆ ಅಡ್ಡಾಗಿದ್ದರು. ಅವರ ಬದಿಯಲ್ಲಿ ಕುಳಿತುಕೊಳ್ಳುತ್ತ ಜಲಜಾಕ್ಷಿ "ಮಾವಾ" ಎಂದಳು.

"ಯಾರು ಜಲಜಾ?...ಏನು?" ಕಣ್ತೆರೆದು ನೋಡಿ ಕೇಳಿದರು.

"ಕುಸುಮಾ ಹೇಳಿದ್ದು ಕೇಳಿದೆಯೊ?"

"ಹೂಂ."

ಇಬ್ಬರೂ ಕೆಲ ಕಾಲ ಮೌನವಾದರು.

ನಂತರ ಜಲಜಾಕ್ಷಿ,

"ಮಾಮಾ ನಾನೊಂದು ಮಾತು ಕೇಳಲೇ?" ಎಂದಳು ಬಹು ಸಾವಕಾಶವಾಗಿ.

"ಏನು? ಕೇಳು."

"ಅಂದು ನೀನು ಅವನಿಗೆ ಏನು ಅಂದಿ? ಅವನು ಯಾಕೆ ಅಷ್ಟು ಸಿಟ್ಟಾಗಿ ಹೊರಟು ಹೋದ?" ನಡುಗುವ ಧ್ವನಿಯಿಂದ ಜಲಜಾಕ್ಷಿ ಕೇಳಿದಳು.

ರಾಯರು ಏನೂ ಹೇಳಲಿಲ್ಲ. ಮುಖವನ್ನು ಗೋಡೆಯ ಕಡೆಗೆ ಹೊರಳಿಸಿದರು. ಅವರ ಮುಖದಲ್ಲಿ ದುಃಖ ಪಶ್ಚಾತ್ತಾಪಗಳ ಛಾಯೆ. ವ್ಯಾಪಿಸಿ ಮುಖ ಇನ್ನೂ ಚಿಕ್ಕದಾಯಿತು. ಕಣ್ಣಂಚಿನಲ್ಲಿ ನೀರಹನಿ ಕಂಡವು.ಅದನ್ನು ನೋಡಿ ಜಲಜಾಕ್ಷಿ ನಡುಗುವ ಕೈಗಳಿಂದ ಅವರ ಮುಖವನ್ನು ತನ್ನ ಕಡೆಗೆ ಹೊರಳಿಸಿಕೊಂಡು " ಬೇಡ ಮಾಮಾ...ಹೇಳಬೇಡ" ಎಂದಳು.

ರಾಯರು ಉಗುಳು ನುಂಗುತ್ತ "ಇಲ್ಲ, ಜಲಜಾ ಹೇಳುತ್ತೇನೆ..." ಎಂದರು.

"ಬೇಡ, ಬೇಡ."

ಜಲಜಾಕ್ಷಿ ಅವರ ತಲೆಯಮೇಲೆ ತಲೆಯಿಟ್ಟು ಒರಗಿದಳು. ರಾಯರ ಕೈ ಅವಳ ತಲೆಯನ್ನು ನೇವರಿಸುತ್ತಲಿತ್ತು. ತುಸು ವೇಳೆ ತಡೆದು ರಾಯರು,

"ಅದರಲ್ಲಿ ಅವನದೂ ತಪ್ಪಿಲ್ಲ...ನಾನೇ ಹಾಗೆ ಅನ್ನಬಾರ..." ಎಂದು ಏನೋ ಹೇಳಲಿದ್ದರು.

ಆದರೆ ಜಲಜಾಕ್ಷಿ ಒಮ್ಮೆಲೇ ಅವರ ಬಾಯ ಮೇಲೆ ಕೈಯಿಟ್ಟು "ಮಾಮಾ ಹೇಳಬೇಡ. ನನ್ನಾಣೆ" ಎಂದು ಹೇಳಿ ಅಲ್ಲಿಂದ ಎದ್ದು ಹೊರಗೆ ಹೋದಳು. ರಾಯರು ಮೌನವನ್ನು ಧರಿಸಿದರು.

ರಾಯರು ಮೌನ ಧರಿಸಿದರೂ ಅಂದು ಮೋಹನ ಹೊರಟುಹೋದ ಚಿತ್ರ ಅವರ ಬಗೆಗಣ್ಣೆದುರು ಮೂಡಿನಿಂತಿತು.

ಅಂದು ತಾವು ಆಫೀಸಿನಿಂದ ಮನೆಗೆ ಬರುವುದರೊಳಗೆ ಜಲಜಾ ಹೊರಟುಹೋಗಿದ್ದಳು. ತಾಯಿ ಎಲ್ಲವನ್ನೂ ಹೇಳಿದರು. ಮನೆಯಲ್ಲಿ ಮೋಹನ ಇರಲಿಲ್ಲ. ಶಾಮುನನ್ನು ಕರೆದು "ನೀನು ಆಗಲೇ ಆಫೀಸಿಗೆ ಬಂದು ನನಗೇಕೆ ತಿಳಿಸಲಿಲ್ಲ? ಎಲ್ಲಿಂದಲಾದರೂ ಫೋನನ್ನಾದರೂ ಮಾಡಬಹುದಿತ್ತಲ್ಲ?" ಎಂದು ಕೇಳಿದ್ದರು.

"ಹೌದು. ನಾನು ಕೂಡಲೇ ಆಫೀಸಿಗೆ ಹೊರಟಿದ್ದೆ. ಆದರೆ ಜಲಜಾನೇ ತಡೆದಳು..." ಎಂದ ಶಾಮು.

"ಅವನೇನು ಮಾಡಿಯಾನು? ಅವಳು ಆಣೆ ಹಾಕಿದಳು" ನಡುವೆಯೇ ಹೇಳಿದ್ದರು ತಾಯಿ. ಅವರಿಗೆ ಮೊಮ್ಮಗಳ ಮೇಲೆ ಕೋಪ ಬಂದಿತ್ತು.

ತಾನು ಸುಮ್ಮನಾಗಿದ್ದೆ. ಹೀಗೆ ತನಗೆ ಹೇಳದೆ ಜಲಜಾ ಏಕೆ ಹೋದಳು? ಬಹುಶಃ ಮೋಹನನ ಕೂಡ ಏನಾದರೂ ಮನಸ್ತಾಪವಾಗಿರಬೇಕು.

"ಬೆಳಗಾವಿಯಿಂದ ನಿಜವಾಗಿಯೂ ಪತ್ರ ಬಂದಿತ್ತೇನು?" ತಾನು ಕೇಳಿದ್ದ.

## ಉರುವಲ ಕಾಟ!



ಓಣಿ-ಓಣಿಯಲಿ ಸೆರೆಯಂಗಡಿ ಇರು-
ವೀ ಸುಧಾರಿಸಿದ ಕಾಲದಲಿ
ಇರುವೊಂದಡ್ಡೆಯಲೇ ಕ್ಯೂ ನಿಲಬೇಕು
ಕಾರವಾರದಲ್ಲಿ—ಉರುವಲ
ಕಟ್ಟಿಗೆ ಕೊಳ್ಳುವಲಿ!

– ಎಂ. ಅಕಬರ ಅಲಿ

"ಏನೋಪ್ಪ. ನಾನಂತೂ ನೋಡಲಿಲ್ಲ." ತಾಯಿ ಹೇಳಿದ್ದರು.

ಜಲಜಾ ತಮಗೆ ಬರೆದಿಟ್ಟಿದ್ದ ಪತ್ರವನ್ನು ರಾಯರು ಎರಡೆರಡು ಸಲ ಓದಿದ್ದರು. ಆದರಿಂದ ಅವರಿಗೆ ಏನೂ ತಿಳಿಯಲಿಲ್ಲ. "ಮೋಹನ ಬರಲಿ, ಅವನನ್ನೇ ಕೇಳೋಣ" ಎಂದುಕೊಂಡರು.

ಆದರೆ ಸಂಜೆ ಕಳೆದು ರಾತ್ರಿ ಹತ್ತು ಹೊಡೆದರೂ ಮೋಹನ ಬರಲಿಲ್ಲ. ಹನ್ನೆರಡಾದರೂ ಬರಲಿಲ್ಲ. ಸಿನೇಮಾಕ್ಕೆ ಹೋಗಿದ್ದರೆ ಆಗಲೇ ಬರಬೇಕಾಗಿತ್ತು.

ತಮ್ಮ ಮನಸ್ಸಿಗೆ ಬಹಳೇ ಬೇಸರವಾಯಿತು. ಅದರ ಜೊತೆಗೇ ತಂಗಿ ಪದ್ದಕ್ಕನ ನೆನಪೂ ಬಂದು, ಜಲಜಳ ಬಗ್ಗೆ ಹೆಚ್ಚಿನ ಮರುಕವುಂಟಾಯಿತು. ಮೋಹನನ ಮೇಲೆ ಮುನಿಸೂ ಬಂದಿತು. ಇದಕ್ಕೆ ಕೊನೆ ಏನು? ಎಂದು ಚಿಂತಿಸಿದ್ದರು. ಮೋಹನನಿಗೇ ತಿಳಿಸಿ ಹೇಳಿ ಮನವೊಲಿಸಬೇಕು. ಮೋಹನ ತಮ್ಮ ಮಾತನ್ನು ಎಂದೂ ಮೀರಲಾರ—ಎಂದು ತಮಗೇ ಸಮಾಧಾನ ಹೇಳಿಕೊಂಡರು.

ಮರುದಿನ ಮಧ್ಯಾಹ್ನವಾದರೂ ಮೋಹನನ ಸುಳಿವಿಲ್ಲ. ಆಗಲೇ ಶಾಮು ತನ್ನ ಅಣ್ಣನ ಗೆಳೆಯರನ್ನೆಲ್ಲ ಭೆಟ್ಟಿಯಾಗಿ ಬಂದಿದ್ದ. ಧೋಂಡೋಪಂತರಿಗೂ ಸಮಾಚಾರ ಹೇಗೋ ತಿಳಿದು, ಅವರೂ ಗಾಬರಿಗೊಂಡು ಬಂದು, "ಯಾಕೆ? ಏನಾಯಿತು? ಎಲ್ಲಿಗೆ ಹೋಗಿರುವನು?" ಎಂದು ಕೇಳಿ ಕೇಳಿ ಹೋಗಿದ್ದರು.

ಓಣಿಯಲ್ಲಿಯ ಆಚೆ-ಈಚೆಮನೆಯವರಿಗೆಲ್ಲ ಸಮಾಚಾರ ತಿಳಿದು ಹೋಗಿತ್ತು. ಅದರಿಂದ ತಮಗೆ ಹೆಚ್ಚಿನ ನೋವಾಗಿತ್ತು. ಅವಮಾನದಿಂದ ಕುಗ್ಗಿ ಹೋಗಿದ್ದರು. ಅಂದು ಆಫೀಸಿಗೆ ರಜೆ ಹಾಕಿ ಮನೆಯಲ್ಲಿಯೇ ಉಳಿದಿದ್ದರು.

ಅಂದು ಯಾರೂ ಊಟವನ್ನೇ ಮಾಡಲಿಲ್ಲ.

ಸಾಯಂಕಾಲ ಮೋಹನ ಮನೆಗೆ ಬಂದಾಗ ಅಜ್ಜಿಯ ಸಂತೋಷಕ್ಕೆ ಪಾರವುಳಿಯಲಿಲ್ಲ. ಮೊಮ್ಮಗನ ಮೈದಡವಿ "ಎಲ್ಲಿಹೋಗಿದ್ದೆಯೋ ಮೋಹನಾ? ಹೇಳಿಯಾದರೂ ಹೋಗಬಾರದೇನು? ಏಳು, ಕಾಲು ತೊಳೆದುಕೋ" ಎಂದಿದ್ದರು. ಮೋಹನ ಮೌನವಾಗಿಯೇ ಇದ್ದ. ತಮಗೆ ಕೋಪ ಬಂದು ಬಿಟ್ಟಿತ್ತು.

"ಇಷ್ಟು ಹೊತ್ತು ಎಲ್ಲಿ ಇದ್ದೆ?"

"ಗೆಳೆಯನ ಮನೆಯಲ್ಲಿದ್ದೆ" ಮೋಹನ ಹೇಳಿದ.

"ಯಾಕೆ?" ತಮ್ಮ ಧ್ವನಿ ಕಠೋರವಾಗಿತ್ತು.

"..............."

"ಇರಲಿ ಅದೆಲ್ಲ, ಕೂಸು ಹಸಿದಿರಬೇಕು.. ಮೊದಲು ಊಟ ಮಾಡಲಿ.ನೀನೂ ಉಣ್ಣು ನಿನ್ನೆಯಿಂದ ಬಾಯಲ್ಲಿ ಒಂದು ಹನಿ ನೀರು ಕೂಡ ಹಾಕಿಲ್ಲ" ತಾಯಿ ಹೇಳಿದ್ದರು.

ತಾವು ಅದನ್ನು ಗಮನಿಸದೆ "ಯಾಕೆ-ಹೇಳುವುದಿಲ್ಲವೇನು?" ಎಂದು ಮಗನನ್ನು ಕೇಳಿದ್ದರು.

ಆಗಲೂ ಮೋಹನ ಮೌನವಾಗಿಯೇ ಇದ್ದ.

"ಜಲಜಾ ಯಾಕೆ ಹೋದಳು?" ಎಂದು ತಾವು ಮತ್ತೆ ಕೇಳಿದಾಗ,

"ನನಗೆ ಗೊತ್ತಿಲ್ಲ" ಮೋಹನ ಉತ್ತರಿಸಿದ್ದ.

"ನೀನು ಅವಳಿಗೇನೆಂದೆ? ನಿನ್ನ ಮನಸ್ಸಿನಲ್ಲಾದರೂ ಏನಿದೆ?..."

ಮೋಹನ ಮೌನವಾಗಿಯೇ ಇದ್ದ.

"ಅವಳು ನಿನ್ನ ಸಲುವಾಗಿ ಇಷ್ಟು...ನಿನಗ ತಿಳಿಯೂದಿಲ್ಲ...ನನ್ನ ಮಾತು ಕೇಳು."

ಎಲ್ಲರೂ ಮೌನವಾಗಿದ್ದರು.

"ಇರಲಿ ಬಿಡು. ಅದೆಲ್ಲ ಈಗ ಯಾಕೆ?" ಎಂದು ತಾಯಿ ತಮಗೆ ನುಡಿದಿದ್ದರು. ಆದರೆ ತಮ್ಮ ಮನಸ್ಸು ಬಹಳೇ ವ್ಯಗ್ರವಾಗಿತ್ತು. ತಮ್ಮ ಸಹಜ ತಾಳ್ಮೆ ಕಳೆದೇ ಹೋಗಿತ್ತು.

"ಅಲ್ಲ, ಏನದು ಮೇಲಿಂದ ಮೇಲೆ ಕಿರಿಕಿರಿ?... ಇದು ನನಗೆ ಸಾಧ್ಯವಿಲ್ಲ. ಇಷ್ಟಾಗಿ ನೀನು ಒಪ್ಪದ ಹಾಗೆ ಏನಿದೆ?"

ಆಗ ಮೋಹನ ಬಾಯಿ ಬಿಚ್ಚಿದ್ದ. "ಒಪ್ಪಬಹುದು, ಆದರೆ......"

"ಆದರೆ ಗೀದರೆ...ನನ್ನ ಮನೆಯಲ್ಲಿ ನಡೆಯೋದಿಲ್ಲ" ತಾವು ಗುಡುಗಿದ್ದರು.

ಬಹುಶಃ ತನ್ನ ಉಗ್ರರೂಪ ನೋಡಿ ಮೋಹನ ಗಾಬರಿಯಾಗಿರಬೇಕು. ಎಂದೂ ಇಲ್ಲದ ಪ್ರತಿರೋಧ ಆತನಲ್ಲಿ ಆ ಕ್ಷಣಕ್ಕೆ ಉಕ್ಕಿ ಬಂದಿತ್ತು. ಬಹುಶಃ ತಾನೇನು ಮಾಡುತ್ತೇನೆ ಎಂಬುದರ ಅರಿವೂ ಇಲ್ಲದೆ ಆತ,

"ಹಾಗೇ ಆಗಲಿ!"

ಎಂದವನೇ ಬಿರಬಿರನೇ ಹೊರಟೇ ಹೋಗಿದ್ದನು!

ತಾನೂ ಒಂದು ಕ್ಷಣ ಅಪ್ರತಿಭನಾಗಿದ್ದೆ.

"ಮೋನಾ, ಏ ಮೋಹನ ಇಲ್ಲಿ ಬಾರೋ" ಎಂದು ತಮ್ಮ ತಾಯಿ ಕೂಗಿದ್ದರು.

ಆತ ತಿರುಗಿ ನೋಡದೇ ಹೋಗಿ ಬಿಟ್ಟಿದ್ದ!

ಮನೆಯಲ್ಲಿ ಮಸಣದ ಮೌನ ಆವರಿಸಿತ್ತು.!

ಹಾಗೆ ಅಂದು ಹೋದವನ ವಿಚಾರ ಇಂದಿಗೂ ತಿಳಿದಿಲ್ಲ.

ತಾವು ಪಶ್ಚಾತ್ತಾಪದಿಂದ ಬೆಂದುಹೋಗಿದ್ದರು. ಎಂದೂ ಇಲ್ಲದ ಕೋಪ ಅಂದು ತಮಗೇಕೆ ಬಂದಿತ್ತು? ತಾನೇಕೆ ಹಾಗೆ ಉಗ್ರವಾಗಿ ಮಾತನಾಡಿದ್ದೆ? ಎಂದು ಸಾವಿರ ಸಲ ವಿಚಾರಿಸಿದ್ದಾರೆ. ಆದರೇನು?

ತಾವು ಹಾಗೆ ಸಿಟ್ಟಾದುದೂ ಮೋಹನನೂ ಹಾಗೆ ಒರಟುನುಡಿದು ಹೋದುದೂ ಎಲ್ಲವೂ ಈಗ ಆಶ್ಚರ್ಯಕರವಾಗಿ ಕಾಣುತ್ತದೆ. ಆದಲ್ಲ ಹಾಗೇಕೆ ನಡೆಯಿತು? ಎಂಥ ಕಾಡುವ ಕಾಲ?

ರಾಯರು ನಿಟ್ಟುಸಿರುಬಿಟ್ಟರು.

ಈ ಎಲ್ಲ ಚಿತ್ರ ಅವರ ಕಣ್ಣ ಮುಂದೆ ಕಟ್ಟಿ ಮತ್ತೊಮ್ಮೆ ಅದೇ ದುಃಖವನ್ನು ಅನುಭವಿಸಿದಂತಾಯಿತು.

"ಮಾಮಾ" ಎಂಬ ಜಲಜಾಕ್ಷಿಯ ಧ್ವನಿಯನ್ನು ಕೇಳಿ ಆ ಕಡೆಗೆ ಮುಖ ಹೊರಳಿಸಿದರು. ಬಾಗಿಲ ಹತ್ತಿರ ಅವಳು ನಿಂತಿದ್ದಳು. ಸಾಕಷ್ಟು ಅತ್ತುಬಂದಿದ್ದಳೆಂದು ಅವಳ ಕಣ್ಣುಗಳೇ ಹೇಳುತ್ತಿದ್ದವು! ಅವಳನ್ನು ನೋಡಿದ ವಾಮನರಾಯರು ಕನಿಕರದಿಂದ,

"ಹುಚ್ಚು ಹುಡುಗಿ" ಎಂದರು.

ಜಲಜಾಕ್ಷಿ ಮೌನವಾಗಿಯೇ ಇದ್ದಳು.

"ಅಲ್ಲಿಯೇ ಯಾಕೆ ನಿಂತಿದ್ದೀ? ಇಲ್ಲಿ ಬಾ." ರಾಯರು ಅಂತಃಕರಣದಿಂದ ಕರೆದರು.

"ಇಲ್ಲ. ನಿನಗೆ ಕಾಫಿ ಬೇಕೋ? ಅಥವಾ ಇಂದು ಮುಂಜಾನೆಯೂ ಹಾಲು ಕುಡಿದಿಲ್ಲ. ಹಾಲನ್ನೇ ಕಾಯಿಸಿ ಕೊಡಲೋ?" ಎಂದು ಕೇಳಿದಳು.

"ಇಲ್ಲಿ ಬಾ ಮೊದಲು."

"ಒಲ್ಲೆ. ಮೊದಲು ಹೇಳು."

"ಎರಡೂ ಬೇಡ."

"ಅಂದರೆ?"

"ಯಾಕೋ ಸೆಕೆ ಬಹಳವಾಗಿದೆ. ಲಿಂಬೀಹಣ್ಣು ಇದ್ದರೆ ಪಾನಕವನ್ನೇ ಮಾಡಿ ಕೊಡು [illegible]."

"ಹೂಂ" ಎಂದು ಹೇಳಿ ಅಲ್ಲಿ ನಿಲ್ಲಲಾರದೆ ಜಲಜಾಕ್ಷಿ ಒಳಗೆ ಹೊರಟು ಹೋದಳು.

ಅವಳು ಹೋಗುತ್ತಿರುವುದನ್ನೇ ನೋಡುತ್ತಿದ್ದರು ರಾಯರು.

- ೧೬ -

ರಾತ್ರಿ ಸುಮಾರು ಎಂಟೂವರೆ ಆಗಿರಬಹುದು. ವೆಂಕಣ್ಣ ಏನೋ ಓದಿಕೊಳ್ಳುವ ವಿಚಾರದಿಂದ ಹೊರಬಾಗಿಲು ಹಾಕಿ ಕೋಣೆಗೆ ನಡೆದಿದ್ದ. ಅಷ್ಟರಲ್ಲಿ "ಸರ್ ಸರ್" ಎಂದು ಬಾಗಿಲು ತಟ್ಟುವ ಧ್ವನಿ ಕೇಳಿಸಿತು. ಈ ವೇಳೆಯಲ್ಲಿ ಯಾರು ಬಂದಿರಬಹುದು ಎಂದು ವಿಚಾರಿಸುತ್ತ ವೆಂಕಣ್ಣ ಹೋಗಿ ಬಾಗಿಲು ತೆರೆದ.

"ಕ್ಷಮಿಸಿ ಸರ್, ತೊಂದರೆ......"

"ಓ! ಏನೋ ಕುಲಕರ್ಣಿ, ಈಗ? ಬಾ ಕೂಡ್ರು." ವೆಂಕಣ್ಣ ಅವನನ್ನು ಒಳಗೆ ಬರಮಾಡಿಕೊಂಡ.

"ತುಸು ಕೆಲಸವಿತ್ತು ಸರ್" ಎನ್ನುತ್ತ ಕುಲಕರ್ಣಿ. ಒಳಗೆ ಬಂದು ಕುರ್ಚಿಯ ಮೇಲೆ ಕುಳಿತುಕೊಂಡ.

ಕುಲಕರ್ಣಿ ಸುಮಾರು ೨೫ ವರ್ಷದ ತರುಣ ಶಿಕ್ಷಕ. ಬಿ. ಎಸ್‌ಸಿ ಮುಗಿಸಿ ವೆಂಕಣ್ಣನ "ಆದರ್ಶ ವಿದ್ಯಾಲಯ" ಹೈಸ್ಕೂಲಿನಲ್ಲಿ ಕಳೆದ ಎರಡು ವರ್ಷದಿಂದ ಶಿಕ್ಷಕನೆಂದು ಕೆಲಸ ಮಾಡುತ್ತಿದ್ದ. ಮೊದಲೊಮ್ಮೆಯೂ ಆತ ಅದೇ ಶಾಲೆಯಲ್ಲಿ ಕಲಿತ ವಿದ್ಯಾರ್ಥಿ. ಆದರಿಂದ ವೆಂಕಣ್ಣ ಆತನನ್ನು ಏಕವಚನದಲ್ಲಿಯೇ ಕರೆಯುತ್ತಿದ್ದ.

"ಮತ್ತೇನು ವಿಶೇಷ?" ವೆಂಕಣ್ಣ ಕೇಳಿದ.

"ಏನಿಲ್ಲ ಸರ್. ನಾಳೆ ನನ್ನ ಮಿತ್ರನ ಲಗ್ನವಿದೆ ಒಕ್ಕೋಡಿಯಲ್ಲಿ. ನಾನು ಹೋಗಬಾರದೆಂದೇ ಮಾಡಿದ್ದೆ. ಆದರೆ ಇಲ್ಲಿಯ ಕೆಲವು ಸ್ನೇಹಿತರೆಲ್ಲ ಹೊರಟು, ನನಗೂ ಬಹಳ ಜುಲುಮೆ ಮಾಡಿದರು. ಕಾರಣ ಹೆಡ್ ಮಾಸ್ತರರನ್ನು ಸಾಯಂಕಾಲ ಹೋಗಿ ಕಂಡು, ನಾಳೆ ನಾಳೆ ಒಂದು ದಿನ ರಜೆ ಕೊಡಿರಿ ಎಂದು..."

"ಮುಂದೆ ಇಲ್ಲ ಎಂದರೇ?"

"ಹೂಂ. ಇವು ವರ್ಷದ ಕೊನೆಯ ದಿನಗಳು ಅಲ್ಲದೆ ನಾಳೆ ಮೂರು ನಾಲ್ಕು ಜನ ರಜೆಯ ಮೇಲಿರುವರು. ಹೇಗೆ ಕೊಡಲಿ? ನೀನೇ ನನ್ನ ಸ್ಥಳದಲ್ಲಿದ್ದರೆ ಏನು ಮಾಡುತ್ತಿದ್ದೆ?" ಎಂದು ಒಮ್ಮೆಲೇ ಸಿಟ್ಟಿಗೇ ಎದ್ದರು.." ಕುಲಕರ್ಣಿಯ ಸ್ವರದಲ್ಲಿ ಅವಮಾನದ ಅಳಲು ಸೇರಿಕೊಂಡಿತ್ತು. ಕೊಡುವುದಿಲ್ಲ ಎಂದಿದ್ದರೆ ಅಡ್ಡಿಯಿಲ್ಲ. ಆದರೆ ಮನೆಗೆ ಹೋದವರ ಮೇಲೆ ಹೀಗೆ ಒಮ್ಮೆಲೇ ಸಿಟ್ಟಿಗೇಳಬೇಕೇ ಸರ್!" ಎಂದೂ ಕೇಳಿದ ಕುಲಕರ್ಣಿ.

ಹೆಡ್‌ಮಾಸ್ತರ ತುಸು ವಿಚಿತ್ರವ್ಯಕ್ತಿ. ಒಮ್ಮೆ ಇಲ್ಲ ಎಂದುಬಿಟ್ಟರೆ ತೀರಿಹೋಯಿತು. ಯಾರು ಬಂದರೂ ಇಲ್ಲವೇ ಇಲ್ಲ. ಆದರೆ ಅದನ್ನೇ ನಯವಾಗಿ ಹೇಳಿ ಬಂದವರನ್ನು ರಮಿಸಿ ಕಳಿಸುವ ಚಾಣಾಕ್ಷತೆ ಅವರಲ್ಲಿರಲ್ಲ. ಆದರಿಂದಾಗಿ ಇಂಥ ಸಣ್ಣಪುಟ್ಟ ತಕರಾರುಗಳು ಆಗಾಗ ಉಂಟಾಗುತ್ತಲೇ ಇದ್ದುವು. ಅದನ್ನರಿತ ವೆಂಕಣ್ಣ ಮುಗುಳುನಗೆಯೊಂದಿಗೆ,

"ಕೊಟ್ಟಿದ್ದರೆ ನಡೆಯುತ್ತಿತ್ತು. ಒಳ್ಳೇದು, ಈಗೇನು ಮಾಡಬೇಕೆನ್ನುತ್ತೀ?" ಎಂದು ಕೇಳಿದ.

"ರಜೆಯ ಚೀಟಿ ಕಳಿಸಿ, ಹೋಗಿಬಿಡಬೇಕು ಎಂದಿದ್ದೇನೆ."

"ಅಲ್ಲ, ಹಾಗಲ್ಲ. ಖಾಸಗಿ ಸಂಸ್ಥೆಗಳಲ್ಲಿ ಹಾಗೆಲ್ಲ ಮಾಡುವುದು ಸರಿಯಲ್ಲ. ಮೊದಲೇ ನನ್ನನ್ನ ಕೇಳಿದ್ದರೆ ನಿನ್ನ ಬದಲು ನಾನು ಕ್ಲಾಸು ತೆಗೆದುಕೊಳ್ಳುತ್ತೇನೆ ಎನ್ನಬಹುದಿತ್ತು. ಈಗ ಅದು ಆಗದು. ಸುಮ್ಮನೇ ಬಿಟ್ಟುಬಿಡು. " ಎಂದು ವೆಂಕಣ್ಣ ಬುದ್ಧಿವಾದ ಹೇಳಿದ.

"ಅದಕ್ಕೇ ನಿಮ್ಮ ಕಡೆಗೆ ಬಂದದ್ದು. ಆದರೆ ನನ್ನ ಗೆಳೆಯರಿಗೆಲ್ಲ ತುಂಬ ನಿರಾಶೆಯಾಗುತ್ತದೆ."

"ಇರಲಿ, ಶುಭಾಶಯದ ತಂತೀ ಸಮಾಚಾರ ಕಳಿಸಿಬಿಡು."

"ಆಗಲಿ ಸಾರ್."

ವೆಂಕಣ್ಣನ ಮುಖದಲ್ಲಿ ಸಮಾಧಾನದ ರೇಖೆ ಮೂಡಿತು. ಕುಲಕರ್ಣಿಗ ಮೊದಲಿನಿಂದಲೂ ವೆಂಕಣ್ಣ ಮಾಸ್ತರರ ಮೇಲೆ ಅಭಿಮಾನ. ಅದರಂತೆ ಕುಲಕರ್ಣಿ ಅವರ ಪಟ್ಟಶಿಷ್ಯನೂ ಅಹುದು. ಕುಲಕರ್ಣಿಯ ಚುರುಕುಬುದ್ಧಿ ಮತ್ತು ನಯವಿನಯದ ವರ್ತನೆಗಳು ಮಾಸ್ತರರ ಪ್ರೀತಿಯನ್ನು ಗಳಿಸಿದ್ದವು.

ಒಂದು ನಿಮಿಷ ತಡೆದು ವೆಂಕಣ್ಣ ಹೇಳಿದ, "ನಾನು ಹೇಳಿದಂತೆ ನಾಳೆ ನಿನ್ನ ಗೆಳೆಯನಿಗೊಂದು ಟೆಲಿಗ್ರಾಂ ಕಳಿಸಿಬಿಡು. ಅಂದರಾಯಿತು....ನೌಕರಿಯಲ್ಲಿ ಇಂಥ ಪ್ರಸಂಗಗಳು ಬರುವವೇ. ಅವನ್ನು ತಾಳ್ಮೆಯಿಂದ ಎದುರಿಸಬೇಕಾಗುತ್ತದೆ" ಎಂದು ತನ್ನ ಒಂದೆರಡು ಅನುಭವಗಳನ್ನೂ ತಿಳಿಸಿದ.

ಇದನ್ನು ಕೇಳಿ ಕುಲಕರ್ಣಿಯ ಉತ್ಸಾಹಭಂಗವಾದರೂ ಮಾಸ್ತರರ ವಿಚಾರ ಸರಿಯೆನಿಸಿತು.

"ಒಳ್ಳೇದು, ಬರುತ್ತೇನೆ ಸರ್. ನಿಮಗೆ ಸುಮ್ಮನೆ ತೊಂದರೆ ಕೊಟ್ಟೆ" ಎಂದ ಕುಲಕರ್ಣಿ ಹೊರಡಲನುವಾದ.

"ತೊಂದರೆ ಎಂತಹುದು" ಎನ್ನುತ್ತ ವೆಂಕಣ್ಣ ದೀಪಹಿಡಿದು ಅವನನ್ನು ಬಾಗಿಲವರೆಗೆ ಕಳಿಸಿಬಂದ.

ಕುಲಕರ್ಣಿ ಹೊರಟು ಹೋಗಿ ಅರ್ಧ ತಾಸು ಕಳೆದರೂ ವೆಂಕಣ್ಣ ಇನ್ನೂ ಕುಲಕರ್ಣಿಯನ್ನು ಕುರಿತು ವಿಚಾರಿಸುತ್ತಲೇ ಇದ್ದ. ಆತನ ತಲೆಯಲ್ಲಿ ನಡೆಯುತ್ತಿದ್ದ ವಿಚಾರ 'ಈ ಕುಲಕರ್ಣಿಯನ್ನು ತನ್ನ ಅಳಿಯನನ್ನಾಗಿ ಏಕೆ ಮಾಡಿಕೊಳ್ಳಬಾರದು?' ಎಂದು. ಈ ಪ್ರಶ್ನೆ ಬಂದುದು ಇದೇ ಮೊದಲ ಸಲವಲ್ಲ. ಈಗಾಗಲೇ ಅದನ್ನು ವಿಚಾರಿಸಿದ್ದನು. ಈಗ ಆತ ಬಂದು ಹೋದ ಕೂಡಲೇ ಆ ಪ್ರಶ್ನೆ ಮತ್ತೆ ಉದ್ಭವಿಸಿತ್ತು. ಆ ಬಗೆಗಿನ ಸಾಧಕ ಬಾಧಕ–ವಿಷಯಗಳೆಲ್ಲವೂ ಆತನ ತಲೆಯಲ್ಲಿ ಸುಳಿದು ಹೋದವು.

"...ಕುಲಕರ್ಣಿ ಒಳ್ಳೆಯ ಯುವಕ ಎನ್ನುವುದರಲ್ಲಿ ಸಂದೇಹವಿಲ್ಲ. ಆರ್ಥಿಕ ದೃಷ್ಟಿಯಿಂದ ಆತನ ಸ್ಥಿತಿ ಅಷ್ಟೊಂದು ನೆಟ್ಟಗಿಲ್ಲ. ತಾನೇ ತುಸು ಸಹಾಯ ಮಾಡಬಹುದು. ಅದೇನು ಅಷ್ಟು ಮಹತ್ವದ್ದಲ್ಲ... ಹಾಗೆ ನೋಡುತ್ತ ಹೋದರೆ ಪ್ರತಿಯೊಂದು ಕಡೆಗೂ ಏನಾದರೂ ಕುಂದು ಕೊರತೆ ಇದ್ದೇ ಇರುವುದು. ಅದೂ ಅಲ್ಲದೆ ಊರಲ್ಲಿ ಈಗಾಗಲೇ ಜಲಜಾಕ್ಷಿಯ ವಿಷಯ ಹತ್ತಾಗಿದೆ. ನಿಜವಾಗಿ ಅದು ಮದುವೆಯೇ ಆಗಬಾರದಂಥ ಕುಂದೇನೂ ಅಲ್ಲವೆಂದು ಡಾಕ್ಟರರೂ ಹೇಳುತ್ತಾರೆ. ಆದರೆ ಈ ಜನಕ್ಕೇನು ಅದಲ್ಲ?..."

ಈ ವಿಚಾರದೊಂದಿಗೆ ವೆಂಕಣ್ಣನ ಸ್ಮೃತಿಪಟಲದ ಮೇಲೆ ಪದ್ಮಕ್ಕ ಮೂಡಿದಳು. ಈಗ ಅವಳಿದ್ದರೆ? ಆ ನೆನಪಿನೊಂದಿಗೆ ಅವನ ಮನಸ್ಸು ಮತ್ತೂ ನೊಂದಿತು.

ಆಳವಾದೊಂದು ನಿಟ್ಟುಸಿರನ್ನು ಬಿಟ್ಟ ಗಂಡನನ್ನು 'ಯಾಕೆ, ಏನು ಅಷ್ಟೊಂದು ವಿಚಾರಿಸುತ್ತಿದ್ದೀರಿ?" ಎಂದು ಬದಿಗೆಮಲಗಿದ ಚಂಪಕ ಕೇಳಿದಳು.

"ಏನೂ ಇಲ್ಲ" ವೆಂಕಣ್ಣ ನುಡಿದ.

ಅರನಿಮಿಷದ ನಂತರ ಅವಳು ಮತ್ತೆ ಕೇಳಿದಳು. "ಅಲ್ಲರೀ ನಾನು ಮೊನ್ನೆ ಕೇಳಿದ್ದಕ್ಕೆ ನೀವೇನೂ ಹೇಳಲೇ ಇಲ್ಲವಲ್ಲ?" ಎಂದು.

"ಏನು ಕೇಳಿದ್ದೆ?"

"ಅದೇ ಜಲಜನ ವಿಷಯ! ಅವಳನ್ನು ಕೇಳಿದರೆ ಮಾತೇ ಆಡುವುದಿಲ್ಲ. ನೀವೂ ಹೇಳುವುದಿಲ್ಲ. ಜನ ನನ್ನ ಕೇಳುವುದನ್ನು ಬಿಡುವುದಿಲ್ಲ!"

"ಆ ಜನಕ್ಕೆ ಬುದ್ಧಿಯಿದ್ದರೆ? ನೀನೂ ಅಷ್ಟೇ."

ಚಂಪಕ್ಕ ಮತ್ತೆ ಆ ಮಾತು ಆಡಲಿಲ್ಲ. ಆದರೆ ಅವಳ ಎರಡೇ ಮಾತಿನಿಂದ ವೆಂಕಣ್ಣ ಮನದಲ್ಲಿಯೇ ನಿಶ್ಚಯಿಸಿದ. ಆದಷ್ಟು ಬೇಗ ಕುಲಕರ್ಣಿಯನ್ನು ವಿಚಾರಿಸಬೇಕು ಎಂದು.

ಮುಂದೆ ನಾಲ್ಕು ದಿನಗಳಲ್ಲಿ ವೆಂಕಣ್ಣ ಕುಲಕರ್ಣಿಯ ಜೊತೆಗೆ ಮಾತುಕತೆಗಳನ್ನಾಡಿ ಅವನ ಮನೆತನದ ಕೆಲವು ವಿಚಾರಗಳನ್ನು ತಿಳಿದುಕೊಂಡ. ಗೌರಕ್ಕನ ಮುಂದೆಯೂ ಆ ವಿಷಯ ಪ್ರಸ್ತಾಪಿಸಿದ. ಅವರು ಅವನ ವಿಚಾರಕ್ಕೆ ಒಪ್ಪಿದರೂ,

"ಅಡ್ಡಿಯಿಲ್ಲ. ಆದರೂ ಅವಳನ್ನೂ ಒಮ್ಮೆ ಮೊದಲೇ ಕೇಳಿದರೆ ನೆಟ್ಟಗಲ್ಲವೇ?" ಎಂದು ಸೂಚಿಸಿದಳು.

"ಕೇಳಲಿಕ್ಕೇನು, ಅವನಂತೂ ಬಂದುಹೋಗಲಿ, ಮುಂದ ಅವಳ ಮನಸ್ಸಿಗೆ ಬರದಿದ್ದರೆ ನಾನೇನೂ ಒತ್ತಾ-

ಯ ಮಾಡುವುದಿಲ್ಲ. ನೀನೂ ಹುಡುಗನನ್ನು ನೋಡಿದಂತಾಗುತ್ತದೆ. ಇಷ್ಟಾಗಿ ಮನಸ್ಸಿಗೆ ಬಾರದಂತೆ ಆ ಹುಡುಗನಲ್ಲೇನೂ ಕುಂದಿಲ್ಲ...ಅಲ್ಲದೆ ಇನ್ನೂ ಹೀಗೆಯೆಯೇ ಎಷ್ಟು ದಿನ ಬಿಡುವುದು?"

"ಹಾಗಲ್ಲ..." ಎಂದೇನೋ ಹೇಳಬಯಸಿದ ಗೌರತ್ತೆ ಅಷ್ಟಕ್ಕೆ ಸುಮ್ಮನಾದರು.

ವೆಂಕಣ್ಣನೂ ಏನೆಂದು ಕೇಳದೆ ಹೊರಗೆ ಹೋದನು.

## -೧೭-

ಜಲಜಾಕ್ಷಿಯ ಕೂಡ ಮಂತ್ರಾಲಯಕ್ಕೆ ಹೋಗಿದ್ದ ನಾರಾಯಣರಾಯರು ಶಹಾಪೂರಿಗೆ ತಿರುಗಿ ಬಂದು ಆಗಲೇ ಎಂಟು ದಿನಗಳು ಕಳೆದಿದ್ದುವು. ಮಂತ್ರಾಲಯದ "ರಾಯರ" ಮೇಲೆ ನಾರಾಯಣರಾಯರ ಭಕ್ತಿ ಅಪಾರ. ಅವರು ಈಗಾಗಲೇ ಹತ್ತೆಂಟು ಸಲ ಮಂತ್ರಾಲಯಕ್ಕೆ ಹೋಗಿ ಬಂದಿರುವರು. ಮೊನ್ನೆ ಮತ್ತೆ ಹೋಗಬೇಕೆನಿಸಿತು. ಜಲಜಾಕ್ಷಿ ಒಲ್ಲೆನೆಂದರೂ ಒತ್ತಾಯದಿಂದ ಕರೆದುಕೊಂಡು ಹೋಗಿದ್ದರು.

ನಿಜವಾಗಿ ಈ ಸಲ ಅವರು ಮಂತ್ರಾಲಯಕ್ಕೆ ಹೊರಟುದು ಜಲಜಾಕ್ಷಿಯ ಸಲುವಾಗಿಯೇ. ಡಾ. ಕೋಯಿಲೋ ಹೇಳಿದಂತೆ ಜಲಜಾಕ್ಷಿಯ ಲ್ಯುಕೊಡರ್ಮಾ ಈಗ ಪಸರಿಸತೊಡಗಿತ್ತು. ಅವಳ ಬಲ ಮೊಳಕೈಯ ಮೇಲೆ ಅದು ಬೆಳೆಯತೊಡಗಿದ್ದಿತು. ಅನೇಕರು ಮಂತ್ರಾಲಯದ ಗುರುಗಳ ಅನುಗ್ರಹದಿಂದ ಕುಷ್ಟ ಉನ್ಮಾದ ಮೊದಲಾದ ಮಹಾರೋಗಗಳನ್ನೂ ಕಳೆದುಕೊಂಡಿರುವಾಗ, ತಮ್ಮ ಸೋದರಸೊಸೆಯ ಮೇಲೂ ಗುರುಗಳ ಅನುಗ್ರಹ ಆಗಬಾರದೇ? ಎಂದು ಅವರ ಹೃದಯ ಹಾರೈಸುತ್ತಿತ್ತು. ಮಂತ್ರಾಲಯದ ರಾಘವೇಂದ್ರ ಸ್ವಾಮಿಗಳಲ್ಲಿ ಅವರು ಅನನ್ಯಭಾವದಿಂದ ಶರಣು ಹೋಗಿ, ಇದನ್ನೇ ಬೇಡಿಕೊಂಡಿದ್ದರು.

ಪ್ರತಿಸಲದಂತೆ ಈ ಸಲ ನಾರಾಯಣರಾಯರು ಎರಡೇ ದಿನಗಳಲ್ಲಿ ತಿರುಗಿ ಬಂದಿರಲಿಲ್ಲ. ಆಗ ಆಫೀಸಿನ ಕೆಲಸ ಮತ್ತು ರಜೆಯ ಕೊರತೆಗಳಿಂದಾಗಿ ಒಂದೋ ಎರಡೋ ದಿನಗಳಲ್ಲಿ ತಿರುಗಿಬರಬೇಕಾಗುತ್ತಿತ್ತು. ಈಗ ಯಾವ ಅವಸರವೂ ಇರಲಿಲ್ಲ. ಅಷ್ಟೇ ಅಲ್ಲ, ಅಲ್ಲಿ ನಿಂತಷ್ಟು ದಿನ ಮನಕ್ಕೆ ಏನೋ ಒಂದು ನೆಮ್ಮದಿಯೇ ಅನಿಸಿತ್ತು; ತಿರುಗಿ ಬರಬೇಕೆಂದೂ ಎನ್ನಿಸಿರಲಿಲ್ಲ.

ದಿನಾಲೂ ಬೆಳಗಿನಲ್ಲಿ ಎದ್ದು ಪ್ರಾತಃರ್ವಿಧಿಗಳನ್ನು ಮುಗಿಸಿ ನದೀ ಸ್ನಾನಮಾಡಿ,ಒದ್ದೆಯಾದ ಪಂಚೆಯ ಮೇಲೆಯೇ ಇನ್ನೊಂದು ಒದ್ದೆಯ ಪಂಚೆಯನ್ನು ಹೊದ್ದುಕೊಂಡು, ಸ್ವಾಮಿಗಳಿಗೆ ಪ್ರದಕ್ಷಿಣೆ ಹಾಕತೊಡಗಿದರೆ ಕಾಲು ಸೋಯುವವರೆಗೂ ಹಾಕುತ್ತಿದ್ದರು. ಶರೀರಕ್ಕೆ ಆಯಾಸವಾಗುತ್ತಿತ್ತಲ್ಲದೆ ಅವರ ಮನಕ್ಕೆ ಪ್ರದಕ್ಷಿಣೆ ನಮಸ್ಕಾರಗಳು ಸಾಕು ಎನಿಸುತ್ತಿರಲಿಲ್ಲ. ಜಲಜಾಕ್ಷಿಯೂ ಅಷ್ಟೇ. ಮಾಮಾನ ಜೊತೆಗೆ ಮಂಚಾಲಿರಾಯರ ಸೇವೆಗೆ ತೊಡಗುತ್ತಿದ್ದಳು. ಮಾಮಾ ಬಳಲಿ ಕುಳಿತರೂ ಅವಳ ಸೇವೆ ಹಾಗೆಯೇ ಮುಂದುವರಿಯುತ್ತಿತ್ತು.

ಅಲ್ಲಿ 'ರಾಯರ ಸೇವೆ' ಮಾಡುವವರೆಲ್ಲರೂ ಅದೇ ಅನನ್ಯಭಕ್ತಿಯಿಂದ, ಪ್ರಪತ್ತಿ ಭಾವದಿಂದ ರಾಯರಿಗೆ ಶರಣು ಹೋಗುತ್ತಿದ್ದರು. ಜಲಜಾಕ್ಷಿಯ ರೀತಿ ಮಾತ್ರ ಎಲ್ಲರಿಂದ ತುಸು ಭಿನ್ನವೆಂಬಂತೆ ತೋರುತ್ತಿತ್ತು. ಅವಳು ಮಧ್ಯಾಹ್ನ ಪ್ರಸಾದವನ್ನು ಕೂಡ ಶಾಸ್ತ್ರಕ್ಕೆ ಎಂಬಂತೆ ಸ್ವೀಕರಿಸುತ್ತಿದ್ದಳು. ರಾತ್ರಿ ನಾರಾಯಣರಾಯರು ಕೇವಲ ಎರಡು ಬಾಳೆ ಹಣ್ಣು ಒಂದು ಕಪ್ಪು ಹಾಲು ತೆಗೆದುಕೊಳ್ಳುತ್ತಿದ್ದರು. ಜಲಜಾಕ್ಷಿ ಮಾತ್ರ ಏನೂ ತೆಗೆದುಕೊಳ್ಳುತ್ತಿರಲಿಲ್ಲ. ಮಾಮಾ ಎಷ್ಟೇ ಒತ್ತಾಯ ಮಾಡಿದರೂ ಅವಳು ತನ್ನ ವ್ರತವನ್ನು ಬಿಟ್ಟಿರಲಿಲ್ಲ.

ಹೀಗೆ ಅವರು ಮಂತ್ರಾಲಯದಲ್ಲಿ ಹದಿನೈದು ದಿನಗಳನ್ನು ಕಳೆದರು. ನಾರಾಯಣರಾಯರಿಗೆ ಇನ್ನೂ ಅಲ್ಲಿ ಕೆಲವು ದಿನ ಇರಬೇಕೆಂದು ಮನಸ್ಸು. ಆದರೆ ಒಂದು ದಿನ ಜಲಜಾಕ್ಷಿ ಹೋಗೋಣ ಎಂದಳು. ನಾರಾಯಣರಾಯರು "ಯಾಕೆ ರಾಯರ ಅನುಗ್ರಹವಾಯಿತೆ?" ಎಂದು ಕೇಳಿದರು.

ಅವಳು ಏನೂ ಹೇಳಲಿಲ್ಲ.

"ಯಾಕೆ ಹೇಳುವದಿಲ್ಲವೇನು?"

"ಏನೂ ಇಲ್ಲ" ಎಂದಳವಳು.

ಆ ನಾಲ್ಕು ದಿನಗಳಿಂದ ಅವಳಿಗೆ "ಹೋಗು" ಎಂದು ಕತ್ತುಹಿಡಿದು ಯಾರೋ ದಬ್ಬಿದಂತೆ ಕನಸು ಬೀಳುತ್ತಿತ್ತು. ಮಾಮಾನ ಮುಂದೆ ಅವಳು ಅದನ್ನು ಹೇಳಲಿಲ್ಲ. ಮಾಮಾ ತನಗಾಗಿ ಮಂತ್ರಾಲಯಕ್ಕೆ ಬಂದಿರುವರೆಂದು ಅವಳಿಗೂ ಗೊತ್ತಿತ್ತು. ಅವಳ ಹೃದಯ ಮಾತ್ರ "ಮೋಹನ ತಿರುಗಿ ಬರುವಂತೆ ಅನುಗ್ರಹಿಸಿರಿ" ಎಂದೇ ಗುರುಗಳಲ್ಲಿ ಅನನ್ಯಭಾವದಿಂದ ಬೇಡಿಕೊಂಡಿತ್ತು. ಆ ಕನಸಿನ ಅರ್ಥವೇನೆಂದು ಅವಳಿಗೆ ತಿಳಿಯಲಿಲ್ಲ. ಅದೇನು ಶುಭವೋ ಅಶುಭವೋ ಎಂಬುದೂ ಅವಳಿಗೆ ಅರ್ಥವಾಗಲಿಲ್ಲ. ಆದರೂ ಮಂತ್ರಾಲಯದಲ್ಲಿಯೇ ಉಳಿಯುವ ಧೈರ್ಯ ಮಾತ್ರ ಅವಳಿಗಾಗಲಿಲ್ಲ.

ನಾರಾಯಣರಾಯರು ಸೊಸೆಯಜೊತೆ ತಿರುಗಿ ಬಂದಿದ್ದರು. ಮಂತ್ರಾಲಯದ ಗುರುಗಳು ತಮಗೆ ಅನುಗ್ರಹಿಸಿದರೋ ಇಲ್ಲವೋ ಎಂಬುದು ಅವರಿಗೆ ತಿಳಿಯಲಿಲ್ಲ. ಹಾಗೆ ಸೇವೆಮಾಡಿದ ಅನೇಕರಿಗೆ ಗುರುಗಳು ಸ್ವಪ್ನದಲ್ಲಿ ಕಾಣಿಸಿಕೊಳ್ಳುತ್ತಾರೆ ಎಂದು ನಾರಾಯಣರಾಯರು ಕೇಳಿದ್ದರು. ಅವರಿಗೆ ಮಾತ್ರ ಹಾಗೆ ಒಮ್ಮೆಯೂ ಅನುಭವಕ್ಕೆ ಬಂದಿರಲಿಲ್ಲ. ಆದರೂ ಮಂತ್ರಾಲಯದ ಗುರುಗಳು ಭಜಿಸುವವರ ಕಲ್ಪವೃಕ್ಷ, ನಮಿಸುವವರ ಕಾಮಧೇನು ಎಂದೇ ಅವರ ವಿಶ್ವಾಸ. ತಮ್ಮ ಆಸೆಯನ್ನು ಗುರುಗಳು ಪೂರೈಸಬಹುದು, ಪೂರೈಸಲಿ ಎಂದು ಅವರ ಹೃದಯವು ಸದಾ ಪ್ರಾರ್ಥಿಸುತ್ತಿತ್ತು.

ನಾರಾಯಣರಾಯರಿಗೆ ಈ ಸಲ ಮಂತ್ರಾಲಯಕ್ಕೆ ಹೋಗಿ ಬಂದ ನಂತರ ಮನಕ್ಕೆ ಏನೋ ಒಂದು ಬಗೆಯ ಉಲ್ಲಾಸವೆನಿಸುತ್ತಿತ್ತು. ಹೃದಯದ ಜಡತ್ವ ಅದೇಕೋ ಕಡಿಮೆಯಾದಂತೆ ತೋರುತ್ತಿತ್ತು. ಕಾಲುಗಳಲ್ಲಿ ಹೆಚ್ಚಿಗೆ ತ್ರಾಣವೂ ಬಂದಂತೆ ಎನಿಸುತ್ತಿತ್ತು. ಅದೇನು ನಿಜವೋ ಕೇವಲ ತಮ್ಮ ಭಾಸವೋ ಎಂದು ಮಾತ್ರ ಅವರು ಹೇಳಲಾರದವರಾಗಿದ್ದರು

× × × ×

ಅಂದು ಏನೋ ಬಿಡುವು. ಶಾಮ ಮುಂಜಾನೆಯ ಇಂಗ್ಲೀಷ ಮ್ಯಾಟನಿ ಸಿನೇಮಾಕ್ಕೆ ಹೋಗಿದ್ದ. ಊಟಕ್ಕಾಗಿ ಜಲಜಾಕ್ಷಿ ಅವನ ದಾರಿಯನ್ನು ಕಾಯುತ್ತಿದ್ದಳು.

ಗೇಟಿನ ಸಪ್ಪಳವಾದುದಕ್ಕೆ ಕೋಣೆಯಿಂದ ಹೊರಗೆ ಬಂದು ನೋಡಿದಳು. ಶಾಮ ಬಂದಿರಲಿಲ್ಲ. ಆದರೆ ಪೋಸ್ಟಮನ್ ಬಂದಿದ್ದ. ಅವಳ ಹೆಸರಿಗಿದ್ದ ಪಾಕೀಟೊಂದನ್ನು ಆತ ಕೊಟ್ಟು ಹೊರಟು ಹೋದ. ಜಲಜಾಕ್ಷಿ ಉತ್ಸುಕತೆಯಿಂದ ಪತ್ರ ಒಡೆದು ನೋಡಿದಳು. ಅದು ಗೆಳತಿ ಕುಸುಮೆಯ ಪತ್ರವಾಗಿದ್ದಿತು. ಜಲಜಾಕ್ಷಿ ನಡುಗುವ ಕೈಗಳಿಂದ ಓದಲಾರಂಭಿಸಿದಳು.

ಕುಸುಮಾ ತಾವು ಸುರಕ್ಷಿತವಾಗಿ ಮುಂಬಯಿಯನ್ನು ತಲುಪಿದುದನ್ನು ಬರೆದು ಈ ಕಡೆಯ ಕುಶಲ ವಾರ್ತೆಯನ್ನು ಕೇಳಿದ್ದಳು. ಮುಂದಿನ ಪ್ಯಾರಾಗ್ರಾಫ್ ಅವಳ ಮಹತ್ವದ ಬರವಣಿಗೆಯಾಗಿದ್ದಿತು. ಅದರಲ್ಲಿ ತನ್ನ ಗಂಡನ ಆಫೀಸಿನಲ್ಲಿ ಆ ವ್ಯಕ್ತಿಯ ಸಲುವಾಗಿ ವಿಚಾರಿಸಿದ್ದನ್ನು ಕುರಿತೇ ಬರೆದಿದ್ದಳು. ಹೆಸರೇನೋ ಒಂದೇ ಆಗಿದ್ದರೂ ತನ್ನ ಊರು ಗದಗು, ತನಗೆ ಶಹಾಪೂರಿನ ನಾರಾಯಣರಾಯರಾಗಲಿ ಜಲಜಾಕ್ಷಿಯಾಗಲಿ ಪರಿಚಯವೇ ಇಲ್ಲವೆಂದೂ ಹೇಳಿದ್ದ. ಆದರೆ ಅವನ ಮಾತಿನಮೇಲೆ ನಾಡಕರ್ಣಿಯವರಿಗೆ ವಿಶ್ವಾಸವಾಗಿರಲಿಲ್ಲ. ಅವನೇ ಮೋಹನನಾಗಿರಬೇಕೆಂದೂ ಬೇಕೆಂತಲೇ ಹಾಗೆ ಸುಳ್ಳು ಹೇಳುತ್ತಿರಬೇಕೆಂದೂ ಅವರ ತರ್ಕ. ಅವನ ಜೊತೆಗೆ ಮಾತನಾಡುವಾಗ ಅವನ ಹಾವಭಾವಗಳನ್ನು ಗಮನಿಸಿದ ನಾಡಕರ್ಣಿಯವರಿಗೆ ಸಂದೇಹವೇ ಉಳಿದಿಲ್ಲ. ಇಷ್ಟೆಲ್ಲ ವಿವರಗಳನ್ನು ಬರೆದು ತಿಳಿಸಿದ ಕುಸುಮಾ ಪತ್ರದ ಕೊನೆಯಲ್ಲಿ,

"................. ಒಮ್ಮೆ ನೀನು ನಿನ್ನ ಮಾಮಾ ಅವರನ್ನು ಕರೆದುಕೊಂಡು ಮುಂಬಯಿಗೆ

ಬಂತಪ್ಪಬಡವನ ಕುತ್ತಿಗಿಗಿ..



ತಲೀ ಕೆಟ್ಟವರ್ಹ್ಹಾಂಗ ಮಳೀ ಮಾಡಿದರ

ಬಂತಪ್ಪ ಬಡವನ ಕುತ್ತಿಗಿಗಿ;

ಭ್ರಷ್ಟಧಿಕಾರಿ ದುಷ್ಟವ್ಯಾಪಾರಿ

ಕೂಡಿ ಹೊಡಿಸಿದರು ರಣಹಲಿಗಿ!

— ಎಂ ಅಕಬರ ಅಲಿ

ಬಂದರೆ ನೆಟ್ಟಗೆಂದು ನಮ್ಮವರ ವಿಚಾರ.ನನಗೂ ಅದೇ ಸರಿ ಎನಿಸುತ್ತದೆ.

ಬಹುಶಃ ಅವನಿಗೆ ಸಂಕೋಚ, ಅಷ್ಟೇ. ನಾನಣ್ಣ ಮಾಮಾನನ್ನು ನಿನ್ನನ್ನೂ ಕಂಡು ಅವನು ಕರಗು ವಲ್ಲಿ ಸಂದೇಹವೇ ಇಲ್ಲ. ಜಲಜಾ ಕೂಡಲೇ ಬಾ. ಬರುತ್ತೀಯಲ್ಲವೇ? ಎಂದು ಬರುತ್ತೀ ಎಂಬುದನ್ನು ಕೂಡಲೇ ತಿಳಿಸು."

ಎಂದು ಕುಸುಮಾ ಸೂಚಿಸಿದ್ದಳು.

ಕುಸುಮೆಯ ಪತ್ರವನ್ನು ಓದುತ್ತಿರುವಂತೆ ಜಲಜಾಕ್ಷಿಯ ಕಣ್ಣುಗಳಿಂದ ನೀರು ದಳದಳ ಇಳಿಯು ತ್ತಿತ್ತು. ಮಧ್ಯದಲ್ಲಿ ಕಣ್ಣಿಗೆ ಮಂಜು ಕವಿದಂತಾಗಿ ಪತ್ರ ದಲ್ಲಿಯ ಒಂದು ಅಕ್ಷರವೂ ಕಾಣದಂತಾಗುತ್ತಿತ್ತು. ಎಲ್ಲವೂ ಮಸುಕುಮಸುಕು! ಅದರಲ್ಲಿ ತನಗಾಗಿ ಕಳ ಕಳಿಯಿಂದ ಕಣ್ಣೀರು ಸುರಿಯುವ ಕುಸುಮಾ ಕಂಡಂತಾ ಗುತ್ತಿತ್ತು. ಅದರ ಹಿಮ್ಮಗ್ಗಲು ಇನ್ನೊಂದು ವ್ಯಕ್ತಿ ಕಂಡಂತಾಗುತ್ತಿತ್ತು. ಕೆದರಿದ ತಲೆಗೂದಲು, ನೊಂದು ಬೇಸತ್ತ ಮುಖ, ಕೈಯಲ್ಲಿ ಸಿಗರೇಟು... ಆ ವ್ಯಕ್ತಿ ಯಾರು? ಮೋಹನನೇ? ಹೌದು, ಅಲ್ಲ, ಅಲ್ಲ ಮೋಹನ ಎಂದೂ ಸಿಗರೇಟು ಸೇದುತ್ತಿರಲಿಲ್ಲ. ಇಲ್ಲ, ಇಲ್ಲ. ಆದರೆ, ಹೌದು ಅವನು ಮೋಹನನೇ!

ಕಣ್ಣೆವೆಗಳನ್ನು ಪಟಪಟನೆ ಬಡೆದಳು. ಕಣ್ಣಿನಿಂದ ನೀರು ಚಿಮ್ಮಿತು. ದೃಷ್ಟಿ ನಿಚ್ಚಳವಾಯಿತು... ಈಗ? ಯಾರೂ ಇಲ್ಲ. ಕೈಯಲ್ಲಿ ನಡುಗುತ್ತಿರುವ ಕುಸು ಮೆಯ ಪತ್ರ ಮಾತ್ರ ಇದೆ.

ಜಲಜಾಕ್ಷಿಯ ಕಾಲಲ್ಲಿಯ ಶಕ್ತಿಯೆಲ್ಲ ಮಾಯ ವಾಯಿತು. ಬದಿಯಲ್ಲಿಯೇ ಇದ್ದ ಖುರ್ಚಿಯೊಂದ ರಲ್ಲಿ ಕುಸಿದಳು.

ಹಾಗೆಯೇ ಸುಮಾರು ೫–೧೦ ಮಿನಿಟುಗಳು ಕಳೆದಿರಬಹುದು. "ಜಲಜಾ, ಏ ಜಲಜಾ"ಎಂದು ಕೂಗುತ್ತಾ, ಶಾಮು ಬಂದ.

"ಏ ಜಲಜಾ, ಏನು ಅಲ್ಲಿಯೇ ನಿದ್ರೆ ಹಚ್ಚಿರುವಿ ಏನು?"

ಜಲಜಾ ಕಣ್ಣು ತೆರೆದು ನೋಡಿದಳು. ಶಾಮಿ ಯನ್ನು ಬಿರಬಿರನೆ ನೋಡಿದಳು. ಸಂಶಯಯುಕ್ತ ದೃಷ್ಟಿಯಿಂದ ನಿಟ್ಟಿಸಿ ನೋಡಿದಳು.

"ಹಾಗೇಕೆ ನೋಡುತ್ತಿದ್ದಿ? ಗುರುತು ಕೂಡ ಹತ್ತದವರಂತೆ?"

ಹೌದು, ತನ್ನನ್ನು ಅಷ್ಟೊಂದು ಪ್ರೀತಿಯಿಂದ ಜಲಜಾ ಜಲಜಾ ಎಂದು ಯಾರು ಕರೆಯುತ್ತಿದ್ದರು? ಅವನು ಯಾರು?– ಜಲಜಾ ಇನ್ನೂ ನಿದ್ರೆಯ ತಂದ್ರಿ ಯಲ್ಲಿಯೇ ಇದ್ದಳು.

ಅವಳ ದಿಗ್ಭ್ರಮೆಯನ್ನು ಕಂಡ ಶಾಮು ನಗುತ್ತಾ "ನಾನು ಶಾಮಿ!" ಎಂದು ಚೇಷ್ಟೆ ಮಾಡಿದ. "ಇಲ್ನೋಡು, ಇದೀಗ ಶನಿದೇವರ ಗುಡಿಯ ಹತ್ತಿರ ವೆಂಕಣ್ಣ ಮಾಮಾ ಭೆಟ್ಟಿಯಾಗಿದ್ದರು. ಇಂದು ಮಧ್ಯಾಹ್ನ ನಿನ್ನನ್ನು ಬೇಗನೇ ಕಳಿಸಿಕೊಡು ಎಂದರು. ಏನೋ ಜರೂರ ಕೆಲಸ ಇದೆಯಂತ" ಎಂದೂ ತಿಳಿಸಿದ.

ಅವಳು ಖುರ್ಚಿಯಿಂದ ಎದ್ದು ನಿಂತಳು. ಅವಳು ಎದ್ದಕೂಡಲೇ ಪತ್ರವು ಕೆಳಗೆ ಬಿದ್ದಿತು.

"ಅದು ಯಾರ ಪತ್ರ?" ಶಾಮು ಕೇಳಿದ.

ಜಲಜಾಕ್ಷಿ ಏನೂ ಹೇಳದೆ ಪತ್ರವನ್ನು ಎತ್ತಿ ಅವನ ಕೈಗಿತ್ತಳು.

x x    x x    x x



ಜಲಜಾಕ್ಷಿ ಮಧ್ಯಾಹ್ನ ಮೂರು ಗಂಟೆಗೆ ಶಹಾಪೂರಿನಿಂದ ನಡೆದುಕೊಂಡೇ ಹೊರಟಳು. ದಾರಿಯಲ್ಲಿ ಕಪಿಲೇಶ್ವರ ಗುಡಿಯ ಹತ್ತಿರ ತನ್ನನ್ನು ಹಿಂದಿನಿಂದ ಯಾರೋ ಕರೆದಂತೆ ಅವಳಿಗೆ ಭಾಸವಾಯಿತು. ಅವಳು ತಿರುಗಿ ನೋಡಿದಳು.

"ಜಲಜಾ, ಹಾಗೇ ಹೋರಟಿದ್ದೀಯಲ್ಲ? ತಡೆ" ಎನ್ನುತ್ತಾ, ತನ್ನ ಕಡೆಗೇ ಬರುತ್ತಿರುವ ವ್ಯಕ್ತಿಯನ್ನು ಅವಳು ಆಶ್ಚರ್ಯದಿಂದ ಗುರುತಿಸಿದಳು.

"ಕಾಮಾಕ್ಷಿ? ಇಲ್ಲಿ?"

"ಹೌದು. ನಿನ್ನೆಯೇ ಬಂದಿದ್ದೆವು."

ಜಲಜಾಕ್ಷಿ ಹಿಂದೆ ತಿರುಗಿ ನೋಡಿದಳು. ಸೂಟುಧಾರಿ ವ್ಯಕ್ತಿಯೊಬ್ಬ ಸಿಗರೇಟಿನ ಹೊಗೆ ಬಿಡುತ್ತ ನಿಂತಿದ್ದ. ಜಲಜಾಕ್ಷಿ ಪ್ರಶ್ನಾರ್ಥಕ ದೃಷ್ಟಿಯಿಂದ ಕಾಮಾಕ್ಷಿಯತ್ತ ನೋಡಿದಳು.

"ಇಲ್ಲಿ 'ಇವರ' ಅಪ್ಪರಿದ್ದಾರೆ, ಅವರಕಡೆ

ಬಂದಿದ್ದೆವು." ಕಾಮಾಕ್ಷಿ ಜಲಜಾಕ್ಷಿಯ ಸಂಶಯವನ್ನು ಪರಿಹಾರ ಮಾಡಿದಳು.

ಜಲಜಾಕ್ಷಿ ಇನ್ನೊಮ್ಮೆ ಆ ವ್ಯಕ್ತಿಯ ಕಡೆಗೆ ಮುಖ ತಿರುವಿದಳು. ಆತ ಉಪೇಕ್ಷೆಯಿಂದ ಇವಳನ್ನೇ ದೃಷ್ಟಿಸುತ್ತಿದ್ದ.!

ಎರಡು-ಮೂರು ನಿಮಿಷಗಳವರೆಗೆ ಅವರಿಬ್ಬರೂ ಮಾತನಾಡಿರಬಹುದು. ನಾರಾಯಣರಾಯರ ಪ್ರಕೃತಿ, ಶಾಮನ ಅಭ್ಯಾಸ ಇವನ್ನು ಕುರಿತು ಕೇಳಿ ಕೊನೆಗೆ ಕಾಮಾಕ್ಷಿ,

"ಮೋಹನನ ಸಮಾಚಾರವೇನಾದರೂ...?" ಎಂದು ಅಳುಕುತ್ತ ಕೇಳಿದಳು.

ಜಲಜಾಕ್ಷಿ ಮೌನವಾಗಿಯೇ ಇದ್ದಳು. ಅವಳಿಗೂ ತಾನೇಕೆ ಈ ಪ್ರಶ್ನೆ ಕೇಳಿದೆನೊ ಎನ್ನಿಸಿತು.

ಅರೆನಿಮಿಷದ ನಂತರ, "ಅಚ್ಛಾ ಇನ್ನು ಹೊಗೋಣಲ್ಲವೇ?" ಎಂದ ಕಾಮಾಕ್ಷಿಯ ಪತಿ.

"ಅಂದ ಹಾಗೆ, ಇವಳು ಜಲಜಾಕ್ಷಿ. ನಮ್ಮ ನಾನಣ್ಣಮಾವನ ಸೋದರಸೊಸೆ" ಎಂದಳು ಕಾಮಾಕ್ಷಿ ತನ್ನ ಪತಿಗೆ.

ಜಲಜಾಕ್ಷಿ. ಆತನಿಗೆ ಕೈಮುಗಿದಳು. ಆತ,

"ಹೀಗೇನು?" Very glad to meet you ಎಂದ.

"ಒಳ್ಳೇದು ಜಲಜಾ ಮತ್ತೆ ಭೆಟ್ಟಿಯಾಗೋಣ" ಎಂದು ಕಾಮಾಕ್ಷಿ ಹೊರಡಲನುವಾದಳು.

"ನಾಳೆ ನಮ್ಮ ಮನೆಗೆ ಬರ್ರಿ, ಇಬ್ಬರೂ" ಜಲಜಾಕ್ಷಿ ಅವರನ್ನು ಆಮಂತ್ರಿಸಿದಳು.

"ಇಲ್ಲ, ಈ ಸಲ ಆಗುವದಿಲ್ಲ. ಇನ್ನೊಮ್ಮೆ ಬಂದಾಗ ಅವಶ್ಯ ಬರುವೆನು."ಎಂದು ಹೇಳಿ ಕಾಮಾಕ್ಷಿ ಹೊರಟಳು.

ಜಲಜಾಕ್ಷಿ ನಾಲ್ಕು ಹಜ್ಜೆ ಮುಂದೆ ಹೋಗಿ ಮತ್ತೆ ಹಿಂದಿರುಗಿ ನೋಡಿದಳು. ಕಾಮಾಕ್ಷಿಯೂ ಜಲಜಾಕ್ಷಿಯನ್ನೇ ತಿರುಗಿ ನೋಡುತ್ತಿದ್ದಳು!

"ಆತ ಕಾಮೂಗೆ ಎಷ್ಟೂ ಯೋಗ್ಯನಲ್ಲ" ಎಂದು ಜಲಜಾಕ್ಷಿ ತನ್ನಷ್ಟಕ್ಕೇ ಹೇಳಿಕೊಂಡಳು. ಈ ಕಲ್ಪನೆಯಿಂದ ಅವಳ ಮನಸ್ಸು, ಮತ್ತಷ್ಟು ಮುದುರಿಕೊಂಡಿತು.

ಮತ್ತೆ ತಿರುಗಿ ನೋಡದೆ ಜಲಜಾಕ್ಷಿ ಬೇಗ ಬೇಗ ಹೆಜ್ಜೆ ಹಾಕಿದಳು.

ಅವಳು ಮನೆ ಸೇರಿದಾಗ ಮನೆಯಲ್ಲಿಯ ವಾತಾವರಣ ತುಸುಗಂಭೀರವಾಗಿದ್ದಿತು. ವೆಂಕಣ್ಣ ಮಧ್ಯಾಹ್ನ ಮಲಗಿಕೊಂಡವ ಆದೇ ಎದ್ದು ಮುಖ ತೊಳೆಯುತ್ತಿದ್ದ. ಚಂಪಕ್ಕ ಚಹದ ಸಿದ್ಧತೆಯ ಕೆಲಸದಲ್ಲಿದ್ದಳು. ಸುರೇಶ ಇನ್ನೂ ಮಲಗಿಕೊಂಡಿದ್ದ. ಜಲಜಾಕ್ಷಿಗೆ ಯಾರನ್ನು ಹೇಗೆ ಮಾತನಾಡಿಸಬೇಕೆಂಬುದೇ ತಿಳಿಯಲಿಲ್ಲ. ಅವಳು ಶಹಾಪೂರಿನಿಂದ ಬೆಳಗಾವಿಯ ಮನೆಗೆ ಬಂದಾಗ ಪ್ರತಿಸಲವೂ ಹೀಗೆ ಸಮಸ್ಯೆಯಾಗುತ್ತದೆ. ತಾನೇನೋ ತಪ್ಪು ಮಾಡಿದವರಂತೆ ಅವಳಿಗೆ ಸಂಕೋಚವೆನಿಸುತ್ತದೆ. ಈ ಸಲವೂ ಅಷ್ಟೇ. ಅಥವಾ ಕರೆ-ಕಳುಹಿಸಿಕೊಂಡು ಬಂದಿದ್ದರಿಂದ ಈ ಸಲ ತುಸು ಹೆಚ್ಚು ಸಂಕೋಚವೆನಿಸಿತು. ಕೊನೆಗೆ ಗೌರತ್ತೆಯವರನ್ನು ಹುಡುಕಿಕೊಂಡು ಹಿತ್ತಲಿಗೆ ಹೋದಳು. ಅಲ್ಲಿ ಅವರು ಬಿಸಿಲಿನಲ್ಲಿ ಒಣಹಾಕಿದ ಹಪ್ಪಳ ತಿರುವಿಹಾಕುತ್ತಿದ್ದರು. ಜಲಜಾಕ್ಷಿಯೂ ಅವರ ಕೆಲಸದಲ್ಲಿ ಕೂಡಿಕೊಂಡಳು. ಮಾತಿಗೆ ಮಾತು ಬಂದು ತನ್ನನ್ನು ಬಾ ಎಂದು ಹೇಳಿದ್ದು ಯಾತಕ್ಕಾಗಿ ಎಂದು ಜಲಜಾಕ್ಷಿ ಕೇಳಿದಳು.

"ಯಾರೋ ಬರುತ್ತಾರಂತೆ" ಗೌರತ್ತೆಯವರು ನುಡಿದರು.

"ಅಂದರೆ?" ಜಲಜಾಕ್ಷಿಗೆ ಅಚ್ಚರಿಯಾಯಿತು.

"ನಿನ್ನನ್ನು ನೋಡಲಿಕ್ಕೆ"

ಜಲಜಾಕ್ಷಿಗೆ ಆಘಾತವೇ ಆಯಿತು.

ಅವಳು ಮೌನವಾದಳು.

"ಯಾಕೆ ಸುಮ್ಮನಾದೆ?" ಜಲಜಾಕ್ಷಿಯತ್ತ ನೋಡುತ್ತಾ, ಗೌರತ್ತೆ ಕೇಳಿದರು.

ಆದರೆ ಅವರ ಪ್ರಶ್ನೆಗೆ ಉತ್ತರ ಕೊಡಲು ಅಲ್ಲಿ ಜಲಜಾಕ್ಷಿ ಇರಲಿಲ್ಲ. ಆಗಲೇ ಒಳಗೆ ಹೊರಟು ಹೋಗಿದ್ದಳು.

"ಏ ಜಲಜಾ" ಎಂದು ಗೌರತ್ತೆ ಕೂಗಿದರು. ಆದರೆ ಯಾರೂ ಓಗೊಡಲಿಲ್ಲ.

× × × ×

ನಾಲ್ಕೂವರೆಯ ಸುಮಾರಿಕ್ಕೆ ಕುಲಕರ್ಣಿ ಬಂದ. ಅವನ ದಾರಿಯನ್ನೇ ನೋಡುತ್ತಿದ್ದ ವೆಂಕಣ್ಣ ಅವನನ್ನು ತುಸು ಆದರದಿಂದಲೇ ಬರಮಾಡಿಕೊಂಡ. ಕುಲಕರ್ಣಿಯ ಜೊತೆಗೆ ಮತ್ತೆ ಯಾರೂ ಬಂದಿರಲಿಲ್ಲ. "ಕನ್ಯಾ ಪರೀಕ್ಷೆಗಾಗಿ ನಮ್ಮ ಮನೆಗೆ ಬಾ" ಎಂದು ವೆಂಕಣ್ಣ ಆತನಿಗೆ ಹೇಳಿರಲೇ ಇಲ್ಲ. ಸಹಜವಾಗಿ ಮಧ್ಯಾಹ್ನದ ಚಹಕ್ಕೆ ಬರುವಂತೆ ತಿಳಿಸಿದ್ದ. ಸಹಜವಾಗಿಯೆ ಬಂದು ಸಹಜವಾಗಿಯೇ ಆತ ಜಲಜಾಕ್ಷಿಯನ್ನು ನೋಡಲಿ, ಮನೆಯವರೂ ಹುಡುಗನನ್ನು ನೋಡಿದಂತಾಗುವುದು-ಎಂಬುದು ವೆಂಕಣ್ಣನ ವಿಚಾರ. ಆದರೆ ಕುಲಕರ್ಣಿ ಒಬ್ಬನೇ ಬಂದಿದ್ದರೂ 'ಸಹಜವಾಗಿ' ಬಂದಿರಲಿಲ್ಲ. ಅವನಿಗೆ ಮೊದಲೇ ಈ ಸಂದೇಹ ಬಂದಿತ್ತು. ವೆಂಕಣ್ಣಮಾಸ್ತರರಿಗೆ ಮದುವೆಯ ಮಗಳಿರುವುದು, ಅವನಿಗೂ ತಿಳಿದ ವಿಷಯವಾಗಿತ್ತು.

ಆ ಮಾತು ಈ ಮಾತು ಆಡುತ್ತ ವೆಂಕಣ್ಣ "ಜಲಜಾ ಚಹ ತೆಗೆದುಕೊಂಡು ಬಾ" ಎಂದು ಕೂಗಿ ಹೇಳಿದ.

ಐದಾರು ನಿಮಿಷಗಳ ತರುವಾಯ, ನಡುಗುವ ಕೈಗಳಿಂದ ಕಪ್ಪು-ಬಸಿಯ ಟ್ರೇ ಹಿಡಿದುಕೊಂಡು ಜಲಜಾಕ್ಷಿ ಪಡಸಾಲೆಗೆ ಬಂದಳು.

ಜಲಜಾಕ್ಷಿಯನ್ನು ಕುಲಕರ್ಣಿ ನೋಡಿದ. ಯಾವ ಅಲಂಕಾರವೂ ಇರಲಿಲ್ಲ. ಹೊಸ ಸೀರೆಯನ್ನೂ ಉಟ್ಟಿರಲಿಲ್ಲ. ಮುಖವನ್ನು ತೊಳೆದಿರಲಿಲ್ಲ. ಪೌಡರು ಹಚ್ಚಿಕೊಂಡಿರಲಿಲ್ಲ, ಕೂದಲನ್ನೂ ಹಿಕ್ಕಿಕೊಂಡಿರಲಿಲ್ಲ. ಮುಖದಲ್ಲಿ ಕಳೆಯೇ ಇರಲಿಲ್ಲ. ಅವಳನ್ನು ನೋಡಿದವರಿಗೆ 'ಅಯ್ಯೋ ಪಾಪ' ಎನಿಸುವಂತಿತ್ತು. ಅವಳನ್ನು ನೋಡಿ ವೆಂಕಣ್ಣನ ಮುಖವೂ ಕಳೆಗುಂದಿತು!

ಟೇಬಲ್ಲಿನ ಮೇಲೆ ಚಹವನ್ನು ಇಟ್ಟು ಹೊರಡಲನುವಾದ ಮಗಳನ್ನು ಕುರಿತು ವೆಂಕಣ್ಣ "ಸ್ವಲ್ಪ ಕುಳಿತುಕೋ." ಎಂದು ಹೇಳಿ

"ಇವಳು ನನ್ನ ಮಗಳು, ಜಲಜಾಕ್ಷಿ"ಎಂದು ಕುಲಕರ್ಣಿಗೆ ಹೇಳಿದ.

ಪೆಚ್ಚುಮುಖ ಮಾಡಿಕೊಂಡು ಕುಲಕರ್ಣಿ ಜಲಜಾಕ್ಷಿಗೆ "ನಮಸ್ಕಾರ"ಎಂದ.

ಜಲಜಾಕ್ಷಿ ಮೊಗವೆತ್ತಿ ಒಮ್ಮೆ ಅವನನ್ನು ನೋಡಿದಳು. ಕಣ್ಣಿಗೆ ಕತ್ತಲೆ ಕವಿಯಿತು. ಬದಿಗಿರುವ ಖುರ್ಚಿಯಮೇಲೆ ಕೂಡ್ರಬೇಕೆಂದಳು, ಏನೂ ಕಾಣಲೇ ಇಲ್ಲ. ತಾನೆಲ್ಲಿರುವೆನು, ತನಗೇನಾಗುತ್ತದೆ, ಯಾವುದೂ ತಿಳಿಯಲಿಲ್ಲ. ಜೋಲಿ ಹೋಯಿತು, ಧೊಪ್ಪನೆ ಬಿದ್ದುಬಿಟ್ಟಳು.

"ಹಾ! ಬೀಳುತ್ತಾರೆ" ಕುಲಕರ್ಣಿ ತಬ್ಬಿಬ್ಬಾದ,

"ಜಲಜಾ" ಎನ್ನುತ್ತಾ ವೆಂಕಣ್ಣ ಅವಳತ್ತ ಧಾವಿಸಿದ.

"ಏನಾಯ್ತು" ಎನ್ನುತ್ತಾ, ಗೌರತ್ತೆ ಒಳಗಿನಿಂದ ಧಾವಿಸಿ ಬಂದರು.

## - ೧೮ -

ಹಾಗೆ ಮನೆಯಿಂದ ಹೊರಬಿದ್ದ ಮೋಹನನಿಗೆ ಮುಂಬಯಿಗೇ ಹೋಗಬೇಕೆಂದೇನೂ ಇರಲಿಲ್ಲ. ಆದರೂ ಬೇರೆ ಏನೂ ತೋಚದೆ ಆತ ಮುಂಬಯಿ ಸೇರಿದಾಗ, ಮುಂದೇನು ಮಾಡಬೇಕೆಂಬ ಸಮಸ್ಯೆ ಅವನನ್ನು ಕಾಡತೊಡಗಿತು.

ಮುಂಬಯಿ ತೀರ ಅಪರಿಚಿತವಲ್ಲವಾದರೂ ಮುಂಬಯಿಯಲ್ಲಿ ಅವನಿಗೆ ಪರಿಚಿತರು ಯಾರೂ ಇರಲಿಲ್ಲ. ಉಂಗುರು-ಚೇನುಗಳನ್ನು ಮಾರಿ ಒಂದು ತಿಂಗಳು ಹೇಗೋ ಕಳೆದ. ಸುದೈವದಿಂದ "ಜೀವನಲಾಲ್ ಎಂಡ ಕಂಪನಿ"ಎಂಬ ಖಾಸಗಿ ಇಂಪೋರ್ಟ ಎಕ್ಸಪೋರ್ಟ ಕಂಪನಿಯಲ್ಲಿ ಅವನಿಗೆ ಒಂದು ಟೆಂಪರರಿ ಕ್ಲಾರ್ಕ ಸ್ಥಳ ಸಿಕ್ಕಿತು. ಕೆಲಕಾಲ ಹೋಟೆಲೊಂದರಲ್ಲಿ ಮಲಗಲಿಕ್ಕೆ ಒಂದು ಚೂರು ಜಾಗ ದೊರಕಿತು, ಮುಂದೆ ಸಹೋದ್ಯೋಗಿಯೊಬ್ಬನ ಕೋಣೆಯಲ್ಲಿ ಪಾಲುಗಾರನಾದ ಮೇಲೆ ಉಸಿರಾಡಲು ಅನುಕೂಲವಾಯಿತು.

ಆದರೆ ಎರಡು ವರ್ಷ ಕಳೆಯುವುದರೊಳಗಾಗಿ ಮೋಹನನಿಗೆ ಮುಂಬಯಿಯ ಯಾಂತ್ರಿಕ ಜೀವನ ಬೇಸರವಾಯಿತು. ಅದರೊಂದಿಗೆ ಅವನಿಗೆ ಸಾಂಗಲಿಯ ಸೆಳೆತವೂ ಹೆಚ್ಚಾಗತೊಡಗಿತು. ಈಗ ತಂದೆಯ ಬಗ್ಗೆ ಉಂಟಾಗಿದ್ದ ಹೆದರಿಕೆಯಾಗಲಿ, ಕೋಪವಾಗಲಿ ಉಳಿದಿರಲಿಲ್ಲ. ಹಲವು ಸಲ ತನ್ನಷ್ಟಕ್ಕೆ ತಾನೇ ವಿಚಾರ ಮಾಡಿ, ಎಲ್ಲ ಘಟನೆಗಳನ್ನು ತೂಗಿನೋಡಿದ್ದ. ಆಗ ಪಶ್ಚಾತ್ತಾಪವೇ ಉಂಟಾಯಿತು. ತಂದೆಯ ಬಗ್ಗೆ, ಜಲಜಾಕ್ಷಿಯ ಬಗ್ಗೆ ಅನುಕಂಪವೇ ಹೆಚ್ಚಾಗತೊಡಗಿತು. ತಾಯಿಯನ್ನು ಬಹುಬೇಗ ಕಳೆದುಕೊಂಡ ತನ್ನನ್ನು ನಾನಣ್ಣ ಅದೆಷ್ಟು ಪ್ರೀತಿಯಿಂದ ಬೆಳೆಸಿದರೆಂಬುದನ್ನು ನೆನೆದಾಗ ತನ್ನ ಕೃತಘ್ನತೆ ದೊಡ್ಡದಾಗಿ ತೋರತೊಡಗಿತು. ಅಂಥ ಪ್ರೀತಿಯ ತಂದೆಯನ್ನು ತಾನು ಹಾಗೆ ಧಡಕ್ಕನೆ ತ್ಯಜಿಸಿಬಂದಾಗ ಅವರಿಗೆ ಅದು ಎಂಥ ಆಘಾತವನ್ನುಂಟು ಮಾಡಿರಬಹುದು? ಈಗ ಅವರು ಹೇಗಿರುವರೋ? ಜಲಜಾಕ್ಷಿಯ ಗತಿ ಏನಾಯಿತೋ? ಅಜ್ಜಿಯ ಸ್ಥಿತಿ ಹೇಗೋ?

ಈ ವಿಚಾರಗಳೆಲ್ಲ ಬಂದಾಗ, ಏನೇ ಆಗಲಿ, ತಿರುಗಿ ಹೋಗಿಬಿಡಬೇಕು ಎಂದು ಅವನ ಹೃದಯ ಹಾತೊರೆಯುತ್ತಿತ್ತು. ಅಲ್ಲಿ ಹೋದ ಮೇಲೆ ಮತ್ತೆ ಮದುವೆಯಸಮಸ್ಯೆ ಎದುರಾಗಬಹುದೆಂಬ ಚಿಂತೆಯೂ ಈಗ ಅವನಿಗೆ ಉಳಿದಿರಲಿಲ್ಲ. ಅದಕ್ಕೆ ಕಾರಣ ಅವನು ಮುಂಬಯಿಯಲ್ಲಿ ಪಡೆದ ಅನುಭವ, ಕಂಡುಕೊಂಡ ಸತ್ಯ. ಅಂದಿನಿಂದ ಜಲಜಾಕ್ಷಿಯ ಲ್ಯುಕೋಡರ್ಮಾ ಅವನಿಗೊಂದು ಅಡಚಣೆಯಾಗಿ ಕಂಡಿಲ್ಲ.

"ಜೀವನಲಾಲ ಎಂಡ ಕಂಪನಿ" ದೊಡ್ಡ ಆಫೀಸು. ಅಲ್ಲಿ ಲೇಡಿಟೈಪಿಸ್ಟರ ಸಂಖ್ಯೆಯೇ ಒಂದು ಡಝನ್.



ಸೆಪ್ಪಿದೆ. ಅವರಲ್ಲಿ ವಿಮಲ ಲೇಲೇ ಎಂಬ ಸ್ಟೆನೋಟೈಪಿಸ್ಟ ತುಂಬ ಆಕರ್ಷಕ ವ್ಯಕ್ತಿತ್ವವುಳ್ಳವಳು. ಅಂಥ ಸೌಂದರ್ಯವಿದ್ದರೂ ಅವಳು ಬಣ್ಣದ ಚಿಟ್ಟೆಯಾಗಿರಲಿಲ್ಲ. ಎಲ್ಲರ ಜೊತೆಗೆ ಮುಗುಳುನಗೆಯಿಂದಲೇ ಮಾತನಾಡುತ್ತಿದ್ದಳಾದರೂ ಅವಳು ತುಂಬ ಗಂಭೀರ ಸ್ವಭಾವದವಳು. ಹಾಗಿರುವುದರಿಂದ ಆಫೀಸಿನಲ್ಲಿ ಯಾರೂ ಅವಳ ಜೊತೆ ಅತಿಸಲಿಗೆಯನ್ನು ತೋರುವ ಧೈರ್ಯ ಮಾಡುತ್ತಿರಲಿಲ್ಲ. ಉಳಿದ ಮಹಿಳೆಯರನ್ನು ಹೆಸರುಗೊಂಡೇ ಕರೆಯುತ್ತಿದ್ದರೂ ಎಲ್ಲರೂ ಅವಳಿಗೆ ಮಾತ್ರ "ಲೇಲೇಬಾಯಿ" ಎಂದೇ ಹೇಳುತ್ತಿದ್ದರು. ಒಟ್ಟಿನಲ್ಲಿ ಅವಳು ಎಲ್ಲರಿಂದಲೂ ಒಂದು ಗೇಣು ದೂರವಾಗಿಯೇ ಉಳಿದಿದ್ದಳು.

ಮುಂಬಯಿಯ ಜೀವನದಲ್ಲಿ ಮೋಹನನಿಗೆ ಒಬ್ಬಿಬ್ಬರು ಬಣ್ಣದ ಚಿಟ್ಟೆಯಂಥ ಮಹಿಳೆಯರ ಸ್ನೇಹ ದೊರೆತಿದೆಯಾದರೂ, ಆತನಿಗೆ ಲೇಲೇಬಾಯಿಯ ಬಗ್ಗೆ ಮಾತ್ರ ಅದೇಕೋ ಆತ್ಮೀಯಭಾವ ಉಂಟಾಯಿತು. ಪರಿಚಯವಾದ ಮೊದಲಿನಿಂದಲೂ ಅವಳನ್ನು ಆತ ಆದರದಿಂದಲೇ ಮಾತನಾಡಿಸುತ್ತಿದ್ದ. ದಿನಾಲೂ ಒಮ್ಮೆಯಾದರೂ ಅವಳ ಜೊತೆ ಮಾತನಾಡದಿದ್ದರೆ ಅವನಿಗೆ ಅದೇನೋ ಹಳಹಳಿ ಎನಿಸುತ್ತಿತ್ತು. ನಿಜವಾಗಿ ನೋಡಿದರೆ ಕೆಲ ತಿಂಗಳಲ್ಲಿ ಅವಳಿಗೂ ಮೋಹನನ ಬಗ್ಗೆ ಅದೇ ರೀತಿಯ ಆತ್ಮೀಯಭಾವ ಬೆಳೆದಿತ್ತು. ಈತ ಬಂದು ತನ್ನನ್ನು ಮಾತನಾಡಿಸಲಿ ಎಂದೆನಿಸುತ್ತಿತ್ತು. ಒಮ್ಮೊಮ್ಮೆ ಸಂಕೋಚದಿಂದ ಮೋಹನ ಅವಳ ಹತ್ತಿರ ಹೋಗದಿದ್ದರೆ, ಅವಳೇ ಇವನ ಟೇಬಲ್ಲಿಗೆ ಬಂದು ಮಾತನಾಡಿಸಿ ಹೋಗುತ್ತಿದ್ದಳು. ಯಾರ ಜೊತೆಗೂ ಚಹಕ್ಕೆ ಹೋಗದ ವಿಮಲ ಲೇಲೇ ಒಂದು ದಿನ ಆಫೀಸಿನ ಮಧ್ಯದ ಬಿಡುವಿನ ವೇಳೆಯಲ್ಲಿ ತಾನಾಗಿಯೇ ಬಂದು ಮೋಹನನ್ನು ಚಹಕ್ಕೆ ಆಮಂತ್ರಿಸಿದಳು. ಅಂದಿನಿಂದ ಅವರ ಸ್ನೇಹ ಹೆಚ್ಚು ನಿಕಟವಾಗತೊಡಗಿತ್ತು, ಇದನ್ನು ಕಂಡ ಉಳಿದವರಿಗೆಲ್ಲ ಆಶ್ಚರ್ಯ. ಕೆಲವರಿಗಂತೂ ಮೋಹನನ ಬಗ್ಗೆ ಅಸೂಯೆ ಕೂಡ ಉಂಟಾಯಿತು.

ಒಂದು ಬಿಡುವಿನ ದಿವಸ ಮಾತುಂಗಾದಲ್ಲಿರುವ ಪರಿಚಿತರೊಬ್ಬರನ್ನು ಭೆಟ್ಟಿಯಾಗಿ ತಿರುಗಿ ಬರುತ್ತಿರುವ ಮೋಹನ ಬಸ್‌ಸ್ಟಾಪಿನ ಹತ್ತಿರ ವಿಮಲೆಯನ್ನು ಕಂಡ. ಕೈಯಲ್ಲಿ ಕಾಯಿಪಲ್ಯದ ಚೀಲವನ್ನು ಹಿಡಿದುಕೊಂಡು ಅವಳು ಇವನ ಎದುರಿಗೇ ಬಂದಳು. ಅವಳನ್ನು ಕಂಡ ಮೋಹನ,

"ಓ ಲೇಲೇಬಾಯಿಯವರಿಗೆ ನಮಸ್ಕಾರ. ಇದೇನು ಅನಿರೀಕ್ಷಿತ ಭೆಟ್ಟಿಯಾಯಿತಲ್ಲ?" ಎಂದ.

ಅವಳು ತನ್ನ ಸಹಜವಾದ ಮುಗುಳುನಗೆಯಿಂದ ಪ್ರತಿನಮಸ್ಕಾರ ಹೇಳಿ, "ಅನಿರೀಕ್ಷಿತವಾದರೂ ಅನಪೇಕ್ಷಿತವಲ್ಲವಲ್ಲ?" ಎಂದಳು.

"ಛೇ ಛೇ. ತುಂಬ ಸಂತೋಷ. ಇದೇನು ಈ ಕಡೆಗೆ?"

"ನಾನೂ ಅದೇ ಕೇಳುತ್ತಿರುವುದು? ನೀವು ಈ ಕಡೆಗೆ ಹೇಗೆ ಬಂದಿರಿ?"

"ಯಾರೋ ಪರಿಚಿತರನ್ನು ಕಾಣಲು ಇಲ್ಲೇ ದಾಮಲೇಚಾಳಿಗೆ ಬಂದಿದ್ದೆ. ನೀವು?"

"ನಮ್ಮ ಮನೆ ಇಲ್ಲೇ ಇದೆ. ಬರ್ರಿ, ಹೋಗೋಣ" ಎಂದಳು.

ಮೋಹನ ಒಂದು ಕ್ಷಣ ಅನುಮಾನಿಸಿದ,

"ಯಾಕೆ? ಗಡಿಬಿಡಿ ಇದೆಯೇನು?"

"ಹಾಗೇನಿಲ್ಲ."

"ಬರ್ರಿ, ಹಾಗಾದರೆ, ಒಂದು ಕಪ್ಪು ಚಹ ಕುಡಿದು ಹೋಗೀರಂತೆ" ಎಂದಳು.

ಅವಳ ಮನೆ ಬಸ್‌ನಿಲ್ದಾಣದಿಂದ ತೀರ ಸಮೀಪದಲ್ಲಿತ್ತು. ಎರಡೇ ನಿಮಿಷ ನಡೆದು ಅವರು ಮನೆ ಸೇರಿದರು.

ಅವಳದೂ ಎರಡು ಕೋಣೆಯ ಮನೆ. ಹೊರಗಿನ ಕೋಣೆಯಲ್ಲಿ ಕಾಗದದ ಹೂವುಗಳನ್ನು ಮಾಡುತ್ತ ಕುಳಿತ ವ್ಯಕ್ತಿ,

"ಯಾರು? ವಿಮಲ, ಮತ್ತೆ ಯಾರೋ ಬಂದಂತಿದೆಯಲ್ಲ?" ಎಂದಿತು.

"ಹೌದು. ಇವರು ಮೋಹನ ನಾಯಕ. ನಮ್ಮ ಆಫೀಸಿನ ಸ್ನೇಹಿತರು" ಎಂದು ಹೇಳಿ, ಮೋಹನನಿಗೆ

"ಇವರು ಅಜೀತ, ನಮ್ಮ ಮಿಸ್ಟರ." ಎಂದು ವಿಮಲೆ ನಸುನಕ್ಕಳು.

ಇಬ್ಬರೂ ಪರಸ್ಪರ 'ನಮಸ್ಕಾರ' ಎಂದರು.

ಆದರೆ ಮೈಲಿ-ಕಲೆಗಳಿಂದ ತುಂಬಿದ, ವಿದ್ರೂಪ ಮುಖದ ಆ ಕುರುಡುವ್ಯಕ್ತಿ ವಿಮಲೆಯ ಪತಿ ಎಂದು ತಿಳಿದಾಗ ಮೋಹನನಿಗೆ ಆಘಾತವೇ ಆಯಿತು!

ಮೋಹನ ಕೋಣೆಯತುಂಬೆಲ್ಲ ಕಣ್ಣು ಹಾಯಿಸಿದ. ಕೋಣೆಯ ಒಂದು ಮೂಲೆಯಲ್ಲಿ ಗೋಡೆಗೆ ಆನಿಸಿಟ್ಟಿದ್ದ ತುಂಬ ಬೆಲೆಯುಳ್ಳ ಒಂದು ತಂಬೂರಿ ಅವರ ಬದಿಯಲ್ಲಿ ತಬಲಗಳು ಕಂಡವು. ಅವುಗಳನ್ನು ನೋಡುತ್ತ ಮೋಹನ,

"ಏನು, ನೀವು ಸಂಗೀತವನ್ನು ಕಲಿತಿರುವಿರಾ?" ಎಂದು ವಿಮಲೆಯನ್ನು ಕೇಳಿದ.

ವಿಮಲೆ ಮುಗುಳುನಗುತ್ತಾ, "ಛೇ ಛೇ. ನಾನು ಔರಂಗಜೇಬನ ಮೊಮ್ಮಗಳು! ಆದರೆ ನಮ್ಮ ಅಜೀತ ಶ್ರೇಷ್ಠ ಗಾಯಕ. ಅವರ ಶಿಷ್ಯರ ಬಳಗವೂ ದೊಡ್ಡದು" ಎಂದು ಹೆಮ್ಮೆಯಿಂದ ಹೇಳಿದಳು.

"ಓ, ಸಂತೋಷ" ಎಂದ ಮೋಹನ.

ಆದರೆ ನಿಜವಾಗಿ ಮೋಹನ ಖಿನ್ನನೇ ಆಗಿದ್ದ. ಆತ ಮುಂದೆ ಅವಳ ಮನೆಯಲ್ಲಿ ಸುಮಾರು ಅರ್ಧ ತಾಸು ಕಳೆದರೂ ಮೋಹನ ಅದೇಕೋ ನಿರುತ್ಸಾಹನಾಗಿಯೇ ಇದ್ದ.

ವಿಮಲೆಯೂ ಅದನ್ನು ಗಮನಿಸದಿರಲಿಲ್ಲ.

ಮುಂದೆ ನಾಲು ದಿನಗಳ ನಂತರ ಹೋಟೆಲಿನಲ್ಲಿ ಬಿಡುವಿನ ಚಹ ಕುಡಿಯುತ್ತ ಕುಳಿತಾಗ, ವಿಮಲೆಯೇ ಆ ಪ್ರಸ್ತಾಪವನ್ನೆತ್ತಿ ತನ್ನ ಕಥೆಯನ್ನು ಹೇಳಿದಳು; ಅವರದು ಪ್ರೇಮವಿವಾಹ. ಕಾಲೇಜಿನಲ್ಲಿ ಇಂಟರಿನಲ್ಲಿ ಓದುತ್ತಿರುವಾಗಲೇ ಪರಸ್ಪರ ಪ್ರೇಮಿಸಿದ್ದರು. ಬಿ.ಎ. ಮುಗಿದ ಮೇಲೆ ಲಗ್ನವಾಗಬೇಕೆಂದೂ ನಿರ್ಧರಿಸಿದ್ದರು. ಆದರೆ ದುರ್ದೈವದಿಂದ ಮರುವರ್ಷವೇ ಅಜೀತ ಮೈಲಿಬೇನೆಗೆ ತುತ್ತಾಗಿ ಕಣ್ಣು ಕಳೆದುಕೊಂಡ. ಅವನ ಓದೂ ಅಲ್ಲಿಗೇ ನಿಂತಿತು. ವಿಮಲೆ ಬಿ.ಎ. ಮುಗಿಸಿದಳು. ಅಜೀತ ಮದುವೆಗೆ ಒಪ್ಪಲೇ ಇಲ್ಲ. ಆದರೆ ವಿಮಲೆ ಹಿಡಿದಪಟ್ಟನ್ನು ಬಿಡಲೇಇಲ್ಲ. ಇವಳ ಒತ್ತಾಯಕ್ಕೆ ಅಜೀತ ಮಣಿಯಲೇಬೇಕಾಯಿತು.

ತನ್ನ ಕಥೆ ಹೇಳಿ ಮುಗಿಸಿದಾಗ ವಿಮಲೆಯ ಮುಖದ ಮೇಲೆ ಪ್ರಸನ್ನ ಕಳೆ ಮಿನುಗುತ್ತಿತ್ತು. ಮೋಹನನಿಗೆ ಅಚ್ಚರಿ. ಜೊತೆಗೆ ಅವಳಬಗ್ಗೆ ಒಂದು ಬಗೆಯ ಪೂಜ್ಯಭಾವವೂ ಉಂಟಾಯಿತು.

"ವಿಮಲಾತಾಯಿ, ನಿಮ್ಮ ತ್ಯಾಗ ಹೆಚ್ಚಿನದು" ಎಂದ.

"ಮೋಹನ, ಇದರಲ್ಲಿ ತ್ಯಾಗದ ಮಾತೇನು ಬಂತು? ನಾನು ನನ್ನ ಸಂತೋಷಕ್ಕೆ ಅವನನ್ನು ಲಗ್ನವಾದೆನಲ್ಲದೆ, ತ್ಯಾಗಭಾವದಿಂದ ಅಲ್ಲವೇ ಅಲ್ಲ. ನನ್ನ ಅಜೀತನಂಥ ಸದ್ಗುಣಿ ಮನುಷ್ಯ ಸಿಗುವದು ಅಪರೂಪ!" ಎಂದಳು.

"ನೀವು ಈಗಲೂ ಸಂತೋಷವಾಗಿಯೇ ಇರುವಿರಾ?"

ಮೋಹನನ ಈ ಮಾತು ಕೇಳಿ, ವಿಮಲೆ ನಕ್ಕುಬಿಟ್ಟಳು,

## ನಮ್ಮ ನೌಕರದಾರ



ಪ್ರೈವೇಟ್ ನೌಕರಿಯಲ್ಲಿ ಇದ್ದರಿಂವ
ದುಡಿಯುವ ಹೆಣಬೀಳ;
ಅದೇ ಸರ್ಕಾರೀ ನೌಕರಿಯಾದರೆ
ಆಗಿ ಬಿಡುವ ಮನೆಮೂಳ!

– ಎಂ. ಅಕಬರ ಅಲಿ

"ಹುಚ್ಚಾ! ನಮ್ಮ ಸಂಸಾರ ಕಂಡ ಮೇಲೂ ನಿನಗೆ ಈ ಪ್ರಶ್ನೆ ಕೇಳಬೇಕೆನ್ನಿಸಿತೇ?"

ಮೋಹನ ಪೆಚ್ಚಾದ!

"ನೋಡು ಮೋಹನ, ಜೀವನದಲ್ಲಿ ಶಾರೀರಿಕ ಆಕರ್ಷಣೆಗಿಂತ ಪ್ರೀತಿ, ಅಂತಃಕರಣ ಮುಖ್ಯ. ಆ ದೃಷ್ಟಿಯಿಂದ ನಾನು ಸಂಪೂರ್ಣ ಸುಖಿ"ಎಂದಳು ಅಭಿಮಾನದಿಂದ.

"ಕ್ಷಮಿಸಿರಿ ವಿಮಲಾತಾಯಿ, ನಾನು ಈ ಪ್ರಶ್ನೆ ಕೇಳಬಾರದಾಗಿತ್ತು" ಎಂದು ಯಾಚನೆಯ ಧ್ವನಿಯಲ್ಲಿ ನುಡಿದ ಮೋಹನ.

"ಛೇ, ಛೇ. Dont be silly. ಇದರಲ್ಲಿ ಕ್ಷಮಿಸುವದೇನಿದೆ? ಹುಚ್ಚನಂತೆ ಮಾತಾಡಬೇಡಿರಿ. ನಡೆಯಿರಿ, ಆಫೀಸಿಗೆ ವೇಳೆಯಾಯಿತು. ನನಗೆ ಇನ್ನೂ ಗುಡ್ಡದಷ್ಟು ಟೈಪ ಮಾಡಬೇಕಾಗಿದೆ" ಎಂದು ನಗುತ್ತಾ ಎದ್ದು ನಿಂತಳು.

ಮುಂದೆ ನಾಲ್ಕಾರುಸಲ ಮೋಹನ ಅವಳ ಮನೆಗೆಹೋಗಿ ಬಂದಿರುವನು. ವಿಮಲೆಯ ಮಾತಿನಲ್ಲಿ ಅವನಿಗೆ ಏನೂ ಅತಿಶಯೋಕ್ತಿ ಕಾಣಲಿಲ್ಲ. ಅಷ್ಟೇ ಅಲ್ಲದೆ, ಅವಳು ತನ್ನ ಬಗ್ಗೆ ತೋರುತ್ತಿದ್ದ ನಿರ್ವ್ಯಾಜ ಪ್ರೇಮದಲ್ಲೂ ಯಾವ ವ್ಯತ್ಯಾಸವೂ ಉಂಟಾಗಲಿಲ್ಲ.

ವಿಮಲೆಯ ಜೀವನವನ್ನು ಅರಿತಮೇಲೆ ಮೋಹನನ ಜೀವನದೃಷ್ಟಿಯೇ ಬದಲಿಸಿತು. ಜಲಜಾಕ್ಷಿಯ ಸಂಬಂಧದಲ್ಲಿ ತಾನು ತಪ್ಪಿದೆನೆ?–ಎಂದು ನೂರು ಸಲ ಕೇಳಿಕೊಂಡನು, ವಿಮಲೆಯ ಮುಂದೆ ತಾನು ಕ್ಷುದ್ರ ಎನಿಸಿತು. ತನ್ನ ಜಲಜಾ ಸ್ನೇಹ, ಅಂತಃಕರಣಗಳಲ್ಲಿ ಯಾರಿಗೂ ಕಡಿಮೆಯಿಲ್ಲ. ಅವಳನ್ನು ಲಗ್ನವಾದರೆ ತಮ್ಮದೂ ಆದರ್ಶ ಆನಂದಮಯ ದಾಂಪತ್ಯವಾಗಬಲ್ಲುದು. ಅಷ್ಟೇ ಅಲ್ಲದೆ, ಅದರಿಂದ ನಾನಣ್ಣನಿಗೆ ಅಪಾರ ಆನಂದವಾಗುವದು... ಇಂಥ ವಿಚಾರಗಳು ಅವನಿಗೆ ಹಲವುಸಲ ಬಂದು ಹೋಗಿವೆ. ಆದರೂ ಆತ ಯಾವುದನ್ನೂ ನಿರ್ಧರಿಸಲಾರದವನಾಗಿದ್ದ. ಈಗ ಮರಳಿಹೋಗಿ ಹೇಗೆ ಮುಖ ತೋರಿಸುವದು? ನನ್ನ ನಿರಾಕರಣೆಯಿಂದ ವೆಂಕಣ್ಣಮಾಮಾ ಈಗಾಗಲೇ ಜಲಜಾನ ಮದುವೆಯನ್ನು ಬೇರೆ ಕಡೆಗೆ ಮಾಡಿದ್ದರೆ?... ಛೇ, ಸಾಧ್ಯವಿಲ್ಲ. ಆದರೆ ಯಾಕೆ ಸಾಧ್ಯವಿಲ್ಲ? ತನ್ನ ಪ್ರಶ್ನೆಗೆ ತಾನೇ ತಬ್ಬಿಬ್ಬಾದ,

ಹೀಗೆ ಯಾವ ನಿರ್ಣಯಕ್ಕೂ ಬಾರದೆ ಮೋಹನನ ದಿನಗಳು ಕಳೆಯುತ್ತಿದ್ದವು.

ಆದರೆ ಕಳೆದತಿಂಗಳು Export sectionದ head ಮಿ. ನಾಡಕರ್ಣಿ ಅವರು ಅವನನ್ನು ಕರೆಯಿಸಿ, ಅವನ ಊರು ಮೊದಲಾದವುಗಳನ್ನು ಕೇಳಿ, "ಶಹಾಪೂರಿನ ನಾರಾಯಣರಾವ್ ನಾಯಿಕ ನಿಮಗೇನಾಗಬೇಕೇನು? ಮೊದಲು ಸಾಂಗಲಿಯಲ್ಲಿದ್ದರಲ್ಲ, ಅವರು?" ಎಂದು ಕೇಳಿದಾಗ ತಬ್ಬಿಬ್ಬಾದ ಆತನು, "ಯಾರೋ! ನನಗೆ ತಿಳಿಯದು." ಎಂದು ಹೇಳಿದ್ದ,

ಆದರೂ ನಾಡಕರ್ಣಿಯವರು "ಅವರ ಸೋದರಸೊಸೆ ನನ್ನ ಶ್ರೀಮತಿಯ ಬಾಲ್ಯಸ್ನೇಹಿತೆಯಂತೆ. ನಾರಾಯಣರಾಯರ ಮಗನ ಹೆಸರೂ ಮೋಹನ ಎಂದೇ ಇದೆ. ಅವನು ಮನೆ ಬಿಟ್ಟು ಹೋದವನು ಈಗ ಮೂರು ವರ್ಷಗಳಿಂದ ತಿರುಗಿ ಬಂದಿಲ್ಲವಂತೆ. ಅದೇ ದುಃಖದಿಂದ ಅವರು ಕೊರಗಿ ನೌಕರಿಕೂಡ ಬಿಟ್ಟುಬಿಟ್ಟಿರುವರು. ಪಾಪ, ಅವರಿಬ್ಬರೂ ಅವನಿಗಾಗಿ ಚಾತಕ ಪಕ್ಷಿಯಂತೆ ಪರಿತಪಿಸುತ್ತಿರುವರು." ಎಂದಿದ್ದರು,

"ಯಾರು?" ಮೋಹನನ ಬಾಯಿಂದ ಈ ಪ್ರಶ್ನೆ ತನಗರಿವಿಲ್ಲದೆಯೇ ಬಂದಿತ್ತು.

"ಅದೇ, ನಾರಾಯಣರಾಯರು ಮತ್ತು ಜಲಜಾ",

ಅವನ ಮೈ ಜುಂ ಎಂದಿತ್ತು!

ಒಂದು ಕ್ಷಣ ತಡೆದು, "ಇರಬಹುದು ಸರ್" ಎಂದು ಹೇಳಿ, ಅವರಿಂದ ತಪ್ಪಿಸಿಕೊಂಡು ಬರುವುದರೊಳಗಾಗಿ ಬರುವವರೆ ಅವನಿಗೆ ಸಾಕಾಗಿತ್ತು.

–ಈ ಭೆಟ್ಟಿ ನಡೆದು ಈಗ ಹದಿನೈದು–ಇಪ್ಪತ್ತು ದಿನಗಳೇ ಕಳೆದಿವೆ. ಮೋಹನನ ಮನದತಾಕಲಾಟ ನಡೆದೇ ಇತ್ತು. ಅವರಿಬ್ಬರೂ ಚಾತಕಪಕ್ಷಿಯಂತೆ ತನಗಾಗಿ ಕಾಯುತ್ತಿರುವರು. ಅಂದರೆ ಅವರಿಗೆ ತನ್ನ ಮೇಲೆ ಕೋಪವಿಲ್ಲ. ತನ್ನ ಯಾವ ಸಂದೇಹಕ್ಕೂ ಆಸ್ಪದವಿಲ್ಲ. ಮರಳಿಹೋದರೆ ಅವರು ತನ್ನನ್ನು ತೆರೆದಹೃದಯದಿಂದ ಸ್ವೀಕರಿಸುವರೆಂಬಲ್ಲಿ ಸಂಶಯವೇ ಇಲ್ಲ.

ತಾನೇಕೆ ಮರಳಿ ಹೋಗಬಾರದು? ಈ ಮುಂಬಯಿಯ ಅಜ್ಞಾತವಾಸ, ಪ್ರೀತಿರಹಿತ ಪರದೇಶಿತನ ಸಾಕಾಗಿದೆ. ಹೋಗಿ ಬಿಡಬೇಕು. ಹೋಗಲೇ? ಹೌದು. ಹೋಗಬೇಕು. ತಂದೆಯ ಕ್ಷಮೆ ಕೇಳಬೇಕು, ಜಲಜಾಕ್ಷಿಯ ಪ್ರೀತಿಯನ್ನು ಮರಳಿ ಪಡೆಯಬೇಕು ಅದರಿಂದ ತನ್ನ ಜೀವನ ಸುಖಕರವಾಗುವುದು–ಎಂದು ನಿರ್ಧರಿಸಿದ ಮೋಹನ,

- ೧೯ -

ಮಧ್ಯಾಹ್ನ ನಾಲ್ಕುಗಂಟೆಯ ಸಮಯ. ಮನೆ ಯಲ್ಲಿ ಬಹಳೇ ಸೆಕೆಯೆನಿಸಿ ನಾರಾಯಣರಾಯರು ಮನೆಯ ಮುಂಭಾಗದಲ್ಲಿರುವ ಒಳಅಂಗಳದಲ್ಲಿ ಆರಾಮ ಖುರ್ಚಿಯೊಂದನ್ನು ಹಾಕಿಕೊಂಡು ಕುಳಿತರು. ಆಗೊಮ್ಮೆ ಈಗೊಮ್ಮೆ ಗಾಳಿಬೀಸಿದರೂ ಅದರಲ್ಲಿ ತಂಪಿಗಿಂತ ಉಷ್ಣತೆಯೇ ಹೆಚ್ಚಿರುತ್ತಿತ್ತು. ಹೀಗಾಗಿ ಅವರು ಹೊರಗೆಬಂದು ಕುಳಿತುದರ ಉದ್ದೇಶ ಸಫಲವಾಗಲಿಲ್ಲ.

ಬೀದಿಯಲ್ಲಿ ಓಡಾಡುವ ಜನರನ್ನು ನೋಡುತ್ತ ವೇಳೆಕಳೆಯಬೇಕೆಂದರೆ, ಇನ್ನೂ ಜನರ ಸುಳಿದಾಟವೂ ಹೆಚ್ಚಾಗಿರಲಿಲ್ಲ. ಕೊನೆಗೆ ಬೇಸತ್ತು ಕಣ್ಣು ಮುಚ್ಚಿಕೊಂಡು ಎರಡುನಿಮಿಷ ಹಾಗೆಯೇ ಒರಗಿಕೊಂಡರು. ಆಗ, ಮುಂಜಾನೆಯಿಂದ ಅಂದಿನ ವರ್ತಮಾನಪತ್ರವನ್ನು ಓದಿಯೇ ಇಲ್ಲವೆಂಬುದು ನೆನಪಾಯಿತು. ಎದ್ದುಹೋಗಿ ಅಂದಿನ ಪತ್ರಿಕೆಯನ್ನು ತಂದು ಓದಲಾರಂಭಿಸಿದರು. ಕೊನೆಯ ಪುಟದಲ್ಲಿ ಒಂದು ಬ್ಲಾಕು ಕಾಣಿಸಿತು. "ಇದಾವ ಮಹಾಶಯ?" ಎಂದುಕೊಳ್ಳುತ್ತ ಆ ಕಡೆಗೆ ದೃಷ್ಟಿ ಹರಿಯಿಸಿದರು. ದಪ್ಪವಾದ ಅಕ್ಷರಗಳಿಂದ ಬರೆದಿತ್ತು. "ಹುಡುಗ ಕಾಣೆಯಾಗಿದ್ದಾನೆ." ಅದರ ಕೆಳಗೆ ಆತನ ಫೋಟೋ ಅದರ ಕೆಳಗೆ ಹೆಸರು ಇತ್ಯಾದಿ ವಿವರಗಳು. ನಾರಾಯಣರಾಯರು ಒಮ್ಮೆಲೇ ಪೇಪರನ್ನು ಮಡಿಸಿ ಆ ಕಡೆಗೆ ಇಟ್ಟುಬಿಟ್ಟರು.

ಹಾಗೆಯೇ ಕಣ್ಣು ಮುಚ್ಚಿಕೊಂಡು ಕುಳಿತರು. ಮೋಹನ ಹೊರಟುಹೋದಾಗ ತಾವೂ ಇದೇ ರೀತಿಯಾಗಿ ಪ್ರಕಟನೆ ಕೊಟ್ಟಿದ್ದರು. ಆದರ ಅದರ ಉಪಯೋಗವೇನಾಯಿತು? ಮೋಹನ ಅದನ್ನು ಓದದ ಹೋಗಿದ್ದರೆ? ಓದಿಲ್ಲವೆಂದೇ ಇಟ್ಟುಕೊಳ್ಳೋಣ! ಮೊನ್ನೆ ನಾಡಕರ್ಣಿ ಇಷ್ಟೆಲ್ಲ ಹೇಳಿದರೂ ಆತ ಮನಸ್ಸು ಬದಲಿಸಲಿಲ್ಲ. ನಮ್ಮ ಮೇಲೆ ಅವನಿಗೆ ಕನಿಕರವೂ ಹುಟ್ಟಲಿಲ್ಲವೇ? ತನ್ನ ಮೇಲಿನ ಸಿಟ್ಟು ಇನ್ನೂ ಕಡಿಮೆಯಾಗಿರಲಿಕ್ಕಿಲ್ಲವೇ..? ಯಾರಿಗೆ ಗೊತ್ತು. ಆತನೂ ನನ್ನಂತೆಯೇ ಅಂದುಕೊಳ್ಳುತ್ತಿರಬಹುದು... ಎಲ್ಲಿರುವನೋ ಹೇಗಿರುವನೋ? ಮೊದಲು ನನ್ನ ಬಗ್ಗೆ ಎಷ್ಟು ಪ್ರೀತಿತೋರುತ್ತಿದ್ದ? ಈಗ ಎಲ್ಲರನ್ನೂ ಹೇಗೆ ಮರೆತಿರಬಹುದು? ಅಂಥದನ್ನು ನಾನಾದರೂ ಏನು ಮಾಡಿದೆ? ಮದುವೆ ಬೇಡವಾದರೆ ಬಿಡಲಿ ಆತ ಬಂದರೆ ಸಾಕು.

ಹೀಗೆಯೇ ಮೋಹನನ ವಿಷಯವಾಗಿ ತುಂಡು ತುಂಡು ವಿಚಾರಗಳು ಅವರ ತಲೆಯಲ್ಲಿ ನುಗ್ಗುತ್ತಿರುವಾಗ, ಒಮ್ಮೆಲೇ ಈಗ ಐದಾರು ದಿನಗಳ ಹಿಂದೆ ನಡೆದ ಘಟನೆ ನೆನಪಾಯಿತು. ಅಂದು ವೆಂಕಣ್ಣ ಜಲಜಾನನ್ನು ಯಾರಿಗೋ ತೋರಿಸಿದ್ದು, ಅವಳು ಸ್ಮೃತಿ ತಪ್ಪಿ ಬಿದ್ದುದು ತಮಗೆ ಗೊತ್ತಾಗಿ ಮರುದಿನ ಬೀಗನ ಮನೆಗೆ ಹೋಗಿ ಕರೆದುಕೊಂಡು ಬಂದಿದ್ದರು. ಮಗಳ ಮದುವೆಯ ಬಗ್ಗೆ ವೆಂಕಣ್ಣ ಪ್ರಯತ್ನಿಸಿದರೆ ಅದರಲ್ಲಿ ತಪ್ಪೇನು? ಮೋಹನನ ಮೇಲೆ ಅವರು ಇನ್ನೂ ಎಷ್ಟು ದಿನ ಅವಲಂಬಿಸಿ ಕೂಡ್ರಬೇಕು? ಎಲ್ಲರವೂ ಹಿರಿಯ ರಾಗಾದರೆ ತಪ್ಪು ಯಾರದು.? ಯಾವ ವಿಚಾರವೂ ಬಗೆಹರಿಯಲಿಲ್ಲ.

ಒಮ್ಮೆಲೇ ತಂಗಿಯ ನೆನಪಾಯಿತು. ದುಃಖ ಉಕ್ಕಿ ಬಂದಿತು. ಅದರ ಜೊತೆಗೆ ಹೆಂಡತಿಯ ಮರಣ

ನಮ್ಮ ವಿದ್ಯಾರ್ಥಿ




ಹೈಸ್ಕೂಲಿಗೆ ದಿನದಿನವೂ ಹೊತ್ತು
ಪುಸ್ತಕ— ಕತ್ತೆಯ ಭಾರ,
ಬೇಸತ್ತಿಹ ನಮ್ಮಯ ವಿದ್ಯಾರ್ಥಿ
ಕಾಲೇಜಿಗೆ ಒಂದೂ ತಾರ!

– ಎಂ. ಅಕಬರ ಅಲಿ

ತಾಯಿಯ ಮರಣ ಇವು ಕಣ್ಣಮುಂದೆ ಕಟ್ಟಿ ಕಣ್ಣೀರು ಚಿಮ್ಮಿತು. ಐದುನಿಮಿಷ ಹಾಗೇ ಒರಗಿಕೊಂಡರು.

ಅಷ್ಟರಲ್ಲಿ ಜಲಜಾಕ್ಷಿಯ ನೆನಪಾಯಿತು. ಈ ನಾಲ್ಕು ದಿನ ಅವಳ ಹೆಚ್ಚು ಮಾತನ್ನೇ ಆಡಿಲ್ಲ. ಏನ್ನೆಯೋ ಅವರ ಗಾಂಭೀರ್ಯವರ ಬಂದು ಹೋದಳು. ಪಾಪ, ಅಪರಾಧ ಏನು ಮಾಡಬೇಕು? ಜಲಜಾ ಔಷಧವನ್ನೇ ಸರಿಯಾಗಿ ತೆಗೆದುಕೊಳ್ಳುವದಿಲ್ಲ. ಏನೋ ಅಶಕ್ತತೆಗೆ ಹಾಗಾಗಿರಬಹುದೆಂದು ಡಾ. ಪೇಂಟರ ಹೇಳಿದರು. ಆದರೆ ಇವಳು ತನ್ನ ಪ್ರಕೃತಿಯ ಬಗ್ಗೆ ಏನೂಕಾಳಜಿಯನ್ನೇ ತೆಗೆದುಕೊಳ್ಳುವದಿಲ್ಲ—ಈ ವಿಚಾರ ದೊಂದಿಗೆ "ಜಲಜಾ ಇಂದು ಮಧ್ಯಾಹ್ನದ ಔಷಧ ತೆಗೆದುಕೊಂಡಿರುವಳೋ ಇಲ್ಲವೋ" ಎಂಬ ಚಿಂತೆಯೂ ಸೇರಿಕೊಂಡಿತು. ಎದ್ದು ಹೋಗಿ ಅವಳಿಗೆ ಔಷಧ ಕೊಡಬೇಕು ಎಂದರು. ಆದರೆ ಏಳಲು ಆಗಲಿಲ್ಲ. ಮೈಯೆಲ್ಲವೂ ಭಾರವಾದಂತೆನಿಸಿತು. ಕೊನೆಗೆ ಉಪಾಯಗಾಣದೆ, "ಏ ಜಲಜಾ, ಜಲಜಾ, ಔಷಧ ತೆಗೆದುಕೊಂಡಿಯೋ ಇಲ್ಲವೋ?" ಎಂದು ಕುಳಿತಲ್ಲಿಂದಲೇ ಅವಳನ್ನು ಕೂಗಿಕರೆದರು. ಏನೂ ಉತ್ತರಬರಲಿಲ್ಲ. ಹಿತ್ತಲಲ್ಲಿ ಹೋಗಿರಬಹುದು ಎಂದುಕೊಂಡು ಸುಮ್ಮನಾದರು. ಹಾಗೆಯೇ "ಅವ್ವಾ' ಎಂದು ಉಸಿರುಗರೆಯುತ್ತಾ ಖುರ್ಚಿಯಲ್ಲಿ ಒರಗಿಕೊಂಡರು. ಮತ್ತೆ ಐದುನಿಮಿಷಗಳಲ್ಲಿ ಅವರು ಹಾಗೆಯೇ ನಿದ್ರೆಹೋಗಿದ್ದರು.

ತಂಪಾದಗಾಳಿ ಬೀಸಿ ನಾರಾಯಣರಾಯರಿಗೆ ಎಚ್ಚರವಾಯಿತು. ಕಣ್ಣು ತೆರೆದು "ಓಹೋ, ಸಂಜೆಯಾಗುತ್ತಾ ಬಂದಿತಲ್ಲ." ಎಂದುಕೊಂಡು ಒಳಗೆ ಹೋಗಿ ಜಲಜಾಕ್ಷಿ ಏನು ಮಾಡುತ್ತಿರುವಳು ನೋಡಬೇಕು. ಒಂದು ಕಪ್ಪು ಕಾಫಿ ಕುಡಿಯಬೇಕು ಎಂದು ಕೊಳ್ಳುತ್ತಲಿದ್ದರು. ಅಷ್ಟರಲ್ಲಿ ಒಳ ಅಂಗಳದ ಗೇಟಿನ ಸಪ್ಪಳವಾಯಿತು. ನಾರಾಯಣರಾಯರ ದೃಷ್ಟಿ ಸಹಜವಾಗಿ ಆ ಕಡೆ ತಿರುಗಿತು. ಒಬ್ಬ ತರುಣ ಏನೋ ವಿಚಾರಿಸುತ್ತ ನಿಂತಿದ್ದ. ಯಾರೋ ಅಪರಿಚಿತನಿರಬೇಕು. ಮನೆ ತಪ್ಪಿ ಬಂದಿರಬೇಕು—ಎಂದುಕೊಂಡರು.

"ಯಾರದು?" ಎಂದರು ರಾಯರು.

ಆತ ಇವರ ಕಡೆಗೆ ನೋಡಿದ.

"ಯಾರು ಬೇಕು, ಅಂದೆ."

ಆತನಿಗೆ ಇವರ ಗುರುತು ಸಿಕ್ಕಿತು. ಹಾಗೆಯೇ ಒಂದೊಂದು ಹೆಜ್ಜೆ ಮುಂದೆ ಮುಂದೆ ಬರಲಾರಂಭಿಸಿದ. ರಾಯರಿಗೆ ಆಶ್ಚರ್ಯವಾಯಿತು. ಏನೂ ಮಾತನ್ನೇ ಆಡಲೊಲ್ಲನಲ್ಲ ಎಂದುಕೊಳ್ಳುತ್ತ,

"ಯಾರು ಬೇಕು?" ಎಂದು ಮತ್ತೆ ಕೇಳಿದರು.

ಆತ ಧಾವಿಸಿ ಬಂದು "ನಾನಪ್ಪಾ ಕ್ಷಮಿಸಿರಿ..." ಎನುತ್ತ, ಅವರ ಕಾಲು ಹಿಡಿದುಕೊಂಡ!

ಈಗ ಮಾತ್ರ ಅವರಿಗೂ ಅವನ ಗುರುತು ಸಿಕ್ಕಿತು!

"ಯಾರು, ಮೋಹನ?" ಎಂದರು ಕಂಪಿಸುವ ಕಂಠದಿಂದ.

ಮೋಹನ ಗೋಣು ಅಲ್ಲಾಡಿಸಿ "ಅಹುದು" ಎಂದ.

"ಸರಿ. ಏಳು. ಹಾಗೇಕೆ, ಹುಚ್ಚನಂತೆ..." ನಾರಾಯಣರಾಯರಿಗೆ ಮುಂದ ಮಾತು ಬರಲಿಲ್ಲ.

ಎರಡೂ ಕೈಗಳಿಂದ ಮಗನನು ಹಿಡಿದೆತ್ತಿದರು. ಮೋಹನನ ಮುಖದಲ್ಲಿ ದೈನ್ಯ ತುಂಬಿತ್ತು, ಕಣ್ಣುಗಳು ನೀರಿನಿಂದ ತುಂಬಿದ್ದವು.

ರಾಯರಿಗೂ ಅಷ್ಟೇ. ಆನಂದ-ದುಃಖ-ಇನ್ನೂ ಏನೋ, ಎಲ್ಲವೂ ಸೇರಿ ಅವರು ಮೂಕರಾದರು.

ಮಗನನ್ನು ನೋಡುತ್ತ ಒಂದು ಕ್ಷಣ ಹಾಗೆಯೇ ಅವನ ಬೆನ್ನ ಮೇಲೆ ಕೈಯಾಡಿಸುತ್ತ ಕುಳಿತಿದ್ದರು!

ಅಷ್ಟರಲ್ಲಿ ಅಲ್ಲಿಗೆ ಜಲಜಾಕ್ಷಿ ಬಂದಳು. ಮಹಾದ್ವಾರ ಹತ್ತಿರ ಯಾರೋ ಇರುವುದನ್ನು ಕಂಡು ಅವಳು ಬಾಗಿಲಹತ್ತಿರವೇ ನಿಂತುಕೊಂಡಳು.

ಅವಳು ಬಂದುದನ್ನು ಗಮನಿಸಿದ ರಾಯರು, "ಬಾ, ಜಲಜಾ, ಯಾರು ಬಂದಾರೆ ನೋಡು" ಎಂದರು.

ಮೋಹನ ಮುಖವೆತ್ತಿ ನೋಡಿದ.

ಕ್ಷಣಾರ್ಧದಲ್ಲಿ ಅವಳು ಅವನನ್ನು ಗುರುತಿಸಿದಳು.

"ಯಾರು! ಮೋಹನ!! ಬಂದಿ?" ಎಂದು ಸಂಭ್ರಮದಿಂದ ಜಲಜಾಕ್ಷಿ ಉದ್ಗಾರತೆಗೆದಳು.

ಮೋಹನ ಎದ್ದು ಅವಳ ಬಳಿಗೆ ನಡೆದ. ಅವಳು ಮುಂದೆಬಂದು ಅವನನ್ನು ನಿರುಕಿಸಿ ನೋಡಿದಳು.

"ಯಾಕೆ, ಹಾಗೇಕೆ ನೋಡುವಿ? ನಾನು ನಿನ್ನ ಮೋಹನನೇ!" ಎಂದುಸುರಿದನಾತ.

"ಹೌದು, ಹೌದು. ಆದರೆ ಎಷ್ಟು ಸೊರಗಿದ್ದೀಯಲ್ಲ!" ಅವಳ ಮಾತಿನಲ್ಲಿ ಅವಳ ಹೃದಯ ಪ್ರೀತಿಯೆಲ್ಲ ಅಡಕವಾಗಿತ್ತು.

ಜಲಜಾಕ್ಷಿ ಬಂದು ತನ್ನ ಮಾಮಾನ ಹತ್ತಿರದ ಖುರ್ಚಿಯಲ್ಲಿ ಕುಳಿತಳು. ಮೋಹನನೂ ಕುಳಿತು ಕೊಂಡ.

ಮೂವರ ಹೃದಯಗಳೂ ಭಾವಾವೇಗದಿಂದ ತುಂಬಿ ಹೋಗಿದ್ದವು. ಅದರಿಂದ ಏನುಮಾತನಾಡ ಕೆಂಬುದು ಯಾರಿಗೂ ತಿಳಿಯಲಿಲ್ಲ. ಮಾತನಾಡ ಬೇಕೆಂಬ ಇಚ್ಛೆಯೂ ಅವರಿಗೆ ಆಗ ಉಂಟಾಗಲಿಲ್ಲ.

ಜಲಜಾಕ್ಷಿ ಎವೆಯಿಕ್ಕದೆ ಮೋಹನನ್ನು ನೋಡು ತ್ತಿದ್ದಳು. ಮಂತ್ರಾಲಯದ ಗುರುಗಳು ತನ್ನ ಅಭೀಷ್ಟ ವನ್ನು ಈಡೇರಿಸಿದರೆಂದು ಅವಳು ಆ ಕ್ಷಣ ಮೌನ ವಾಗಿಯೇ ಅವರಿಗೆ ತನ್ನ ಅನಂತವಂದನೆಗಳನು ಅರ್ಪಿಸುತ್ತಿದ್ದಳು.

ಮೋಹನನ ಮುಖದಲ್ಲಿ ಆನಂದ, ಪಶ್ಚಾತ್ತಾಪ, ದೈನ್ಯಗಳು ಒಡೆದು ಕಾಣುತ್ತಿದ್ದವು. ಜಲಜಾಕ್ಷಿಗೆ ಅವನ ಮುಖವನ್ನು ನೋಡಿ ಕರುಣೆ ಹುಟ್ಟಿಕೊಂಡಿತು. ಅಲ್ಲಿ ಅವಳು ಕುಳಿತಿರಲಾರದೆ.

"ಮಾಮಾ, ಕಾಫಿ ಮಾಡಿಕೊಂಡು ಬರುತ್ತೇನೆ" ಎಂದು ಹೇಳಿ ಒಳಗೆನಡೆದಳು. ಆಗಲೇ ಅವಳಲ್ಲಿ ಗೃಹಿಣಿಯ ಕರ್ತವ್ಯದ ದಕ್ಷತೆ ಜಾಗೃತವಾಗಿತ್ತು.

ರಾಯರು, "ಏಳು ಮೋನ, ಕೈಕಾಲು ಮುಖ ತೊಳೆದುಕೊಳ್ಳು" ಎಂದು ಹೇಳಿ ತಾವೂ ಆತನ ಜೊತೆಗೆ ಒಳಗೆ ನಡೆದರು.

× × ×

ಮೋಹನ ತಿರುಗಿ ಬಂದು ಹದಿನೈದು–ಇಪ್ಪತ್ತು ದಿನಗಳೇ ಕಳೆದುವು. ಈ ಮಧ್ಯ ಏನೂ ನಡೆದೇ ಇಲ್ಲವೆಂಬಂತೆ ಎಲ್ಲರೂ ನಡೆದುಕೊಂಡರು. "ಯಾಕೆ ಹೋದೆ, ಎಲ್ಲಿ ಹೋಗಿದ್ದೆ, ಹೇಗೆ ಇದ್ದೆ ?" ಎಂದು ಮೊದಲಾಗಿ ಒಂದು ಪ್ರಶ್ನೆಯನ್ನೂ ರಾಯರು ಮಗ ನಿಗೆ ಕೇಳಲಿಲ್ಲ. ಅದರಿಂದ ಅವನಿಗೆ ಇನ್ನೂ ಸಂಕೋ ಚವೆನಿಸಬಹುದೆಂದು ಅವರು ಭಾವಿಸಿದ್ದರು. ಜಲ ಜಾಕ್ಷಿ ಕೂಡ ಮೋಹನನ ಜೊತೆಗೆ ವಿರಸವುಂಟಾ ಗುವ ಪೂರ್ವದಲ್ಲಿ ಇದ್ದಂತೆಯೇ ಇದ್ದಳು. ಶಾಮ ಅಣ್ಣನಜೊತೆ ಮೊದಲಿನಂತೆ ವಿನೋದ ಚೇಷ್ಟೆ ಗಳನ್ನೇ ಮಾಡುತ್ತಿದ್ದ. ಇಬ್ಬರೂ ಸೇರಿ ಮೂರು– ನಾಲ್ಕು ಸಿನೇಮಾಗಳನ್ನು ನೋಡಿ ಬಂದರು. ವೆಂಕಣ್ಣ ಕೂಡ ಒಂದು ದಿನ ಬಂದು ಸಹಜವಾಗಿ ಅಳಿಯ ನನ್ನು ಮಾತನಾಡಿಸಿ ಹೋಗಿದ್ದ.

ಆದರೂ ಮೋಹನನ ಸಂಕೋಚ ಮಾತ್ರ ಬೇಗನೇ ದೂರವಾಗಲಿಲ್ಲ. ತಪ್ಪಿತಸ್ಥನೆ ಭಾವವು ಅವನನ್ನು ಕಾಡುತ್ತಲೇ ಇತ್ತು. ತಾನು ದುಡುಕಿ ಹೋದುದ ರಿಂದ ತನ್ನ ತಂದೆ ಎಷ್ಟು ದುಃಖಿತರಾಗಿದ್ದರೆಂಬುದನ್ನು ಅವರನ್ನು ಕಂಡಕೂಡಲೇ ಮೋಹನನಿಗೆ ಅರಿ ವಾಗಿ ಬಿಟ್ಟಿತ್ತು. ಅಜ್ಜಿಯ ಮರಣಕ್ಕೂ ತಾನೇ ಕಾರಣನಾದೆನೆಂದು ಅವನ ಹೃದಯ ಅವನಿಗೆ ಹೇಳು ತ್ತಿತ್ತು. ತನ್ನ ತಂದೆಯವರು ತನ್ನನ್ನು ಸಾಕಷ್ಟು ಬೈದುಬಿಟ್ಟಿದ್ದರೆ ಚೆನ್ನಾಗಿತ್ತೆಂದು ಅವನು ಅನೇಕ ಸಲ ಅಂದುಕೊಂಡ. "ನನ್ನದು ತಪ್ಪಾಯಿತು, ಕ್ಷಮಿ ಸಿರಿ, ಯಾವ ಶಿಕ್ಷೆಗೂ ನಾನು ಸಿದ್ಧ"–ಎಂದು ತಂದೆಗೆ ಹೇಳಬೇಕೆಂದು ಅವನು ತವಕಿಸುತ್ತಿದ್ದ. ಆದರೆ ಹೇಗೆ ಹೇಳಬೇಕು? ಅವರು ಆ ಮಾತನ್ನೇ ಆಡುವದಿಲ್ಲ ವಲ್ಲ! ತಾನಾಗಿಯೇ ಹೇಳಲೂ ಒಮ್ಮೆ ಆತ ಪ್ರಯ ತ್ನಿಸಿದ. ಆದರೆ ಆಗಿರಲಿಲ್ಲ.

ಹೀಗೆಯೇ ದಿನಕಳೆಯುತ್ತಿರಲು ಅವನ ಆತ್ಮ ವಿಶ್ವಾಸ ಬೆಳೆಯತೊಡಗಿತ್ತು. ತಿರುಗಿ ಬಂದರೆ ತನಗೆ ಎಂಥ ಸ್ವಾಗತ ದೊರೆಯಬಹುದೆಂಬ ಅವನ ಭೀತಿ ದೂರವಾಯಿತು. ತನ್ನ ಬರುವಿಕೆಯಿಂದ ಅವರೆಲ್ಲ ರಿಗೂ ಆನಂದವಾಗಿದೆಯೆಂದು ಅವನಿಗೆ ಮನವರಿಕೆ ಯಾಯಿತು. ತಾನು ತಿರುಗಿ ಬರಲಿಕ್ಕೆ ಕಾರಣರಾದ ನಾಡಕರ್ಣಿ ಅವರನ್ನು ಕೃತಜ್ಞತೆಯಿಂದ ನೆನೆದ. ಅವ ರಿಗಿಂತಲೂ ವಿಮಲ ಲೇಲೇ ಅವಳಿಗೆ ಅವನು ಹೆಚ್ಚು ಕೃತಜ್ಞನಾಗಿದ್ದ. ಅವನ ಜೀವನದೃಷ್ಟಿಯನ್ನೇ ಅವಳು ಬದಲಾಯಿಸಿದ್ದಳು. ಸಾಯಂಕಾಲ ಒಳಅಂಗಳದಲ್ಲಿ ಕುಳಿತು ಹರಟೆ ಹೊಡೆಯುತ್ತಿರುವಾಗ ಮೋಹನ ತನ್ನ ಮುಂಬಯಿಯ ಜೀವನದ ಹಲವಾರು ಅನು ಭವಗಳನ್ನು ಹೇಳುತ್ತಿದ್ದ. ನಾನಣ್ಣ ಶಾಮ ಜಲಜಾ ಎಲ್ಲರೂ ಕುತೂಹಲದಿಂದ ಕೇಳುತ್ತಿದ್ದರು. ನಾಡ ಕರ್ಣಿ ಅವರ ವಿಷಯವನ್ನು ಮೋಹನ ಹೇಳಿದ್ದ. ಆದರೆ ವಿಮಲೆಯ ಕಥೆಯನ್ನು ಮಾತ್ರ ಹೇಳಿರಲಿಲ್ಲ.

ಜಲಜಾಕ್ಷಿಯ ಬಿಳುಪು ಬೆಳೆಯುತ್ತಿರುವುದನ್ನು ಮೋಹನ ಗಮನಿಸಿದ್ದ. ಆದರೆ ಅದೀಗ ಅವನಿಗೆ ಆತಂಕವಾಗಿ ತೋರಲಿಲ್ಲ. ಆತನೀಗ ಜಲಜಾಕ್ಷಿ ಯನ್ನು ಮನಃಪೂರ್ವಕವಾಗಿ ಸ್ವೀಕರಿಸಿದ್ದ. ಅದನ್ನು ಅವಳಿಗೆ ನಿವೇದಿಸಬೇಕೆಂದು ಆತ ಸದವಕಾಶವನ್ನು ಕಾಯುತ್ತಿದ್ದ. ಆದರೆ ಹೇಗೆ ಹೇಳಬೇಕೆಂದು ಆತ ಸಂಕೋಚಪಟ್ಟುಕೊಳ್ಳುತ್ತಿದ್ದ. ಆದರೂ ಹೇಳ ಬೇಕು; ಅವಳಿಗೂ ಹೇಳಬೇಕು, ನಾನಣ್ಣನಿಗೂ ಹೇಳ ಬೇಕು. ಅದನ್ನು ಕೇಳಿ ಅವರು ಬಹುಶಃ ಆಶ್ಚರ್ಯ ಗೊಳ್ಳುವರು. ಈಗ ಅವರು ತನ್ನ ಆಸೆಯನ್ನೇ ಬಿಟ್ಟಿರಲಿಕ್ಕೆ ಸಾಕು. ಹಾಗಿರುವಾಗ ತಾನಾಗಿಯೇ ತನ್ನ ಒಪ್ಪಿಗೆಯನ್ನು ಹೇಳಿದಾಗ ಅವರಿಗೆಷ್ಟು ಆನಂದ ವಾಗಬಹುದು! ಎಂದು ಆತ ಎಣಿಸುತ್ತಿದ್ದ. ಸದವ ಕಾಶವನ್ನೇ ಕಾಯುತ್ತಿದ್ದ.

ನಿಶಾಚರರು!



"ಈ 'ಬೇ-ಕಾರ್' ಜನ ಕಾರು ಇಟ್ಟವರು ಬಹಳ ಪ್ರತಿಷ್ಠೆಗೆಂದೆ?"
"ಗೊತ್ತಿಲ್ಲವೆ ನಿನಗೀ ನಿಶಾಚರರ ಸ್ಮಗ್ಲಿಂಗಿನ ಧಂದೆ?"
– ಎಂ. ಅಕಬರ ಅಲಿ

ಮುಂದೆ ನಾಲ್ಕುದಿನಗಳಲ್ಲಿ ಅವನಿಗೆ ಆ ಸುಸಂಧಿ ಲಭ್ಯವಾಯಿತು. ಅಂದು ಶಾಮ ತನ್ನ ಗೆಳೆಯನ ಮನೆಗೆ ಹೋಗಿದ್ದ. ನಾರಾಯಣರಾಯರು ತಮ್ಮ ಕೋಣೆಯಲ್ಲಿ ಅಡ್ಡಾಗಿದ್ದರು. ಜಲಜಾ ಯಾವುದೋ ಪತ್ರಿಕೆಯನ್ನು ಓದುತ್ತ ಪಡಸಾಲೆ ಯಲ್ಲಿ ಕುಳಿತಿದ್ದಳು.

ಮೋಹನ ಬಂದು ಅವಳಎದುರಿಗೆ ಕುಳಿತ. ಜಲಜಾಕ್ಷಿ ಅವನತ್ತ ನೋಡಿ,

"ಯಾಕೆ, ನಿದ್ರೆ ಬರಲಿಲ್ಲವೇನು?" ಎಂದಳು.

"ಇಲ್ಲ. ನನಗೆ ಮಧ್ಯಾಹ್ನ ನಿದ್ರೆಯ ರೂಢಿಯೇ ಇಲ್ಲ."

ಒಂದು ಕ್ಷಣ ಇಬ್ಬರೂ ಮೌನವಾಗಿದ್ದರು.

"ಮ್ಯಾಟ್ರಿಕ್ ಆದ ಮೇಲೆ ನೀನು ಕಾಲೇಜಿಗೆ ಹೋಗಲಿಲ್ಲವೇನು?" ಮೋಹನ ಕೇಳಿದ.

"ಇಲ್ಲ."

"ಯಾಕೆ? ಹೋಗಬಹುದಿತ್ತಲ್ಲ."

"ಏನೋ ಬೇಡ ಎನ್ನಿಸಿತು. ಬಿಟ್ಟುಬಿಟ್ಟೆ".

ತುಸು ತಡೆದು ಅವನು "ಇದೆಲ್ಲ ನನ್ನಿಂದಲೇ ಆಯಿತು..."ಎಂದು ನುಡಿದ.

"ಹೋಗಲಿ ಬಿಡು. ಅದೆಲ್ಲ ಯಾಕೆ? ನೀನು ಬಂದೆಯಲ್ಲ, ಅದರಲ್ಲಿ ಎಲ್ಲವೂ ಆಯಿತು. ಅದೇ ನಮ್ಮ ಸುದೈವ. ಮಾಮಾನಿಗಂತೂ ಹೋದ ಜೀವವೇ ಬಂದಂತಾಗಿದೆ."

"ನಿನಗೆ?" ಮೋಹನ ಮುಗುಳುನಗುತ್ತ ಕೇಳಿದ.

ಜಲಜಾಕ್ಷಿ ಮುಖವೆತ್ತಿ ಅವನನ್ನೇ ದಿಟ್ಟಿಸಿ ನೋಡಿದಳು.

"ಯಾಕೆ? ಈ ಪ್ರಶ್ನೆ ಕೇಳಬೇಕೆನ್ನಿಸಿತೆ?" ಎಂದಳು.

"ಕ್ಷಮಿಸು, ಜಲಜಾ".

ಜಲಜಾ ಏನೂ ಹೇಳಲಿಲ್ಲ. ಆತನೇ ಮತ್ತೆ,

"ನಾನು ಎಲ್ಲರ ದುಃಖಕ್ಕೂ ಕಾರಣನಾದೆ. ಅದ ರಲ್ಲೂ ನಿನಗೆ ಹೆಚ್ಚಿನ ಅನ್ಯಾಯ ಮಾಡಿದೆ." ತಪ್ಪು ಒಪ್ಪಿಕೊಳ್ಳುವವರಂತೆ ಆತ ನುಡಿದ.

"ಮೋನ, ಹಳೆಯದನ್ನೆಲ್ಲ ಮರೆತುಬಿಡು ಎಂದೆನಲ್ಲ? ಮತ್ತೆ ಏಕೆ ಅದನ್ನು ನೆನಪು ಮಾಡುತ್ತೀ?"

"ಜಲಜಾ ಈ ಮಾತನ್ನು ನಾನು ಕೇಳಿಕೊಳ್ಳಬೇ ಕಾಗಿತ್ತು. ನಿಜವಾಗಿಯೂ ನಿನ್ನ ತಾಳ್ಮೆ, ಕ್ಷಮೆ ಹೆಚ್ಚಿನವು."

"ಹುಂ. ಇರಲಿ. ಬಹಳ ಪ್ರಶಂಸೆ ಬೇಡ." ಅವಳು ಅರ್ಧನಗುತ್ತ ನುಡಿದಳು.

"ನಿಜವಾಗಿಯೂ ಜಲಜಾ, ನಾನು ದುಡುಕಿ ನಿನಗೆ ತುಂಬ ದುಃಖವನ್ನುಂಟು ಮಾಡಿದೆ."

ಇಬ್ಬರೂ ಮೌನವಾಗಿ ಕುಳಿತರು. ನಂತರ ಮೋಹನ,

"ಮುಂಬಯಿಯಲ್ಲಿ ನನ್ನ ಆಫೀಸಿನಲ್ಲಿ ವಿಮಲ ಲೇಲೇ ಎಂಬವಳಿದ್ದಳು..." ಎಂದ.

"ಹೂಂ. ಮುಂದೆ?"

"ನಿಜವಾಗಿ ನೋಡಿದರೆ ನಾನು ತಿರುಗಿ ಬರ ಲಿಕ್ಕೆ ಅವಳೇ ಮುಖ್ಯಕಾರಣ ಎನ್ನಬಹುದು..." ಎಂದು ಆರಂಭಿಸಿ ಮೋಹನ ತನ್ನ ಅವಳ ಪರಿಚಯ, ಸ್ನೇಹ, ಅವಳ ಜೀವನ, ಅವಳಿಂದ ತಾನು ಕಲಿತ ಪಾಠ- ಎಲ್ಲವನ್ನೂ ವಿವರಿಸಿದ.

ಜಲಜಾಕ್ಷಿ ಎಲ್ಲವನ್ನೂ ಕುತೂಹಲದಿಂದ ಕೇಳಿದಳು. ಆದರೆ ಏನೂ ಮಾತನ್ನಾಡಲಿಲ್ಲ.

"ಯಾಕೆ, ಏನು ಹೇಳುತ್ತೀ?" ಅವ ಕೇಳಿದ.

"ಏನು ಹೇಳಲಿ? ನೀನು ಅವಳ ಕಥೆ ಹೇಳಿದೆ. ನಾನು ಕೇಳಿದೆ." ಎಂದು ಜಲಜಾಕ್ಷಿ ನಗಲು ಯತ್ನಿಸಿದಳು.

"ಜಲಜಾ, ನಿಜವಾಗಿಯೂ ಹೇಳು. ಇಂದಿಗೂ ನನ್ನ ಮೇಲೆ ನಿನ್ನ ಪ್ರೀತಿ ಇದೆಯೇನು?"

"ಅದು ಯಾಕೆ ಕಡಿಮೆಯಾಗಬೇಕು?"

"ಪ್ರಶ್ನೆಗೆ ಪ್ರಶ್ನೆ ಬೇಡ. ನೇರ ಉತ್ತರ ಹೇಳು ಜಲಜಾ. ಇಂದಿಗೂ ನೀನು ನನ್ನನ್ನು ಮೊದಲಿನಂತೆಯೇ ಪ್ರೀತಿಸುವಿಯಾ?"

"ಇದೇನು, ಸಿನೇಮಾದಲ್ಲಿಯಂತೆ ಕೇಳುತ್ತಿರುವೆಯಲ್ಲ?" ಎಂದು ಜಲಜಾಕ್ಷಿ ನಕ್ಕುಬಿಟ್ಟಳು.

"ನಗೆಯಲ್ಲ ಜಲಜಾ; ನಿಜವಾಗಿ ಹೇಳು. ನಾನು Serious ಆಗಿ ಕೇಳುತ್ತಿರುವೆನು."

"ಏನು ಹೇಳಲಿ?"

"ನನ್ನ ಬಗ್ಗೆ ಇನ್ನೂ ಪ್ರೀತಿ ಇದೆಯೆ? ಹೇಳು."

"ಹೇಳುತ್ತೇನೆ. ಆದರೆ ನೀನು ಮಾಮಾನನ್ನು ಬಿಟ್ಟು ಮತ್ತೆ ಹೋಗುವದಿಲ್ಲವೆಂದು ಮೊದಲು ನನಗೆ Promise ಮಾಡು." ಎಂದಳು.

"Promise ಜಲಜಾ, ನನ್ನಾಣೆ." ಮೋಹನ ಭಾವನಾವಶನಾಗಿ ನುಡಿದ.

"ಒಳ್ಳೆತೆನ್ನು. ಆಣೆಯ ಮಾತು ಬೇಡ." ಅವಳು ನಡುವೆಯೇ ಆತನನ್ನು ತಡೆದಳು.

"ಆಗಲಿ. ಈಗ ನನ್ನ ಪ್ರಶ್ನೆಗೆ ಉತ್ತರ ಹೇಳು. ನನ್ನ ಬಗ್ಗೆ ಇನ್ನೂ ನಿನ್ನ ಪ್ರೀತಿ ಇದೆಯೆ?"

"ಸಂದೇಹವೇಕೆ? ಇಂದಿಗೂ ಇದೆ; ಎಂದಿಗೂ ಇದ್ದೇ ಇರುವದು." ಜಲಜಾಕ್ಷಿ ಶಾಂತವಾಗಿ ನುಡಿದಳು.

ಇಷ್ಟು ಸಹಜವಾಗಿ ಇಂಥ ನೇರ ಉತ್ತರ ಅವಳಿಂದ ಬರಬಹುದೆಂದು ಆತ ನಿರೀಕ್ಷಿಸಿರಲಿಲ್ಲ.!

ಆತ ಭಾವಾವೇಶದಿಂದ ಎದ್ದು ಅವಳೆರಡೂ ಕೈಗಳನ್ನೂ ತನ್ನ ಕೈಯಲ್ಲಿ ತೆಗೆದುಕೊಂಡು, ಅವಳ ಕಣ್ಣುಗಳಲ್ಲಿಯೇ ನೋಡುತ್ತಾ, "ಹೌದೇ ಹೌದೇ? ನಿಜವೇ? ನೀನು ನನ್ನನ್ನು ಮೊದಲಿನಂತೆಯೇ ಪ್ರೀತಿಸುವಿಯಾ?" ಎಂದು ಕೇಳಿದನು.

ತನ್ನ ಕೈಗಳನ್ನು ಆತನ ಕೈಗಳಿಂದ ಬಿಡಿಸಿಕೊಳ್ಳಲು ಯತ್ನಿಸದೆ ಜಲಜಾಕ್ಷಿ, "ಹೌದು. ಈಗಲೂ ಪ್ರೀತಿಸುವೆನು. ನಿನ್ನ ಲಗ್ನವಾದ ಮೇಲೆಯೂ ಇಷ್ಟೇ ಪ್ರೀತಿಸುವೆನು" ಎಂದಳು.

ಈ ಅನಿರೀಕ್ಷಿತ ಉತ್ತರ ಅವನಿಗೆ ಆಘಾತವನ್ನೇ ಉಂಟುಮಾಡಿತು.

"ಏನು? ಏನು?" ಎಂದ ಆವೇಶದಿಂದ.

ಜಲಜಾ ತನ್ನ ಮಾತನ್ನು ಪುನರುಚ್ಚರಿಸಿದಳು.

"ನಿನ್ನ ಲಗ್ನವೆನ್ನಬೇಡ; ನಮ್ಮ ಲಗ್ನವೆನ್ನು"

"ಅಲ್ಲ; ನಿನ್ನ ಲಗ್ನ" ಜಲಜಾಕ್ಷಿ ತನ್ನ ಕೈಗಳನ್ನು ಬಿಡಿಸಿಕೊಂಡಳು.

"ಅಂದರೆ, ನೀನು ನನ್ನನ್ನು ಕ್ಷಮಿಸಲಾರೆ ಅಲ್ಲವೇ?" ಮೋಹನ ದೈನ್ಯವಾಗಿ ಕೇಳಿದ.

"ಛೇ. ಹಾಗಲ್ಲ."

"ಮತ್ತೇನು ಹಾಗಾದರೆ?"

ಒಂದು ಕ್ಷಣ ತಡೆದು ತೀರ ಶಾಂತವಾಗಿ, ಆದರೆ, ಅಷ್ಟೆ ದೃಢವಾಗಿ ಜಲಜಾಕ್ಷಿ ಹೇಳಿದಳು,

"ನಾನು, ನಾನು ಲಗ್ನವನ್ನೇ ಮಾಡಿಕೊಳ್ಳುವದಿಲ್ಲ!"

"ಆಂ? ಏನು?"

ಮೋಹನನ ನಿರೀಕ್ಷಣೆ ಚೂರುಚೂರಾಗಿತ್ತು!

"ಹೌದು ಮೋಹನಾ. ಅದು ನನ್ನ ನಿರ್ಧಾರ"

"ಆದರೆ ಯಾಕೆ?"

"ಅದನ್ನು ಕೇಳಬೇಡ."

"ನನ್ನಾಣೆ. ಹೇಳಲೇಬೇಕು." ಮೋಹನ ಆವೇಶದಿಂದ ನುಡಿದ.

ಜಲಜಾಕ್ಷಿ ಸುಮ್ಮನೆ ಕುಳಿತಳು. ಮೋಹನ ಅವಳನ್ನೇ ಎವೆಯಿಕ್ಕದೆ ನೋಡುತ್ತ, ಅವಳಿಂದ ಉತ್ತರವನ್ನು ನಿರೀಕ್ಷಿಸುತ್ತಿದ್ದ.

"ಹೇಳು, ಜಲಜಾ. Please."

ಜಲಜಾಕ್ಷಿಯ ಕಣ್ಣಲ್ಲಿ ನೀರು ತುಂಬಿದವು. ಅವಳು ಸಾವಕಾಶವಾಗಿ ತನ್ನ ಬಲ ಮೊಳಕೈಯನ್ನು ಮುಂದೆ ಮಾಡಿ ಮೋಹನನಿಗೆ ತೋರಿಸಿದಳು. ಹೊಸ ಬಿಳಿಯ ಕಲೆ ಮಿರಮಿರನೆ ಹೊಳೆಯುತ್ತಿತ್ತು.

"ಇದೀಗ ಎಲ್ಲರಿಗೂ ಗೊತ್ತಾಗಿದೆ."

"ಜಲಜಾ, Please. ಅದನ್ನು ನನಗೆ ತೋರಿಸಬೇಡ. ನಾನೀಗ ಅದನ್ನು ನೋಡುವದೂ ಇಲ್ಲ." ಮೋಹನನ ಧ್ವನಿಯಲ್ಲಿಯ ನಡುಕವನ್ನು ಅವಳೂ ಗುರುತಿಸಿದಳು.

"ಮೋಹನ ನೀನು ನೋಡಲಿಕ್ಕಿಲ್ಲ. ಆದರೆ ಇದೀಗ ಎಲ್ಲರಿಗೂ ಕಾಣುತ್ತದೆ."

"ಎಲ್ಲರ ಮಾತು ನನಗೆ ಬೇಡ."

"ಮೋಹನ, ನೀನು ವಿಚಾರಿಸಲಿಕ್ಕಿಲ್ಲ. ಆದರೆ ನಾನು ನಿರ್ಧರಿಸಿದ್ದೇನೆ."

"ಬೇಡ ಜಲಜಾ. ಅದೇನೇ ಇದ್ದರೂ ನೀನು ನನಗೆ ಬೇಕು.. ನಾನು ನಿನಗಾಗಿಯೇ ತಿರುಗಿ ಬಂದಿರುವೆನು." ಆತ ಆವೇಶದಿಂದ ನುಡಿದ.

"ಆವೇಶ ಬೇಡ. ಮೋಹನಾ. ಇನ್ನೊಮ್ಮೆ ಆವೇಶಕ್ಕೆ ಒಳಗಾಗೋದು ಬೇಡ."

"ಇದು ಆವೇಶವಲ್ಲ. ನಾನು ಎಲ್ಲವನ್ನೂ ವಿಚಾರಿಸಿಯೇ ತಿರುಗಿ ಬಂದಿರುವೆನು."

"ನಾನೂ ಎಲ್ಲವನ್ನೂ ವಿಚಾರಿಸಿದ್ದೇನೆ. ಮೋಹನಾ."

ಏನು ಹೇಳಬೇಕೆಂದು ಮೋಹನನಿಗೆ ತಿಳಿಯಲಿಲ್ಲ,

ಆತ ತುಸು ತಡೆದು, "ನಿನ್ನ ವಿಚಾರ ನಾಮಣ್ಣನಿಗೆ ಗೊತ್ತಿದೆಯೇನು?" ಕೇಳಿದ. ಅದು ಅವನ ಕೊನೆಯ ಆಸೆಯಾಗಿತ್ತು.

"ಇಲ್ಲ. ಆದರೆ ನನ್ನ ನಿರ್ಧಾರ ಅಚಲವಾಗಿದೆ." ಅವಳ ಕಣ್ಣಿಂದ ಎರಡು ಹನಿ ನೀರು ಉರುಳಿದುವು,

"ಬೇಡ ಜಲಜಾ, ನನ್ನನ್ನು ಹೀಗೆ ನಿರಾಶೆಗೊಳಿಸಿ, ಶಿಕ್ಷಿಸಬೇಡ." ಆತ ಗೋಗರೆದ.

"ಕ್ಷಮಿಸು ಮೋಹನ. ನನ್ನ ಮೇಲಿನ ಪ್ರೀತಿಗಾಗಿ ನನ್ನನ್ನು ಕ್ಷಮಿಸು." ಮಾತು ತಡೆ ತಡೆದು ಬಂದಿತು.

"ಜಲಜಾ ಜಲಜಾ Please —" ಎನ್ನುತ್ತಾ, ಮೋಹನ ಅವಳ ಕಡೆಗೆ ಬಗ್ಗಿದ.

ಜಲಜಾಕ್ಷಿ ಅವನ ಹಣೆಗೆ ಒಂದು ಮುತ್ತು ಕೊಟ್ಟು, ಅಲ್ಲಿಂದ ಎದ್ದು ಬಿಕ್ಕುತ್ತ ಹೊರಟು ಹೋದಳು.

ಮೋಹನ ಸ್ತಂಭೀಭೂತನಾಗಿ ಹಾಗೆಯೇ ನಿಂತುಕೊಂಡಿದ್ದ! ●


# ಭಾರತ ಹೋಮಿಯೋ ಫಾರ್ಮಸಿ

೧೩೦೧, ಟಿಳಕಚೌಕ, ಬೆಳಗಾವಿ ಫೋನ್: 1467

ಈ ಕೆಳಗಿನವುಗಳ ಅವಶ್ಯಕತೆಗಳಿಗಾಗಿ ನಮ್ಮನ್ನು ಸಂಪರ್ಕಿಸಿರಿ

★ ಉಚ್ಚ ತರಗತಿಯ ಶ್ರೇಷ್ಠ ಹಾಗೂ ಸ್ಟಾಂಡರ್ಡ ಹೋಮಿಯೋಪಥಿ ಹಾಗೂ ಬಾಯೋಕೆಮಿಕ್ ಔಷಧಿಗಳು

★ ಟಿಂಕ್ಚರಗಳು, ★ ಪೇಟೆಂಟ ಔಷಧಿಗಳು, ★ ವೈದ್ಯಕೀಯ ಗ್ರಂಥಗಳು

ಈ ಕೆಳಗಿನವುಗಳ ಸಂಗ್ರಾಹಕರು:

ಮೆ॥ ಬಹೋಲಾ ಫಾರ್ಮಾಸ್ಯುಟಿಕಲ್ಸ, ಕುಂಭಕೋಣಂ
ಮೆ॥ ರಾಮಕೃಷ್ಣ ಫಾರ್ಮಾಸ್ಯುಟಿಕಲ್ಸ, ಹೈದರಾಬಾದ
ಮೆ॥ ಮದರ ಇಂಡಿಯಾ ಪ್ರಾಡಕ್ಟ್ಸ, ಮುಂಬಯಿ



ಮೆ॥ ನ್ಯಾಶನಲ್ ಹೋಮಿಯೋ ಲಾಬೋರೇಟರೀಜ, ಕಲಕತ್ತಾ
ಮೆ॥ ಎಕಾನಾಮಿಕ್ ಹೋಮಿಯೋ ಫಾರ್ಮಸಿ, ಕಲ್ಕತ್ತಾ
ಮೆ॥ ಜಿ. & ಜಿ. ದಿಶೇನ, ಹೈದರಾಬಾದು.

ಉತ್ತರ ಕರ್ನಾಟಕದಲ್ಲಿಯೇ ಹೋಮಿಯೋಪಥಿ ಔಷಧಿಗಳ ಅತಿ ದೊಡ್ಡ ಸಂಗ್ರಾಹಕರು

# ಎಲ್ಲಿ ದೀಪಾವಳಿ ಮ್ಯಾಟರು?

ಎಚ್. ವಿ. ನಾರಾಯಣ

"ಅಪ್ಪಯ್ಯ" ಎಂದು ಕರೆದ ಆಫೀಸಬಾಯ್.

"ನೋರೆ ಎಂದು ಸೇರಿಸು, ಅಯೋಗ್ಯ" ಎಂದು ಭೀಕರವಾಗಿ ನುಡಿದ ಅಪ್ಪಯ್ಯ–ಕನ್ನಡದ ಮೊಟ್ಟ ಮೊದಲ ಪತ್ರಿಕೆಯಲ್ಲಿ ಪ್ರೆಸ್ ಕೆಲಸ ಮಾಡಿದ ಅಪ್ಪಯ್ಯ. ಭಾರತವನ್ನು ಬ್ರಿಟಿಷರಿಂದ ಬಿಡುಗಡೆ ಮಾಡಿ 'ರಾಮರಾಜ್ಯ'ದ ಭರವಸೆ ಘೋಷಣೆಯನ್ನು ಮಾಡಿದ ಜನನಾಯಕನ ಧೋರಣೆಯಿತ್ತು ಧ್ವನಿಯಲ್ಲಿ.

ಆಫೀಸ್ ಬಾಯ್ ತತ್ತರಿಸಿ ನುಡಿದ. "ಸಂಪಾದಕರು ಕರೆಯುತ್ತಾರೆ."

"ನಾನೇ ಅವರನ್ನು ಕರೆದೆನೆಂದು ಹೇಳು ಹೋಗು."

"ಮತ್ತೆ..." ಎಂದು ತೊದಲಿದ ಆಫೀಸ್ ಬಾಯ್ ಭಾಷಣಕ್ಕೆ ನಿಂತ ಸಮಾಜ ಉದ್ಧಾರಕನಂತೆ.

"ಮತ್ತೆ ಇಲ್ಲ ಪತ್ತೆ ಇಲ್ಲ. ನನಗೆ ಅವರಲ್ಲಿ ಕೆಲಸವಿಲ್ಲ. ಅವರಿಗೇನಾದರೂ ಇದ್ದರೆ ನನ್ನ ಹತ್ತಿರ ಬರಲಿ." ಗುಡುಗು.

ಆಫೀಸ್ ಬಾಯ್ ನಿಂತಿದ್ದ.

"ಕೇಳಿಸಲಿಲ್ವಾ?" ಮಿಂಚು.

ಆಫೀಸ್ ಬಾಯ್ ಓಡಿಹೋದ.

"ಶುದ್ಧ ಅಕ್ರಮದ ಡೇಪರಾಫೀಸು ಇದು. ಪ್ರಧಾನಿಗೆ ಕಾಗದ ಬರೆಯಬೇಕು. ನಮ್ಮ ಜೀವ ತಿನ್ನುತ್ತಾರೆ" ಅಪ್ಪಯ್ಯ ಸುರಿಸಿದ ಮಳೆ.

ಸಚಿವವರ್ಗದ ಮಾತಿಗೆ ಬೆಲೆ ಕೊಡಲೇಬೇಕಾದ ಮುಖ್ಯಮಂತ್ರಿಯಂತೆ ಪ್ರಧಾನ ಸಂಪಾದಕರು ವಿಧಿಯಿಲ್ಲದೆ ತೇಲಿದರು ಅಪ್ಪಯ್ಯನ ಮುಂದೆ. ಅವನು ಮಾತನಾಡಲಿಲ್ಲ. ವಾಕ್‌ಸ್ವಾತಂತ್ರ್ಯದ ವಿಧಿಯನ್ನೆತ್ತಿ ಹಿಡಿದು ಪ್ರಧಾನ ಸಂಪಾದಕರೇ ಮಾತನಾಡಿದರು.

"ಅಪ್ಪಯ್ಯ."

"ನೋರೆ ಎನ್ನಿ ದಯಮಾಡಿ. ಗಿವ್ ರೆಸ್ಪೆಕ್ಟ್. ಟೇಕ್ ರೆಸ್ಪೆಕ್ಟ್." ಅಪ್ಪಯ್ಯನಿಗೆ ನಾಲ್ಕು ನಾಲ್ಕು ಪದ ಇಂಗ್ಲೀಷೂ ಬರುತ್ತಿತ್ತು.

"ಅಪ್ಪಯ್ಯನೋರೆ?"

"ಹುಂ. ಹೇಳಿ ಏನಾಗಬೇಕು. ತಾಪತ್ರಯ ಬಂದರೆ ಅಪ್ಪಯ್ಯ! ಗಟ್ಟಿಯಾಗಿದ್ದೀನಿ ಸಾಯೋದಕ್ಕೆ, ಹೇಳಿ."

'ಹೇಳಿ' ಎಂದನಲ್ಲ ಸಧ್ಯ. 'ಬೊಗಳಿ' ಎನ್ನಲಿಲ್ಲ. ಏನು ಮಾಡುವುದು? ಪ್ರೆಸ್‌ಕಮಿಷನ್ ಅವನಿಗೆ ಈ ಬಲಕೊಟ್ಟಿದೆ. ಅವನು ಮೊಟ್ಟ ಮೊದಲ ಪತ್ರಿಕೆಯಿಂದ ಕೆಲಸ ಮಾಡಿ ತೋಳಿನ ಬಲ ಇನ್ನೂ ಉಳಿಸಿಕೊಂಡಿರುವವನು (ಕೆಲಸ ಮಾಡಿದ್ದರೆ ಬಲ ಉಳಿದಿರುತ್ತಿತ್ತೆ?) ಹಗ್ಗ (ಇಂಗ್ಲಿಷಿನ ರೋಪ್)ನಲ್ಲಿ ಕಾಲ ಕಳೆದವನು.

"ನಾಳೆಯಿಂದಲಾದರೂ ದೀಪಾವಳಿ ವಿಶೇಷ ಸಂಚಿಕೆ ಪ್ರಾರಂಭಿಸಬೇಕು. ಇನ್ನೂರು ಪೇಜು. ಅನೌನ್ಸ ಮಾಡಿಯಾಗಿದೆ."

"ಪ್ರಾರಂಭಿಸಿ."

"ನೀನು ಎಸ್ ಎನ್ನು."

"ನಿಮ್ಮದು ಯಸ್ಸೋ?"

"ಅರ್ಧ ಮ್ಯಾಟರು ಸಿದ್ಧ"

"ಸರಿ, ನಾನೂ ಸಿದ್ಧ"

"ನಿನ್ನ ಸಿಬ್ಬಂದಿ?"

"ಬೆಳಿಗ್ಗೆ ಪಟ್ಟಿ ಕೊಡುತ್ತೇನೆ"

"ಆಯಿತು"

ನೋಡೋಣ ಎಂದು ಕಾಮರಾಜ್ ಸೂತ್ರವನ್ನು ಅನುಸರಿಸಿ ನಿದ್ರೆ ಮಾಡಿದ.

ಬೆಳಿಗ್ಗೆ ಎಂದಿನಂತೆ ಪ್ರೆಸ್ಸಿಗೆ ತೆರಳಿದ. ಪ್ರಧಾನ ಸಂಪಾದಕರು "ಅಪ್ಪಯ್ಯ,ನೋರೆ?" ಎಂದರು.

"ಬರಕೊಳ್ಳಿ ನನ್ನ ಸಿಬ್ಬಂದಿಪಟ್ಟಿ" ಎಂದ. ಅಂಕಿ ಸಂಖ್ಯಾ ಸಂಶೋಧಕ ಡೈರೆಕ್ಟರನಂತೆ ಬಾಯಿಗೆ ಬಂದ ಹೆಸರುಗಳ ಪಟ್ಟಿಕೊಟ್ಟ. ಎಲ್ಲರ ಹೆಸರೂ ಇತ್ತು.

"ಮತ್ತೆ ದಿನ ಪತ್ರಿಕೆ ನಡೆಯುವುದು?"

"ಅದೂ ನಡೆಯುತ್ತೆ. ದೀಪಾವಳಿ ಸಂಚಿಕೆಯೂ ನಡೆಯುತ್ತೆ."

"ಸರಿ"

ಈ ವೇಳೆಗೆ ಕೆಲ ಸಗಾರರೊಬ್ಬರೂ ಬಂದಿರಲಿಲ್ಲ

**ಫೋರ್‌ಮನ್ ಅಪ್ಪಯ್ಯ, ಕನ್ನಡದ ಮೊಟ್ಟಮೊದಲ ಪತ್ರಿಕೆಯಲ್ಲಿ ಕೆಲಸಮಾಡಿದವ. ಅವನ ಪ್ರತಾಪವು ಪ್ರಧಾನ ಸಂಪಾದಕರಿಂದ ಆಫೀಸ್‌ಬಾಯ್‌ವರೆಗೆ ಎಲ್ಲರನ್ನು ನಡುಗಿಸಿತ್ತು. ಆದರೆ ಒಂದು ದಿನ ಅಪ್ಪಯ್ಯ ಅವರೆಲ್ಲರದೂ ಕ್ಷಮೆ ಕೇಳಿದ.**

ಕೈಗೆಟುಕದ ದುಷ್ಪರಾಜ್ಯದಲ್ಲಿ ಮಂತ್ರಿಮಂಡಲ ಏನೂ ತಕರಾರು ಮಾಡುತ್ತಿಲ್ಲ ಎಂದು ವರದಿ ಕೇಳಿದ ಪ್ರಧಾನಿಯ ತೃಪ್ತಿ ನಿಟ್ಟುಸಿರು ಪ್ರಧಾನ ಸಂಪಾದಕರಿಗೆ, ಅದರಂತೆ ಸಂಪಾದಕರಿಗೆ ಆಜ್ಞೆಯಿತ್ತರು. ಉಪಸಂಪಾದಕರಿಗೆಲ್ಲ ಹೇಳಿದರು. ಯಾರೂ ಏನೂ ಎದುರು ಮಾತನಾಡದೆ ಸುಮ್ಮನೆ ತಲೆಬಾಗಿಸಿ ಕೆಲಸ ಮಾಡುತ್ತಿದ್ದರು. (ಅಲ್ಲ ಗೀಚುತ್ತಿದ್ದರು) ಅದನ್ನೆ ಸಮ್ಮತಿಯೆಂದುಕೊಂಡು ಪ್ರಧಾನ ಸಂಪಾದಕರು ಸೆಕ್ರೆಟರಿಗೆ ತಿಳಿಸಿದರು. ಅಡ್ಮಿನಿಸ್ಟ್ರೇಟರ್‌ಗೆ ತಿಳಿಸಿದರು. 'ಹುಂ', ಸರಿ ಎಂದು ಅವರಿಬ್ಬರಿಂದ ಎರಡು ಅಕ್ಷರಗಳ ಅಪ್ರೂವಲ್ ಬಂದಿತು.

ಇತ್ತ ಅಪ್ಪಯ್ಯನೋರು ರಾತ್ರಿ ಮನೆಗೆ ಬಂದು ಹಿಟ್ಟು ಹೊಡೆದು, ನಮ್ಮವರು ಇಂಗ್ಲೆಂಡಿನ ಮೇಲೆ ಫುಟ್‌ಬಾಲ್ ಆಡಿ ಹಿಟ್ಟು ತಿಂದಂತೆ ಅತ್ತ ಇತ್ತ ಹೊರಳಾಡಿದ ಹಾಸಿಗೆಯಲ್ಲಿ ಕೆಲಸಗಾರರನ್ನು ದೀಪಾವಳಿ ಸಂಚಿಕೆಗೆ ಯಾವ ಕ್ರಮದಲ್ಲಿ ಅರಿಸೋಣ ಅಂತ ಯೋಚಿಸಿದ್ದ ಬಾಯಲ್ಲಿ ನೊರೆ ಬಂತು. ಬೆಳಿಗ್ಗೆ ಬರಬೇಕಿತ್ತಲ್ಲಾ ಎಂದು ಅಪ್ಪಯ್ಯ ಸುತ್ತ ನೋಡಿದ. ರೋಟರಿ ಮುಂದೆ ರೋಟರಿಮ್ಯಾನ್ ಇಲ್ಲ. ತನ್ನ ಸುತ್ತ ಕಂಪೋಜಿಟರುಗಳಿಲ್ಲ. ಪೇಜು ಕಟ್ಟುವವರಿಲ್ಲ. ಪೈ ಬಾಯಗಳಿಲ್ಲ.

ಅವನು ಆಚ್ಚರಿಪಟ್ಟಂತೆ ಪ್ರಧಾನ ಸಂಪಾದಕರೂ ಆಚ್ಚರಿಪಟ್ಟರು. ಸಮಸ್ಯೆ ಕೂಡಲೇ ಈ ಜಾಗ ಬಿಡು ಎಂದಿತು ಮನಸ್ಸು–ಸರ್ಕಾರಿ ಸೆಕ್ರೆಟರಿ ಆಲೋಚಿಸುವಂತೆ. ಆ ಸಮಯಕ್ಕೆ ಸರಿಯಾಗಿ ಹೊರಗೆ ಕೂಗಾಟ (ಅದನ್ನೇ ಘೋಷಣೆ ಎನ್ನುವರು ನಮ್ಮಲ್ಲಿ)

ಏನಪ್ಪಾ ಅಂದರೆ—

ಅಪ್ಪಯ್ಯನ ವಿರುದ್ಧ ಘೋಷಣೆಯಿದ್ದಂತಿತ್ತು. ಇದ್ದಂತಿತ್ತು ಏನು? ಅದೇ ಹೊರಗೆ ಬಂದು ನೋಡಿದರು.

"ಅಪ್ಪಯ್ಯನನ್ನು ಹೊರಗೆ ಕರೆಯಿರಿ"

"ಅಪ್ಪಯ್ಯನನ್ನು ಓಡಿಸಿ"

"ಡೌನ್ ವಿತ್ ಅಪ್ಪಯ್ಯ"

"ನಾಚಿಗೇಡು ಅಪ್ಪಯ್ಯ"



"ಗೋಳು ಉಯ್ದುಕೊಳ್ಳುವ ಅಪ್ಪಯ್ಯ ತೊಲಗು" —ಇವು ಬೋರ್ಡುಗಳು.

ಹಿಡಿದವರು ರೋಟರಿಮ್ಯಾನ್. ಸಹಾಯಕ ಪೇಜು ಕಟ್ಟುವವರು, ಸಹಾಯಕರು, ಕಂಪೋಜಿಟರುಗಳು, ವೈ ಬಾಯ್‌ಗಳು, ಕೂಗಾಡುವವರು ಯಾರೋ ಕಾಣದ ಮುಖಗಳು. ಪ್ರಧಾನ ಸಂಪಾದಕರು ಸಹ ಸಂಪಾದಕರಿಗೆ ಪರಿಸ್ಥಿತಿ ಹೇಳಿದರು. ಸಹಸಂಪಾದಕರು ಹೋಗಿ ಉಪಸಂಪಾದಕರಿಗೆ ತಿಳಿಸಿದರು. ಅವರು ಆಫೀಸ್‌ಬಾಯ್‌ಗೆ ಹೇಳಿದರು. ಅವನು ಹೋಗಿ ವಾಚ್‌ಮನ್‌ಗೆ ತಿಳಿಸಿದ. ವಾಚ್‌ಮನ್ ನೇರ ಅಡ್ಮಿನಿಸ್ಟ್ರೇಟರ್ ಕಿವಿಗೆ ಹಾಕಿದ. ಅವರು ಗಂಟೆ ಹೊಡೆದು ಸೆಕ್ರೆಟರಿಯನ್ನು ಕರೆದರು. ಇದಕ್ಕೇ ಕಾಯುತ್ತಿದ್ದರು ಸೆಕ್ರೆಟರಿ. ಗಲಭೆಯಿಲ್ಲದೆ ತನಗೆ ಸ್ಥಾನವೆಲ್ಲಿ? ಪಿ. ಆರ ಓ. ಅವರನ್ನು ಕರೆಸಿದರು: ನೋಡಿ ಇತ್ಯರ್ಥ ಮಾಡಿ ಕೊಡಲಿ ಎಂದರು. ಪಿ. ಆರ್. ಓ. 'ನೀವೂ ಬನ್ನಿ ಸಾರ್' ಎಂದು ಸೆಕ್ರೆಟರಿ ಕರೆಯಲ್ಪಟ್ಟರು.

ಸೆಕ್ರೆಟರಿಗೆ ಗೌರವದ ತಿರುವು. ಮನಸ್ಸಿನಲ್ಲಿ ಅಂದುಕೊಂಡರು. ಹೆಚ್ಚೆಂದರೆ ಬೈದಾರೆ? ಹೊಡೆದಾರೆ? ಪ್ರಾಣತೆಗೆದಾರೆ? ಏನು ಬೇಕಾದರೆ ಆಗಲಿ. ಕನ್ನಡ ದಿನಪತ್ರಿಕೆಯ ಕಛೇರಿಯಲ್ಲಿ ಸೆಕ್ರೇಟರಿಗ ಘೇರಾವೊ, ಹಿಂಸಾಕೃತ್ಯ, ಪ್ರಾಣತ್ಯಾಗ ಮಾಡಿದ ಮಹಾಮಹಿಮ. ಕನ್ನಡದ ಮಣ್ಣುಮುಕ್ಕಿದ ಮಹಾನುಭಾವ ಎಂದು ತಮ್ಮ ಪತ್ರಿಕೆಯೇ ಮುಂದಿನ ಪುಟದಲ್ಲಿ ಹಾಕೀತು. ಕಂಗೆಟ್ಟ ಸಂಸಾರಕ್ಕೆ ಚಂದಾ ಎತ್ತುತ್ತಾರೆ. ಐದರಿಂದ ಐವತ್ತು ಸಾವಿರ ಎತ್ತಲಿ. ಯಾರೂ ಏನೂ ತಿಂದು ಹಾಕದೆ ನನ್ನ ಹೆಂಡತಿಯನ್ನು ಕರೆದು ಸಮಾರಂಭ ನಡೆಸಿ ಪೂರ್ತಿ ಹಣಕೊಡಲಿ ಎಂದು ಕನಸು ಕಂಡರು. ಕಂಡವರೇ ಪಿ.ಆರ್.ಓ. ಜೊತೆ ಹೊರಗೆ ಬಂದರು.

"ಶಾಂತಿ–ಶಾಂತಿ" ಎಂದು ಯು. ಎನ್. ಓ. ಘೋಷಣೆ ಮಾಡಿದರು.

"ಹೌದು" ಎಂದರು ಪಿ.ಆರ್.ಓ. ಸಹ,

"ಏನು ಬೇಕು ನಿಮಗೆ?"

"ಫೋರ್‌ಮನ್ ಅಪ್ಪಯ್ಯನನ್ನು ಹೊರಗೆ ಹಾಕಿ"

"ಏನಪಾ ಇದು" ಎಂದು ಉದ್ಗರಿಸಿದರು ಪಿ.ಆರ್.ಓ.

"ಯಾಕಪ್ಪಾ ಮಿತ್ರರೆ" ಎಂದರು ಅವರನ್ನು ತಮ್ಮ ಲೆವೆಲ್‌ಗೆ ಎತ್ತಿಕೊಳ್ಳುತ್ತಾ ಸೆಕ್ರೆಟರಿ,

"ಅವನು ವಂಚಕ"

"ಹೇಗೆ?"

"ಸಂಬ್ಳಾ ಹೆಚ್ಚಿಸುತ್ತೇನೆ ಎಂದ"

"ಹೆಚ್ಚಿಸಿದನೋ?"

"ಇಲ್ಲ. ಮುಷ್ಕರ ಹೂಡುವುದು ಹೇಗೆ ಎಂದು ಹೇಳಿಕೊಟ್ಟ"

"ಅದಕ್ಕೇ ಈ ಮುಷ್ಕರವೊ?"

"ಅಲ್ಲ ಇದು ನಮ್ಮ ಸ್ವಂತ"

"ಯಾಕೆ?"

"ನಾವು ಅವ್ನಿಂದ ಯಮಶಿಕ್ಷೆ ಅನುಭವಿಸ್ತಿದೀವಿ"

"ಯಾವ ರೀತಿ?"

"ಎಲ್ಲಾ ತರಹ"

"ಅಂದರೆ?"

"ಈ ಪ್ರೆಸ್ ಅವನದೇ ಇದ್ದಂತೆ. ನಾವು ಅವನ ಗುಲಾಮರಿದ್ದಂತೆ ನಡೆಸ್ತಾನೆ"

ಸೆಕ್ರೆಟರಿ ಸುತ್ತ ನೋಡಿದರು. "ಅಪ್ಪಯ್ಯ ನೋರು ಎಲ್ಲಿ?" ಎಂದರು.

"ಕಂಪೋಜಿಂಗ್ ಸೆಕ್ಷನ್‌ನಲ್ಲಿ ಅವ್ರೆ"

"ಏನು ಮಾಡ್ತಿದಾನೆ?"

"ತಲೆಮ್ಯಾಕೆ ಕೈ ಇಟ್ಕೊಂಡು ಕೂತವ್ರೆ"

"ಕರೀ ಇಲ್ಲಿ"

"ಬಾಕಲು ಹಾಕೊ ಒಡವೆ"

"ಬಾಗಿಲು ಒಡೆದು ಕರಕೊಂಡು ಬನ್ನಿ"

ಕರೆತಂದರು ವಾಚ್‌ಮನ್ ಮತ್ತು ಆಫೀಸ ಬಾ...ಯ್.

"ಏನು ಅಪ್ಪಯ್ಯನೋರ?"

"ಎಲ್ಲಾ ಕೇಳಿದೆ ಸ್ವಾಮಿ"

"ಏನು ಹೇಳುವೆ?"

"ಬೇರೆಯವರನ್ನೂ ವಿಚಾರ್ಸಿ ಸ್ವಾಮಿ"

ಸೆಕ್ರೆಟರಿ ಪ್ರಧಾನ ಸಂಪಾದಕರನ್ನು ಕರೆಸಿ ಕೇಳಿದರು.

"ಅವನು ಶುದ್ಧ ತಲೆಹರಟೆ" ಎಂದರವರು.

ಸಹಸಂಪಾದಕರನ್ನು ಕರೆದು ಕೇಳಿದರು.

"ತಲೆಯಲ್ಲಿ ಎರಡು ನರ ಕಡಿಮೆ" ಎಂದರವರು.

ಸಿಟಿನ್ಯೂಸ್ ಎಡಿಟರನ್ನು ಕೇಳಿದರು.

"ಇವನಿಂದಾಗಿ ಈ ದಿನದ ನ್ಯೂಸ್ ನಾಲ್ಕು ದಿನದ ನಂತರ ಬರುತ್ತೆ" ಎಂದರವರು;

"ಅವಕ್ಕೆ ಟೈಮಿಲ್ಲ. ಹಾಗೆಯೇ ಆಯ್ತು ಮಾಡೋಣ."

"ನಾನು ಫೋರ್‌ಮನ್ ಅಗ್ತೀನಿ" ಎಂದು ಎಲ್ಲೂ ಮುಂದೆ ನಿಂತರು.

ಸೆಕ್ರೆಟರಿಗೆ ಪೇಚಾಟಕ್ಕೆ ಇಟ್ಟುಕೊಂಡಿತು.

"ಹೀಗಾದರೆ ಹೇಗೆ? ಒಂದು ಹೆಸರು ಹೇಳಿ."

"ಮೊದಲು ಅಪ್ಪಯ್ಯನ್ನ ಕಳುಹಿಸಿ. ನಮಗೆ ಫೋರ್‌ಮನ್ನೇ ಬೇಡ."

ಸೆಕ್ರೆಟರಿ ನಿಟ್ಟುಸಿರುಬಿಟ್ಟು ಶಾಂತಿ ನೆಲೆಗೊಳಿಸಿದ ಲಾಲ್ ಬಹದೂರ್ ಶಾಸ್ತ್ರಿಯವರಂತೆ ಹೇಳಿದರು "ಇದೀಗ ಸರಿ."

ನಿಂತ ಜಾಗದಲ್ಲಿ ಅಪ್ಪಯ್ಯನೋರಿಗೆ ಮೋಮೋ ಹೋಯಿತು. ಅವನನ್ನು ತೆಗೆಯುವ ಪತ್ರಕ್ಕೆ ವಿಕ್ಟೋರಿಯಾ ರಾಣಿಯ ಪತ್ರವೋ ಎಂಬಂತೆ ಎಲ್ಲರೂ ಸಹಿ ಹಾಕಿದರು. ಸೆಕ್ರೆಟರಿಗೆ ಬಲಬಂದಿತು. "ಈಗ ಬರಲಿ, ಪ್ರೆಸ್ ಕಮೀಷನ್, ಲೇಬರ್ ಆಫೀಸರ್" ಎಂದುಕೊಂಡರು.

ಎಂದವು ಹತ್ತು ಮಕ್ಕಳು.

"ನಾಳೆ ಹೊಸಾ ಕಲಸಕ್ಕೆ ಸೇರ್‍ತೀನಿ" ಎಂದು ಅಪ್ಪಯ್ಯ ಪೂರ್ತಿ ಪ್ರಜ್ಞೆ ತಪ್ಪಿದ ಗುಂಡಾಫೀಸಿಗೆ ಹೋಗಿ ಬಂದ ನವಪತ್ರಿಕಾಕರ್ತನಂತೆ.

ಬೆಳಿಗ್ಗೆ ಎದ್ದು ತನ್ನ ದಿನಪತ್ರಿಕೆಯನ್ನೇ ತರಿಸಿ ಓದಿದ: "ಒಳ್ಳೆಯ ಅನುಭವಸ್ಥ ಪ್ರೆಸ್ ಫೋರ್‌ಮನ್ ಬೇಕಾಗಿದೆ."

ಅದನ್ನು ಹರಿದಿಟ್ಟುಕೊಂಡು ಆಟೋ ಹತ್ತಿದ. ಅಡ್ರೆಸ್ ಸಿಕ್ಕಲಿಲ್ಲ. ನಾಲ್ಕು ಗಂಟೆ ಓಡಿದ ಆಟೋ ನಲವತ್ತೆಂಟುಬಾರಿ ನಿಂತು ಫೈನಲ್ ಆಗಿ ನಿಂತೇ ಹೋಯಿತು. ಯಾರೋ ಇಬ್ಬರು ಅಪ್ಪಯ್ಯನನ್ನು "ಬನ್ನಿ ಆ ಅಡ್ರೆಸ್ ತೋರಿಸುತ್ತೇವೆ" ಎಂದು ಕಣ್ಣು ಕಟ್ಟಿ ಕರೆದೊಯ್ದರು. ಕಣ್ತೆರೆದಾಗ ಯಾರೋ ವಿಚಿತ್ರ ಆದರೂ ಗಂಭೀರ ರಾಕ್ಷಸ ಭಯಂಕರ ಮುಖ ಮುದ್ರೆಯ ವ್ಯಕ್ತಿಯ ಮುಂದೆ ನಿಂತಿದ್ದ. ಪಕ್ಕದಲ್ಲಿ ಎಮ್ಮೆಯ ಕೊಂಬುಗಳನ್ನೂ ಇಬ್ಬರು ಹಿಡಿದಿದ್ದರು.

"ಸುರಿಸ್ಕಮನ ಗಿರಿವದೇಮಯ" ಎಂದರು ಅವರು.



ಮಫ್ಯೂಸಲ್ ಎಡಿಟರ್ "ನಾನು ಬರಲೇ ಬೇಕೆಂದ ನ್ಯೂಸ್ ಬರುವುದೇ ಇಲ್ಲ. ಇವನೇ ಇಲ್ಲಿಗೆ ಗವರ್ನರ್ ಆಡಿದಂತೆ ಆಡುತ್ತಾನೆ."

ಫೀಚರ್ ಎಡಿಟರ್: "ನನ್ನ ವಿಭಾಗದ ಲೇಖಗಳು ಅರ್ಧಂಬರ್ಧ ಅಚ್ಚಾಗುತ್ತವೆ."

ಮ್ಯಾಗಜಿನ್ ಸೆಕ್ಷನ್ ಎಡಿಟರ್: "ಅದರಲ್ಲಿ ದಂ ಇಲ್ಲದಂತೆ ಕೈಯಾಡಿಸುವವನು ಇವನೇ."

ಸ್ಪೋರ್ಟ್ಸ್ ಎಡಿಟರ್: "ಫುಟ್‌ಬಾಲ್ ಒದ್ದಂತೆ ನನ್ನನ್ನು ಒದೆಯಬೇಕೆಂದು ಹೇಳಿದನಂತೆ."

ಮಿಷಿನ್ ಮ್ಯಾನ್ "ಪ್ರಿಂಟ್ ಓ.ಕೆ. ಅನ್ನದೆ ಗಂಟೆ–ಗಟ್ಟಲೆ ಸಾಯಿಸುತ್ತಾನೆ."

"ಮತ್ತೆ ಇಷ್ಟು ದಿನ ಸುಮ್ಮನೆ ಯಾಕಿದ್ದಿರಿ? ಏನೂ ರಿಪೋರ್ಟ್ ಮಾಡಲಿಲ್ಲ?"

"ನಮ್ಮ ದೇಶ ಹೀಗಿದೆ. ಶಂಖ ಹೊಡೆದರೂ ಏನಾಯಿತು?"

ಇದು ರಾಜಕೀಯವೆಂಬಂತೆ ಅಸಹ್ಯಪಟ್ಟುಕೊಂಡು ಮುಷ್ಕರಕಾರರ ಕಡೆ ತಿರುಗಿ ಕೇಳಿದರು.

"ಈಗೇನು ಮಾಡೋಣ ಅಂತೀರಿ?"

"ಬೇರೆ ಫೋರ್‌ಮನ್ ಬೇಕು."

"ಯಾರು?"

"ಎಲೆಕ್ಷನ್ ಮಾಡೋಣ."

ಅಪ್ಪಯ್ಯ ಡಿಸ್‌ಮಿಸೆಲ್ ನೋಟೀಸು ಹಿಡಿದ. ಕೆಳಗೆ ಬಿದ್ದು ಹೋದ. ಮುಷ್ಕರ ಹೂಡಿದವರೇ, ಅವನು ತಿರುಗಿ ಎದ್ದು ನಿಂತಾನು ಎಂದು ಮನೆ ಸೇರಿಸಿದರು. ಅವನಿಗೆ ಜ್ವರ ಬಂದಿತು. ಬಡಬಡಿಸಿದ. ಎಲ್ಲಿದ್ದೇನೆ, ಎಂದ. "ಪ್ರಪಂಚದಾಗೆ ಇದ್ದೀಯ ಇನ್ನೂ" ಎಂದಳು ಅವನ ಹೆಂಡತಿ.

"ಯಾಕಿದ್ದೀನಿ?" ಎಂದು ಕೇಳಿದ ಪ್ರಶ್ನೆಗೆ "ನನ್ನ ಕರ್ಮ" ಎಂದಳಾಕೆ.

"ನಮಗೂ ಸ್ವಲ್ಪ ಕೊಡಮ್ಮಾ ಹಸಿವಾಗ್ತಿವೆ"

ಅಪ್ಪಯ್ಯ ತಿಳಿಯದೆ ಅವರ ಮುಖ ನೋಡಿದ "ಯಮದೇವರಿಗೆ ನಮಸ್ಕರಿಸು" ಎಂದರು.

"ಅಯ್ಯೋ ಕೆಟ್ಟೆನಲ್ಲಪ್ಪ" ಎಂದ ಅಪ್ಪಯ್ಯ.

"ಕೆಡುವುದಕ್ಕೆ ನೀನು ಬದುಕಿದ್ದರೆ ತಾನೆ?" ಎಂದ ಯಮ.

"ಮತ್ತೆ?"

"ಯಮಲೋಕಕ್ಕೆ ಬಂದಿದ್ದೀಯ."

"ಯಾಕೆ?"

"ಇಲ್ಲಿ ಪ್ರೆಸ್‌ನಲ್ಲಿ ಕೆಲಸಮಾಡುವುದಕ್ಕೆ"

"ಹೆಂಡತಿ–ಮಕ್ಕಳ ಗತಿ?"

"ಅಧೋಗತಿ."

"ರಾಮಚಂದ್ರ"

"ಟಿಶ್ ಪಳಿ ರುವಂಸು ತೌವು" ಎಂದು ಪಕ್ಕದಲ್ಲಿ.

"ಅಂ......ನನಗೆ ಸಂಬಳ"

"ಮಾಡಿದ ಪಾಪಕರ್ಮಗಳಿಗೆ ಶಿಕ್ಷೆಯೇ ಸಂಬಳ."

ಚಿತ್ರಗುಪ್ತ ಅವನ ಪಾಪಕರ್ಮಗಳ ವರದಿ ಮಾಡಿದ.

ನಿಧಾನವಾಗಿ ಕಂಪೋಜ್ ಮಾಡಿದರೆ "ಯಾವೊನೋ ನಿನ್ನ ಕಂಪಾಜಿಟರ್ ಅಂತೀಯಾ? ಸೆಲೂನ್ ಇಷ್ಟು ಹೋಗು ಎನ್ನುತ್ತಿದ್ದ." ಬೇಗನೆ ಮಾಡಿದರೆ "ಯಾಕ ಅಶೋಕವೃಕ್ಷಿನ್ನಿ ಬರ್ತೈತೆ ಅಂತ

ಎಕ್ಸ್‌ಪೋರ್ಟ್ ಕೆಲಸ ಮಾಡ್ತಿದೀ?" ಎನ್ನುವ. ಪೇಜು ಕಟ್ಟಿ ಮುಗಿಸಿ ಆದಮೇಲೆ "ನಿನ್ನ ಮುಖ ಇದ್ದಂಗಿದೆ ಪೇಜು" ಎಂದು ಬಿಚ್ಚಿಸುತ್ತಿದ್ದ. ಪ್ರೈ ಬಾಯ್‌ಗಳನ್ನು ಧಪಾ ಧಪಾ ಅಂತ ಹೊಡೀತಿದ್ದ. ಮಿಷಿನ್‌ಮ್ಯಾನ್ ಎಂದರೆ ಇವನಿಗಾಗದು. ಪ್ರಧಾನ ಸಂಪಾದಕರಿಗೆ ಗೌರವ ಕೊಡಲಿಲ್ಲ. ಸಹ ಸಂಪಾದಕರಿಗೆ ಇವನೇ ಯಮ. ದುರಹಂಕಾರಿ. ಇನ್ನು ಹೊಸದಾಗಿ ಕೆಲಸಕ್ಕೆ ಬಂದವರಿಂದ ಒಂದು ತಿಂಗಳ ಸಂಬಳ ವಸೂಲಿ. ಬೇರೆಯವರಿಂದ ಪರ್ಸಂಟೇಜು. ಕೈಗೆ ಸಿಕ್ಕಿದ ಟೈಪು ಬ್ಯಾಗುಗಳಲ್ಲಿ ತರ್ಕಾರಿಯಂತ ಸಾಗಿಸಿದ. ಸ್ಟಿಕ್, ಲೆಡ್ ಪೇಪರು ಏನೂ ಬಿಟ್ಟವನಲ್ಲ.

ಯಮ ತಲೆದೂಗಿ "ಸರಿ, ಹಾಕಿ ಇವನನ್ನು ಯಮಾಹ ಮೈಸೂರಿ ರಾಜ್ಯದ ಬೆಂಗಳೂರು ಪಿನ್ ಕೋಡ್ ಸೋ ಅಂಡ್ ಸೋ ಸೆಕ್ಷನ್ನಿಗೆ" ಎಂದು ಆಸ್ಥಾನ ಬಿಟ್ಟೆದ್ದರು.

ಅಪ್ಪಯ್ಯ "ಪ್ರೆಸ್ ಎಲ್ಲಿ" ಎಂದ.

"ಕಟ್ಟಿಕೋ ನೀನೇ" ಎಂದರು.

ಮಣ್ಣಗೆದ್ದ, ಕಲ್ಲಿಟ್ಟ ಗೋಡೆ ಕಟ್ಟಿದ. ಅಸ್ಥಿ ಪಂಜರಗಳನ್ನಿಟ್ಟ ಅದೇ ರೂಪ. ಮುಂದೆಯೂ ಯಮಲೋಕದ ಇಂಜನಿಯರೇ ನಿರ್ದೇಶಿಸಿದರು. ಬೆವೆತುಹೋದ ಕಂಟಿನ್ಯೂಯಿಸ ಆಗಿ ಕೆಲಸ ಮಾಡಿ. ಬೆವರು ಹರಿಯಿತು. ಆ ತೇವದಲ್ಲೇ ದಮ್ಮಸು ಮಾಡಿದ. ಎಮ್ಮೆ ಸಗಣ ಪೇಯಿಂಟಿಂಗ್.

ಇತರ ಪ್ರೆಸ್‌ಗಳ ಮುರಿದ ಭಾಗಗಳಿಂದ ಮಿಷನ್ ಜೋಡಿಸಿದ. ತಲೆ ಕೆಳಗಾಗಿ ಜೋಡಿಸೆಂದರು ಇಂಜನೀಯರ್. ಕಿತ್ತು, ಅವರು ಹೇಳಿದಂತೆ ಜೋಡಿಸಿದ.

"ಆಯಿತೆ, ನಿನ್ನ ಕೆಲಸ" ಎಂದು ಆತುರಪಡಿಸಿದರು.

"ಆಯಿತು. ಟೈಪು ಕೇಸ್, ಸ್ಟಿಕ್, ಗ್ಯಾಲಿ, ಲೆಡ್ ಬೇಕು."

## ಉಪದೇಶ

ಎತ್ತದಿರು ಎಂದಿಗೂ ಧರ್ಮ ಕುಲಜಾತಿ
ಭಾರತೀಯರು ನಾವು ನಮಗೊಂದೆ ನೀತಿ
ವೇದಿಕೆಯ ಮೇಲೇರಿ ಉಪದೇಶ ನೀಡಿ
ಕೃತಿಯೊಳಗೆ ಮಾಡುವರು ಏನೆಲ್ಲ ರಾಡಿ

– ಶಂ. ಗು. ಬಿರಾದಾರ

"ತಯಾರಿಸು."

"ಹೇಗೆ?"

"ಹೇಗೆ ಎನ್ನುತ್ತೀಯಾ. ಮೊಟ್ಟ ಮೊದಲ ಕನ್ನಡ ದಿನಪತ್ರಿಕೆಯ ಕಾಲದಿಂದ ಇದ್ದೀಯ. ಗೊತ್ತಿಲ್ಲ? ಆಗೋ ಅಲ್ಲಿ ನರಮಾನವನ ಹಲ್ಲುಗಳು ಅವುಗಳಲ್ಲಿ ಟೈಪು ಕೆತ್ತು. ಎಮ್ಮೆಗಳ ಎಲುಬುಗಳಿಂದ ಉಳಿದವನ್ನು ತಯಾರಿಸಿಕೋ."

ಅಪ್ಪಯ್ಯನ ಅವಸ್ಥೆ ಬೇಡ.

"ಮಿಷಿನ್ ಮ್ಯಾನ್ ಕಂಪಾಜಿಟರು, ಮ್ಯಾಟರು."

"ಮಿಷಿನ್ ಮ್ಯಾನ್, ಕಂಪೋಜಿಟರ್, ಪೇಜು ಕಟ್ಟುವವನು ಎಲ್ಲಾ ನೀನೇ, ಮ್ಯಾಟರು ಯಮಾ ಸೆಕ್ರೆಟೇರಿಯಟ್‌ನಿಂದ ಪ್ರತಿ ನಿಮಿಷಕ್ಕೆ ಒಂದು ಸಾರಿ ಬರುತ್ತೆ. ಇಪ್ಪತ್ನಾಲ್ಕು ಗಂಟೆ ಕೆಲಸ."

"ಪರಮಾತ್ಮಾ!"

"ಟಿಶ್ ಪಲಿ ರುಮೆಯಸ್ ತೌವಸ್."

"ಕೆಲಸ ಶುರು ಮಾಡೋಣವೆ?"

"ಇನ್ನೂ ಕೇಳುತ್ತಿದೀಯಾ? ನಿಲ್ಲು. ತಲೆ ಕೆಳಗಾಗಿ."

"ಯಾಕೆ?"

"ನಿನಗೆ ಅಸಲು ಶಿಕ್ಷೆ ಈಗಿಂದ ಪ್ರಾರಂಭ."

ತಲೆ ಕೆಳಗೆ ನಿಂತು ಟೈಪು ಜೋಡಿಸಬೇಕು.

ಬಿದ್ದು ಬಿದ್ದು ಹೋಗುತ್ತಿದ್ದ.

ಕಡೆಗೆ ಅವನನ್ನು ಕಾಲುಕಟ್ಟಿ ಮೇಲೆ ತೂಗಾಡಿಸಿದರು.

"ನನ್ನ ಪ್ರಾಣ ತೆಗದು ಬಿಡಿ."

"ಇದ್ದರೆ ತಾನೆ? ತೆಗೆಯುವುದಕ್ಕೆ. ಕತ್ತೆ ಕೆಲಸ ಮಾಡು ಹುಲುಮಾನವ" ಎಂದು ಗರ್ಜಿಸಿದ ಯಮಾಹ ಪ್ರೆಸ್ ಡೈರೆಕ್ಟರು.

"ದೀಪಾವಳಿ ವೇಳೆಗೆ ಇಷ್ಟು ಹೆಸರು, ಕಾಲು ವಿಳಾಸ ನಾನು ಮಾಡಲಾರೆ" ಎಂದು ಗೋಗರೆದ ಅಪ್ಪಯ್ಯ.

ಎಮ್ಮೆಗಳು ನೂರೆಂಟು ಬಂದವು. ಅವುಗಳ ಗುಸಿರಾಟದಲ್ಲಿ ಅವನು ತರಗೆಲೆಯಂತೆ ಹಾರಿದ. ಅವನ ಕಟ್ಟಿದ ಪ್ರೆಸ್ ಅವನ ಮೇಲೆಯೇ ಉರುಳಿತು.

"ಏಳು ಮತ್ತೆ ಕಟ್ಟು ಪ್ರೆಸ್" ಎಂದು ಇಂಜನೀಯರ್ ಹಾಜರಾದ.

"ನೀವು ಹೇಳಿದಂತೆ ಕೇಳುವೆ. ಇನ್ನು ನನಗೆ ಶಿಕ್ಷೆ ಸಾಕು."

"ಎಮ್ಮೆಗಳ ಕೈಲಿ ಒದೆಸಿಕೋ."

"ಪ್ರೆಸ್ ಕೆಲಸಕ್ಕಿಂತ ಅದೇ ಮೇಲು."

ಎಮ್ಮೆಗಳು ಓಡಿ ಬಂದವು. ಅವನನ್ನು ತುಳಿದು ಹಾಕಿದವು. ಅಪ್ಪಯ್ಯ ಸಾಯುವಂತೆ ಫೀಲ್ ಮಾಡಿದ.

ನೀರು ಕೇಳಿದ. ಗಂಜಲ ಸಿಕ್ಕಿತು.

ಕೊನೆಗೆ ತಾನು ಕೆಲಸ ಮಾಡುತ್ತಿದ್ದ ದಿನಪತ್ರಿಕೆಯ ಹೆಸರು ಹೇಳಿದ.

ಹೇಳುತ್ತಲೇ ಗಡಬಡಿಸಿ ಎದ್ದ.

ಸುತ್ತಲೂ ನೋಡಿದ ತನ್ನ ಮನೆಯಲ್ಲಿ ಮಲಗಿದ್ದಾನೆ. ಹೊರಗೆ ನೋಡಿದ. ಬೆಳಗಾಗುತ್ತಲಿದೆ.

ಮುಖ ತೊಳೆದು ಪ್ರೆಸ್ ಕಡೆಗೆ ಓಡಿದ. ವೇಳೆಯಾಗಿತ್ತು ಎಲ್ಲರೂ ಬಂದಿದ್ದರು.

ಅಡ್ಮಿನಿಸ್ಟ್ರೇಟರ್‌ರಿಂದ ವಾಚಮನ್ ವರೆಗೆ ತಾನು ಮಾಡಿದ ತಪ್ಪಿಗೆಲ್ಲಾ ಕ್ಷಮೆ ಕೇಳಿದ. ಅಹಂಕಾರ ಬಿಟ್ಟು ಕೇವಲ ಕಂಪಾಜಿಟರ್ ಆಗಿ ನ್ಯಾಯ ನಿಯಮ ಬದ್ಧವಾಗಿ ಕೆಲಸ ಮಾಡುವುದಾಗಿ ಪ್ರತಿಜ್ಞೆ ಮಾಡಿದ.

ಕೆಲಸ ಕೊಡುವಂತೆ ಬೇಡಿಕೊಂಡ.

'ಪಾಪ' ಎಂದರು ಎಲ್ಲಾ.

"ಅಪ್ಪಯ್ಯ ಇರಲಿ ಅಪಾಯವಿಲ್ಲ. ಈಗ ಪಶ್ಚಾತ್ತಾಪ ಬಂದಿದೆ" ಎಂದರು ಸಿಬ್ಬಂದಿ.

ಕೆಲಸಕ್ಕೆ ತೆಗೆದುಕೊಂಡ ಆರ್ಡರ್ ಕೈಸೇರುವ ಮುನ್ನ ಅವನು ಎಲ್ಲರಿಗೂ ನಮಸ್ಕರಿಸಿ ಸ್ಟಿಕ್ ಎತ್ತಿಕೊಂಡು "ಎಲ್ಲಿ ದೀಪಾವಳಿ ವಿಶೇಷ ಸಂಚಿಕೆ ಮ್ಯಾಟರು" ಎಂದ.

"ಅಪ್ಪಯ್ಯ ಜಿಂದಾಬಾದ್" ಎಂದು ಕೂಗಿದರೀಗ ಎಲ್ಲಾ.

●


● ಫಾರ್ಗೋ ಟ್ರಕ್ ಮತ್ತು ಬಿಡಿಭಾಗಗಳ ಬೆಳಗಾವಿ, ಧಾರವಾಡ, ಕಾರವಾರ ಹಾಗೂ ವಿಜಾಪೂರ ಜಿಲ್ಹೆಗಳ ಅಧಿಕೃತ ಮಾರಾಟಗಾರರು

● ಅತ್ಯಾಧುನಿಕ ಯಂತ್ರಸಾಮುಗ್ರಿಗಳಿಂದ ಮೋಟರ ರೀಪೇರಿ ಸರ್ವೀಸ್ ಸ್ಟೇಶನ್

● ಸಾರಿಗೆ ಕಂಟ್ರಾಕ್ಟರರು ಹಾಗೂ ಫ್ಲೀಟ ಓನರರು

● ಬರ್ಮಾ ಶೆಲ್, ಪೆಟ್ರೋಲ್, ಡಿಜೆಲ್ ಮತ್ತು ಲುಬ್ರಿಕೇಟಿಂಗ್ ಎಣ್ಣೆಯ ಅಧಿಕೃತ ಮಾರಾಟಗಾರರು.

★ ಬಾಗಲಕೋಟ ಸಿಮೆಂಟ ಸ್ಟಾಕಿಸ್ಟರು

★ ಕೋಠಾರಿ ಹಾಗೂ ಸ್ಪಾರ್ಕೀ ಕಂಪನಿಗಳ ಗೊಬ್ಬರ, ಕ್ರಿಮಿನಾಶಕ ಔಷಧಗಳು ಠೋಕ ಹಾಗೂ ಕಿರುಕಳ ದರದಲ್ಲಿ ದೊರೆಯುತ್ತವೆ.

ಶ್ರೀ ಮಂಗೇಶ ಪೆಟ್ರೋಲ್ ಸ್ಟೋರ್ಸ

ಖಾನಾಪೂರ ರಸ್ತೆ ರೇಲ್ವೆಗೇಟ ಹತ್ತಿರ ಟಿಳಕವಾಡಿ, ಬೆಳಗಾವಿ.

ಫೋನ : 1505

ದೀಪಾವಳಿಯು ಸರ್ವರಿಗೂ ಶುಭವನ್ನೀಯಲಿ





# ಆಯುಷ್ಯ ರೇಖೆ

ವಿಶಾಲಾಕ್ಷಿಯು ತನ್ನ ಗೆಳತಿ ದಮಯಂತಿಯ ಮಗಳ ಮದುವೆಗೆಂದು ಮುಂಬೈಗೆ ಹೋದಳು. ಆಕೆ ಮದುವೆ ಮುಗಿಸಿಕೊಂಡು ಮರಳಿ ಊರಿಗೆ ಬಂದಾಗ ಯಾರೂ ಬಾಯಿಬಿಟ್ಟು ಆಕೆಯನ್ನು ಸ್ವಾಗತಿಸಿರಲಿಲ್ಲ. ಆಕೆಗೆ ಅಗೆಲ್ಲ ಬೇಸರ. ತನ್ನ ಅಂಗೈಯಲ್ಲಿಯ ಮೊಟಕು ಆಯುಷ್ಯ ರೇಖೆಯ ಮೇಲಿನ ಹಸಿರು ಶಾಯಿಯ ಗುರುತನ್ನು ಅಳಿಸುವ ವಿಚಾರ.

• ಸರೋಜ ನಾರಾಯಣರಾವ್

ಮದುವೆ ಮುಂಬೈನಲ್ಲಿ. ಗೆಳತಿ ದಮಯಂತಿಯ ಪತ್ರವನ್ನು ನೋಡಿ ವಿಶಾಲಾಕ್ಷಿಗೆ ತುಂಬ ಸಂತೋಷವಾಯಿತು. ಪುಣೆಯಲ್ಲಿ ಅವರಿಬ್ಬರೂ ಎದುರು ಬದಿರು ಮನೆಗಳಲ್ಲಿದ್ದರು. ಕಷ್ಟಸುಖಗಳಲ್ಲಿ ಒಬ್ಬರಿಗೊಬ್ಬರು ನೆರವಾಗುತ್ತಿದ್ದರು. ವಿಶಾಲಾಕ್ಷಿ ಹೊಸ ಭಾಷೆ ಬರದೆ ತಾಪತ್ರಯ ಪಡುತ್ತಿದ್ದಾಗ ದಮಯಂತಿಯದೇ ನೆರವು. ಅವಳು ಪೂರಿ ಶ್ರೀಖಂಡ ಶಿರಾಗಳ ರುಚಿ ತೋರಿಸಿ ಮಕ್ಕಳನ್ನೂ ಒಲಿಸಿಕೊಂಡಿದ್ದಳು. ವಿಶಾಲಾಕ್ಷಿಯಿಂದ ಬಿಸಿಬೇಳೆ ಭಾತ್, ಮಸಾಲೆ ದೋಸೆಗಳನ್ನು ಕಲಿತು ಇವಳಿಗೇ ಮಾಡಿಕೊಡುತ್ತಿದ್ದಳು. ಒಬ್ಬಳೇ ಮಗಳು. ಈಗ ತಾನೆ ಇಪ್ಪತ್ತು ವರ್ಷ ತುಂಬಿದೆ. ಹೋಂ ಸೈನ್ಸ್‌ನಲ್ಲಿ ಪದವೀಧರೆಯಾಗಿದ್ದಾಳೆ. ಒಳ್ಳೆಯಕಡೆ ಸಂಬಂಧ ದೊರೆಯಿತೆಂದು ಬೇಗ ಮದುವೆ ಗೊತ್ತುಮಾಡಿದ್ದಾಳೆ. ಈ ಮದುವೆಗೆ ಹೋಗದೆ ಇರುವುದು ಸಾಧ್ಯವೇಇಲ್ಲ ಎಂದುಕೊಂಡಳು ವಿಶಾಲಾಕ್ಷಿ. ದಮಯಂತಿಯೇ ಪತ್ರದಲ್ಲಿ ಬರೆದಿದ್ದಳು. "ಯಜಮಾನರಿಗೆ ರಜ ದೊರೆಯುವುದಿಲ್ಲ. ಮಕ್ಕಳಿಗೆ ಶಾಲೆ, ಕಾಲೇಜು ಎಂದೆಲ್ಲ ಸಬೂಬು ಹೇಳಬಾರದು. ನೀನು ಬಾರದಿದ್ದರೆ ಇನ್ನೆಂದೂ ನಿನ್ನೊಡನೆ ಮಾತಾಡುವುದಿಲ್ಲ" ಎಂದು. ಆಪ್ತ ಸ್ನೇಹಿತರಿಗೆ ಹೀಗೆಲ್ಲ ಹೇಳಲು ಹಕ್ಕು ಉಂಟು ಅಲ್ಲವೇ? ಸಂಸಾರ ಸಮೇತ ಮುಂಬಯಿಗೆ ಹೋಗಬೇಕೆಂಬ ವಿಶಾಲಾಕ್ಷಿಯ ಆಸೆಗೆ ಬುಡವಿರಲಿಲ್ಲ. ಮಕ್ಕಳಿಗೆ ಶಾಲೆ, ಕಾಲೇಜು. ಅಷ್ಟೇನೂ ಚಿಕ್ಕವರಲ್ಲ. ತಮ್ಮನ್ನು ತಾವು ನೋಡಿಕೊಳ್ಳಬಲ್ಲರು. ಆದ್ದರಿಂದ ಯೋಚನೆ ಇಲ್ಲದೆ ಒಬ್ಬಳೇ ಹೋಗಿ ಬರಬಹುದೆಂದು ಯೋಚಿಸಿದಳು. ಹೋಗಿ ಬರಲೇ ಎಂದು ಕೇಳಿದಾಗ ಮನೆಯಲ್ಲಿ ಎಲ್ಲರೂ ಒಮ್ಮತದಿಂದ 'ಹುಂ' ಎಂದರು. ಪುಣೆಯಲ್ಲಿದ್ದಾಗ ಮುಂಬೈಗೆ ಒಮ್ಮೆ ಮಾತ್ರ ಹೋಗಿ ನೋಡಿಕೊಂಡು ಬಂದಿದ್ದಳು. ಈಗ ಮತ್ತೆ ಗೆಳತಿಯ ಮಗಳ ಮದುವೆಯ ನೆಪದಲ್ಲಿ ಹೋಗುವ ಅವಕಾಶ ದೊರೆತದ್ದು ವಿಶಾಲಾಕ್ಷಿಗೆ ನಿಜಕ್ಕೂ ತುಂಬ ಸಂತೋಷದ ವಿಷಯವಾಗಿತ್ತು. ಮನೆಯಲ್ಲಿ ವಯಸ್ಸಾದ ಅತ್ತೆ ಮಾವಂದಿರಿಲ್ಲ. ಕೈ ಹಿಡಿದು 'ಹೋಗಬೇಡ' ಎಂದು ಹೇಳುವಂತಹ ಸಣ್ಣ ಮಕ್ಕಳಿಲ್ಲ. ಇಷ್ಟು ನಿರಾತಂಕವಾಗಿ ಹೋಗಿಬರುವ ಅವಕಾಶವಾದರೂ ಎಷ್ಟು ಮಂದಿಗೆ ದೊರೆಯುವುದು?

"ಪ್ಲೇನಿನಲ್ಲೇ ಹೋಗಮ್ಮ. ಎರಡು ಗಂಟೆ ಸಹ ಬೇಕಿಲ್ಲ. ಹಾಯಾಗಿ ಹೋಗಬಹುದು" ಎಂದು ಹೇಳಿದಳು ಮಗಳು ವೀಣಾ.

"ಊಂ ಪ್ಲೇನಿನಲ್ಲಿ! ಎಷ್ಟಾಗುತ್ತೆ ಗೊತ್ತೇನು? ರೈಲಿನಲ್ಲೇ ಹೋಗಮ್ಮ" ಮಗ ಸುದರ್ಶನನ ಲೆಕ್ಕಾಚಾರದ ಸಲಹೆ. ರೈಲಿನಲ್ಲಿ ಹೋದರೆ ಮಧ್ಯ ಗುಂತಕಲ್ಲಿನಲ್ಲೋ, ಮಿರಜಿನಲ್ಲೋ, ರೈಲು ಬದಲಾಯಿಸಬೇಕು. ಬಸ್ಸಿನಲ್ಲಿ ಹೋದರೆ ಹೇಗೆ ಎಂಬ ಸಲಹೆಯೂ ಬಂದಿತು. ಘಾಟ್ ರಸ್ತೆಯಲ್ಲಿ ರಾತ್ರಿಯೆಲ್ಲಾ ಓಡುವ ಬಸ್ಸಿನಲ್ಲಿ ಹೋಗಲು ಹಿಂಜರಿದಳು ವಿಶಾಲಾಕ್ಷಿ. ಕೊನೆಗೆ ರೈಲಿನಲ್ಲೇ ಹೊರಡುವುದೆಂದು ನಿರ್ಧರಿಸಿ ಮುಂದಾಗಿ ಟಿಕೆಟ್ ಕೊಂಡು ಸ್ಥಳ ಕಾದಿರಿಸಿದ್ದೂ ಆಯಿತು.

ಎಂಟು ಹತ್ತು ದಿನಗಳು ಮನೆಯನ್ನು ಬಿಟ್ಟು ಹೋಗಬೇಕಾದರೆ ಏನೇನು ಸಿದ್ಧತೆ ನಡೆಸಬೇಕೆಂದು

ಯೋಚಿಸಿದಳು ವಿಶಾಲಾಕ್ಷಿ. ಗೂಡು, ಮಾಡು ಎಲ್ಲ ಸ್ವಚ್ಛ ಮಾಡಿ ಬೇಳೆ ಕಾಳುಗಳ ಡಬ್ಬಿಗಳನ್ನೆಲ್ಲ ಸರಿಯಾದ ಸ್ಥಾನದಲ್ಲಿಟ್ಟು ಡಬ್ಬಿಗಳ ಮೇಲೆಲ್ಲ ಧಾನ್ಯದ ಹೆಸರನ್ನು ತಿಳಿಸುವ ಚೀಟಿಗಳನ್ನು ಅಂಟಿಸಿದಳು. ಉಪ್ಪಿನಕಾಯಿ, ಚಟ್ನಿಪುಡಿಗಳು ಸಿದ್ಧವಾದವು. ತಾನಿಲ್ಲದಾಗ ಮಕ್ಕಳಿಗೆ ತೊಂದರೆಯಾಗಬಾರದಲ್ಲ?

ಹೊರಡುವ ಹಿಂದಿನ ದಿನ ಚಕ್ಕುಲಿ, ಕೋಡುಬಳೆ, ಕೊಬ್ಬರಿ, ಮಿಠಾಯಿಗಳನ್ನು ಮಾಡಿ ಡಬ್ಬಿಯಲ್ಲಿ ತುಂಬಿಟ್ಟಳು. ಇಷ್ಟಾದ ಮೇಲೆ ವೀಣಳನ್ನು ಕರೆದು, "ನಾನಿಲ್ಲದಾಗ ಹಿಂದೆ ಮುಂದೆ ಬಾಗಿಲುಗಳ ಚಿಲಕವನ್ನು ಸದಾ, ಹಾಕಿಕೊಂಡಿರಿ. ಯಾರಾದರೂ ಗುರುತಿಲ್ಲದವರು ಟೆಲಿಫೋನ್ ಮಾಡಿದರೆ ಉತ್ತರ ಕೊಡಬೇಡಿ. ಕರೆಗಂಟೆ ಶಬ್ದವಾದರೆ, ಬಂದವರು ಯಾರೆಂದು ಕಿಟಕಿಯಿಂದ ನೋಡಿ ಆ ಮೇಲೆ ಬಾಗಿಲು ತೆಗೆಯಿರಿ" ಎಂದೆಲ್ಲ ಹೇಳಿದಳು. ವೀಣಳ ಮುಖದ ಮೇಲೆ ಬೇಸರದ ತಾಂಡವ, "ಗೊತ್ತಮ್ಮಾ..." ಎಂದಳು ರಾಗವಾಗಿ. ಸುದರ್ಶನನಿಗೆ "ಪಾಠಪ್ರವಚನದ ಕಡೆ ಗಮನವಿರಲಿ. ಸದಾ ಕ್ರಿಕೆಟ್ಟು, ಸ್ನೇಹಿತರ ಮನೆ...ಅಂತ" ಎಂದು ಹೇಳುತ್ತಿದ್ದಂತೆಯೇ ಅವನು "ಅಮ್ಮಾ, ನಾನು ಕಾಲೇಜಿನಲ್ಲಿ ಓದುವವ. ಪುಟ್ಟಮಗೂಗೆ ಹೇಳುವ ಹಾಗೆ ಹೇಳ್ತೀಯಲ್ಲಾ" ಎಂದ.

"ನಿಮ್ಮಂದೇನ ಸರಿಯಾಗಿ ನೋಡ್ಕೊಳ್ಳಿ"

ವೀಣಾ, ಸುದರ್ಶನ ಮುಖ ಮುಖ ನೋಡಿಕೊಂಡು ಕಣ್ಣಿನಲ್ಲೇ ನಕ್ಕರು.

"ವೀಣಾ ನೀನು ಟಾನಿಕ್ ತಗೋಳೋದು ಮರೀಬೇಡ."

"ಇಲ್ಲಾಮ್ಮ. ನಾವು ಎಲ್ಲಾ ಸರಿಯಾಗಿ ನೋಡ್ಕೋತೀವಿ. ನೀನು ಏನೂ ಯೋಚನೆ ಇಲ್ಲದೆ ಹಾಯಾಗಿ ಹೋಗಿ ಬಾಮ್ಮ" ಮಗಳು ಮುದ್ದಾಗಿ ಹೇಳಿದಳು. ವಿಶಾಲಾಕ್ಷಿಗೆ ತನ್ನ ಮಕ್ಕಳ ಬಗ್ಗೆ ಹೆಮ್ಮೆ ಎನಿಸಿತು. ಎಷ್ಟೋ ಮನೆಗಳಲ್ಲಿ ಅವಳು ನೋಡಿದ್ದಳು. ತಾಯಿ, ತಂದೆ ಎಲ್ಲಿಗಾದರೂ ಹೊರಟರೆ ಮುಖ ಉಬ್ಬಿಸಿಕೊಳ್ಳುವುದು, ಎಷ್ಟು ದೊಡ್ಡವರಾದರೂ ತಮ್ಮ ಕೆಲಸ ತಾವು ಮಾಡಿಕೊಳ್ಳಲಾರದೆ ಒದ್ದಾಡುತ್ತಾರೆ. ಬೆಳಗ್ಗೆ ಹಾಸಿಗೆ ಸುತ್ತಿ, ಬ್ರಷ್ಷಿನ ಮೇಲೆ ಟೂತ್‌ಪೇಸ್ಟ್ ಹಾಕಿ ಕೊಡುವುದರಿಂದ ಹಿಡಿದು ಪ್ರತಿಯೊಂದನ್ನೂ ತಾಯಿಯೇ ಮಾಡಬೇಕು. ತನ್ನ ಮಕ್ಕಳು ಮಾತ್ರ ಅಂತಹವರಲ್ಲ.

ರಾತ್ರಿ ಹತ್ತು ಗಂಟೆ ಹತ್ತು ನಿಮಿಷಕ್ಕೆ ರೈಲು. ಒಂದು ದಿನದ ಕೆಲಸವೆಲ್ಲ ಮುಗಿದಿದುದೊಂದು ಸಮಾಧಾನ. ವಿಶಾಲಾಕ್ಷಿಗೆ ರೈಲಿನಲ್ಲಿ ನಿದ್ದೆ ಬರುವುದು ಸಾಧ್ಯವೇ ಇರಲಿಲ್ಲ. ತೂಗಿದಂತಾಗಿ ಮಂಪರು ಹತ್ತಿದರೂ ಇದ್ದಕ್ಕಿದ್ದಂತೆ ಎಚ್ಚರವಾಗುವುದು. ಪತಿ, ಮಕ್ಕಳು, ಎಷ್ಟೇ ಭರವಸೆ ಕೊಟ್ಟಿದ್ದರೂ ಮನೆ ಕಡೆ ಯೋಚನೆ ತಪ್ಪಲಿಲ್ಲ. ಸಂಸಾರವೇ ಸರ್ವಸ್ವವೆಂದಿದ್ದು ಬೇರೆ ಹವ್ಯಾಸಗಳನ್ನೇ ಹಚ್ಚಿಕೊಳ್ಳದ ಅವಳು ಯೋಚಿಸಲು ಬೇರೆ ಹೆಚ್ಚು ವಿಷಯಗಳೂ ಇರಲಿಲ್ಲ. ವೀಣಾ ಇನ್ನೂ ಹದಿನಾಲ್ಕು ಹದಿನೈದರ ಹೂಸ್ತಿಲಲ್ಲಿರುವ ಹುಡುಗಿ. ಅವಳ ವಯಸ್ಸಿನಲ್ಲಿ ವಿಶಾಲಾಕ್ಷಿ ಒಂದು ದಿನವೂ ಅಡಿಗೆ ಮಾಡುವುದಿರಲಿ, ಹಾಲನ್ನೂ ಕಾಸಿರಲಿಲ್ಲ. ಅಡಿಗೆಮನೆ ಎಂದರೆ ತಿಪ್ಪೇಸ್ತ್ರೀ ಇಲ್ಲದೆ ಪ್ರವೇಶವಿಲ್ಲದ ಸ್ಥಳ. ಮನೆಯ ತುಂಬಾ ಜನ. ಒಬ್ಬರಿಲ್ಲದಿದ್ದರೆ ಮತ್ತೊಬ್ಬರು ಅಡಿಗೆಗೆ ಸಿದ್ಧ. ಹೀಗಾಗಿ ಮದುವೆಯಾಗಿ ಸಂಸಾರಕ್ಕೆ ಬಂದರೂ ಅವಳಿಗೆ ಅನ್ನ ಮಾಡಲೂ ಬರದು. ಸಂಸಾರ ಹೂಡಿದ ಒಂದೇ ವಾರದಲ್ಲಿ ಹಳ್ಳಿಯಿಂದ ಬಂದ ಬಳಗದ ನೆಂಟರಿಗೆ ಅನ್ನ–ಹುಳಿ ಮಾಡಿ ಬಡಿಸಲು ಅವಳು ನಾಲ್ಕು ಗಂಟೆಗಳ ಕಾಲವನ್ನು ತೆಗೆದುಕೊಂಡಿದ್ದಳು. ಕೊನೆಗೂ ನೆಂಟರ ಹಸಿವಿನಿಂದ ಅಡಿಗೆ ಖರ್ಚಾಯಿತೇ ಹೊರತು ಅಡಿಗೆಯ ರುಚಿಯಿಂದಲ್ಲ ಎಂದು ಮೂರ್ತಿ ಹೇಳಿದ ಮಾತನ್ನು ಅವಳೂ ಒಪ್ಪಿಕೊಂಡಿದ್ದಳು. ಮನಗೆ ಸ್ನೇಹಿತರನ್ನು ಊಟಕ್ಕೆ ತಿಂಡಿಗೆ ಕರೆಯಬೇಕೆಂದು ಮೂರ್ತಿಗೆ ಆಸೆ. ವಿಶಾಲಾಕ್ಷಿಗೆ ಸರಿಯಾಗಿ ಏನೂ ಮಾಡಲು ಬರದು. ಹೀಗಾಗಿ ಊರಿನಿಂದ ಗೆಳೆಯರು ಬಂದರೆ ಹೋಟೆಲಿಗೆ ಊಟಕ್ಕೆ ಕರೆದೊಯ್ದು ಬಿಡುತ್ತಿದ್ದರು. ಅಂತಹ ದಿನಗಳಲ್ಲಿ ಅಡಿಗೆಯ ಕಾಟ ತಪ್ಪಿತೆಂದು ವಿಶಾಲಾಕ್ಷಿಗೆ ಆನಂದ. ಜೊತೆಗೆ ರುಚಿಯಾದ ಊಟ ಉಂಡ ತೃಪ್ತಿ.! ಅತ್ತೆಮನೆಗೋ, ತವರಿಗೋ ಬಂದಾಗ ಊಟದ ಸವಿ ವರ್ಣಿಸಲುಸದಳ! ತಾನೂ ಹೀಗೇ ಮಾಡಿದರೂ ಅದೇಕೆ ಇಷ್ಟು ರುಚಿಯಾಗಿ ಆಗುವುದಿಲ್ಲವೋ ಎನ್ನುವುದು ಬಗೆಹರಿಯದ ಸಮಸ್ಯೆ. ಆ ಕಾಲ ಮುಗಿಯಿತು. ವೀಣಾ ತನ್ನಂತೆ ಆಗಬಾರದು. ಮದುವೆಯಾಗಿ ಪ್ರಪಂಚದ ಯಾವ ಮೂಲೆಗೆ ಹೋದರೂ ಛಾತಿಯಿಂದ ನಿಭಾಯಿಸುವ ಧೈರ್ಯ, ತಿಳುವಳಿಕೆ ಇರಬೇಕು–ಹಾಗೇ ತಯಾರು ಮಾಡಿದಳು. ಈಗಲೆ ಅವಳು ದಿನಬಳಕೆಯ ಅಡಿಗೆ ತಿಂಡಿಗಳನ್ನು ಚೆನ್ನಾಗಿ ಮಾಡಲು ಕಲಿತಿದ್ದಳು. ಅವಳೇಕೆ ಸುದರ್ಶನನು ಸಹ ಸಮಯಬಂದರೆ ಸುಮಾರಾಗಿ ಮಾಡಬಲ್ಲವನಾಗಿದ್ದ. ನೆರೆಹೊರೆಯವರೂ, ನೆಂಟರಿಷ್ಟರೂ, ಸದಾ "ನಿನ್ನ ಮಕ್ಕಳು ಎಷ್ಟು ಜಾಣರು" ಎನ್ನುವುದಲ್ಲದೆ, "ಎಷ್ಟು ಚೆನ್ನಾಗಿ ತಯಾರು ಮಾಡಿದ್ದೀಯ" ಎಂದು ವಿಶಾಲಾಕ್ಷಿಯನ್ನು ಹೊಗಳುತ್ತಿದ್ದರು.

ಬೆಳಗ್ಗೆ ಗುಂತಕಲ್ಲಿನಲ್ಲಿ ರೈಲು ಬದಲಾಯಿಸಿದಳು. ರೈಲು ಪ್ರಯಾಣ ಬೇಸರವಾಗದಂತಿರಬೇಕಾದರೆ ಸಹ ಪ್ರಯಾಣಿಕರು ಸರಿಯಾಗಿರಬೇಕು. ವಿಶಾಲಾಕ್ಷಿಗೆ ಇಲ್ಲಿ ಜೊತೆ ಸರಿಯಾಗಿದ್ದಿತು. ವೀಣಳ ವಯಸ್ಸಿನ ಹುಡುಗಿ ಅವಳ ಆರು ವರ್ಷದ ತಮ್ಮ ಮತ್ತು ತಾಯಿ ಇವಳ ಎದುರಿಗೇ ಕುಳಿತಿದ್ದರು. ಸಾಮಾನ್ಯ ಪ್ರಶ್ನೋತ್ತರಗಳಾದುವು. ಎಂದರೆ "ಮುಂಬಯಿಗೇ?"

"ಹೌದು."

"ಅಲ್ಲಿ ಯಾರಿದ್ದಾರೆ?"

"ಗೆಳತಿಯ ಮಗಳ ಮದುವೆ"

"ಸ್ಥಳ?"

"ಬೆಂಗಳೂರು"

"ಮಕ್ಕಳು?"

"ಇಬ್ಬರು."

ಅವರ ವಯಸ್ಸು, ವಿದ್ಯಾಭ್ಯಾಸದ ಬಗ್ಗೆ ಹೇಳಿದ್ದಾಯಿತು. ಮನೆಯಲ್ಲಿ ಅತ್ತೆ, ತಾಯಿ ಯಾರೂ ಇಲ್ಲದೆ ಹೀಗೆ ಬಿಟ್ಟು ಬಂದಿರಾ ಎಂದಾಗ ವಿಶಾಲಾಕ್ಷಿ ಹೆಮ್ಮೆಯಿಂದ ವೀಣಳ ಬಗ್ಗೆ ಹೇಳಿಕೊಂಡಳು. ಆಕೆ ತಮ್ಮ ಮಗಳ ಕಡೆ ನೋಡುತ್ತ "ನೋಡಿದೆಯಾ? ನೀನು ನೀರು ಕುಡಿದ ಲೋಟವನ್ನು ತೊಳೆದಿಡಲೂ ಗೋಳಾಡ್ತೀಯ" ಎಂದರು. ಆ ಹುಡುಗಿ ತುಟಿಯುಬ್ಬಿಸಿ ನಕ್ಕುಬಿಟ್ಟಳು. ಕಂಪನಿ ಚೆನ್ನಾಗಿದ್ದುದರಿಂದ ವಿಶಾಲಾಕ್ಷಿಗೆ ಪ್ರಯಾಣ ಎಷ್ಟು ಬೇಗ ಮುಗಿಯಿತು ಎನ್ನಿಸಿತು.

ಮುಂಬಯಿ ದಾದರ ನಿಲ್ದಾಣಕ್ಕೆ ದಮಯಂತಿಯ ಯಜಮಾನರು ಜೊತೆಯವರೇ ಬಂದಿದ್ದರು. ದಮಯಂತಿಯ ಸಂತೋಷ ಹೇಳತೀರದು. ಅಣ್ಣ, ಅಕ್ಕ, ತಂಗಿ ಬಂಧು ಬಳಗದವರಿಗೆಲ್ಲ ವಿಶಾಲಾಕ್ಷಿಯ ಪರಿಚಯ ಮಾಡಿಕೊಟ್ಟಳು. ದಮಯಂತಿಯ ತಾಯಿಯನ್ನು ಮಾತ್ರ ವಿಶಾಲಾಕ್ಷಿ ಹಿಂದೆ ಪೂಣೆಯಲ್ಲಿ ನೋಡಿದ ನೆನಪಿತ್ತು. ವಧು ಅನುರಾಧ ಹೊಸ ಕಳೆಯಿಂದ ಶೋಭಿಸುತ್ತಿದ್ದಳು. ವೀಣಳಿಗಿಂತ ನಾಲ್ಕೈದು ವರ್ಷ ದೊಡ್ಡವಳು. ಪೂಣೆಯಲ್ಲಿದ್ದಾಗ "ನಿನ್ನ ತಾಯಿಯ ಹೆಸರೇನಮ್ಮ?" ಎಂದು ಕೇಳಿದರೆ ವೀಣಾ, "ವಿಶಾಲಾಚಿ" ಎನ್ನುತ್ತಿದ್ದಾಗ ಅನೂರಾಧ, "ದಮಯಂತೀಬಾಯಿ ಜೋಶಿ" ಎಂದು ಹೇಳುತ್ತಿದ್ದುದನ್ನು ನೆನೆಸಿಕೊಂಡರು. ಮದುವೆಗೆ ನಡೆಸಿದ್ದ ಸಿದ್ಧತೆಗಳ ಬಗ್ಗೆ ದಮಯಂತಿ ಹೇಳಿಕೊಂಡಳು. ಅನುರಾಧ ತಯಾರಿಸಿದ ಔತಣದ ಸಾಮಾನುಗಳನ್ನು ತೋರಿಸಿದಳು.

ಮದುವೆ ಚೆನ್ನಾಗಿ ನಡೆಯಿತು. ವರನ ಕಡೆಯವರೂ ಒಳ್ಳೆಯ ಜನ. ಮನೋಹರ್. ಅನುರಾಧಳಿಗೆ ಯೋಗ್ಯ ಪತಿ ಎನಿಸಿತು. ಮದುವೆ ಮುಗಿದ ಮರುದಿನವೇ ನವ ದಂಪತಿಗಳು ಕಾಶ್ಮೀರಕ್ಕೆ ಮಧುಚಂದ್ರಕ್ಕೆ ಹೊರಟು ಹೋದರು. ಬೇರೆ ನೆಂಟರೆಲ್ಲ ಇದ್ದರೂ ದಮಯಂತಿಯ ಮನಸ್ಸು ಭಣ ಭಣ. ಆಗ ವಿಶಾಲಾಕ್ಷಿಗೆ ತಾನು ನಾಲ್ಕು ದಿನ ಇದ್ದು ಹೋಗುವುದು ಮೇಲೆನಿಸಿತು. ನೆಂಟರು ಬಹುಮಂದಿ ಮುಂಬಯಿಯವರೇ. ಪೂಣೆ, ನಾಗಪುರಗಳಿಂದ ಬಂದಿದ್ದ ಕೆಲವರು ಎರಡುದಿನಗಳಲ್ಲಿ ಹೊರಟು ಹೋದರು. ದಮಯಂತಿಗೆ, ತನ್ನ ಗೆಳತಿಗೆ ಎಷ್ಟು ಉಪಚಾರ ಮಾಡಿದರೂ ತೃಪ್ತಿಯಿಲ್ಲ. ವಿಶಾಲಾಕ್ಷಿ ಬೇಡವೆಂದರೂ ಊರೆಲ್ಲ ಸುತ್ತಿಸಿದಳು. ಶುಕ್ರವಾರವೆಂದು ಮಹಾಲಕ್ಷ್ಮಿ ದೇವಾಲಯಕ್ಕೆ, ಮರುದಿನ ಜುಹೂ ಮತ್ಸ್ಯಾಗಾರ ಹೀಗೇ...ವಿಶಾಲಾಕ್ಷಿಗೆ ಮಕ್ಕಳೂ ಜೊತೆಗೆ ಬಂದಿದ್ದರೆ ಚೆನ್ನಾಗಿತ್ತು ಎನಿಸಿತು. ಮತ್ಸ್ಯಾಗಾರದಿಂದ ಈಚೆ ಬರುತ್ತಿದ್ದಾಗ ಪ್ರವಾಸ ಬಂದಿದ್ದ ಯಾವುದೋ ಕಾಲೇಜಿನ ಹುಡುಗರು ಗುಂಪು ಗುಂಪಾಗಿ ಮಾತಾಡಿಕೊಂಡು ಹೋಗುತ್ತಿದ್ದರು. ಅವರ ನಡೆ, ನುಡಿ, ಕೂದಲು, ಬಟ್ಟೆ ಸುದರ್ಶನನ ನೆನಪನ್ನೇ ತರುವಂತಿತ್ತು. ವಿಶಾಲಾಕ್ಷಿ, ಮನೆ, ಮಕ್ಕಳು ಎಂದರೆ ತನ್ನ ಜೀವ ತುಡಿಯುವಂತೆ ಅವರುಗಳಿಗೂ ಹಾಗೇ ಅನ್ನಿಸುತ್ತಿರಬಹುದೇ ಎಂದುಕೊಂಡಳು. ಅವಳು ಎಂದೂ ಅವರವರನ್ನೇ ಬಿಟ್ಟು ಇಷ್ಟು ದಿನ ಇರಲಿಲ್ಲ. ವೀಣಾ ಎಷ್ಟು ಧೈರ್ಯ ಹೇಳಿದ್ದರೂ ಅವಳಿಗೆ ಮನೆ ಕಡೆಯೇ ಗಮನ.

ದಮಯಂತಿ ಗೆಳತಿಗೆ ಔತಣ ಮಾಡಿ ಸೀರೆಯನ್ನು ಉಡುಗೊರೆಯಾಗಿ ಕೊಟ್ಟಳು. ವಿಶಾಲಾಕ್ಷಿ ಬಂದುದಕ್ಕಾಗಿ ಮತ್ತೆ ಮತ್ತೆ ತನ್ನ ಸಂತೋಷವನ್ನೂ ಕೃತಜ್ಞತೆಯನ್ನೂ ತಿಳಿಸಿದಳು.

ರೈಲಿನಲ್ಲಿ ತನ್ನ ಮಗ್ಗುಲಿನಲ್ಲಿ, ಎದುರು ಸೀಟಿನಲ್ಲಿ ಕುಳಿತಿದ್ದವರೊಡನೆ ಮಾತಾಡಲೂ ಬೇಕಾಗಲಿಲ್ಲ ವಿಶಾಲಾಕ್ಷಿಗೆ.. ಏನೋ ತನ್ನ ಪಾಡಿಗೆ ತಾನು ಕುಳಿತಿರುವುದೇ ಹಿತವೆನಿಸಿತ್ತು. ಒಮ್ಮೆ ದಮಯಂತಿ, ಅನೂರಾಧ ಅವಳ ಪತಿ ಮನೋಹರರ ಬಗ್ಗೆ ಯೋಚಿಸಿದರೆ ಒಮ್ಮೆ ಮನೆ ಕಡೆ ಯೋಚನೆ.. ಹಾಗೆ ನೋಡಿದರೆ ಮನೆ ಕಡೆಯ ಯೋಚನೆಯೇ ಹೆಚ್ಚು. ಎಲ್ಲೋ ಮಧ್ಯೆ ಮಧ್ಯೆ ಬೇರೆ ವಿಷಯಗಳು ಸುಳಿಯುತ್ತಿದ್ದುವು ಅಷ್ಟೇ.

ಊರು ಸಮೀಪವಾದಂತೆ ವಿಶಾಲಾಕ್ಷಿಗೆ ಏನೋ ಉತ್ಸಾಹ. ಮನೆಯಿಂದ ಹನ್ನೆರಡು ದಿನ ದೂರವಾಗಿದ್ದುದು. ಏನು, ತಿಂಗಳುಗಳಲ್ಲ, ವರ್ಷಗಳಲ್ಲ. ಆದೂ






# ನಿಯಮಿತವಾಗಿ ಹಲ್ಲುಗಳನ್ನು ಉಜ್ಜಿಕೊಂಡು ಒಸಡುಗಳನ್ನು ಮಸಾಜು ಮಾಡಿಕೊಂಡರೆ ದಂತಕ್ಷಯ ತಡೆದು, ಒಸಡುಗಳ ತೊಂದರೆ ನಿವಾರಣೆಯಾಗುತ್ತದೆ



ದಂತವೈದ್ಯರು ಅಭಿಪ್ರಾಯ ಪಡುತ್ತಾರೆ, ಒಸಡುಗಳನ್ನು ಭದ್ರವಾಗಿ ಮತ್ತು ಆರೋಗ್ಯಕರವಾಗಿಡಲು ಅವನ್ನು ನಿಯಮಿತವಾಗಿ ಮಸಾಜು ಮಾಡಬೇಕು. ದಂತಕ್ಷಯವನ್ನು ತಡೆಗಟ್ಟುವ ಸುಲಭ ಉಪಾಯವೆಂದರೆ ನಿಯಮಿತವಾಗಿ ಪ್ರತಿ ರಾತ್ರಿ-ಬೆಳಿಗ್ಗೆ ಊಟವಾದ ಬಳಿಕ ಹಲ್ಲುಗಳನ್ನು ಉಜ್ಜಿಕೊಳ್ಳುವುದು. ಇದರಿಂದ ಹಲ್ಲಿನೆಡೆ ಕುಳಿತು ಹುಳುಕು ಬರಿಸುವ ಕಣಗಳನ್ನು ನಿರ್ಮೂಲನಗೊಳಿಸಿದಂತೆ.

ದಂತವೈದ್ಯರಿಂದ 'ವಿಶೇಷವಾಗಿ ಸೃಷ್ಟಿಸಲ್ಪಟ್ಟ ಟೂಥ್‌ಪೇಸ್ಟ್' ಆದ ಫೋರ್‌ಹನ್ಸ್‌ನಿಂದ ನಿಯಮಿತವಾಗಿ ಹಲ್ಲುಗಳನ್ನು ಬ್ರಶ್ ಮಾಡಲು, ಮತ್ತು ಫೋರ್‌ಹನ್ಸ್ ಡಬ್ಬಲ್ ಆಕ್ಷನ್ ಜೂನಿಯರ್ ಟೂಥ್‌ಬ್ರಶ್ ಉಪಯೋಗಿಸಿ ಒಸಡುಗಳನ್ನು ತಿಕ್ಕುವುದನ್ನು (ಮಸಾಜ ಮಾಡುವುದನ್ನೂ) ನಿಮ್ಮ ಮಗುವಿಗೆ ಕಲಿಸಿರಿ.

**ಫೋರ್‌ಹನ್ಸ್-ದಂತರಕ್ಷಣೆಯನ್ನು ಗೈಯುವ ಅಭ್ಯಾಸ ಬಾಲ್ಯದಲ್ಲಿದ್ದರೆ ಒಳ್ಳೆಯದು**

**ಫೋರ್‌ಹನ್ಸ್**
ದಂತವೈದ್ಯರಿಂದ
ಸೃಷ್ಟಿಸಲ್ಪಟ್ಟ ಟೂಥ್‌ಪೇಸ್ಟ್.

**ಉಚಿತ!** "ನಿಮ್ಮ ಹಲ್ಲುಗಳ ಮತ್ತು ಒಸಡುಗಳ ರಕ್ಷಣೆ" ಎಂಬ ಬೋಧಪ್ರದವಾದ ವರ್ಣರಂಜಿತ ಪುಸ್ತಿಕೆ* 20 ಪೈಸೆ ಸ್ಟಾಂಪು (ಅಂಚೆ ವೆಚ್ಚಕ್ಕಾಗಿ), ಈ ಕೂಪನ್ ದೊಂದಿಗೆ ಕೆಳಗಿನ ವಿಳಾಸಕ್ಕೆ ಕಳಿಸಿರಿ. ಮೇಸರ್ಸ್ ಡೆಂಟಲ್ ಎಡ್ವೈಜರಿ ಬ್ಯೂರೋ, ಪೋಸ್ಟ್ ಬ್ಯಾಗ್ ನಂ. 10031, ಬೊಂಬಾಯಿ-1.

ಹೆಸರು ________ ವಯಸ್ಸು ________

ವಿಳಾಸ ________ (K. I.

________

* ನಿಮಗೆ ಬೇಕಾದ ಭಾಷೆಯ ಕೆಳಗೆ ಗೆರೆ ಎಳೆಯಿರಿ: ಇಂಗ್ಲೀಷ್, ಹಿಂದಿ, ಮರಾಠಿ, ಗುಜರಾತಿ, ಉರ್ದು, ಬಂಗಾಳಿ, ಅಸ್ಸಾಮಿ, ತಮಿಳು, ತೆಲುಗು, ಮಳಯಾಳಂ, ಕನ್ನಡ

113 F-203 R-KN

ಎಷ್ಟು ದೂರ, ಮಹಾ ಏನು ಇಂಗ್ಲೆಂಡೇ ಅಮೇರಿಕವೇ ಇಲ್ಲೇ ಮುಂಬಯಿ. ಆದರೂ ತನ್ನ ಮನೆ, ಮನೆಯವರು ಎಂದರೆ ತನಗೆ ಅತಿಮೋಹವೆಂದು ಕಾಣುತ್ತೆ. ಎಂದು ಕೊಂಡಾಗ ತನ್ನಲ್ಲೇ ನಗುವಂತಾಯಿತು. ಸ್ಟೇಶನ್ನಿಗೆ ಎಲ್ಲರೂ ಬರಬಹುದು. ಏನೆಂದರೂ ವೀಣಾ ತನ್ನನ್ನು ಕಂಡಕೂಡಲೆ ಓಡಿಬಂದು ತಬ್ಬಿಕೊಳ್ಳುತ್ತಾಳೆ. ಅವಳ ಕೆಲಸಗಳನ್ನು ಅವಳೇ ಮಾಡಿಕೊಳ್ಳುತ್ತಾಳೆ ಸರಿ. ಎಣ್ಣೆ ನೀರನ್ನೂ ಹಾಕಿಸಿಕೊಳ್ಳುವುದಿಲ್ಲ. ತಲೆ ಬಾಚಿಸಿಕೊಳ್ಳುವುದಿಲ್ಲ. ಮದುವೆಯಾಗಿ ಸಂಸಾರಕ್ಕೆ ಹೋದರೆ ಎಂದಲ್ಲ ಊರಿಂದೂರಿಗೆ ವರ್ಗವಾಗುವ ತಾವು ಒಂದು ವೇಳೆ ಹಾಸ್ಟೆಲಿನಲ್ಲಿ ಬಿಡಬೇಕಾದರೆ ಎಂದು ಮೊದಲಿನಿಂದ ಹಾಗೇ ಬೆಳೆಸಿದ್ದಳು. ಸ್ವಭಾವತಃ ಅವಳೂ ಪ್ರತಿಯೊಂದಕ್ಕೂ ಇನ್ನೊಬ್ಬರನ್ನು ಅವಲಂಬಿಸುವ ಸ್ವಭಾವದವಳಲ್ಲ. ಹಾಗಿರುವುದೇ ಒಳ್ಳೆಯದೆನಿಸುತ್ತಿತ್ತು. ಇನ್ನು ಸುದರ್ಶನ. ಸಣ್ಣ ಮಗುವಿನಲ್ಲಿ ರಾಶಿ ಸಾಮಾನು ಹರಡಿಕೊಂಡು ಕುಳಿತರೂ ಆಟ ಮುಗಿದ ಮೇಲೆ ಪ್ರತಿಯೊಂದನ್ನೂ ಅದರದರ ಸ್ಥಾನದಲ್ಲಿ ಇಡುವುದು ಅವನ ಅಭ್ಯಾಸ. ಗಂಡು ಮಕ್ಕಳ ಮೇಲೆ ದೂರು ಕೊಡುವ ತಾಯಂದಿರೇ ಬಹಳ. ಎಲ್ಲಿಯ ಸಾಮಾನು ಅಲ್ಲಿಯೇ ಎಸೆದು ಹೋಗುತ್ತಾರೆಂದು ಹೇಳಿಕೊಳ್ಳುತ್ತಾರೆ. ತನ್ನ ಮಗ ಅದಕ್ಕೆ ಅಪವಾದ. ಆಟದಲ್ಲೂ ಪಾಠದಲ್ಲೂ ಒಂದು ಶಿಸ್ತು ನಿಯಮ. ಊಟ ತಿಂಡಿಯಲ್ಲಿ ಬಹು ಸರಳ. ಕೇವಲ ಬ್ರೆಡ್ಡು ಹಾಲುಹಣ್ಣುಗಳಲ್ಲೇ ನಾಲ್ಕು ದಿನ ಬೇಕಾದರೂ ಇರಬಲ್ಲ.

ರೈಲ್ವೆ ಸ್ಟೇಷನ್ನಿನಲ್ಲಿ ಕಿಟಕಿಯಲ್ಲಿ ತಲೆಯಿಟ್ಟು ನೋಡುತ್ತಿದ್ದ ವಿಶಾಲಾಕ್ಷಿಗೆ ಮನೆಯವರು ಯಾರೂ ಕಾಣಲಿಲ್ಲ. ಸಾಧ್ಯವೇ ಇಲ್ಲ ಎನ್ನುವಂತೆ ಮತ್ತೊಮ್ಮೆ ಕಣ್ಣಾಡಿಸಿದಾಗ ಮೂರ್ತಿಯ ಮುಖ ಕಂಡು ವಿಶಾಲಾಕ್ಷಿ ಗೆಲುವಾದಳು.

"ಹೇಗಾಯ್ತು ಮದುವೆ?"

"ತುಂಬಾ ಚೆನ್ನಾಗಿ ಆಯ್ತು. ದಮಯಂತಿ ನಿಮ್ಮನ್ನೆಲ್ಲಾ ತುಂಬಾ ಕೇಳಿದಳು. ಇಲ್ಲಿ ಮನೆ ಕಡೆ ಎಲ್ಲಾ ಹೇಗಿದೆ"

"ಓಹೋ ಎಲ್ಲಾ ಸೊಗಸಾಗಿ ನಡೆಯುತ್ತಿದೆ. ವೀಣಾ ಎಲ್ಲಾ ಕೆಲಸ ಅಚ್ಚುಕಟ್ಟಾಗಿ ಮಾಡ್ತಿದ್ದಳು. ಏನೂ ತೊಂದರೆಯಾಗಲಿಲ್ಲ"

ಸಂತೋಷದೊಂದಿಗೇ ಎಲ್ಲೋ ಒಂದು ಸಣ್ಣ ಮುಳ್ಳು ಚುಚ್ಚಿದಂತಹ ಅನುಭವ. ಹಾದಿಯುದ್ದಕ್ಕೂ ಮಾತಾಡಲು ಏನೂ ತೋಚದು.

ಸುದರ್ಶನ, ವೀಣಾ ಇಬ್ಬರೂ ಇಲ್ಲದ ಮನೆ ಬಿಕೋ ಎನ್ನುತ್ತಿತ್ತು. ಸುದರ್ಶನ ಫುಟ್‌ಬಾಲ್ ಮ್ಯಾಚಿಗೆ ಮತ್ತು ವೀಣಾ ಅವಳ ಗೆಳತಿಯ ಹುಟ್ಟಿದ ಹಬ್ಬದ ಪಾರ್ಟಿಗೆ ಹೋದರೆಂದು ಹೇಳಿದ ಮೂರ್ತಿ. ಮನೆಯನ್ನು ಒಂದು ಸುತ್ತು ಸುತ್ತಿ ಬಂದಳು. ಎಲ್ಲಾ ಶುಭ್ರವಾಗಿತ್ತು. ಹತ್ತು ಹನ್ನೆರಡು ದಿನಗಳಿಂದ ಮನೆಯೊಡತಿ ಮನೆಯಲ್ಲಿರಲಿಲ್ಲ ಎನ್ನಲು ಯಾವ ಚಿಹ್ನೆಯೂ ಇರಲಿಲ್ಲ. ಸ್ಟೋವಿನ ಮೇಲೆ ಒಂದು ಪಾತ್ರೆಯಲ್ಲಿ ಉಪ್ಪಿಟ್ಟು ಮಾಡಿ ಮುಚ್ಚಿಟ್ಟಿದ್ದಳು ವೀಣಾ. ಪಾತ್ರೆಯ ಮುಚ್ಚಳ ತೆಗೆದರೇ ಘಂ ಎಂದು ಪರಿಮಳ ಸೂಸಿತು. ಈರುಳ್ಳಿ, ಹಸೀ ಶುಂಠಿ, ಕೊತ್ತುಂಬರಿ ಎಲ್ಲಾ ಹಾಕಿ ಮಾಡಿದ್ದಳು. ಮಗಳು ಒಳ್ಳೆಯ ಗೃಹಿಣಿಯಾಗುವುದರಲ್ಲಿ ಯೋಚನೆಯೇ ಇಲ್ಲ ಎಂದುಕೊಂಡಳು ವಿಶಾಲಾಕ್ಷಿ. "ನಮ್ಮದೆಲ್ಲಾ ಆಯ್ತು. ನೀನು ತಗೋ" ಎಂದು ಹೇಳಿದ ಮೂರ್ತಿ. ವಿಶಾಲಾಕ್ಷಿಗೆ ಹಸಿವಾಗಿತ್ತು. ತಟ್ಟೆಗೆ ಹಾಕಿಕೊಂಡು ಆರಾಮವಾಗಿ ಕುಳಿತು ತಿಂದಳು. ಮುಂಬಯಿಯಿಂದ ತಂದಿದ್ದ ಸ್ಪೆಶಲ್‌ಚೂಡಾವನ್ನು ತಟ್ಟೆಗೆ ಹಾಕಿ ಮೂರ್ತಿಗೆ ಕೊಟ್ಟಳು.

ರಾತ್ರಿಗೆ ಅನ್ನ ಮಾಡುವುದೊಂದು ಬಿಟ್ಟರೆ ಬೇರೆ ಏನೂ ಕೆಲಸವಿರಲಿಲ್ಲ. ಊರಿನಿಂದ ತಂದಿದ್ದ ಪೆಟ್ಟಿಗೆಯಿಂದ ಸೀರೆ ಬಟ್ಟೆ ವಿಂಗಡಿಸಿಕೊಂಡಳು. ಸುಮ್ಮನೆ ಕುಳಿತ ಅವಳಿಗೆ ಏನೋ ಬೇಸರ. ಮನೆ-ಮನೆ ಎಂದು ಹಾತೊರೆದು ಬಂದರೆ ಇಲ್ಲಿ ಇದೆಂತಹ ಸ್ವಾಗತ? ಛೆ, ತನ್ನದೊಂದು ವಿಚಿತ್ರ ಸ್ವಭಾವ. ಮನೆಯವಳೇ ಆದ ತನಗೆ ಪೂರ್ಣಕುಂಭ ಸ್ವಾಗತ ದೊರೆಯಬೇಕೇ? ತಾನು ಬಲು ಸ್ವಾರ್ಥಿಯೇ ಇರಬೇಕು. ತಾನು ಬಯಸುವುದಾದರೂ ಏನನ್ನು?" "ನೀನಿಲ್ಲದೆ ನಮಗೆಲ್ಲ ಬೇಜಾರಾಗಿ ಹೋಯ್ತು ನೀನು ಎಂದು ಬರುತ್ತೀಯೋ ಎನ್ನುವ ಹಾಗಾಗಿತ್ತು" ಎಂದು ಹೇಳಬೇಕಿಂದೇ? ಹೌದು. ಪತಿ, ಮಕ್ಕಳು, ಅವರೇ ತನ್ನ ಸರ್ವಸ್ವವೆಂದು ಬದುಕುತ್ತಿರುವಾಗ ಅಂತಹ ನುಡಿಗಳನ್ನು ನಿರೀಕ್ಷಿಸುವುದರಲ್ಲಿ ತಪ್ಪೇನು? ಮೂರು ವರ್ಷದ ಹಿಂದೆ ತನ್ನ ವೃದ್ಧ ಅತ್ತೆ ಬದುಕಿದ್ದಾಗ ಒಮ್ಮೆ ಮೈಸೂರಿಗೆ ತನ್ನ ಅಣ್ಣನ ಮನೆಗೆ ಎರಡು ದಿನಗಳ ಮಟ್ಟಿಗೆ ಹೋಗಿದ್ದಳು. ಮನೆಗೆ ಬಂದ ಕೂಡಲೆ ಅತ್ತೆ "ಬಂದೆಯಾ ತಾಯಿ ಸಧ್ಯ. ಮನೆ ಎಲ್ಲಾ ಬಿಕೋ ಅಂತಿತ್ತು. ಮನೆಯಲ್ಲಿ ಯಾರಿದ್ದರೆ ಏನು? ಗೃಹಲಕ್ಷ್ಮಿ ನೀನಿಲ್ಲದೆ ಇದ್ದರೆ ಮನೆಯಲ್ಲಿರುವುದಕ್ಕೇ ಬೇಜಾರು." ಎಂದಿದ್ದರು. ಅದರಿಂದ ತನ್ನ ಮನಸ್ಸಿಗೆ ಎಷ್ಟು ಹರ್ಷವಾಗಿತ್ತು! ಆ ಯೋಚನೆಯನ್ನು ಅಲ್ಲಿಗೆ ಬಿಟ್ಟು ತೋಟವನ್ನು ಸುತ್ತಿ ಬರೋಣವೆಂದು ಹೊರಟಳು. ಅಲ್ಲಿಯೂ ಎಲ್ಲ ಸುವ್ಯವಸ್ಥಿತ. ಅವಳು ಹೊರಡುವ ಮುನ್ನ ಕತ್ತರಿಸಿದ್ದ ಗುಲಾಬಿ ಗಿಡಗಳು ಚೆನ್ನಾಗಿ ಚಿಗುರಿದ್ದವು. ಪಾತಿಗಳಲ್ಲಿ ಕಸ-ಕಡ್ಡಿ ಏನೂ ಇರಲಿಲ್ಲ. ಗೋಡೆಯ ಆಚೆ ಬದಿಯಿಂದ "ಓ, ಈಗ ಬಂದಿರಾ?" ಎಂದರು ನೆರೆ ಮನೆಯ ಶಾರದಮ್ಮ.

"ನಿಮ್ಮ ವೀಣಾ ಅಂತೂ ಬಲು ಜಾಣೆ. ಎಲ್ಲಾ ಕೆಲಸ ಎಷ್ಟು ಚೆನ್ನಾಗಿ ಮಾಡಿಕೊಳ್ಳುತ್ತಿದ್ದಳು. ಏನಾದರೂ ಸಹಾಯ ಬೇಕಾದರೆ ಕೇಳು ಎಂದು ಹೇಳಿದ್ದೆ. ಒಂದು ದಿನವೂ ಏನೂ ಕೇಳಲಿಲ್ಲ. ಮನಸ್ಸು ತಡೆಯದೆ ಮೊನ್ನೆ ನಾನೇ ಬಂದು ನೋಡಿದೆ. ಎಲ್ಲಾ ಎಷ್ಟು ನೀಟಾಗಿ ಮಾಡಿಟ್ಟಿದ್ದಳು. ನೋಡಿ ನನಗೆ ಆಶ್ಚರ್ಯವಾಯಿತು. " "ಹೌದು ಶಾರದಮ್ಮ. ಇಷ್ಟರಮಟ್ಟಿಗೆ ಎಲ್ಲಾ ಮಾಡಿಕೊಳ್ತಾಳೆ ಅಂತ ನನಗೇ ಗೊತ್ತಿರಲಿಲ್ಲ" ಎಂದಳು ವಿಶಾಲಾಕ್ಷಿ.

"ಸುದರ್ಶನ, ನಿಮ್ಮ ಯಜಮಾನರು ಎಲ್ಲರೂ ಆಪ್ಟೆ. ಆದೇ ನಮ್ಮನೇಲಿ ನೋಡಿ. ಇವರು..." ಎಂದು ತಮ್ಮ ಮನೆಯವರನ್ನು ಮಕ್ಕಳನ್ನೂ ಒಂದಿಷ್ಟು ದೂರಿಕೊಂಡರು. "ಒಂದು ಸಲ ನಾಲ್ಕು ದಿನ ಎಲ್ಲರನ್ನೂ ಇಲ್ಲೇ ಬಿಟ್ಟು ನಮ್ಮ ತಾಯಿ ಮನೆಗೆ ಹೋಗಿದ್ದೆ. ಬಂದ ಮೇಲೆ ಮನೆ ಸರಿ ಮಾಡಿಕೊಳ್ಳುವುದಕ್ಕೇ ನಾಲ್ಕು ದಿನ ಬೇಕಾಯಿತು. ನೀವು ಊರಿಗೆ ಬಂದ ದಿನವೇ ಎಷ್ಟು ಬಿಡುವಾಗಿ ಓಡಾಡ್ತಿದೀರ" ಎಂದರು. ಸುದರ್ಶನ ಮನೆಗೆ ಬಂದುದರಿಂದ ವಿಶಾಲಾಕ್ಷಿ ಒಳಕ್ಕೆ ಬಂದಳು.

"ಹೇಗಾಯ್ತಮ್ಮ ನಿನ್ನ ಬೊಂಬಾಯಿ ಪ್ರವಾಸ?" ಎಂದು ವಿಚಾರಿಸಿದ. ಮಾತಾಡುತ್ತಿದ್ದಂತೆ ವೀಣಾಳೂ ಬಂದಳು. ಅವಳೂ ಅದೇ ಮಾತನ್ನೇ ಕೇಳಿದಳು. ತಾನಿಲ್ಲದಾಗ ಏನೂ ತೊಂದರೆಯಾಗಲಿಲ್ಲ. ಎಲ್ಲಾ ಚೆನ್ನಾಗಿಯೇ ಮಾಡಿಕೊಂಡಿದ್ದೆವು ಎನ್ನುವುದೇ ಮೂವರ ಮಾತಿನ ಸಾರಾಂಶ. ವಿಶಾಲಾಕ್ಷಿಗೆ ಒಂದು ಬಗೆಯ ಸುಸ್ತು ಪ್ರಾರಂಭವಾಯಿತು. ದೈಹಿಕ ಶ್ರಮದಿಂದಾಗುವ ಆಯಾಸವಲ್ಲ. ಮನಸ್ಸಿನ ಬಳಲಿಕೆ. ಬೇಗ ಊಟ ಮುಗಿಸಿ ಮಲಗಿದರೆ ಸಾಕೆನಿಸಿತ್ತು.

ಪತಿಯನ್ನು ಮಕ್ಕಳನ್ನು ಎಂದು ನೋಡಿಯೇನು ಎಂದು ಹಂಬಲಿಸಿ ಬಂದ ತನಗೆ ಇಲ್ಲಿ ಎಂತಹ ತಣ್ಣನೆಯ ಸ್ವಾಗತ! ತಾನು ಇನ್ನೂ ಒಂದುವಾರ ಇದ್ದು ಬಂದಿದ್ದರೂ ಚಿಂತೆಯಿರಲಿಲ್ಲ. ಇವರಿಗೆಲ್ಲ ನಿಜವಾಗಿಯೂ



ಹಬ್ಬಗಳ ರಾಜ ದೀಪಾವಳಿಯು ಸರ್ವರಿಗೂ ಶುಭವನ್ನುಂಟುಮಾಡಲಿ!




# ದೇಸಾಯಿ ಆ್ಯಂಡ್ ಸನ್ಸ್

ಗಣಪತಿಗಲ್ಲಿ ಬೆಳಗಾವಿ ಫೋನ್ : 683

★ ರಾಲೆ, ರಾಬಿನ್‌ಹುಡ್, ಅಟ್ಲಾಸ ಮತ್ತು ಹಿಂದ್ ಸಾಯಕಲ್ಲಗಳ ಅಧಿಕೃತ ಮಾರಾಟಗಾರರು.

★ ಡನ್‌ಲಪ್, ಸುಪರ್ ಇಂಡಿಯಾ, ಗುಡ್ ಇಯರ್ ಮತ್ತು ನ್ಯಾಶನಲ್ ರಬ್ಬರದವರ ಅಧಿಕೃತ ಡೀಲರರು.

★ ಎಲ್ಲ ತರದ ಸಾಯಕಲ್ ಬಿಡಿಭಾಗಗಳ ಮಾರಾಟಗಾರರು.

★ ಲಾಂಬ್ರೆಟಾ ವ್ಹೆಸ್ಪಾ, ವ್ಹಿಕಿ ಮೊಪೆಡ್, ಸುವೇಗಾ, ಟ್ಯಾರ್-ಟ್ಯೂಬ್ ಹಾಗೂ ಬಿಡಿಭಾಗಗಳ ಸಂಗ್ರಾಹಕರು ಮತ್ತು ಮಾರಾಟಗಾರರು.

—: ಅವಶ್ಯ ನಮ್ಮ ಶೋರೂಮಿಗೆ ಭೆಟ್ಟಿಕೊಡಿರಿ :—

## ಕನಸಿನ ಗ್ರಾಮ

ನನ್ನ ಕನಸಿನಲ್ಲಿರುವುದು ಒಂದು ಸುಂದರಗ್ರಾಮ. ಅಲ್ಲಿಯ ಜನರು ಕಗ್ಗತ್ತಲೆಯಲ್ಲಿ ಪಶುಪಿನೋಪಾದಿಯಲ್ಲಿ ಜೀವನ ಸಾಗಿಸುತ್ತಿಲ್ಲ. ಎಲ್ಲರೂ ಭಾವಿಸಿದಂತಹ ಪ್ಲೇಗ್‌-ಕಾಲರಾದಂತಹ ಭೀಕರ ರೋಗಗಳು ನನ್ನ ಕನಸಿನ ಗ್ರಾಮದಿಂದ ದೂರವಿವೆ. ನನ್ನ ಸ್ವಪ್ನ ಸುಂದರ ಹಳ್ಳಿಯಲ್ಲಿ ಜಗತ್ಪ್ರಸಿದ್ಧ ಕಲಾವಿದರಿದ್ದಾರೆ. ಕವಿಗಳಿದ್ದಾರೆ. ಸಂಶೋಧಕರಿದ್ದಾರೆ. ಪ್ರಕೃತಿಯ ರಮಣೀಯ ಸೆರಗನ್ನು ಹೊದು ಕುಳಿತ ಈ ಹಳ್ಳಿಗಳತ್ತ ಅನೇಕರು ಧಾವಿಸುತ್ತಿದ್ದಾರೆ. ನನ್ನ ಕನಸಿನ ಹಳ್ಳಿಗರು ಹೇಳುವ ಜಾನಪದ ಗೀತೆಗಳನ್ನು ಕೇಳಿದವರು ಸ್ವರ್ಗದಲ್ಲಿರುವೆವೆಂದು ಭಾವಿಸಿದ್ದಾರೆ. ಈ ನನ್ನ ಕನಸನ್ನೇ ಆಧಾರವಾಗಿಟ್ಟುಕೊಂಡು ಹಳ್ಳಿಗಳ ಪುನರುದ್ಧಾರ ನಡೆಯಬೇಕು. – ಗಾಂಧೀಜಿ

ತನ್ನ ಆವಶ್ಯಕತೆಯೇ ಇಲ್ಲವೋ ಅಥವ ಹಾಗೆ ಹೇಳಲು ಬಿಗುಮಾನವೋ. ಇಲ್ಲ ಖಂಡಿತ ತಾನಿಲ್ಲದೆಯೂ ಇವರೆಲ್ಲ ಚೆನ್ನಾಗಿಯೇ ಇರಬಲ್ಲರು. ತಾನು ಮಾತ್ರ ಅವರುಗಳ ಆಶ್ರಯ, ಒಡನಾಟ, ಇಲ್ಲದೆ ಇರಲಾರೆ. ತನ್ನ ಆವಶ್ಯಕತೆ ಮತ್ತೊಬ್ಬರಿಗೆ ಇದೆಯೆನ್ನುವದರಲ್ಲಿ ಎಷ್ಟು ಸುಖವಿದೆ. ತಾನಿಲ್ಲದೆಯೂ ಎಲ್ಲಾ ಮಾಮೂಲಿನಂತೆ ನಡೆಯುತ್ತದೆ ಎಂದುಕೊಳ್ಳುವುದರಲ್ಲಿ ಏನೋ ನೋವು. ಸುದರ್ಶನ ತಪ್ಪು ಹೆಜ್ಜೆ ಇಡುತ್ತ ಬಿದ್ದು ಮಂಡಿಯೊಡೆದು "ಅಮ್ಮಾ..." ಎನ್ನುತ್ತ ಬಂದು ತನ್ನ ಮೇಲೆ ಬೀಳಬಾರದೆ? ವೀಣಾ, ಬೀದಿಯಲ್ಲಿ 'ಕವಳಾ ತಾಯೀ... ಎಂದಾಗ "ಅಮ್ಮಾ ಗುಮ್ಮ..." ಎನ್ನುತ್ತ ಬಂದು ಕಟ್ಟಿಕೊಳ್ಳಬಾರದೆ? ರಾತ್ರಿ ಊಟಕ್ಕೆ ಕುಳಿತಾಗ ಮೂರ್ತಿ "ವೀಣಾ ರುಚಿ ರುಚಿಯಾಗಿ ಹುಳಿ ಪಲ್ಯ ಎಲ್ಲ ಮಾಡ್ತಿದ್ಳು" ಎಂದಿದ್ದರು. "ಅಮ್ಮಾ ಸುದರ್ಶನ ಒಂದು ದಿನ ನನಗೆ ದೋಸೆ ಮಾಡಿ ಕೊಟ್ಟಿದ್ದ. ತೆಳ್ಳಗೆ ಗರಿ ಗರಿಯಾಗಿ ನಿನ್ನ ಹಾಗೇ ಮಾಡಿದ್ದ" ಎಂದಿದ್ದಳು ವೀಣಾ.

"ಅಮ್ಮಾ, ಎರಡೂ ಭಾನುವಾರ ಬೆಳಿಗ್ಗೆ ಅಣ್ಣ ಹೋಟಲಿಗೇ ಕರ್‍ಕೊಂಡು ಹೋಗಿದ್ದರು. ಮೊನ್ನೆ ಮಲಗೋವ ಮಾವಿನ ಹಣ್ಣು ತಂದಿದ್ದರು. ಎಷ್ಟು ಚೆನ್ನಾಗಿತ್ತು ಅಂತ. ನೀನು ಊರಲಿಲ್ಲ ಅಂತ..." 'ಕೇಳಲಾರೆ ನಿಲ್ಲಿಸು' ಎನ್ನಬೇಕೆನಿಸಿತ್ತು ವಿಶಾಲಾಕ್ಷಿಗೆ. ತಾನಿಲ್ಲದೆಯೂ ಅವರೆಲ್ಲ ಸುಖವಾಗಿಯೇ ಇದ್ದರು. ಅವರಿಲ್ಲದೆ ಬದುಕಲಾರೆನೆಂದುಕೊಂಡವಳು ತಾನೇ. ತಾನು ತನ್ನ ಸಂಸಾರ ಎಂದುಕೊಂಡಿರದೆ ಎಲ್ಲಾದರೂ ಕೆಲಸಕ್ಕೆ ಸೇರಿಕೊಂಡಿದ್ದರೆ? ಅದೂ ಕೇವಲ ಹಣಗಳಿಸುವುದಕ್ಕಾಗಿ ಅಲ್ಲ. ತನ್ನಿಂದ ನಾಲ್ಕು ಜನಕ್ಕೆ ಪ್ರಯೋಜನವಾಗುವಂತಹ ಕೆಲಸ. ಡಾಕ್ಟರಾಗಬೇಕೆಂಬ ಹಂಬಲವೇನೋ ಇತ್ತು. ಮನೆಯಲ್ಲಿ ಓದಿಸಲು ಒಪ್ಪಲಿಲ್ಲ. ಅದೇನೋ ದೊಡ್ಡ ಕೊರತೆಯೆಂದು ತನಗೂ ಅನ್ನಿಸಿರಲಿಲ್ಲ. ವೈದ್ಯಳಾಗಿದ್ದರೆ ಅಥವಾ ಸಮಾಜಸೇವಕಿಯಾಗಿದ್ದರೆ ಹತ್ತು ಜನಕ್ಕೆ ತಾನು ಬೇಕಾದವಳು ಎಂಬ ಭಾವನೆ ಮನಸ್ಸಿಗೆ ಮುದ ನೀಡುತ್ತಿತ್ತೇನೋ? ಈಗ ತಾನು ಸತ್ತರೂ ಚಿಂತೆಯಿಲ್ಲ. ತಂದೆ ಮಕ್ಕಳನ್ನು ಚೆನ್ನಾಗಿಯೇ ನೋಡಿಕೊಳ್ಳುತ್ತಾರೆ. ಸುದರ್ಶನ ಚೆನ್ನಾಗಿ ಓದಿ ಮುಂದಕ್ಕೆ ಬರುತ್ತಾನೆ. ವೀಣಾ ಓದು ಮುಗಿಸಿದ ಮೇಲೆ ಒಳ್ಳೆಯ ಕಡೆ ವರ ನೋಡಿ ಮದುವೆ ಮಾಡುತ್ತಾರೆ...ಓದುತ್ತಿದ್ದ ಕತೆ ಪುಸ್ತಕವನ್ನು ಮಂಚದ ಬದಿಯ ಮೇಜಿನ ಮೇಲಿಡುವಾಗ ವಿಶಾಲಾಕ್ಷಿಯ ಗಮನ ಅವಳ ಎಡಹಸ್ತದ ಗೀರೊಂದರ ಮೇಲೆ ಹೋಯಿತು. ಮದುವೆ ಮನೆಯಲ್ಲಿ ಮನೋಹರನ ತಂಗಿ ಸುಹಾಸಿನಿ ತಾನು ಹಸ್ತಸಾಮುದ್ರಿಕಾ ಶಾಸ್ತ್ರವನ್ನು ಅಭ್ಯಾಸ ಮಾಡಿರುವುದಾಗಿ ಹೇಳಿ ಎಲ್ಲರ ಕೈಯನ್ನೂ ನೋಡುತ್ತಿದ್ದಳು. ಅನುರಾಧಳ ಕೈ ನೋಡಿ ವರ್ಷದೊಳಗೆ ಗಂಡು ಮಗುವಾಗುವುದೆಂದು ಹೇಳಿದಳು. ಹಿರಿಯರು, ಕಿರಿಯರು, ಎಲ್ಲರನ್ನೂ ಹಿಡಿದು ಫಾರಿನ್‌ಗೆ ಮೂರು ಸಲ ಹೋಗುವೆ. ನಿನಗೆ ಕುಳ್ಳಗೆ, ದಪ್ಪಗಿರುವ ಹೆಂಡತಿ ಬರುತ್ತಾಳೆ ಎಂದು ಹೇಳುತ್ತಿದ್ದಳು. ವಿಶಾಲಾಕ್ಷಿ ಬೇಡವೆಂದರೂ ತಮಾಷೆಗೆ ಎಂದು ಹೇಳಿ ತನ್ನ ಎಡಹಸ್ತವನ್ನು ಬಿಡಿಸಿದಳು. ಸುಹಾಸಿನಿ. "ನಿಮಗೆ ಇಬ್ಬರು ಮಕ್ಕಳು. ಇಬ್ಬರೂ ಮೇಧಾವಿಗಳು. ..." ಎನ್ನುತ್ತ ತನ್ನ ಬಗ್ಗೆ ಹಲವು ವಿಷಯಗಳನ್ನು ಸರಿಯಾಗಿಯೇ ಹೇಳಿದಳು, ತನ್ನ ಆಯುಷ್ಯರೇಖೆ ಮೊಟಕಾಗಿರುವುದು ವಿಶಾಲಾಕ್ಷಿಗೆ ಗೊತ್ತು. ಅದರ ಬಗ್ಗೆ ಅವಳು ತಲೆ ಕೆಡಿಸಿಕೊಂಡವಳಲ್ಲ. ದಮಯಂತಿ ಮುಂದೆ ಬಂದು, "ನನಗೆ ಎಂಭತ್ತೆಂಟು ವರ್ಷ ಆಯಸ್ಸು ಎಂದೆಯಲ್ಲ, ಇವಳಿಗೆ ತೊಂಭತ್ತೆಂಟಿರಬಹುದು ನೋಡು" ಎಂದು ಹೇಳಿದಳು. ಸುಹಾಸಿನಿ ಆ ಬಗ್ಗೆ ಪ್ರಸ್ತಾಪಿಸದೆ ಬೇರೆ ಏನೇನೋ ವಿಷಯಗಳನ್ನು ಹೇಳಿದಳು. ಎಲ್ಲರೂ ಚದುರಿದ ಮೇಲೆ ದಮಯಂತಿ, ವಿಶಾಲಾಕ್ಷಿಯ ಹಸ್ತವನ್ನು ಕೈಗೆತ್ತಿಕೊಂಡಳು. ವಿಶಾಲಾಕ್ಷಿ, "ಈ ಗೆರೆ ಎಷ್ಟು ಚಿಕ್ಕದಾಗಿದೆ ನೋಡು" ಎಂದಾಗ ದಮಯಂತಿ "ಹಾಗಾದರೆ ನೀನು ಇನ್ನೂ ಹೇಗೆ ಬದುಕಿದ್ದೀಯ?" ಎಂದು ನಕ್ಕಳು. ಒಳಗಿನಿಂದ ಒಂದು ಪೆನ್ನನ್ನು ತಂದು, ಗೆರೆಯನ್ನು ಉದ್ದ ಮಾಡಿ, "ನಿನಗೆಷ್ಟು ಆಯುಸ್ಸು ಬೇಕು, ನೂರೋ, ಇನ್ನೂರೋ" ಎನ್ನುತ್ತ ವಿಶಾಲಾಕ್ಷಿಯ ಅಂಗೈ ಅಗಲಕ್ಕೂ ಗೆರೆಯನ್ನು ಎಳೆದಿದ್ದಳು. ಹಸಿರು ಶಾಯಿಯ ಗುರುತು, ಅದೆಂತಹ ಶಾಯಿಯೋ ಏನೋ ಎಷ್ಟು ಸೋಪು ಹಾಕಿ ತೊಳೆದರೂ ಆ ಗೆರೆ ಹೋಗಿರಲಿಲ್ಲ. ಈಗ ಎದ್ದು ಹೋಗಿ ಮತ್ತೊಮ್ಮೆ ಉಜ್ಜಿ ತೊಳೆದಳು. ಸ್ವಲ್ಪ ಮಾಸಲಾಯಿತು. ಪೂರ್ತಿ ಹೋಗಲಿಲ್ಲ.

ಬೆಳಿಗ್ಗೆ ಕಾಫಿ ಕುಡಿಯುವಾಗ ಮತ್ತೆ ತಾನಿಲ್ಲದಾಗ ಎಷ್ಟು ರುಚಿಯಾದ ಕಾಫಿ ಮಾಡಿಕೊಂಡು ಕುಡಿಯುತ್ತಿದ್ದೆವು ಎಂದು ಹೇಳದಿದ್ದರೆ ಸಾಕೆನಿಸಿತ್ತು. ನಿರುತ್ಸಾಹದಿಂದಲೇ ಎದ್ದು ಡಿಕಾಕ್ಷನ್ ಹಾಕಿ ಕಾಫಿ ಮಾಡಿದಳು. ಅಡಿಗೆಮನೆಗೆ ಬಂದು ನಿಂತ ಸುದರ್ಶನ ವಿಶಾಲಾಕ್ಷಿ ಕೊಟ್ಟ ಕಾಫಿಯನ್ನು ನಿಧಾನವಾಗಿ ಹೀರಿದ. ಲೋಟ ಖಾಲಿಯಾದಾಗ "ಇನ್ನಷ್ಟು ಇದೆಯೇನಮ್ಮ?" ಎಂದ. ವೀಣಾ, "ಆಹಾ, ದಿನಾ ಅರ್ಧ ಲೋಟ ಕುಡಿದು ಹೋಗ್ತಿದ್ದೆ. ಇವತ್ತೇನು ಒಂದೂವರೆ ಲೋಟ?" ಎಂದು ಕೇಳಿದಳು. ಸುದರ್ಶನ ಉತ್ತರ ಕೊಡದೆ ತಾಯಿ ಲೋಟಕ್ಕೆ ಹಾಕಿದ ಕಾಫಿಯನ್ನು ಕುಡಿಯುವುದರಲ್ಲಿ ಮಗ್ನನಾದ. ಊರಿಗೆ ಬಂದಾಗಿನಿಂದ ಮೊದಲ ಬಾರಿಗೆ ವಿಶಾಲಾಕ್ಷಿಯ ಮನಸ್ಸಿಗೆ ಸ್ವಲ್ಪ ಹಾಯೆನಿಸಿತು.

ತರಕಾರಿಯನ್ನು ವಿಂಗಡಿಸಿಕೊಂಡು ಕೂಟು, ಮಜ್ಜಿಗೆಹುಳಿ ಮಾಡಿದಳು. ಎಲ್ಲರಿಗೂ ಮೊಸರು ಬಡಿಸಿದ ಮೇಲೆ ಕೈ ತೊಳೆಯುತ್ತಿದ್ದಳು. ಎಡಗೈಯಲ್ಲಿ ಹೋಗದೆ ನಿಂತ ಹಸಿರುರೇಖೆಯನ್ನು ಹೇಗಾದರೂ ಹೋಗಿಸಿಕೊಳ್ಳಬೇಕೆಂದು ಗೂಡಿನಲ್ಲಿದ್ದ ಹರಳೆಣ್ಣೆ ಶೀಸೆಯನ್ನು ತೆಗೆದು ಕೈಗೆ ಎಣ್ಣೆ ಸವರಿಕೊಂಡಳು. ಆ ಹೊತ್ತಿಗೆ ಕೈ ತೊಳೆಯಲು ಅಲ್ಲಿಗೆ ಬಂದ ವೀಣಾ "ಏನಮ್ಮಾ ಡಾ, ಇದೀಯಮ್ಮ?" ಎಂದು ಕೇಳಿ ಕೈಯನ್ನು ನೋಡುತ್ತ, "ಅದೇನು ಗೀರು" ಎಂದು ಕೇಳಿದಳು. ವಿಶಾಲಾಕ್ಷಿ ಸಂಕ್ಷಿಪ್ತದಲ್ಲಿ ವಿವರಿಸಬೇಕಾಯಿತು. ವೀಣಾ, "ಹೋಗದೆ ಇದ್ದರೆ ಬೇಡ ಇರಲಿ ಬಿಡಮ್ಮಾ" ಎಂದು ಹೇಳಿ ತನ್ನ ಮುದ್ದುನಗೆಯನ್ನು ಬೀರಿದಳು.

ಎಲ್ಲರೂ ಮನೆಬಿಟ್ಟು ಹೋದ ಮೇಲೆ ಅಡಿಗೆ ಮನೆಯನ್ನು ಸ್ವಚ್ಛ ಮಾಡಿ ಬಂದು ಸುದರ್ಶನನ ಕೋಣೆಯಲ್ಲಿ ಸಿಕ್ಕಿದ ಒಂದು ಕಾದಂಬರಿಯನ್ನು ಹಿಡಿದು ಕುಳಿತಳು. ಇಪ್ಪತ್ತು–ಇಪ್ಪತ್ತೈದು ಪುಟ ಓದುವುದರಲ್ಲಿ ದಮಯಂತಿಗೆ ಪತ್ರ ಬರೆಯಬೇಕೆಂದು ನೆನಪಾಯಿತು. ವಿವರವಾಗಿ ಪತ್ರ ಬರೆದು ಅಂಟಿಸಿ ಇಟ್ಟಳು.

ಮಧ್ಯಾಹ್ನದ ತಿಂಡಿಗೆ ಏನು ಮಾಡುವುದೆಂದು ಯೋಚಿಸುತ್ತ ಅಡಿಗೆಮನೆಗೆ ಹೋದಳು. ಒಂದು ಡಬ್ಬದಲ್ಲಿ ಚಕ್ಕುಲಿ ಹಿಟ್ಟು ಇದ್ದಿತು. ಎಲ್ಲರಿಗೂ ಇಷ್ಟ ಅದನ್ನೇ ಮಾಡೋಣವೆಂದು ತೆಗೆದು ಹಿಟ್ಟು ಕಲೆಸಿದಳು. ಇನ್ನು ಐದಾರು ಕರಿಯುವುದು ಉಳಿದಿದ್ದಾಗ ಕರೆಗಂಟೆಯ ಶಬ್ದ ಕೇಳಿಸಿತು. ಬಾಗಿಲು ತೆಗೆದರೆ ಎದುರಿಗೆ ಮೂರ್ತಿ. ಸಾಮಾನ್ಯವಾಗಿ ಮಧ್ಯಾಹ್ನದ ಹೊತ್ತು ಮನೆಗೆ ಬರುವ ಅಭ್ಯಾಸವಿರಲಿಲ್ಲ. ವಿಶಾಲಾಕ್ಷಿ ಒಂದು ಪುಟ್ಟ ತಟ್ಟೆಗೆ ನಾಲ್ಕು ಬಿಸಿ ಬಿಸಿ ಚಕ್ಕುಲಿಯನ್ನು ಹಾಕಿ ಅವನ ಮುಂದಿಟ್ಟಳು. ಟೀಗೆ ನೀರಿಟ್ಟು ಬಂದು ಅವನ ಮುಂದೆ ಕುಳಿತು,

"ದಿನಾ ಮಧ್ಯಾಹ್ನದ ಹೊತ್ತು ಬರ್‍ತಿದ್ರೇನು?" ಎಂದು ಕೇಳಿದಳು.

"ಇಲ್ಲ"...ಎಂದು ಹೇಳಿ ತನ್ನನ್ನು ನೋಡಿದ ರೀತಿಗೆ ಅವಳು ತಲೆ ತಗ್ಗಿಸಿದಳು. ಸುದರ್ಶನ, ವೀಣಾರಂತಹ ಬೆಳೆದ ಮಕ್ಕಳಿರುವರೆನ್ನುವುದನ್ನು ಮರೆಸುವಂತಹ ನೋಟ ಅದು. ಟೀ ಕುಡಿದ ಮೇಲೆ ಹತ್ತು ನಿಮಿಷ ಇದ್ದು ಮೂರ್ತಿ ಮತ್ತೆ ಆಫೀಸಿಗೆ ಹೊರಟುಬಿಟ್ಟ. ಕಣ್ಮರೆಯಾಗುವವರೆಗೆ ನೋಡುತ್ತ ನಿಂತ ಅವಳು ಯೋಚಿಸಿದಳು. ಯಾರೂ ಬಾಯಿ ಬಿಟ್ಟು ಹೇಳದಿದ್ದರೇನು ಅವರೆಲ್ಲರ ಮೌನಾರಾಧನೆ ತನಗೆ ಸಾಲದೆ ಎಂದು. ಅವಳ ದೃಷ್ಟಿ ಅಚಾನಕವಾಗಿ ಅವಳ ಎಡಗೈ ಮೇಲಿದ್ದ ಅಳಿಸಲಾಗದ ಹಸಿರು ಗೆರೆಯತ್ತ ಹೋಯಿತು. ವೀಣಾ ಹೇಳಿದಂತೆ ಅದು ಹಾಗೇ ಇರಲಿ ಎಂದುಕೊಂಡಳು. ●



# ಸಿನಿಕ್ ಸೀನ!!!

ಸುನೀತಿ ಕೃಷ್ಣಸ್ವಾಮಿ

ಪಾಪ! ಈ ಗುಣವಾಚಕದ ಬಿರುದನ್ನುಅದ್ಯಾರು ಸೀನನಿಗೆ ಕೊಟ್ರೋ ಗೊತ್ತಿಲ್ಲ. ರಾಷ್ಟ್ರಪತಿಗಳಂತೂ ಕೊಟ್ಟಿಲ್ಲ. ಅದು ಚೆನ್ನಾಗಿ ಗೊತ್ತು. ಸುಮ್‌ಸುಮ್ನೆ ಸೀನನ್ನ "ಸಿನಿಕ್ಕು! ಸಿನಿಕ್ಕು" ಅಂತಾರೆ. ನನ್ ದೃಷ್ಟೀಲಿ ಅವನು ಖಂಡಿತಾ 'ಸಿನಿಕ್'ಅಲ್ಲ. ಕಂಡದ್ದು ಕಂಡ್ಹಾಗೆ ಹೇಳ್ತಾನೆ, ಆಡ್ತಾನೆ. ಕಡ್ಡಿ ಎರಡುತುಂಡು ಮಾತು. ಲೋಕ ವಿರೋಧಿ ಸಮಾಚಾರ ಅನ್ನಿ. ನನಗೂ ಅವನಿಗೂ ಭಾ...ಳ ದೋಸ್ತಿ. ಹಾಗಿಲ್ದೆ ಇದ್ದಿದ್ರೆ ಈ ಲೇಖನ ನೀವೆಲ್ಲಿ ಓದೋ ಅವಕಾಶ ಸಿಗ್ತಾ ಇತ್ತು? ಸೀನ ಬಂದು ನಮ್ ಜಗುಲಿ ಮೇಲೆ ಕೂತಾ ಅಂದ್ರೆ ಬಿಸಿ ಬಿಸಿ ಸುದ್ದಿ ಬುತ್ತೀನ ಬಿಚ್ಚಿ ಹರಡಿ ಸುತ್ತಲಿನವರಿಗೂ ಉಣಬಡಿಸಿ ಆ ಮೇಲೆ ಆ ಬುತ್ತಿ ಬಟ್ಟೇನ ಝಾಡಿಸಿ ಏಳ್ತಾನೆ! ಒಂದೊಂದ್ಸಲ ಝಾಡಿಸುವ ರಭಸ ತಡ್ಕೊಳ್ಳೋದು ನಮಗೆ ತುಂಬಾ ಕಷ್ಟವಾಗುತ್ತೆ. ಆದ್ರೂ ಸೀನ ಬರಲಿಲ್ವೇ ಅಂತ ಅನ್ನುಸ್ತಾ ಇರತ್ತೆ. ಅದೋ...ಅದೋ ಬಂದ...ಬಂದ...ಭೂಪತಿ! ಕೇಳಿ ಅವನ ಬಾಯಿಂದ ಬರೋ ಬಿರುಸುಬಾಣ!ಸುರ ಸುರ ಬತ್ತಿ!ಅಟಂಬಾಂಬು! ರಾಕೆಟ್ ವೇಗದ ವಾಗ್ಬಾಣ!

"ನೂರು ವರ್ಷ ಆಯಸ್ಸು ಸೀನ ನಿಂಗೆ!" ಅಬ್ಬರದಿಂದ ನಗುತ್ತಾ ಸೀನ "ಯಾಕೆ ಸ್ವಾಮಿ ಈ ಸುಳ್ಳು ಆಶೀರ್ವಾದ? ಪತ್ರಿಕೆ ತೆಗೆದು ಓದ್ತಾ ಇದ್ರೆ ಲಾರಿ ಬಸ್ಸು ಡಿಕ್ಕಿ, ಕಾರು ಸ್ಕೂಟರ್ ತಲೆ ಮೇಲೆ ತಲೆ ಬಿದ್ದಿರೋದು, ಫುಟ್‌ಪಾತ್ ಮೇಲೆ ಹೋಗ್ತಾ ಇರೋ ಅಮಾಯಕ ಪ್ರಜೆ ಮೇಲೆ ಬಿ. ಟಿ. ಎಸ್. ಬಸ್ಸು ಏರಿ ಹೋಗಿ ದಾಯಾದಿ ಮತ್ಸರ ತೋರೋದು, ಪ್ರವಾಹದ ಹಾವಳಿ, ಕ್ಷಾಮ, ನಾಡುದೋಣಿ, ಹಡಗು ಮುಳುಗೋದು ವಿಮಾನ ದುರಂತ, ಖೂನಿ, ದರೋಡೆ ಇಷ್ಟೆಲ್ಲಾ ಬಚಾವ್ ಆದ್ರೂ ಆಗ್ಬೋದು ನಾನು. ಆದ್ರೆ ರಾಕೆಟ್‌ನಂತೆ ಏರ್ತಾ ಇರೋ ಈ ಮಹಾ ಬೆಲೆ ಕಾಲ್ದಲ್ಲಿ ನಾನು! ಈ ಸೊಣಕಲ ಶರೀರ! ಆರೋಗ್ಯ ಶಾಸ್ತ್ರದ ಮೊದಲನೇ ಪಾಠದ ಮೊದಲ ಚಿತ್ರದ ಅಸ್ಥಿಪಂಜರದ ಈ ಗೂಡು ಆಹಾರ ಬೆಲೆ ತಡೆಯೋ ತಾಕತ್ ನೂರು ವರ್ಷದವರೆಗೂ ಇದ್ಯೇ ನಂಗೆ? ಮೂರು ಲೀಟರ್ ಸೀಮೆ ಎಣ್ಣೆಗೆ ಮೂರು ಮೈಲಿ ಉದ್ದದ ಕ್ಯೂ ನಿಂತು ಮೂರು ದಿವಸ ಅಹೋರಾತ್ರಿ ಈ ಚಳಿ ಗಾಳೀಲಿ ಮೈಯೊಡ್ಡಿ ನಿಂತು ಸುಸ್ತಾಗಿ ಬರ್ತಾ ಇರೋ ಈ ಜೀವಶ್ಯವ ನೂರು ದಿವಸ ಜೀವ ಹಿಡ್ಕೊಂಡಿರೋದು ಅನುಮಾನವಾಗಿದೆ. ಅಂತಾದ್ದು ಯಾಕೆ ಸ್ವಾಮಿ ನಂಗೆ ಈ ಸುಳ್ಳು ಬೊಗಳೆ ಆಶೀರ್ವಾದ ಮಾಡ್ತೀರಿ?" ನಾನು ಚುಪ್‌ಚಾಪಾದೆ. ಸೀನನೇ ಮುಂದುವರೆಸಿದ.

"ಯಾಕೆ ಸ್ವಾಮಿ 'ಗಪ್' ಆದ್ರಿ. ನಾನು ಹೇಳೋದು ಸುಳ್ಳೇ?"

"ಇಲ್ಲಪ್ಪ ಇಲ್ಲ. ನೀನು ಮಾತಾಡಿದ್ರೆ ತೆರೆದ ಪುಸ್ತಕ ಇದ್ದ ಹಾಗೆ."

"ಏನೋ ನೀವು ಸಾಹಿತಿಗಳು ಸ್ವಾಮಿ. ನಾನೇನಾದ್ರೂ ಹುಚ್ಚುಚ್ಚಾರ ಮಾತಾಡ್ತೀನಿ. ಹಾಂ! ಜ್ಞಾಪಕ ಬಂತು ನೋಡಿ. ಈಗ ಇದೇ ಬೀದೀಲಿ ಮೊದಲ್ನೇ ಮನೆ "ಜ್ಞಾನವಿಲ್ಲಾ" ಅಂತ ಇಲ್ವಾ?"

"ಹಾಂ, ಅದೇ ...ಪ್ರೊಫೆಸರ್ ಹುಚ್ಚೂರಾಯರ ಮನೆ".

"ಅದೇ...ಅದೇ...ಅವರ ಸುದ್ದಿ ಗೊತ್ತಾಯ್ತಾ?"

"ಏನಪ್ಪ ಏನಾಯ್ತು? ಅಂಥಾ ಚೆನ್ನಾಗಿದ್ರಲ್ಲ"

ಸೀನ ಜೋರಾಗಿ ನಗುತ್ತಾ "ಏನೂ ಆಗಿಲ್ಲ. ಇದ್ದಕ್ಕಿದ್ದ ಹಾಗೆ ದೊಡ್ಡೋರಿಗೆ ಬರುತ್ತಲ್ಲಾ ಹಾರ್ಟ್ ಫಾಯಿಲ್! ಅವರಿಗೆ ಹೃದಯ ಇರೋದು ಬರೀ ರಕ್ತ ಪಂಪ್ ಮಾಡೋದಿಕ್ಕೇ;ಬೇರೆ ಯಾವ ರೀತಿ ಅನುಕಂಪ, ದಯೆ, ಕರುಣೆ ತೋರಿಸೋಕ್ಕೆ ಅವರುಗಳ ಹೃದಯ Strain ಮಾಡ್ಕೊಳ್ದೇ ಇದ್ರೂ ಹಾಳಾದ್ದು ಹೃದ್ರೋಗ ಬಡ್ಕೊಂಡು ಸಾಯ್ತಾರೆ ಏನ್ಮಾಡೋದು? ಆ ದೇವರಿಗೆ ಕಣ್ಣಿಲ್ಲ. ಅಯ್ಯೋ ಜಾಡು ಬಿಟ್ಟು ಎಲ್ಲೋ ಹೋದೆ. ಅದೇ ಆ ಹುಚ್ಚೂರಾಯರು ಎಂಥಾ ಕೆಲ್ಸ ಮಾಡಿದ್ದಾರೆ ಗೊತ್ತೇ?"

ಪೆಚ್ಚಾಗಿ ನಾನು "ಗೊತ್ತಿಲ್ಲಪ್ಪಾ" ಅಂದೆ.

"ಹೆಸರು ಬದಲಾಯಿಸ್ಸಿದ್ದಾರೆ ಸ್ವಾಮಿ."

"ಈಗ್ಯಾಕೆ ಬೇಕಪ್ಪ ಬೇರೆ ಹೆಸರು? ಅಂದ ಹಾಗೆ ಏನು ಹೆಸ್ರು?"

"ತಮ್ಮನ್ನ ತಾವೇ Cut- ಮಾಡ್ಕೊಂಡಿದ್ದಾರೆ"

"ಅಂದ್ರೆ?"

"ಅಂದ್ರೆ ಅವರ ಪೂರ್ಣ ಹೆಸ್ರು. H ಹುಚ್ಚೂರಾವ್ ಅಂತ ತಾನೆ"

"ಹೌದು" ಗೋಣಾಡಿಸಿದೆ.

"ಅಲ್ಲ, ಈ ಹುಚ್ಚೂರಾಯನಿಗೆ ಮೊದಲೇ ಅವನ ಹುಚ್ಚಿನ ಹಿಂದೆ ಹೆಚ್ಚಿದೆ. (H ಇದೆ.) ಇದೂ ಸಾಲ್ದು ಅಂತ ಇನ್ನೂ ಹೆಚ್ ಮಾಡ್ಕೊಳ್ಳೋದೇ? H H ರಾವ್ ಅಂತ ಬೋರ್ಡ್ ಹೊಸಾದು ತೂಗು ಹಾಕಿದ್ದಾನೆ. ಈ ಹುಚ್ಚೂರಾಯನಿಗೆ ಈ ಹುಚ್ಚು ಯಾವಾಗ ಹೆಚ್ಚಿಬ್ಟಾಯ್ತು ಅಂತ ನನಗೆ ನಾನೇ ನಗ್ತಾ ಬಂದೆ ಸ್ವಾಮಿ. ಆ ಸೀಮೆ ಎಣ್ಣೆ ತಂದ ಮೈಕೈ ನೋವೆಲ್ಲಾ ಮಾಯ





ಹಾಯ್ತು. ಈ ಬೋರ್ಡು ನೋಡ್ದಾಗ " ಸೀನ ಬಿದ್ದು ಬಿದ್ದು ನಕ್ಕ. ನಾನೂ ಅವನ ಜೋಕಿಗೆ ನಗ್ತಾ "ಅಂತೂ ಮಹಾತಲೆ ಕಣಯ್ಯ ನಿಂದು."

"ನಿಮ್ಮ ಮುಂದೆ ನಂದು ಯಾವ ಮಹಾ ಲೆಕ್ಕ ಸ್ವಾಮಿ?" "ಹೇಳಿ ಕೇಳಿ ನಾನೊಂದು ಅಲೆಮಾರಿ. ಏನೋ ಇಂತಾದ್ದು ನೋಡಿದ್ರೆ ಕೇಳಿದ್ರೆ ನಿಮ್ಮ ಹತ್ರ ಬಂದು ಒದರ್ತೀನಿ."

"ಮೇಧಾವಿ ಕಣಯ್ಯ ನೀನು"

"ಸ್ವಾಮಿ, ಅಷ್ಟೊಂದು ಹೊಗಳ್ಬೇಡಿ ಈ ಬಡಪಾಯಿನ್ನ. ಎಲ್ರೂ ವಕ್ರಬುದ್ಧಿ ಅನ್ತಾರೆ ನನ್ನನ್ನ."

"ವಕ್ರ ಅಲ್ಲಯ್ಯ. ಚಾಣಕ್ಯಬುದ್ಧಿ ಅನ್ನು."

"ಏನೋ ನೀವೂ ಸಾಧು ಗೋವಿನಂತೆ. ಒಬ್ಬರ ತಂಟೆಗೆ ಹೋಗೋಲ್ಲ. ಮನಸ್ನಲ್ಲಿ ಇದ್ದದ್ದೇ ಒದರಿಬಿಡ್ತೀನೆ."

"ಏನಯ್ಯ ಒಳ್ಳೇ ಮಾತ್ನಲ್ಲಿ 'ಪಶು' ಅಂತ ಬಿರುದು ಕೊಟ್ಟೆ."

"ಛೇ, ಛೇ,!, ಛೇ! ಉಂಟೇ? ಹಾಗೆ ನೋಡಿದ್ರೆ ದನದ ಮನಸ್ಸು ದಾಯಾದಿ ಮನಸ್ಸು ಗೊತ್ತೇ ಆಗೋಲ್ಲ ಅಂತಾರೆ. ನಿಮಗೆ ಈ ಹಸುವಿನ ಉಪಮಾನ ಕೊಡ್ತಾಇದ್ದೆ. ದಾಯಾದಿ ಅಂದ್ನಲ್ಲ...ನಮ್ಮ ಚಿಕ್ಕಪ್ಪನ ಮಗ ಸೀಮೆ ಎಣ್ಣೆ ಕ್ಯೂನಲ್ಲಿ ನಂಗಿಂತ ಹತ್ತು ಜಾಗ ಮುಂದಿದ್ದ. ಏನು ಹಲ್ಲು ಕಿಸೀತಾ ನಿಂತಿದ್ದಾನೆ! ಆಯಾಸ ಅನ್ನೋದೇ ಇಲ್ಲ ಮುಖದಲ್ಲಿ. ಒಂಟಿ ಕಾಲ್ನಲ್ಲಿ ಆ ಭಗೀರಥ ತಪಸ್ಸು ಮಾಡಿದ್ದು ಯಾವ ಮಹಾ ಲೆಕ್ಕ? ಈ ಜನಸಾಮಾನ್ಯರು ಒಂದೊಂದು ವಸ್ತುವಿಗೂ ಮಾಡೋ ತಪಸ್ಸು, ಶತ ಭಂಗಿ ಪ್ರದರ್ಶನ, ಆಯಾಸ, ಛಲ, ಎಲ್ಲಾ ನೋಡಿದ್ರೆ ಭಗೀರಥ ಗಂಗೆ ಬಿಟ್ಟು ಸೀಮೆಯಿಂದ ಸೀಮೆ ಎಣ್ಣೇನೇ ಹರಿಸಿ ಬಿಟ್ಟು ಜನಗಳ್ನ ಉದ್ಧಾರ ಮಾಡ್ತಾ ಇದ್ದ. ಅದೇ ದಾಯಾದಿ ನನ್‌ಮಗ ಅಂದ್ನಲ್ಲ! ಬಿಡ್ತು! ಚಿಕಪ್ಪನ ಮಗ ಅಂದ್ನಲ್ಲ. ಅವನನ್ನ ಕೇಳ್ದೆ,

'ಏನೋ ಮೇಷ! (ಮಹೇಶ ಹೆಸರಿನ ಅವಶೇಷ) ಊರಗಲ ಬಾಯಿ ಮಾಡಿ ನಿಂತಿದ್ದಿ. ಏನ್ಸಮಾಚಾರ? ಅಂದೆ. ನಾನು ಮಾತಾಡಸ್ಲಿ ಅಂತ್ಲೇ ಕಾಯ್ತಾ ಇದ್ದ. ಅವನಿಗೆ ಅದೇನೋ ಭಯವಂತೆ ಸ್ವಾಮಿ ನನ್ನ ಮಾತಾಡ್ಸೋಕೆ. ನಾನೇನು ಹುಲೀನಾ? ಸಿಂಹಾನಾ? ಆ ಸರ್ಕಸ್ಸಿನಲ್ಲಿ ಹುಡುಗೀನ ತಿಂದ ಹುಲೀನಾ?" ಸಧ್ಯ ಕರಡಿ ಅಲ್ಲವಲ್ಲ ಆ ಹುಡುಗೀನ ತಿಂದದ್ದು? ಹುಲಿತಾನೇ?" ಅಂತ ಯಾವ್ನೋ ಮೇಧಾವಿ ಕಾಗ್ದ ಬರೆದಿದ್ದ ನೋಡಿ ಸ್ವಾಮಿ. ಪ್ರಾಣ ಹೋದದ್ದು ಲೆಕ್ಕವಿಲ್ಲ ಈ ಕರಡಿ ಪ್ರಿಯನಿಗೆ! ಹುಲಿ ತಿಂದ್ರೆ ತಿನ್ನಲಿ ಅನ್ನೋ ಲೆಕ್ಕಾಚಾರ. ಅಯೋಗ್ಯ ಪಶುಗಳು! ಮತ್ತೆ ಜಾಡು ಬಿಟ್ಟೆ ಸ್ವಾಮಿ. ಹಾಳಾದ್ದು ಹುಟ್ಟುಗುಣ ಎಲ್ಲಿ ಹೋಗುತ್ತೆ? ಸುಟ್ಟು ಹಾಕೋಣ ಅಂದ್ರೂ ಸೀಮೆಎಣ್ಣೆ ಸಿಗೋದು ಕಷ್ಟ. ಅದೇ ದಾಯಾದಿ ಮಗ ಇರೋ ಕೊಳಕು ಹಲ್ಲೇ ಪ್ರದರ್ಶಿಸುತ್ತಾ,

"ನಂಗೆ ನಿನ್ನೆ ರಾತ್ರಿ ಗಂಡುಮಗು ಆಯ್ತು ಸೀನ.."

ನಾನು ಕ್ಯೂನಲ್ಲಿ ಅಪಾರ ಜನಸ್ತೋಮದ ಮಧ್ಯ ನಿಂತಿದ್ರೂ ಅಬ್ಬರದಿಂದ ಒಂದು ನಕ್ಕೆ....ನಕ್ಕೆ...ನಕ್ಕೆ" ಮೇಷ ಪೆಚ್ಚಾದ.

"ಅಲ್ವೋ ಮೇಷ, ನಿಂಗೆ ಸರಿಯಾದ ಹೆಸರು ಕೂಗ್ತಾ ಇದ್ದಾರೆ ಕಣೋ. ಅಲ್ವೋ ಬಕರ, ನಿಂಗೆ ಗಂಡು ಮಗು ಆಗಿದ್ರೆ ಇಲ್ಲಿ ಹೇಗೆ ನಿಲ್ಲಕ್ಕೆ ಸಾಧ್ಯಾನೋ?"

ಪೆಚು ಕಳೆಯಿಂದ ಮೇಷ ಉಸುರಿದ:

"ಅದ್ಯಾಕೆ ಸಾಧ್ಯವಿಲ್ಲ?"

"ಅದು ಹೇಗೆ ಸಾಧ್ಯ? ಈ ಅಕ್ಕಪಕ್ಕದ ಜನರನ್ನೇ ಕೇಳೋಣಪ್ಪಾ. "ನೋಡಿ ಸ್ವಾಮಿ ಈ ಮನುಷ್ಯ ಗಂಡ್ಸು ಅಂತ ನೀವೆಲ್ಲಾ ಒಪ್ತೀರಿ ತಾನೇ? ಗುಣದಲ್ಲ ಹೋಗಲಿ ಕಾಣೆ. ಅಂತೂ ವೇಷದಿಂದ, ಮೂರು ದಿವ್ಸದ ಧಾಡಿ ಮೀಸೆಯಿಂದ ಇವನು ಗಂಡ್ಸು ಅನ್ನೋದು ನಿರ್ವಿವಾದ. ಈ ಗಂಡ್ಸಿಗೆ ನಿನ್ನೆ ರಾತ್ರಿ ಗಂಡುಮಗು ಪ್ರಸವವಾಗಿದ್ರೆ ವಾಣಿವಿಲಾಸ ಆಸ್ಪತ್ರೆಯ ಜನರಲ್ ನರಕದ ವಾರ್ಡಿನ ಬಣ್ಣ ಹೋದ ಬಿಳೀ ಮಾಸಲು ಮಂಚದ ಮೇಲೆ ಮಲಗಿ ಡೇಂಜರ್ ಬಣ್ಣದ ಕೆಂಪುಕಂಬಳಿ ಹೊದ್ದು ಇಷ್ಟೊತ್ತಿಗೆ ಮಲಗಿರದೆ, ಇಲ್ಲಿ ಈ ಸೀಮೆ ಎಣ್ಣೆ ಮೂರು ಮೈಲಿ ಕ್ಯೂನಲ್ಲಿ ನಿಂತಿರಲು ಸಾಧ್ಯವೇ ಸ್ವಾಮಿ? ನೀವೇ ಹೇಳಿ ರಸಿಕ ಮಹಾಜನರೇ?" ಅಂದೆ. ಎಲ್ರೂ ಆ ಆಯಾಸ ಪರಿಹಾರ ಆಗೋ ಹಾಗೆ ಹೊಟ್ಟೆ ಹುಣ್ಣಾಗುವ ಹಾಗೆ ನಕ್ಕಿದ್ರೂ ನಕ್ಕಿದ್ರೆ. ದಾಯಾದೀನೂ ಅವನ ಪೆಚ್ಚುತನಕ್ಕೆ ನಕ್ಕ ಅನ್ನಿ. ನಂಗೇನು ಅನ್ನಸ್ತು ಗೊತ್ತೇ? ಪಾಪ; ಈ ಪ್ರಾಣಿ ಹೆಂಡ್ತಿ ಪಕ್ಕದಲ್ಲಿ ನಿಂತು ತನ್ನ ಭಾರಿ achievement ವನ್ನೋನ (ಈ ಕಾಲ್ದಲ್ಲಿ ಅದೊಂದೇ ಅಲ್ವೇ ಸಸ್ತವಾಗಿ ನಮ್ಮ ಭಾರತದಲ್ಲಿ ಉತ್ಪಾದನೆಯಾಗ್ತಾ ಇರೋದು!!) ನೋಡ್ತಾ, ಹಿಗ್ತಾ, ಹೆಮ್ಮೆ ಪಡ್ತಾ ಇದ್ದರೆ, ಹೇಗೂ ಗಂಡುಮಗ ಆದ, ಈಗ್ಲಿಂದ್ಲೇ ಸೀಮೆಎಣ್ಣೆ ಶೇಖರಿಸಿದರೆ, ನನ್ನ ಅಂತ್ಯ ಕಾಲಕ್ಕೆ ಮಗನಿಗೆ ಈ ದುಃಸ್ಥಿತಿ ಬರದೇ, ಕ್ಯೂನಲ್ಲಿ ನಿಲ್ದೆ ಮನೇಲಿರೋ ಸೀಮೆಎಣ್ಣೇಲೇ ತಂದೆ ದಹನ ಕ್ರಿಯೆ ನಡೆಸಿಬಿಡಬಹುದು ಅನ್ನೋ ದೂರಾಲೋಚನೆ ಮೇಷಂಗೆ. ಇದು ನನ್ನ ದುರಾಲೋಚನೆ ಅಂತೀರಾ ಸ್ವಾಮಿ?"

"ಹೆ...ಹೆ...ಹೆ...ಇಲ್ಲಯ್ಯ. ಇಲ್ಲ. ಕನ್ನಡೀಲಿ ಕಾಣೋ ಪ್ರತಿಬಿಂಬ ಯಥಾವತ್ತಾಗಿ ಇರುತ್ತೆ, ಸುಳ್ಳೆಲ್ಲಿ ಬಂತು ನಿನ್ ಮಾತು?"

"ಏನೋ ಸ್ವಾಮಿ ಈ ಜನ ಸಾಮಾನ್ಯನ ಮಾತು. ಅಲ್ನೋಡಿ ಸ್ವಾಮಿ ಬೇಗ."

**ಸಿನಿಕ್ ಸೀನ ಕಂಡದ್ದು ಕಂಡ್ಹಾಂಗೆ ಹೇಳ್ತಾನೆ, ಕಡ್ಡಿ ಎರಡು ತುಂಡು ಮಾತು. ಸುತ್ತಲಿನ ವ್ಯಕ್ತಿ ಸಮಾಜಗಳ ಮೇಲೆ ಅವನ ವಾಗ್ಬಾಣಗಳು ಸುರಿಯುತ್ತವೆ. ಅವನ ಮಾತುಗಳ ಸ್ವಾರಸ್ಯವೇ ಸ್ವಾರಸ್ಯ.**

"ಏನಪ್ಪಾ" ಅಂತ ಸೀನ ತೋರಿಸಿದ ದಿಕ್ಕಿಗೆ ನೋಡ್ದೆ. ಆಶ್ಚರ್ಯವಾಯ್ತು. "ಅಲ್ಲ ಶೀನ ಈ ಶಂಕ್ರಿ ಮೊನ್ನೆ ತಾನೇ U.K.ಗೆ ಹೋಗಿದ್ನಲ್ಲ! ಅದ್ಯಾವಾಗ ವಾಪ್ಸು ಬಂದ್ನಯ್ಯ? ಇಲ್ಲಿ M.B.B.S. ಮುಗಸ್ದ. ವಿದೇಶ ದಲ್ಲಿ F. R. C. S. ಮುಗ್ಸಿ ಬರ್‍ತಾನೆ ನಮ್ಮ ಶಂಕ್ರಿ ಅಂತ M. L. A. ಭಸಣ್ಣೋರು ಹೇಳಿದ್ರು".

ಸೀನಿ ಅಗಲವಾಗಿ ಬಾಯಿ ಬಿಡ್ತಾ,

"ಅದೇ...ಅದೇ...ಅಲ್ಲೇ ಬಂತು ತಕ್ರಾರು. ನಮ್ಮ ಮೈಸೂರು ದೇಶದಲ್ಲಿ ಶಂಕ್ರಿ, ಬೋರೇಗೌಡ and gang ಎಲ್ರೂ 'ಎ' ಕ್ಲಾಸ್ನಿಂದ ಹೈಕ್ಲಾಸಿನ ವರ್‍ಗೂ Distinctionನಲ್ಲಿ ಪಾಸು ಮಾಡಿದ್ದೇ ಮಾಡಿದ್ದು ಸ್ವಾಮಿ. ಎಲ್ಲಾ ಆ ವಿಟಮಿನ್ M ಪ್ರಭಾವ !!"

"ಹಾಗಂದ್ರೇನು ಸೀನ?"

"ನೋಡಿ ಸ್ವಾಮಿ ನೀವು ನಿಮ್ಮಂಥಾ ಸಾಹಿತಿಗಳು ಕಣ್ಣು ಬಿಡ್ದೇ ಇದ್ರೆ "ಸಾಯಿತಿ" ಆಗ್ತೀರಿ ಅಷ್ಟೆ. ವಿಟಮಿನ್ M ಅಂದ್ರೆ ಮನಿ ಹಣ! ಬರೀ ಹಣ ಅಲ್ಲ,ನ್ಯಾಯ ಧರ್ಮದ್ದು ಅಲ್ಲ, ಕಪ್ಪು! ಕರಾಳ ಕಪ್ಪು! ಲಂಚದ ಹಣ ತಿನ್ನಿಸಿ ಆಡಳಿತ ವರ್ಗದವರನ್ನು ಕೊಬ್ಬಿಸಿ. ಮಕ್ಕಳು, ಮೊಮ್ಮಕ್ಕಳು, ಅಳಿಯ, ಮಗಳು ತಮ್ಮಂದ್ರು, ಅಣ್ಣಂದ್ರು ಸಿಕ್ಕಿದೋರು ಭೂ ಪ್ರದಕ್ಷಿಣೆ, ಡಿಗ್ರಿ ಸಂಪಾದ್ನೆ ಕೆಲ್ಸ ಗಿಟ್ಸ್ಕೋಳ್ಳೋದು, ಇದ್ದೋರ್‍ನ ಇಲ್ದ ಹಾಗೆ ಮಾಡೋದು (ಯಾಕೇಂತ ಗೊತ್ತು ತಾನೆ? ಮೊನ್ನೆ ಆ ಹೆಂಗ್ಸಿನ ಪ್ರಕರಣ ಓದಿದ್ರಲಾ...ಯಜ್ಞ ಕುಂಡಕ್ಕೆ ಬಲಿಯಾಗ್ತೀದ್ದಾಗುತ್ತೆ ಈ ಪಶುಗಳು! ಈ ಮೃಗಗಳು ಅಂತ ಎಲ್ಲಾ ಆ M ಪ್ರಭಾವ) M ಅಂದ್ರೆ ಮಾಯ! ಮಿರಕಲ್! ಮನಿ! ಮೋಸ! ಮರ್ಡರ್! ಮೆನೋವರ್! ಮಲ್ಟಿಪರ್ಪಸ್ 'M'ಗೆ ಎಷ್ಟೊಂದು ಅರ್ಥ ನನ್ನ ಶಬ್ದಕೋಶದಲ್ಲಿ ಗೊತ್ತಾ? Mನಿಂದ ಮರ್ಯಾದೇನೂ ಬರುತ್ತೆ. (ಮಾನ ಹೋದ್ರೂ)

ಹೀಗೆ ಶಂಕ್ರಿ 'M' ಪ್ರಭಾವದಿಂದ ವಿದೇಶಕ್ಕೆ ಹೋದ, ಬಸವಣ್ಣನೋರು ಹಿಗ್ಗೋದ್ರು. ಮಗ ಭಾರಿ ಸರ್ಜನ್ ಆಗ್ತಾನೆ! ಫೀಸ್ ತಿರುವ್ತಾ ಅವನಪ್ಪ ಅಂತ ಮೆರೀಬೋದು ಅನ್ನೊ ದೂರದ ಆಸೆ. ಅವರಿಗೇನು ಹಣಕ್ಕೆ ಕೊರತೆ? ಮೆಣಸಿಗೆ ಪಪಾಯಿಬೀಜ, ಗೋದಿಗೆ ದತ್ತೂರಿ ಬೀಜ, ಕಲ್ಲಿಗೆ ಅಕ್ಕಿ, ಸೀಗೆಕಾಯಿಗೆ ತೌಡು, ಬೆಣ್ಣೆಗೆ ಕೊಬ್ಬು, ಇತ್ಯಾದಿ ಕಲಬೆರಕೆ ಮಾಡಿ ಎಷ್ಟೋ ಜನರ ತಲೆ ಮೇಲೆ ಕೈಯಿಟ್ಟು ಕೆಲವರನ್ನು Over population scheme ನಲ್ಲಿ ಸ್ವರ್ಗಕ್ಕೆ ರವಾನಿಸಿ ದುಡ್ಡು ಸೇರಿಸಿದ್ದಾರೆ. ಇರ್‍ಲಿ ಈ ವಿಷಯ. ಮುಂದಿಂದು ಕೇಳಿ ಸ್ವಾರಸ್ಯ. ಶಂಕ್ರಿ ವಿದೇಶಕ್ಕೆ ಹೋದ. ಮೊದಲ ದಿನ ಅಲ್ಲಿಯ ಸರ್ಜನ್ ಶಂಕ್ರೀನ ಒಂದು Simple Questi on

ಹಾಕಿದ್ರು.

"Well. ಮಿ. ಶಂಕ್ರಿ. ಈ ಬೋರ್ಡಿನ ಮೇಲೆ, rough ಆಗಿ ಒಂದು human figure ಬರ್‍ದು ಹೃದಯ ಯಾವ ಕಡೆ ಇದೆ ಮಾರ್ಕು ಮಾಡು. ನಂತರ ಅದು ಹೇಗೆ ಆಪರೇಟ್ ಮಾಡ್ಬೇಕು ಅನ್ನೋದು ಬಾಯಲ್ಲಿ ಮೊದ್ಲು ಹೇಳಿ ತಿಳಸ್ಬೇಕು ಅಂದ್ರು. ಶಂಕ್ರಿ ಬೆವತು ಹೋದ್ನಂತೆ. ಹೇಗೋ ವಕ್ರವಾಗಿ (ಅವನಂತೆ, ಅವನಪ್ಪ ಸಂಪಾದಿಸಿದ ಕಪ್ಪು ಹಣದಂತೆ) ಬರೆದು ಯೋಚ್ನೆ ಮಾಡ್ದೆ ಬಲಗಡೆ ಹೃದಯಾಕಾರ ಬರ್‍ದು ಬಂದೇ ಬಿಟ್ನಂತೆ! ಅಲ್ಲ ಸ್ವಾಮಿ ಇದೇನು ನಮ್ ನಾಡೇ? ನಮ್ಮ ಪ್ರೊಫೆಸರುಗಳೇ ಎಲ್ಲಿ ಅಂದ್ರೆ ಅಲ್ಲಿ ಅಂಗ ಇದೆ ಅಂತ ಒಪ್ಕೊಳ್ಳೋಕ್ಕೆ. (ಇನ್ನೇನ್ ಮಾಡ್ತಾರೆ ನುಂಗಿರ್‍ತಾರೆ ಹದಿನೈದು ಇಪ್ಪತ್ತು ಸಾವಿರ ಒಂದೊಂದು ಕೇಸಿಗೂ!) ವಿದೇಶದ ಪ್ರೊಫೆಸರ್ ಹೇಳಿದ್ನಂತೆ. "Oh! I see the heart is on the right side!! It may be so in India. But-in England it is on left side,You can first go back to India." ಅಂದ್ರಂತೆ. ನೋಡಿದ್ರಾ ಸ್ವಾಮಿ ನಮ್ಮ ಬಡ್ಡಿ (ಹಣದ) ಹೈಕ್ಳು?" ಶಂಕ್ರಿ ಹ್ಯಾಪ್ ಮೋರೆ ಹಾಕ್ಕೊಂಡು ವಾಪ್ಸು ಬಂದ್ನಂತೆ."

"ಅಲ್ಲ ಸೀನ ನಾನು ಯಾವ್ದೋ ಮೆಡಿಕಲ್ ಮ್ಯಾಗಜೀನ್ ಓದಿದ ನೆನಪು ಬಹಳ ಅಪರೂಪವಾಗಿ ಬಲಗಡೆ ಹೃದಯ ಇರುತ್ತೆ ಅಂತ."

"ಏಯ್ ಬಿಡಿ ಸ್ವಾಮಿ. ನಿಮಗೆ ಬೇರೆ ಕೆಲ್ಸ ಇಲ್ಲ, ಎಲ್ಲಾ ಓದಿ ತಿಳ್ಕೊಳ್ತೀರಿ.ಸಾಧಾರಣವಾದೋರ ವಿಷಯ ಹೇಳಿ. ಪ್ರೈಮರಿ ಕ್ಲಾಸಿನ ಹುಡುಗನಿಗೂ ಗೊತ್ತಿರಬೇಕಾದ ವಿಷಯ ಹೃದಯ ಎಡಗಡೆ ಇದೆ ಅಂತ. Abnormal case ಬೇಡಿ ಈಗ."

"ಹೂಂ ಸರೀಪ್ಪ. ಅಂತೂ ನಿನಗೆ keen sense of rumours ಇದೆ ಸೀನ."

"ಒಳ್ಳೆ ಮಾತ್ನಲ್ಲಿ ಕ್ವಿನೈನ್ ಡೋಸ್ ಕೊಟ್ರಲ್ಲ, ಏನ್ ಸ್ವಾಮಿ ಹಬ್ಬ ಜೋರು ಅಂತ ಕಾಣುತ್ತೆ."

"ಎಲ್ಲಿ ಬಂತಪ್ಪ? ಈ ಕರ್ಮವೀರದೋರು ದೀಪಾವಳಿ ಸಂಚಿಕೆಗೆ ಲೇಖನ ಕೇಳಿದ್ದಾರೆ. ಅದಾದ್ರೂ ಬರೆದ್ರೆ ನಾಲ್ಕಾಸಾದ್ರೂ ಬರುತ್ತೆ. ಯಾಕೋ ಏನೂ ಹೊಳೀತಾನೇ ಇಲ್ಲ."

"ಸ್ವಾಮಿ! ಈ ಸಾಹಿತಿಗಳ್ನ ನಂಬಬಾರ್‍ದು. ಈಗ ನಾನು ಮಾತಾಡಿದ್ದನ್ನೇ ಬರೆದು ಕಳಸ್ಬಿಡ್ತಿರೋ ಏನೋ? ದುಡ್ಡು ಬಂದ್ರೆ ಈ ಸೀನನ್ನ ಮರೀಬೇಡಿ."

"ಅಂತೂ ಚಾಣಕ್ಯಬುದ್ಧಿ ಕಣಯ್ಯ ನಿಂದು. ಮಾತ್ನಲ್ಲೇ ಸೂಜಿ ಚುಚ್ತು"

"ನೋಡ್ತೀನಿ ನೋಡ್ತೀನಿ ಸ್ವಾಮಿ. ದೀಪಾವಳಿ ಸಂಚಿಕೆ ನಾನು ನಿಮ್ಮನೇಲಿ ಬಂದು ಓದ್ತೀನಿ. ಆಗ ಗೊತ್ತಾಗುತ್ತೆ ಯಾರಿಗೆ ಚಾಣಕ್ಯಬುದ್ಧಿ ಅಂತ. ನಂದು ಬಡ ಬಡ ಅಂತ ಒಡಕುಬಾಯಿ. ದುಡ್ಡಿಲ್ಲ, ಕಾಸಿಲ್ಲ. ನಿಮ್ಮದು ಮೌನವಾಗಿ ಕೇಳೋದೆಲ್ಲಾ ಕೇಳಿ ತಲೇಲಿಟ್ಟು ಕೃತಿ ಮೂಲಕ ಹೊರಡ್ಸಿ ತಲೆ ಕೆಡಸ್ಕೊಳ್ದೆ ಒಂದು ಲೇಖನಕ್ಕೆ ಆಹಾರ ಒದಗ್ಸೋ ಚಾಣಕ್ಯ ಶಿಖಾಮಣಿಗಳು ನಿಮ್ಮ ಜಾತಿ!!" ದೀಪಾವಳಿ ರಾಕೆಟ್ ಎಸ್ದು ಹೊರಟೇ ಹೋದ ಸಿನಿಕ್ ಸೀನ.

●

## ನಾನೇಕೆ ಬದುಕಿರುವೆ

ನಾನು ನನಗಾಗಿ ಬದುಕಿಲ್ಲ. ನನ್ನನ್ನು ಮಮತೆಯಿಂದ ಕಾಣುವವರಿಗೆ ನಿರಾಶೆಯನ್ನುಣ್ಣಿಸಬಾರದೆಂದು ನನ್ನನ್ನು ಅರ್ಥಮಾಡಿಕೊಂಡವರ ಅರ್ಥವನ್ನು ಬುಡಮೇಲು ಮಾಡಬಾರದೆಂದು ನಾನು ಬದುಕಿದ್ದೇನೆ. ಸುತ್ತಲಿದ್ದವರ ನೆರವು ತಪ್ಪಿದ್ದಕ್ಕಾಗಿಯೇ ನಾನಿಂದು ಬದುಕಿರುವೆ. ಬರಲಿರುವ ಎದುರು ತೊಡರುಗಳನ್ನೆದುರಿಸದಿದ್ದಲ್ಲಿ ಜನ ನನ್ನ ಹೇಡಿ ಎಂದು ಭಾವಿಸೀತು ಎಂಬ ಅಂಜಿಕೆಯಿಂದಲೇ ಉಸಿರು ಹಿಡಿದು ಜೀವಿಸಿರುವೆ.

— ಬ್ಯಾಂಕ್ಸ್



ಅಖಂಡ ಕರ್ನಾಟಕದ ಜನಕೋಟಿಗೆ ಕಮಲ್ ಏಜನ್ಸೀಜರವರ ದೀಪಾವಳಿಯ ಹಾರ್ದಿಕ ಶುಭಾಶಯಗಳು

ನಮ್ಮಲ್ಲಿ ಈ ಕೆಳಕಂಡ ಲಘುಪಾನೀಯಗಳು ದೊರೆಯುತ್ತವೆ.

- ಸೋಗದ ಬೇರಿನ ಷರಭತ್ತು
- ನೇರಳೇ ಷರಭತ್ತು
- ಶಿಕಂಜಿ ಷರಭತ್ತು
- ಜೀರಗೆ ಷರಭತ್ತು

ಮತು ● ಓಮುವಾಟರ್

ಜನಗಳಲ್ಲಿ ಮೆಚ್ಚಿಗೆ ಪಡೆದಿರುವ "ಜನತಾ ಟೀ" ಯನ್ನೇ ಉಪಯೋಗಿಸಿರಿ

ಹೆಚ್ಚಿನ ವಿವರಗಳಿಗೆ ಬರೆಯಿರಿ:

ಕಮಲ್ ಏಜೆನ್ಸೀಜ್

ಗಣಪತಿ ದೇವಸ್ಥಾನದ ಎದುರು ಬಿ. ಹೆಚ್. ರೋಡ್. ತುಮಕೂರು

# ಚಿತ್ರ ರಾಮಾಯಣ



ಪ್ರಾಚೀನಕಾಲದಲ್ಲಿ ಅಯೋಧ್ಯೆಯಲ್ಲಿ ದಶರಥನೆಂಬ ಅರಸನು ರಾಜ್ಯವಾಳುತ್ತಿದ್ದನು. ಅವನಿಗೆ ಕೌಸಲ್ಯೆ, ಸುಮಿತ್ರೆ, ಕೈಕೇಯಿ ಎಂದು ಮೂವರು ಪತ್ನಿಯರಿದ್ದರು. ಅವರಲ್ಲಿ ಅವನಿಗೆ ರಾಮಚಂದ್ರ, ಲಕ್ಷ್ಮಣ, ಭರತ-ಶತ್ರುಘ್ನರೆಂಬ ನಾಲ್ವರು ಮಕ್ಕಳು ಜನಿಸಿದರು. ವಿಶ್ವಾಮಿತ್ರ ಮಹರ್ಷಿಗಳು ಅಯೋಧ್ಯೆಗೆ ಬಂದು ಯಜ್ಞರಕ್ಷಣೆಗಾಗಿ ರಾಮಲಕ್ಷ್ಮಣರನ್ನು ಕಳಿಸಬೇಕೆಂದು ಕೇಳಿದರು. ಬಾಲಕರಾದರೂ ವೀರರಾದ ರಾಮ-ಲಕ್ಷ್ಮಣರು ಯಜ್ಞಶಾಲೆಯನ್ನು ರಕ್ಷಿಸುತ್ತ ನಿಂತಾಗ ರಾಕ್ಷಸರು ಬಂದರು. ರಾಮಲಕ್ಷ್ಮಣರ ಬಾಣಗಳಿಗೆ ಹಲವರು ರಾಕ್ಷಸರು ಸತ್ತರು. ಇನ್ನು ಕೆಲವರು ಓಡಿಹೋದರು.



ಮಿಥಿಲೆಯ ದೂತರು ಸೀತಾಸ್ವಯಂವರದ ಸುದ್ದಿಯನ್ನು ವಿಶ್ವಾಮಿತ್ರರಿಗೆ ತಿಳಿಸಿದರು. ರಾಮ-ಲಕ್ಷ್ಮಣರೊಂದಿಗೆ ವಿಶ್ವಾಮಿತ್ರರು ಮಿಥಿಲೆಗೆ ಹೋದರು.

ರಾಮಚಂದ್ರನು ಮಹಾವೀರರಿಗೂ ಎತ್ತಲಸಾಧ್ಯವಾದ ಶಿವಧನುಸ್ಸನ್ನು ಮುರಿದನು. ಜನಕರಾಜನು ತನ್ನ ಮಗಳು ಸೀತೆಯನ್ನು ರಾಮನಿಗೆ ಹಾಗು ತನ್ನ ತಮ್ಮನ ಮಕ್ಕಳಾದ ಊರ್ಮಿಳೆ ಶ್ರುತಕೀರ್ತಿ, ಮಾಂಡವಿಯರನ್ನು ರಾಮನ ಅನುಜರಿಗೆ ಕೊಟ್ಟು ಮದುವೆ ಮಾಡಿದನು.



ಶ್ರೀರಾಮಚಂದ್ರನಿಗೆ ಯೌವರಾಜ್ಯಾಭಿಷೇಕವನ್ನು ಮಾಡಲು ದಶರಥನು ಎಲ್ಲ ಸಿದ್ಧತೆಗಳನ್ನು ಮಾಡಿದನು. ಆಗ ಮಂಥರೆಯ ಮಾತಿಗೆ [illegible]ಟ್ಟು ರಾಣಿ ಕೈಕೇಯಿಯು ಅದನ್ನು [illegible]ಡಿದಳು. 'ರಾಮಚಂದ್ರನಿಗೆ ಹದಿನಾಲ್ಕು [illegible]ರುಷ ವನವಾಸ ಹಾಗೂ ತನ್ನ ಮಗ ಭರತ[illegible]ನಿಗೆ ರಾಜ್ಯಾಭಿಷೇಕವಾಗಬೇಕೆಂದು' ಆಕೆ ಹಟ [illegible]ಡಿದಳು. ದಶರಥ ಒಪ್ಪಲಿಲ್ಲ.

ಚಿತ್ರ: ಪಿ. ಎಸ್. ರಾವ್
ನಿರೂಪಣೆ: ಪ್ರಿಯಂವದ



ತಂದೆಯ ವಚನವನ್ನು ಪಾಲಿಸಲು ಶ್ರೀರಾಮಚಂದ್ರನು ಪತ್ನಿ ಸೀತೆ ತಮ್ಮ ಲಕ್ಷ್ಮಣನೊಂದಿಗೆ ನಾರುಮಡಿಗಳನುಟ್ಟು ಅಯೋಧ್ಯೆಯನ್ನು ಬಿಟ್ಟು ಕಾಡಿಗೆ ತೆರಳಿದರು. ಗಂಗೆಯನ್ನು ದಾಟಿ ಚಿತ್ರಕೂಟಕ್ಕೆ ಹೋಗಿ ನೆಲೆಸಿದರು. ಇತ್ತ ದಶರಥನು ರಾಮನ ಅಗಲು ವಿಕೆಯಿಂದ ಕೊನೆಯುಸಿರೆಳೆದ.



ಕೈಕೇಯಿಯು ಭರತನನ್ನು ಕರೆಕಳಿಸಿದಳು. ರಾಮನು ವನಕ್ಕೆ ಹೋದುದನ್ನು ಹಾಗು ರಾಜನು ಮರಣ ಹೊಂದಿದ್ದನ್ನು ಹೇಳಿದ ಆಕೆಯು ಅವನಿಗೆ- ಪಟ್ಟವೇರಿ ರಾಜ್ಯವನ್ನು ಆಳಲು ಹೇಳಿದಳು. ಆದರೆ ಭರತನು ತಾಯಿಯ ಮಾತಿಗೆ ಒಪ್ಪಲಿಲ್ಲ. ಆತನು ಅವಳನ್ನೇ ತೆಗಳಿ ರಾಮಚಂದ್ರನಿರುವಲ್ಲಿಗೆ ಹೋದನು. ರಾಮ-ಚಂದ್ರನು ಅಯೋಧ್ಯೆಗೆ ಮರಳಿ ಬರಲು ಒಪ್ಪಲಿಲ್ಲ. ಆಗ ಭರತನು ಅವನ ಪಾದುಕೆಗಳನು ತಂದು ಅವನ ಹೆಸರಿನಲ್ಲಿ ರಾಜ್ಯಭಾರ ನಡೆಸಿದನು.



ರಾಮಚಂದ್ರನು ಸೀತೆ ಲಕ್ಷ್ಮಣರೊಂದಿಗೆ ಪಂಚವಟಿಯಲ್ಲಿ ಎಷ್ಟೋ ದಿವಸಗಳವರೆಗೆ ವಾಸಿಸಿದನು. ಆಗ ಅಲ್ಲಿಯ ರಕ್ಕಸರನ್ನೆಲ್ಲ ಆತನು ಕೊಂದ. ಒಮ್ಮೆ ಶೂರ್ಪನಖಿಯು ಪಂಚವಟಿಗೆ ಬಂದು ರಾಮಚಂದ್ರನನ್ನು ಮೋಹಿಸಿದಳು. ಲಕ್ಷ್ಮಣನು ಅಣ್ಣನ ಹೇಳಿಕೆಯಂತೆ ಅವಳನ್ನು ವಿರೂಪಗೊಳಿಸಿ ಓಡಿಸಿದ. ಆಕೆ ಲಂಕೆಗೆ ಹೋಗಿ ತನ್ನಣ್ಣ ರಾವಣನಿಗೆ ಸೇಡು ತೀರಿಸಿಕೊಳ್ಳಲು ಹೇಳಿದಳು.



ರಾವಣನು ಮಾರೀಚನಿಗೆ ಬಂಗಾರದ ಜಿಂಕೆ ರೂಪವನ್ನು ತಾಳಿ ಪಂಚವಟಿಗೆ ಹೋಗಲು ಹೇಳಿದನು, ಬಂಗಾರದ ಜಿಂಕೆಯನ್ನು ನೋಡಿ ಅದನ್ನು ತರಲು ಸೀತೆಯು ರಾಮನಿಗೆ ಪ್ರಾರ್ಥಿಸಿದಳು. ರಾಮನು ಜಿಂಕೆಯ ಬೆನ್ನುಹತ್ತಿ ಅಡವಿಯಲ್ಲಿ ದೂರಹೋದನು. ಹಾ ಸೀತೆ ಹಾ ಲಕ್ಷ್ಮಣ ಎಂಬ ಕೂಗು ಕೇಳಿಸಿತು. ಸೀತೆಯು ರಾಮನನ್ನು ಕರೆದು ತರಲು ಲಕ್ಷ್ಮಣನನ್ನು ಕಳಿಸಿದಳು. ಗುಡಿಸಲಲ್ಲಿ ಸೀತೆಯು ಒಬ್ಬಳೇ ಉಳಿದಳು



ಅದೇ ವೇಳೆಯಲ್ಲಿ ರಾವಣನು ಕಪಟ ಸನ್ಯಾಸಿಯ ವೇಷದಲ್ಲಿ ಅಲ್ಲಿಗೆ ಬಂದು ಸೀತೆಯನ್ನಪಹರಿಸಿದನು, ಜಟಾಯು ಅವನನ್ನು ತಡೆಗಟ್ಟಿತು. ಅವರಿಬ್ಬರ ನಡುವೆ ಭೀಕರ ಹೋರಾಟ ನಡೆಯಿತು. ಕೊನೆಗೆ ರಾವಣನು ಅದನ್ನು ಬಹಳಷ್ಟು ಗಾಯಗೊಳಿಸಿ ಓಡಿಹೋದನು



ರಾಮ-ಲಕ್ಷ್ಮಣರು ಮರಳಿ ಗುಡಿಸಲಿಗೆ ಬಂದಾಗ ಸೀತಾದೇವಿಯು ಕಾಣಿಸಲಿಲ್ಲ. ಹಾ, ಸೀತೆ! ಎಲ್ಲಿ ಹೋದಿ ಎಂದು ರಾಮಚಂದ್ರ ಕೂಗತೊಡಗಿದ ಪಕ್ಷಿರಾಜನು ಅವರಿಗೆ ಸೀತೆಯನ್ನು ರಾವಣನೊಯ್ದುದನ್ನು ಹೇಳಿ ಕೊನೆಯುಸಿರೆಳೆಯಿತು. ರಾಮ–ಲಕ್ಷ್ಮಣರು ಜಟಾಯುವಿನ ಅಂತ್ಯಕ್ರಿಯೆಗಳನ್ನು ಮಾಡಿದರು.



ರಾಮ-ಲಕ್ಷ್ಮಣರು ಸೀತೆಯನ್ನು ಹುಡುಕುತ್ತ ಹೊರಟರು. ಕಿಷ್ಕಿಂಧೆಯ ಬಳಿ ಹನುಮಂತನು ಅವರನ್ನು ಭೆಟ್ಟಿಯಾಗಿ ಸುಗ್ರೀವನಿಗೆ ಸಹಾಯ ಮಾಡಲು ಪ್ರಾರ್ಥಿಸಿದನು. ರಾಮಚಂದ್ರನು ವಾಲಿಯನ್ನು ಕೊಂದು ಸುಗ್ರೀವನನ್ನು ಪಟ್ಟದಲ್ಲಿ ಕೂಡಿಸಿದನು. ಹನುಮಂತನು ಲಂಕೆಗೆ ಹೋಗಿ ಲಂಕೆಯನ್ನು ಸುಟ್ಟು ಸೀತಾಮಾತೆಯ ಸುದ್ದಿಯನ್ನು ತಂದನು. ಎಲ್ಲರಿಗೂ ಈ ಸುದ್ದಿ ಹರ್ಷವನ್ನುಂಟುಮಾಡಿತು. ಆಗಲೇ ವಿಭೀಷಣನು ರಾಮನಲ್ಲಿದ ಬಂದು ಆಶ್ರಯ ಹೊಂದಿದನು.



ಕಪಿಗಳು ಕಲ್ಲುಗುಂಡುಗಳನ್ನು ಹೊತ್ತು ತಂದು ಲಂಕೆಗೆ ಸೇತುವೆಯನ್ನು ಕಟ್ಟಿದರು. ಎಲ್ಲ ಕಪಿಸೈನ್ಯವು ರಾಮ-ಲಕ್ಷ್ಮಣ, ಹನುಮಂತ ಸುಗ್ರೀವರು ಮೊದಲಾದವರ ಹಿಂದೆ ಲಂಕೆಗೆ ಸಾಗಿತು. ಕಪಿಗಳು ಲಂಕೆಯನ್ನು ಮುತ್ತಿ ರಾಕ್ಷಸರನ್ನು ಯುದ್ಧಕ್ಕೆ ಕರೆದರು.



ರಾಕ್ಷಸರಿಗೂ ಕಪಿಗಳಿಗೂ ಘನಘೋರ ಯುದ್ಧ ನಡೆಯಿತು. ರಾವಣನ ಕಡೆಯ ಮಹಾವೀರರಾದ ಇಂದ್ರಜಿತ, ಕುಂಭಕರ್ಣ ಮೊದಲಾದವರೆಲ್ಲ ರಾಮ-ಲಕ್ಷ್ಮಣರಿಂದ ಕೊಲ್ಲಲ್ಪಟ್ಟರು. ಸಂಜೀವಿನಿಯಿಂದ ಕಪಿ ವೀರರೆಲ್ಲ ಪುನಃ ಬದುಕಿ ಯುದ್ಧಕ್ಕೆ ನಡೆದರು.

ಕೊನೆಯಲ್ಲಿ ರಾವಣನು ರಾಮಚಂದ್ರನೊಡನೆ ಯುದ್ಧಕ್ಕೆ ಬಂದನು. ಭೀಕರ ಯುದ್ಧ ನಡೆಯಿತು. ಪ್ರಭು ರಾಮಚಂದ್ರನು ಅವನ ಹತ್ತು ಶಿರಗಳನ್ನು, ಇಪ್ಪತ್ತು ಕೈಗಳನ್ನೂ ಕಡಿದೊಗೆದನು; ಅವನ ಎದೆಗೆ ಹರಿತವಾದ ಬಾಣವನ್ನು ಬಿಟ್ಟನು. ರಾವಣನು ಬಾಣದ ಹೊಡೆತವನ್ನು ತಾಳದೆ ಕೆಳಗೆ ಬಿದ್ದು ಕೊನೆಯುಸಿರೆಳೆದನು. ರಾಮ-ರಾವಣರ ಯುದ್ಧ ನೋಡಲು ದೇವತೆಗಳು ಬಂದಿದ್ದರು.



ಸೀತಾಮಾತೆಯು ರಾಮಚಂದ್ರನಲ್ಲಿಗೆ ಬಂದಳು. ರಾವಣನ ಮನೆಯಲ್ಲಿದ್ದ ಸೀತೆಯು ಅಗ್ನಿ ಪ್ರವೇಶಮಾಡಲಿ ಎಂದನು ರಾಮ. ಅಗ್ನಿಕುಂಡವು ಏರ್ಪಟ್ಟಿತು. ಅದರೊಳಗಿಂದ ನಿಜವಾದ ಸೀತೆಯು ಹೊರಗೆ ಬಂದಳು. ಅನಂತರ ರಾಮಚಂದ್ರನು ವಿಭೀಷಣನನ್ನು ಲಂಕೆಯ ಸಿಂಹಾಸನದಲ್ಲಿ ಕೂಡಿಸಿದನು. ವಿಭೀಷಣನು ಅವರನ್ನು ಪೂಜಿಸಿ ಬೀಳ್ಕೊಟ್ಟನು.



ಪುಷ್ಪಕ ವಿಮಾನದಲ್ಲಿ ಸೀತಾ–ರಾಮ ಲಕ್ಷ್ಮಣರು ಅಯೋಧ್ಯೆಗೆ ಹೊರಟರು. ಅವರನ್ನು ಹನುಮಂತನೇ ಮೊದಲಾದ ಕಪಿ ವೀರರೆಲ್ಲ ಅನುಸರಿಸಿದರು. ನಂದಿಗ್ರಾಮದಲ್ಲಿದ್ದ ಭರತನು ಸೀತಾರಾಮ-ಲಕ್ಷ್ಮಣರನ್ನು ಸ್ವಾಗತಿಸಿ ಅಯೋಧ್ಯೆಗೆ ಕರೆತಂದನು. ಆಗ ಅಯೋಧ್ಯೆಯ ನಾಗರಿಕರು ರಾಮಸೀತೆಯರನ್ನು ಸ್ವಾಗತಿಸಲು ನಗರವನ್ನು ಸಂಭ್ರಮದಿಂದ ಶಿಂಗರಿಸಿದ್ದರು.



ಋಷಿಮುನಿಗಳು, ಮಂತ್ರಿಗಳು ಪ್ರಜೆಗಳು ಎಲ್ಲರೂ ಶ್ರೀರಾಮಚಂದ್ರನನ್ನು ಸಿಂಹಾಸನವೇರಿ ರಾಜ್ಯವನ್ನು ಪಾಲಿಸಲು ಕೇಳಿಕೊಂಡರು. ಪ್ರಭು ರಾಮಚಂದ್ರನ ಪಟ್ಟಾಭಿಷೇಕವು ತುಂಬ ವಿಜೃಂಭಣೆಯಿಂದ ಜರುಗಿತು. ಪ್ರಜೆಗಳು ಋಷಿಗಳು ದೇವತೆಗಳು ಎಲ್ಲರೂ ಶ್ರೀರಾಮ ಪಟ್ಟಾಭಿಷೇಕವನ್ನು ನೋಡಿ ಆನಂದಿಸಿದರು.

ಶ್ರೀರಾಮಚಂದ್ರನು ಪ್ರಜೆಗಳನ್ನು ಮಕ್ಕಳಂತೆ ಪಾಲಿಸುತ್ತಿದ್ದನು. ಹೀಗಿರುವಾಗ ಅಗಸನೊಬ್ಬ ಸೀತಾಮಾತೆಯ ಬಗೆಗೆ ಸಲ್ಲದ ಮಾತನಾಡಿದ. ರಾಮಚಂದ್ರನು ಸೀತೆಯನ್ನು ಕಾಡಿಗಟ್ಟಿದ. ಅಲ್ಲಿ ಸೀತೆಯು ವಾಲ್ಮೀಕಿಯಾಶ್ರಮದಲ್ಲಿ ಕುಶ-ಲವರನ್ನು ಹೆತ್ತಳು. ಶ್ರೀರಾಮಚಂದ್ರನು ಅಶ್ವಮೇಧಯಜ್ಞವನ್ನು ಮಾಡಿದನು. ಆಗ ಲವಕುಶರು ಅಯೋಧ್ಯೆಗೆ ಬಂದು ವಾಲ್ಮೀಕಿ ಬರೆದ ರಾಮಾಯಣ ಮಹಾಕಾವ್ಯವನ್ನು ಸುಶ್ರಾವ್ಯವಾಗಿ ಹಾಡಿದರು. ವಾಲ್ಮೀಕಿ ಮುನಿಗಳು ಸೀತೆಯನ್ನು ಕರೆತಂದು ರಾಮಚಂದ್ರನಿಗೆ ಸ್ವೀಕರಿಸಲು ಹೇಳಿದರು. ಸೀತಾಮಾತೆಯು ತನ್ನ ಪವಿತ್ರಚರಿತ್ರೆಯನ್ನು ಎಲ್ಲರೂ ತಿಳಿಯಲೆಂದು, ಭೂಮಿತಾಯಿಯ ಗರ್ಭವನ್ನು ಸೇರಿದಳು.

ರಾಮಚಂದ್ರನು ಮುಂದೆ ಎಷ್ಟೋ ದಿವಸ ರಾಜ್ಯವಾಳಿ ಲವ-ಕುಶರಿಗೆ ಪಟ್ಟಗಟ್ಟಿದನು. ಅನಂತರ ಸರಯೂ ನದಿಯನ್ನೇ ಸೇತುವೆಯನ್ನಾಗಿ ಮಾಡಿ ತನ್ನ ಹಿಂದೆ ಬಂದವರೊಂದಿಗೆ ವೈಕುಂಠಕ್ಕೆ ಪ್ರಯಾಣಮಾಡಿದನು.

ಶ್ರೀರಸ್ತು



# ನಿಮ್ಮ ಮನೆಯಲ್ಲಿ ಆಗಾಗ ನೀವೇ ಡಾಕ್ಟರ್ ಆಗುವ ಪ್ರಸಂಗ ಬರುತ್ತದೆಯೇ?

## ಪ್ರಭಾವಶಾಲಿ ಹಾಗೂ ವಿಶ್ವಾಸಾರ್ಹ ಅನಾಸಿನ್ ನಿಮ್ಮ ಔಷಧಗಳ ಪೆಟ್ಟಿಗೆಯಲ್ಲಿ ಇಟ್ಟುಕೊಳ್ಳಲು ಯೋಗ್ಯವಾಗಿದೆ

**ಒಂದೊಂದು ದಿನ ಬೆಳಗಿನಿಂದಲೇ ತೊಂದರೆಗಳು ಎದುರು ಬರುತ್ತವೆಯಲ್ಲವೇ? ಏಳುವಾಗಲೇ ತಡವಾಗಿರುತ್ತದೆ; ಅಡಿಗೆ ಮನೆಯಲ್ಲಿ ಏನಾದರೊಂದು ಜೀನಸು ಮುಗಿದಿರುವುದು ಕಂಡುಬರುತ್ತದೆ. ಇಷ್ಟೇ ಅಲ್ಲ! ಮಗನಿಗೆ ನೆಗಡಿ; ಫ್ಲೂ ಆಗಿ ಬಿಡುತ್ತದೋ ಎಂದು ಅವನಿಗೆ ಅನಿಸುತ್ತದೆ.**

ಅವನಿಗೆ ಯಾವುದಾದರೂ ಬಿಸಿ ಪೇಯ ಮತ್ತು ಅನಾಸಿನ್ ಕೊಟ್ಟು, ಬಟ್ಟೆ ಹೊದ್ದಿಸಿ, ಹಾಸಿಗೆಯ ಮೇಲೆ ಮಲಗಿಸಿರಿ. ಶೀಘ್ರ ಪರಿಣಾಮಕಾರಿ ಅನಾಸಿನ್ ನೆಗಡಿಯ ಮತ್ತು ಫ್ಲೂವಿನ ಸಿಡಿತ ಮತ್ತು ನೋವುಗಳನ್ನು ಉಪಶಮನಗೊಳಿಸುತ್ತದೆ. ಡಾಕ್ಟರರ ವಿಶ್ವಾಸಾರ್ಹ ಔಷಧದಂತೆ, ಅನಾಸಿನ್ ಔಷಧಗಳ ಸಂಯೋಜನೆಯಾಗಿದೆ.



**ನಿಮ್ಮ ಯಜಮಾನರು ಅವರ ಮೇಲಧಿಕಾರಿಯೊಡನೆ ಚರ್ಚೆ ಮಾಡಿ, ಉದ್ವೇಗದಿಂದ ತಲೆನೋವು ಪಡೆದು ಕಷ್ಟಪಡುತ್ತಿದ್ದಾರೆ.**

ಅವರಿಗೆ ತಂಪಾದ, ಉಲ್ಲಾಸಕರ ಪೇಯವನ್ನು ಮತ್ತು ಅನಾಸಿನ್‌ನ್ನು ಕೊಟ್ಟು ಶಾಂತಗೊಳಿಸಿರಿ. ಅನಾಸಿನ್ ಅವರಿಗೆ ಶೀಘ್ರ ಉಪಶಮನ ನೀಡುತ್ತದೆ. ಏಕೆಂದರೆ, ಅದರಲ್ಲಿ ಜಗತ್ತಿನಲ್ಲೆಲ್ಲ ಡಾಕ್ಟರರು ಹೆಚ್ಚಾಗಿ ಶಿಫಾರಸು ಮಾಡುವ ನೋವು ನಿವಾರಕ ಘಟಕವು ಅಧಿಕ ಪ್ರಮಾಣದಲ್ಲಿದೆ.



**ಮಗಳು ಶಾಲೆಯಿಂದ ಬಂದಾಗಲೇ ಖಿನ್ನಳಾಗಿದ್ದಳು— ಬೆನ್ನು ನೋವಿನಿಂದ ಬಹಳ ಕಷ್ಟಪಡುತ್ತಿದ್ದಳು**

ಹಾಟ್ ವಾಟರ್ ಬ್ಯಾಗ್ ಮತ್ತು ಅನಾಸಿನ್‌ನ ಮೂಲಕ ಅವಳ ನೋವು ಉಪಶಮನವಾಗುವಂತೆ ಮಾಡಿರಿ. ಶೀಘ್ರವಾಗಿ ಅವಳು ಆರಾಮ ಪಡೆದು ಗೆಲುವಾಗಿರುತ್ತಾಳೆ. 'ಕೆಲವು ನಿರ್ದಿಷ್ಟ ದಿನಗಳಲ್ಲಿ' ಉಂಟಾಗುವ ಕಷ್ಟವನ್ನು ಅನಾಸಿನ್ ಕಡಿಮೆ ಮಾಡುತ್ತದೆ. ಏಕೆಂದರೆ ಅದು ನೋವನ್ನು ನಿವಾರಿಸುವುದು ಮಾತ್ರವಲ್ಲ. ಖಿನ್ನತೆಯನ್ನೂ ಬೇಗನೆ ದೂರಗೊಳಿಸುತ್ತದೆ.



**ನಿಮಗೆ 'ಪಾರ್ಟಿ'ಗಾಗಿ ತುಂಬಾ ಕೆಲಸ ಮಾಡಬೇಕಾಗಿತ್ತು - ಅದೂ ಕೂಡ ಅತಿ ಕಡಿಮೆ ಸಮಯದಲ್ಲಿ. ನೀವು ತುಂಬಾ ದಣಿದಿದ್ದೀರಿ—ತಲೆನೋವಿನಿಂದ ಕಷ್ಟಪಡುತ್ತಿದ್ದೀರಿ, ಆದರೆ ಅತಿಥಿಗಳು ಬರುವ ಸಮಯವಾಯಿತು...**

ತಲೆನೋವು ಇದ್ದರೆ ನಿಮ್ಮ ಸಂಭ್ರಮವೆಲ್ಲ ಅಳಿದಂತೆಯೆ ಸರಿ. ಶೀಘ್ರ ಉಪಶಮನ ಪಡೆಯಲು ಅನಾಸಿನ್ ತೆಗೆದುಕೊಳ್ಳಿರಿ. ಆಮೇಲೆ ನೀವು ಮೊದಲಿನಂತೆ ಉಲ್ಲಸಿತರಾಗುವಿರಿ. ಒಂದು ಮಾತನ್ನು ನೆನಪಿನಲ್ಲಿಡಿರಿ. ಡಾಕ್ಟರರನ್ನು ಕರೆಯಬೇಕಾಗುವಷ್ಟು ದೊಡ್ಡ ಪ್ರಸಂಗವಾಗಿರದಿದ್ದರೆ, ಪ್ರಭಾವಶಾಲಿ ಹಾಗೂ ವಿಶ್ವಾಸಾರ್ಹ ಅನಾಸಿನ್‌ನ ಸಹಾಯ ಪಡೆಯಿರಿ. ಅದು ನಿಮ್ಮ ಉತ್ತಮ ಸಂಗಾತಿ.



**ಪ್ರಭಾವಶಾಲಿ ಹಾಗೂ ವಿಶ್ವಾಸಾರ್ಹವಾದ**

# ಅನಾಸಿನ್

**ಭಾರತದ ಅತ್ಯಂತ ಜನಪ್ರಿಯ ವೇದನಾಹಾರಿ**



Regd. User of TM : Geoffrey Manners & Co. Ltd.,


ಸೀಮೆ ಎಣ್ಣೆ ಇಲ್ಲ
ಸಕ್ಕರೆ ಇಲ್ಲ
ಸಿಮೆಂಟ್ ಇಲ್ಲ
'ನನ್ನ ಕೈಲಾಡೋ ಗೊಂಬೆ ನೀನಯ್ಯಾ...!'
'ಎಲ್ಲಾ ಮಾಯವೋ ಪ್ರಭುವೇ..
ಎಲ್ಲಾ ಮಾಯವೋ...!'






'ನಿನ್ನಿಂದಲೇ ಬೆಳೆದಿಹೆ ನಾ....
ದುಡಿವೆವು ನಿನಗಾಗಿ.....
ಮಡಿವೆವು ನಿನಗಾಗಿ......!'






ಸಿನಿಮಾ

# ಉದ್ಘಾಟಕ

• ಕೆ.ಎಂ.ಮಹೇಶ್.




'ಈ ರಾಮಾಚಾರೀನ್ ಎದುರಿಸೊ ಗಂಡು ಇನ್ನೂ ಹುಟ್ಟಿಲ್ಲ.....!'
'ನಾನು ಬಳ್ಳಿಯ ಮಿಂಚು.......!'

# ಅನುಕಂಪ ಅನುರಾಗ

**ಮೋಹನನು ತನ್ನ ಆಫೀಸಿನಲ್ಲಿಯ ಸ್ಟೇನೊಗ್ರಾಫರ ಲೂಸಿಯನ್ನು ಪ್ರೀತಿಸಿದ. ಪ್ರೀತಿಯು ಮದುವೆಯಲ್ಲಿ ಕೊನೆಗೊಂಡಿತು. ಮೋಹನ ಮತ್ತು ಲೂಸಿ ಒಬ್ಬರಿಂದೊಬ್ಬರು ದೂರವಾದರು. ಆದರೆ ಅನುಕಂಪ ಅನುರಾಗಗಳು ಬತ್ತಲಿಲ್ಲ.**

'ಜೀವಿ'

"ಮದುವೆಯಾಯ್ತು, ಆದರೆ 'ಪ್ರೀತಿ' ಮುಕ್ತಾಯಗೊಂಡಿತ್ತು" ಎಂದು ಒಬ್ಬ ಉರ್ದುಕವಿ ಹೇಳಿದ್ದಾನೆ. ಕೆಲ ಸಲ ಇದು ಸತ್ಯವಾಗಿಯೂ ಪರಿಣಮಿಸಬಹುದು. ನನ್ನ ಮಿತ್ರ ಮೋಹನನ ವಿಷಯದಲ್ಲಿ ಮಾತ್ರ ಈ ಮಾತು ಸತ್ಯವಾಯ್ತು.

ಮೋಹನ ಮುಂಬೈಗೆ ಬಂದು ಒಂದು ವರ್ಷ ಕಳೆದ ಮೇಲೆ ನಾನು ಬಂದೆ. ಈ ಕಾರಣದಿಂದ ಮುಂಬೈ ಊರಿನ ಪರಿಚಯವನ್ನು ನನಗೆ ಮಾಡಿಕೊಟ್ಟವನೇ ಮೋಹನ. ಇಲ್ಲಿಯ ಹ್ಯಾಂಗಿಂಗ್ ಗಾರ್ಡನ್ಸ, ಮಲಬಾರಹಿಲ್, ವಿಕ್ಟೋರಿಯಾ ಗಾರ್ಡನ್, ಚೌಪಾಟಿ ಮುಂತಾದ ಸ್ಥಳಗಳಲ್ಲಿ ಓಡಾಡಿಸಿದ್ದ.ಅವನೊಡನೆ ಅನೇಕ ಅವಿಸ್ಮರಣೀಯ ನಿಮಿಷಗಳನ್ನು ಕಳೆದಿರುವೆ. ನಾವು ಎಷ್ಟೋ ಸಲ ನಮ್ಮ ಸಮಸ್ಯೆಗಳ ಬಗ್ಗೆ ಚರ್ಚಿಸಿದ್ದೇವೆ, ಸಲಹೆ ನೀಡಿದ್ದೇವೆ, ಪಡೆದಿದ್ದೇವೆ.

ಒಮ್ಮೆ ಮೋಹನನ ಆಫೀಸಿಗೆ ನಾನು ಹೋಗಿದ್ದೆ. ಅವನ ವಿಶೇಷ ಕ್ಯಾಬಿನ್ ನೋಡಿ ನನಗೆ ಬಹಳ ಅಭಿಮಾನವೆನಿಸಿತು. ಅವನ 'ರುಬಾಬು' ಅವನ ಆಫೀಸಿನಲ್ಲಿಯೇ ನೋಡಬೇಕು. ಒಳ್ಳೆ ಕಂಪನಿ, ದೊಡ್ಡ ಹುದ್ದೆ, ಅವನ ಸ್ಟೆನೋಗ್ರಾಫರ್ ಬಂದಳು; ಅವಳ ಪರಿಚಯ ಮಾಡಿಕೊಟ್ಟ. 'ಮಿಸ್ ಲೂಸಿ' ಸ್ಫುರದ್ರೂಪಿ ತರುಣಿ. ಅವಳನ್ನು ನೋಡಿ ಚಿತ್ತಚಂಚಲವಾಗದ ಗಂಡು ಇಲ್ಲ ಎಂದರೂ ನಡೆದೀತು. ಅವಳು ಕನ್ನಡದಲ್ಲೇ ಮಾತಾಡಿದಳು. ಬಹಳ ವರ್ಷ ಕನ್ನಡದ ಸಂಪರ್ಕ ತಪ್ಪಿದ್ದರಿಂದಲೋ ಏನೋ ಹೆಚ್ಚು ಇಂಗ್ಲಿಷ್‌ಪದಗಳನ್ನೇ ಉಪಯೋಗಿಸಿದಳು. ಒಂದು ಪತ್ರವನ್ನು ಲೂಸಿಗೆ ಬರೆಯಲು ಹೇಳಿದ. ಅವಳು ಶೀಘ್ರಲಿಪಿಯಲ್ಲಿ ಬರೆದುಕೊಂಡಳು. ಟೈಪ್ ಮಾಡಿಕೊಂಡು ಬರಲು ತೆರಳಿದಳು.

ಮೋಹನನ ಮದುವೆ ಇನ್ನೂ ಆಗಿರಲಿಲ್ಲ. ನಾನೆಂದೆ "ಮೋಹನ, ನೀನು ಇನ್ನೂ ಬ್ರಹ್ಮಚಾರಿಯಾಗಿರುವುದು ನನಗೇನೂ ಸರಿ ಎಂದು ತೋರುತ್ತಾ ಇಲ್ಲ. ಮೇನಕೆಯಂತಹ ಲೂಸಿ ಇಲ್ಲಿರುವಾಗ ನೀನು..." ಎಂದಾಗ "Oh! she - is sweet girl" ಎಂದು ನಕ್ಕ ಮೋಹನ. "ನನಗೇನೋ ಅಷ್ಟೊಂದು ಸರಿ ಕಾಣುವುದಿಲ್ಲ" ಎಂದು ನನ್ನ ಅಭಿಪ್ರಾಯ ಸೂಚಿಸಿದೆ. "ನೀನು ಇವಳನ್ನು ಮದುವೆಯಾದರೆ ನನ್ನ ಅಭ್ಯಂತರವೇನೂ ಇಲ್ಲ. ಆದರೆ ನೀನು ಬೆಳೆದು ಬಂದ ಪರಿಸರ ಬೇರೆ. 'ಸೆಕ್ಸ್' ಬೇರೆ 'ಮದುವೆ' ಬೇರೆ. ಒಂದು ಬೆಂಕಿಯಾಗಿದ್ದರೆ ಇನ್ನೊಂದು ದೀಪ" ಎಂದೆ. ಮೋಹನ ನಗುತ್ತ "ನಿನ್ನ Sermon ಸಾಕುಮಾಡೋ! "Bourgeois ideals" ಎಂದು ನನ್ನ ಮಾತು ನಿಲ್ಲಿಸಿದ.

ಆ ಮೇಲೆ ಮೋಹನನನ್ನು ಕಂಡದ್ದು ಎರಡು ವರ್ಷಗಳ ಮೇಲೆ. ಅಷ್ಟರಲ್ಲಿ ಅವನ ಮದುವೆ ಆಗಿ ಹೋಗಿತ್ತು. ಲೂಸಿಯೊಂದಿಗೆ! 'ರಜಿಸ್ಟರ್ಡ್ ಮ್ಯಾರೇಜ್' ಅದು. ನಮಗಾರಿಗೂ ಪತ್ರಕೂಡ ಹಚ್ಚಿರಲಿಲ್ಲ. ಈಗ ಅವನಿಗೆ ಒಂದು ಮನೆ ಬೇಕಾಗಿತ್ತೆಂದು ನನ್ನ ನೆನಪಾಗಿರಬೇಕು. "ನಿಮ್ಮ ಬಿಲ್ಡಿಂಗ್‌ನಲ್ಲಿ 'ಲೀವ್ ಅಂಡ್ ಲೈಸನ್ಸ್' ಮೇಲೆ ಮನೆ ದೊರೆಯುವುದಾದರೆ ಒಂದು ವರ್ಷದ ಮಟ್ಟಿಗೆ ಬೇಕಾಗಿದೆ" ಎಂದನು. ಕರ್ಮ-ಧರ್ಮ ಸಂಯೋಗದಿಂದ ನಮ್ಮ ಬಾಜೂ ಮನೆಯು ಖಾಲಿ ಇತ್ತು. ಆದರೆ ಬಾಡಿಗೆ ನಾಲ್ಕುನೂರು, ಡಿಪಾಜಿಟ್ ನಾಲ್ಕು ಸಾವಿರವಿತ್ತು. ಮೋಹನನಿಗೆ ಹಣದ್ದು ಸಮಸ್ಯೆ ಇರಲಿಲ್ಲ. ನಮ್ಮ ಮನೆಯವರ ಕೋಪ-ತಾಪ ಸಹಿಸಿ ಮಿತ್ರ ಮೋಹನನಿಗೆ ಮನೆ ಕೊಡಿಸಿದ್ದಾಯಿತು.

ಮದುವೆಯಾದ ಕೆಲವೇ ದಿನಗಳಲ್ಲಿ ಲೂಸಿ ಅಸುಖಿಯಾಗಿದ್ದಾಳೆಂಬುದನ್ನು ತಿಳಿಯಲು ನನಗೆ ಬಹಳ ಸಮಯ ತಾಗಲಿಲ್ಲ. ಅವಳ ಜೀವನದ ರೀತಿ ಈಗ ಬದಲಾಗಿತ್ತು. ಮೋಹನ ಮೊದಲನೆಯ ಕಾರ್ಯವೆಂದು ಅವಳನ್ನು ಕೆಲಸದಿಂದ ಬಿಡಿಸಿದ್ದ. ಇಡೀ ದಿನ ಮನೆಯಲ್ಲಿ ಕುಳಿತುಕೊಂಡಿರುವುದು ಲೂಸಿಗೆ ಬೇಜಾರು. ತಾನು ಇಷ್ಟು ದೊಡ್ಡ ಆಫೀಸರ್-ತನ್ನ ಹೆಂಡತಿ ನೌಕರಿ ಮಾಡಿದರೆ ಹೇಗೆ ಎಂಬುದು ಅವನ ವಾದ. ಆದರೆ ಆಂತರಿಕವಾಗಿ ಹೆಂಡತಿ ಇನ್ನೊಬ್ಬರ ಕೆಳಗೆ ಕೆಲಸ ಮಾಡುವುದು ಮೋಹನನಿಗೆ ಸರಿ ಬಂದಿರಲಿಕ್ಕಿಲ್ಲ. ಕೈ ಕೆಳಗೆ ಕೆಲಸ ಮಾಡುವ ಮಹಿಳೆಯರನ್ನು ಕೆಲ ಆಫೀಸರರು ಹೇಗೆ ನಡೆಸಿಕೊಳ್ಳುತ್ತಾರೆ ಎಂಬುದು ಮೋಹನನಿಗೆ ಚೆನ್ನಾಗಿ ಗೊತ್ತಿತ್ತು. ಎರಡು ವರ್ಷ ಲೂಸಿಯ ಸಂಬಂಧದ ಸುಖ ಪಡೆದಿದ್ದ. ಮದುವೆಯಾಗದೆ ಕೂಡ ಅವಳ ಪ್ರೇಮ ಪಡೆದಿರಬಹುದಾಗಿತ್ತು. ಆದರೆ ಒಂದು ವಿಲಕ್ಷಣ ನಿಮಿಷದಲ್ಲಿ ಅವಳಿಗೆ ವಚನ ಕೊಟ್ಟಿದ್ದ. ಅದನ್ನು ಪೂರೈಸಲು ಎಲ್ಲ ಅಡೆತಡೆ ಎದುರಿಸಿ ಮದುವೆಯಾಗಿ ತೋರಿಸಿದ್ದ.

ಲೂಸಿಯ ರೂಪ ಯೌವನಗಳ ಬಗ್ಗೆ ಮೋಹನನಿಗೆ ಎಷ್ಟೊಂದು ಮೋಹವಿತ್ತೋ ಅಷ್ಟೇ ಅವಳ ಸಂಬಂಧಿಕರ ಬಗ್ಗೆ, ಅವಳ ಮಿತ್ರರ ಬಗ್ಗೆ ಅವನಿಗೆ ಸಂಶಯವಿತ್ತು. ಹೀಗಾಗಿ ಅವಳಿಗೆ ಅನೇಕ ನಿರ್ಬಂಧಗಳನ್ನು ಹಾಕಿದ. ಅವಳು ಪಂಜರದಲ್ಲಿಯ ಪಾರಿವಾಳದಂತೆ ಮಿಡುಕತೊಡಗಿದಳು. ಆಗಾಗ ಮೋಹನ ನರಸಿಂಹಾವತಾರ ತಾಳುತ್ತಿದ್ದ. ಕೆಲ ಸಲ ಇವರ ಮನೆಯಲ್ಲಿಯ ಜಗಳ ಒದರಾಟ, ಚೀರಾಟಗಳು ಸುತ್ತಲಿನವರ ಶಾಂತಿಗೆ ಭಂಗ ತರುತ್ತಿದ್ದವು. ಮದುವೆಯಾಗಿ ಇನ್ನೂ ಆರು ತಿಂಗಳು ಸಂದಿರಲಿಲ್ಲ. ಒಂದುದಿನ ರಾತ್ರಿ ಮೋಹನ ಮನೆಗೆ ಬಂದಾಗ ಲೂಸಿಯ ಮಿತ್ರನೊಬ್ಬ ಅವಳಿಗೆ ಮಾದಕ ಪೇಯವನ್ನು ಕಾಣಿಕೆಯಾಗಿ ಕೊಟ್ಟು ಹೋಗಿದ್ದ. ಅವಳು ನಶೆಯಲ್ಲಿದ್ದಳು. ಹಾಗೆ ನೋಡಿದರೆ ಮೋಹನ ಕೂಡ ಮಾದಕ ಪೇಯ ಸೇವಿಸುತ್ತಿದ್ದ. ತನ್ನ ಹೆಂಡತಿಗೂ ತಂದು ಕೊಡುತ್ತಿದ್ದ. ಆದರೆ ಅಂದು ಅವಳ ಚಾರಿತ್ರ್ಯದ ಬಗ್ಗೆ ಸಂಶಯಿತನಾಗಿ ಕೂಗಾಡಿದ. ಅವಳೂ ಕೂಗಾಡಿದಳು. ಮೈಮೇಲೆ ಸ್ಮೃತಿ ಉಳಿಯದಂತಾಗಿ ತನ್ನ ಸೊಂಟದ ಬೆಲ್ಟ್ ತೆಗೆದುಕೊಂಡು ಅವಳನ್ನು ಹೊಡೆಯಲುದ್ಯುಕ್ತನಾದ. ಅವಳು ಚೀರತೊಡಗಿದಳು. ನಾನು ಓಡಿ ಹೋಗಿ ಅವನನ್ನು ನಿಲ್ಲಿಸಿದೆ. ಆದರೆ ಲೂಸಿಯ ಮೈಯೆಲ್ಲ ಬಾಸುಂಡೆ ಮೂಡಿದ್ದವು. ಅವಳು ಒಳಗಿನ ಕೋಣೆಗೆ ಹೋದಳು. ತನ್ನ ಚಿಕ್ಕ ಬ್ಯಾಗ್‌ನಲ್ಲಿ ಕೆಲ ಬಟ್ಟೆ ಬರೆ ಹಾಕಿಕೊಂಡು ಹೊರ ಬಾಗಿಲನ್ನು ಧಡಾರನೆ ಹಾಕಿಕೊಂಡು ಹೊರಟುಹೋದಳು. ಅವಳನ್ನು ತಡೆಯುವ ಶಕ್ತಿ ಯಾರಿಗೂ ಇರಲಿಲ್ಲ.

* * *

ಎರಡು ದಿನವಾದರೂ ಲೂಸಿಯ ಪತ್ತೆ ಇಲ್ಲ. ಮೋಹನ ಪೋಲೀಸ್ ಕಂಪ್ಲೇಂಟ್ ಕೊಟ್ಟ. ಅವಳ ಸಂಬಂಧಿಕರ ಮನೆ ಹುಡುಕಾಡಿ ಬಂದ. ಅವಳು ದೂರದ ಸಂಬಂಧಿಕನೊಬ್ಬನಲ್ಲಿ ಇದ್ದಳು. ಮನೆಗೆ ಬರಲು ಬಲವಂತಪಡಿಸಿದ. ಅವಳು ಒಪ್ಪಲಿಲ್ಲ. ಬೈದು-ಹೊಡೆದು ಅಲ್ಲಿ ಕೂಡ ದೊಡ್ಡ ದೃಶ್ಯವನ್ನೇ ಮಾಡಿದ.

ಲೂಸಿಯನ್ನು ಅವನು ಎಷ್ಟೊಂದು ಪ್ರೀತಿಸಿದ್ದ; ಇಂದು ಅವಳನ್ನು ದ್ವೇಷಿಸುತ್ತಿದ್ದಾನೆ. ಕಳೆದ ಪ್ರೀತಿಯನ್ನು ಮರಳಿ ಪಡೆಯಲು ಒದ್ದಾಡುತ್ತಿದ್ದಾನೆ.ತಾನೇ ಎಲ್ಲಿಯಾದರೂ ತಪ್ಪು ತಿಳಿದುಕೊಂಡು ವಿನಾಕಾರಣ ಹೊಡೆದನೇ ಎಂದು ಮರುಗುತ್ತಿದ್ದಾನೆ ಕೂಡ. ಇವನು ಆಗಾಗ ಅವಳು ಇದ್ದಲ್ಲಿ ಹೋಗಿ ಒದರಾಡಿ ಬರುವುದರಿಂದ ಬೇಸತ್ತು, ಅವಳ ಸಂಬಂಧಿಕರು "ಜ್ಯೂಡಿಶಿಯಲ್ ಸಪರೇಷನ್"ಗಾಗಿ ವಕೀಲರಿಂದ ನೋಟೀಸು ಕಳಿಸಿದರು. ಆ ನೋಟೀಸು ತೆಗೆದುಕೊಂಡು ಮೋಹನ ನನ್ನ ಬಳಿ ಬಂದ.

'ಕ್ರೂರ' ವರ್ತನೆಯನ್ನು ತೋರಿದ ಕಾರಣ ಮತ್ತು

ಇನ್ನೊಬ್ಬ ಸ್ತ್ರೀಯೊಂದಿಗೆ ಸಂಬಂಧವಿರುವ ಕಾರಣದಿಂದ ಇಂಥ ಗಂಡನೊಂದಿಗೆ ಇರಲು ಸಾಧ್ಯವಿಲ್ಲ—ಈ ಕಾರಣ ಕಾಯದೇಶೀರ ಬೇರೆಬೇರೆಯಾಗಿ ಇಬ್ಬರೂ ಇರುವಂತೆ ನ್ಯಾಯಾಲಯಕ್ಕೆ ಅವಳು ಕೇಳಿಕೊಳ್ಳಲಿದ್ದಾಳೆ—ಎಂಬ ವಿಷಯವನ್ನೊಳಗೊಂಡ ವಕೀಲರ ನೋಟೀಸು ಇವನೆಡೆ ಬಂದಿತ್ತು. ಇದರಲ್ಲಿ ಒಂದು ಸುಳ್ಳು ಸಂಗತಿ ಇತ್ತು. ಇನ್ನೊಬ್ಬ ಸ್ತ್ರೀಯ ಸಂಬಂಧ ಇವನಿಗೆ ಇರಲಿಲ್ಲ. ಈ ಬಗ್ಗೆ ಮೋಹನ ಆಶ್ಚರ್ಯಪಟ್ಟು ನನ್ನನ್ನು ಕೇಳಿದ. "ಹಾಗೆ ವಕೀಲರು ಬರೆಯಬೇಕಾಗುತ್ತದೆ. ಇಲ್ಲದಿದ್ದರೆ 'ಜ್ಯುಡಿಶಿಯಲ್ ಸೆಪರೇಶನ್' ಸುಲಭವಾಗಿ ದೊರೆಯುವುದಿಲ್ಲ' ಎಂದು ಹೇಳಿದೆ. ಆ ನೋಟೀಸನ್ನು ಕಳಿಸುವ ವಕೀಲರ ಹೆಸರು ಓದಿದೆ. ಕೆ. ಆರ್. ಮೂರ್ತಿ ಎಂದಿತ್ತು.

"ಈ ವಕೀಲರನ್ನೊಮ್ಮೆ ಭೆಟ್ಟಿಯಾಗಬೇಕು" ಎಂದ ಮೋಹನ. ನನ್ನ ಪರಮ ಸ್ನೇಹಿತರೊಬ್ಬರು 'ರಾವ್' ಎಂಬವರ ಬೀಗರು ಮೂರ್ತಿ ಎಂಬವರಿದ್ದಾರೆ. ಅವರೂ '[illegible]'. ಅವರ ಮುಖಾಂತರ ಇವರನ್ನು ಭೆಟ್ಟಿಯಾಗೋಣ" ಎಂದೆ.

ರಾವ್ ಅವರ [illegible] ಮೂರ್ತಿ[illegible]ರಾಗಿದ್ದರು. ಅವರ ಜೊತೆಗೆ ಮೋಹನನನ್ನು ಕರೆ[illegible] ಒಂದು ರವಿವಾರ ಮುಂಜಾನೆ ಹೋದೆ. ನಾನು ಲೂಸಿ ಕಳಿಸಿದ ನೋಟೀಸಿನ ಬಗ್ಗೆ ಹೇಳಿದಾಗ ಮೂರ್ತಿಯವರು ಹೇಳಿದರು. "ಲೂಸಿ ಒಬ್ಬ ಸಂಬಂಧಿಕರೊಡನೆ ನನ್ನೆಡೆ ಬಂದಿದ್ದಳು. ಅವಳ ದೂರದ ಸಂಬಂಧಿಕ ಲೂಯಿಸ್ ಎಂಬವರೊಬ್ಬರು ಬಿಲ್ಡಿಂಗ್ ಕಾಂಟ್ರ್ಯಾಕ್ಟರ್ ಆಗಿದ್ದಾರೆ. ನಮ್ಮ ಕೋ—ಆಪರೇಟಿವ್ ಹೌಸಿಂಗ್ ಸೊಸೈಟಿಯ ಬಿಲ್ಡಿಂಗ್‌ನ ಕಾಂಟ್ರ್ಯಾಕ್ಟ್ ಅವರೇ ಹಿಡಿದಿದ್ದರು. ನಮ್ಮ ಮನೆಯಲ್ಲಿ ಕೆಲವೊಂದು ಬದಲಾವಣೆಗಳನ್ನು ಮಾಡಬೇಕಾಗಿತ್ತು. ಆಗ ಲೂಯಿಸ್ ಬಹಳೇ ಸಹಕಾರಿಯಾಗಿದ್ದರು. ಅವರ ಪರಿಚಯ ಚೆನ್ನಾಗಿದೆ. ಈ ಕಾರಣದಿಂದ ತನ್ನ ಸಂಬಂಧಿಕ ಲೂಸಿಯ ಕೇಸ ನನಗೆ ಒಪ್ಪಿಸಿದ್ದಾರೆ!"

ಈ ಮದುವೆ ಆದ ರೀತಿ—ಮೋಹನ ಹಾಗೂ ಲೂಸಿ ಇವರ ಸಂಬಂಧದ ಬಗ್ಗೆ ವಿವರವಾಗಿ ನಾನು ಹೇಳಿದೆ. ಮೂರ್ತಿಯವರೆಂದರು "ನಿಮ್ಮ ಮಾತು ಕೇಳಿದರೆ ಈ ಮದುವೆಗೆ ಮುಕ್ತಾಯ ಹೇಳುವುದೇ ಒಳ್ಳೇದೆಂದು ತೋರುತ್ತದೆ. ಆದರೆ ಘಟಸ್ಫೋಟ [illegible] ಅಷ್ಟೊಂದು ಸುಲಭದ ಕೆಲಸವಲ್ಲ. ಈಗ ಜ್ಯುಡಿಶಿಯಲ್ ಸೆಪರೇಶನ್ [illegible] ಒಂದು ವರ್ಷ [illegible] [illegible]. ಆನಂತರ [illegible] ಕೆಲ



ವರ್ಷ ಕಾಯಬೇಕು. ಎಷ್ಟೋ ಸಲ ನಾಲ್ಕೈದು ವರ್ಷ ಒದ್ದಾಡಬೇಕಾಗುತ್ತದೆ."

ಮೋಹನನೆಂದ "ಆದಷ್ಟು ಬೇಗ ಈ ಸಮಸ್ಯೆಯಿಂದ ನನ್ನನ್ನು ಪಾರು ಮಾಡಿರಿ. ನನಗೆ ಜೀವನವೇ ಶೂನ್ಯವಾಗಿ ತೋರುತ್ತಾ ಇದೆ"

"ಒಂದೇ ಒಂದು ಉಪಾಯವಿದೆ. ಆದರೆ ಇದಕ್ಕೆ ನಾವು ಸುಳ್ಳು ಹೇಳಬೇಕಾಗುತ್ತದೆ."

"ನೀವು ಯಾವಾಗ ಸುಳ್ಳು ಹೇಳುವುದಿಲ್ಲ ಹೇಳಿ!", ಎಂದು ನಾನೆಂದೆ. ಆಗ ಮೂರ್ತಿಯವರು ನಗಲು ಪ್ರಾರಂಭಿಸಿದರು.

"ಸತ್ಯಂಬ್ರೂಯಾತ್ ಎಂದು ನಮ್ಮ ಪೂರ್ವಜರು ಹೇಳಿದ್ದಾರೇನೋ ನಿಜ. ಆದರೆ ಅದು ಪ್ರಿಯವಾಗಿರಬೇಕೆಂದೂ ಹೇಳ್ತಾರೆ" "ಪ್ರಿಯಂ ಬ್ರೂಯಾತ್" ಇಷ್ಟೇ ಅಲ್ಲ, "ಮಾಬ್ರೂಯಾತ್ ಸತ್ಯಮಪ್ರಿಯಮ್" ಎನ್ನುತ್ತಾರೆ. ಆದರೆ ನಾವು ಹೇಳುವುದು ಕೇವಲ "ಪ್ರಿಯಂ ಅನೃತಮ್" ಅಂದರೆ ಪ್ರಿಯವಾದ ಸುಳ್ಳನ್ನು. ಯಾವ ಸುಳ್ಳಿನಿಂದ ಇಬ್ಬರ ಕಲ್ಯಾಣವಾಗುತ್ತದೋ ಅಂಥ ಸುಳ್ಳನು ".

"ಯಾವ ಸುಳ್ಳು ಹೇಳಬೇಕಾಗುತ್ತದೆ?" ಮೋಹನ ಕುತೂಹಲಿಯಾಗಿ ಕೇಳಿದ. ಹಾಗೆ ನೋಡಿದರೆ ಮೋಹನನಿಗೆ ಸ್ವಲ್ಪ ಕಾಯದೆಜ್ಞಾನ ಇತ್ತು. ವ್ಯಭಿಚಾರದ ಆರೋಪಮಾಡಿ ಕೂಡ ಡೈವೋರ್ಸ್ ಪಡೆಯಬಹುದಾಗಿತ್ತು.

ವಕೀಲರು ಹೇಳಿದರು "ಸುದೈವದಿಂದ ನಿಮಗೆ ಮಕ್ಕಳಾಗಿಲ್ಲ. ಅಲ್ಲದೆ ನಿಮ್ಮನ್ನು ಬಂದು ಯಾರು ತಪಾಸು ಮಾಡುವುದಿಲ್ಲ."

ಮೋಹನ್ "ಅಂದರೆ ಯಾವ ಕಾರಣದಿಂದ ಡೈವೋರ್ಸ್ ಪಡೆಯಬೇಕು ಎನ್ನುತ್ತೀರಿ?"

ಮೂರ್ತಿ "ಡೈವೋರ್ಸಿನ ಮಾತೇಬೇಡ. ಈ ಮದುವೆಯನ್ನೇ ರದ್ದುಮಾಡಿ ಬಿಡೋದು. Null and void' ಎನ್ನಿಸಿಬಿಡೋದು. ಇದಕ್ಕೆ ಕಾರಣವೆಂದರೆ ಮದುವೆ ನಿರರ್ಥಕವಾಯಿತು. (non-con-umation of marriage) ಎನ್ನೋದು. ಇದರ ಪ್ರಕಾರ ಲೂಸಿಯೇ ನಿಮ್ಮ ಮೇಲೆ ಒಂದು ಕೇಸು ಹಾಕುವುದು. ಅದರಲ್ಲಿ ನೀವು ಮದುವೆಯಾದಂದಿನಿಂದ ಅವಳೊಂದಿಗೆ ಮಲಗುವುದನ್ನು ತಪ್ಪಿಸುತ್ತೀರಿ. ನೀವು ಅವಳೊಂದಿಗೆ ಸಂಭೋಗಿಸಲು ಅಸಮರ್ಥರು ಎಂದು ವಾದಿಸುವುದು. ನೀವು ವಕೀಲರನ್ನು ಕೊಡಬೇಡಿರಿ, ಮತ್ತು ಕೋರ್ಟಿಗೆ ಬರ



ಬೇಡಿರಿ.ಎಕ್ಸ್‌ಪಾರ್ಟ್ ನಿರ್ಣಯ ಕೊಡಲೇ ದೊರೆಯು ವುದು. ಆದರ ಕೋರ್ಟಿಗೆ ನಿಮ್ಮಿಬ್ಬರ ಜಂಟಿ ಪ್ರಯತ್ನ ದಿಂದ ಇದೆಲ್ಲ ನಡೆದಿದೆ ಎಂಬ ಸಂಶಯ ಮಾತ್ರ ಬರ ಬಾರದು."

ಮೋಹನ ಪ್ರಶ್ನಿಸಿದ "ನಂತರ ನಾನು ಮದುವೆ ಯಾಗಬಹುದೇ?"

ಮೂರ್ತಿ "ಅದಕ್ಕೇನೂ ತೊಂದರೆಯಿಲ್ಲ. ಮ ತ್ತೊಂದು ಮದುವೆಯಾಗೋ ವೇಳೆಗೆ ನೀವು ಸರಿಯಾ ಗಿಲ್ಲ ಎನ್ನುವವರಾರು?"

ಮೋಹನ "ಸರಿ ಹಾಗಾದರೆ ನೀವು ಹೇಳಿದಂತೆಯೇ ಮುಂಬುವರಿವೆ–ನನ್ನನ್ನು ಈ ವಿಷಚಕ್ರದಿಂದ ಪಾರು ಮಾಡಿರಿ"

* * *

ಲೂಸಿಯ ಮೊಕದ್ದಮೆ ಮೆಟ್ರಿಮೋನಿಯಲ್ ಕೋರ್ಟಿನಲ್ಲಿ ನಡೆಯಿತು. ಅಂದು ಲೂಯಿಸ್ ಅಂಕಲ್ ಬಂದಿದ್ದರು. ನಮ್ಮ ಯೋಜನೆಯಂತೆ ಮೋಹನ ಬಂದಿರ ಲಿಲ್ಲ. ನ್ಯಾಯಾಧೀಶರು ಮೋಹನನ ಪರವಾಗಿ ಯಾರಾ ದರೂ ವಕೀಲರು ಬಂದಿದ್ದಾರೇನು? ವಿಚಾರಿಸಿದರು. ಯಾರೂ ಇರಲಿಲ್ಲ. ಲೂಸಿ ಈಗ ಪಿಟಿಶನರ್ (ವಾದಿ) ಅವಳ ವಕೀಲ ಮೂರ್ತಿ ಅವಳಿಗೆ ಕೆಲ ಪ್ರಶ್ನೆ ಕೇಳ ಬೇಕಾಗುತ್ತದೆ. "ನಿನ್ನ ಮದುವೆ ಯಾವಾಗ ಆಯ್ತು?" ಮುಂತಾದ ಪ್ರಶ್ನೆಗಳಿಗೆ ಲೂಸಿ ಉತ್ತರ ಕೊಟ್ಟಳು.

ಮೂರ್ತಿ "ಮದುವೆಯಾದ ದಿನ ರಾತ್ರಿ ನೀವು ನಿಮ್ಮ ಮನೆಯಲ್ಲೇ ಮಲಗಿದಿರಾ?"

ಲೂಸಿ "ಅಹುದು, ಇವರಿಗೆ ಮನೆ ಇರಲಿಲ್ಲ. ಆ ಕಾರಣದಿಂದಾಗಿ ನಾವು ನಮ್ಮ ಮನೆಯಲ್ಲೇ ಒಂದು ಕೋಣೆಯಲ್ಲಿ ಮಲಗಿದೆವು."

"ನಿನ್ನ ಪತಿ ನಿನ್ನ ಹತ್ತಿರವೇ ಮಲಗಿದರೆ?"

"ಇಲ್ಲ. ಅವರು ತಲೆಶೂಲಿ ಎಂಬ ನೆವ ಮಾಡಿ ಬೇರೆ ಕಡೆ ಮಲಗಿದರು."

"ಹೀಗೆ ಎಷ್ಟು ದಿನ ಸಂಭೋಗಕ್ಕೆ ಸಂಚಕಾರ ವಿತ್ತರು?"

"ಏಳು ದಿವಸ"

"ಆಮೇಲೆ?"

"ನಾನು ನಮ್ಮ ಮನೆಯಲ್ಲಿ ಇವರಿಗೆ ಸರಿಯಾದ ಅವಕಾಶ ದೊರೆಯಲಿಕ್ಕಿಲ್ಲವೆಂದು ಬಗೆದು ಬೇರೆ ಮನೆ ಮಾಡೋಣವೆಂದೆ!"

"ಹನೀಮೂನಿಗೆ ಬೇರೆ ಊರಿಗೆ ಹೋಗಲಿಲ್ಲವೇ?"

"ಅವರಿಗೆ ರಜೆ ಸಿಗಲಿಲ್ಲವಂತೆ. ವಿಪರೀತ ಕೆಲಸ ವೆಂದು ಆ ವಿಚಾರ ತೆಗೆದು ಹಾಕಿದರು."

"ನಂತರ?"

"ಬೇರೆ ಮನೆ ಮಾಡಿದೆವು. ಅಲ್ಲಿ ಕೂಡ ಇವರ ವರ್ತನೆ ಬದಲಾಗಲಿಲ್ಲ."

"ಒಂದೇ ಹಾಸಿಗೆಯಲ್ಲಾದರೂ ಮಲಗುತ್ತಿದ್ದಿರೇ?"

"ಹಾಂ. ಆದರೆ ಮುಖ ಇನ್ನೊಂದು ದಿಕ್ಕಿನಲ್ಲಿ."

"ನೀನು ಅವರನ್ನು ಉದ್ದೀಪನಗೊಳಿಸಲು ಪ್ರಯತ್ನಿಸಿದೆಯಾ?"

"ನಾನು ಸರ್ವವಿಧದ ಪ್ರಯತ್ನ ಮಾಡಿದೆ. ಹತ್ತಿರ ಎಳೆದೆ...ಮತ್ತೆ..." ಲೂಸಿ ಮುಖ ಮುಚ್ಚಿಕೊಂಡಳು. ಅಳತೊಡಗಿದಳು.




"ಬಟ್ಟೆ ಮೇಲೆ ಬೆಂಕಿ ಕಿಡಿ ಹಾರೀತು ಅಂತ, ಬಟ್ಟೆ ಕಳಚಿ ಪಟಾಕಿ ಹಚ್ಚೋಕೆ ಹೋದೆ ಡಾಕ್ಟ್ರೇ......"

ನ್ಯಾಯಾಧೀಶರು ಸಾಕೆಂದರು. ಇನ್ನು ಹೆಚ್ಚು ವಿವರ ಕೇಳಿ ತರುಣಿಯನ್ನು ವಿಹ್ವಲಗೊಳಿಸದಿರಲು ಹೇಳಿದರು.

* * *

'ಎಕ್ಸ್‌ಪಾರ್ಟೆ' ಡಿಕ್ರಿ ಪಾಸಾಯಿತು. ಮದುವೆ ಯೇ ರದ್ದಾಗಿತ್ತು. ಇಬ್ಬರೂ ಮತ್ತೆ ಮೊದಲಿನಂತೆ ಮುಕ್ತರಾದರು.

* * *

ಮೋಹನ ಎರಡುವಾರಗಳ ಮೇಲೆ ಮನೆಗೆ ಬಂದ. ಹರಟೆ ಹೊಡೆಯುತ್ತ ಕುಳಿತ ಉತ್ಸಾಹದಲ್ಲಿ. ಅವನ ಉತ್ಸಾಹದ ಕಾರಣ ತಿಳಿಯಲು ನಮಗೆ ಬಹಳ ಸಮಯ ಹಿಡಿಯಲಿಲ್ಲ. ಮರುದಿನವೇ ಆರ್ಯಸಮಾಜ ಮಂದಿರ ದಲ್ಲಿ ತನ್ನ ಮದುವೆ ಇರುವುದಾಗಿಯೂ, ಆ ಮದುವೆ ಯಲ್ಲಿ ನಾವು ದಂಪತಿಗಳು 'ಪುಣ್ಯಾಹವಾಚನ' ಅವನ ಪಕ್ಷವಹಿಸಿ ನಡೆಸಿ ಕೊಡಬೇಕೆಂದು ಕೇಳಿಕೊಂಡನು, ಹಿಂದೂ ವಿವಾಹ ಪದ್ಧತಿಯಂತೆ ವಿವಾಹ ಜರುಗಲಿತ್ತು. ಕನ್ಯೆ ಎಲ್ಲಿಯದೆಂದು ನಮಗೆಲ್ಲ ಅಚ್ಚರಿ.

ಮೋಹನ ಈ ಮೊದಲೇ ಒಬ್ಬ ತರುಣಿಯಲ್ಲಿ ಅನು ರಕ್ತನಾದ ವಿಷಯ ನಮಗೆ ತಿಳಿದಿರಲೇ ಇಲ್ಲ. ಅವಳು ಮೆಡಿಕಲ್ ಕಾಲೇಜಿನಲ್ಲಿ ಎಂ. ಡಿ. ಪದವಿಗಾಗಿ ಓದು ತ್ತಿದ್ದಳು. ನೋಡಲು ಅಷ್ಟೇನೂ ರೂಪವತಿಯಾಗಿರ ದಿದ್ದರೂ ಆಕರ್ಷಕ ವ್ಯಕ್ತಿತ್ವ ಪಡೆದಿದ್ದಳು. ಲೂಸಿಯ ಸಾಹಿತ್ಯದಿಂದ ಇವಳನ್ನು ಮೋಹನ ಮರೆತುಬಿಟ್ಟಿದ್ದ. ಮೋಹನ–ಲೂಸಿಯ ಪ್ರಕರಣ ತಿಳಿದು ಈ ಡಾಕ್ಟರ ತರುಣಿ ವಿರಕ್ತಿಯನ್ನೇ ತಾಳಿದ್ದಳು; ಯಾಕೆಂದರೆ ಮೋಹನ ಅವಳ ಬಾಲ್ಯಸ್ನೇಹಿತನಾಗಿದ್ದ.

ಈ ಮದುವೆಗೆ ಮೂರ್ತಿಯವರನ್ನು ಕರೆಯ ಬೇಕೆಂದು ಅವರ ಮನೆಗೆ ಹೋಗಿದ್ದೆವು. ಆದರೆ ಅವರು ದಿಲ್ಲಿಗೆ ತೆರಳಿದ್ದರು. ಸುಪ್ರೀಂ ಕೋರ್ಟಿನಲ್ಲಿ ಒಂದು ಕೇಸಿನ ಪರವಾಗಿ ವಾದಿಸಬೇಕಾಗಿತ್ತಂತೆ.

ಮೋಹನನ ಈ ವಿರಹನೀಯ ಮದುವೆ ಅವನಿ ಗೆ ಸಂತಸವನ್ನು ತಂದಂತೆ ನಮ್ಮ ಬಿಲ್ಡಿಂಗ್‌ನವರಿಗೂ ಶಾಂತಿಯನ್ನು ತಂದಿತ್ತು. ಇನ್ನೊಂದು ಕಾರಣದಿಂದ ನಮ್ಮ ಸುತ್ತಲಿನ ಜನ ಸಂತಸಪಟ್ಟರು. ಡಾಕ್ಟರರು ಬೇಕಾದರೆ,ಒಂದು ಫರ್ಲಾಂಗ್ ದೂರ ಹೋಗಬೇಕಾ ಗುತ್ತಿತ್ತು. ಈಗ ಒಬ್ಬ ಡಾಕ್ಟರರೇ ಹತ್ತಿರ ಬಂದಂ ತಾಗಿತ್ತು.

ಒಂದೆರಡು ತಿಂಗಳ ತರುವಾಯ ಮೂರ್ತಿಯವರ ಮನೆಗೆ ಹೋಗಿದ್ದೆ. ಆಗ ಮೋಹನನ ಮದುವೆ ಆದ ವಿಷಯ ಆ ಮದುವೆಯಲ್ಲಿ ನಾವೆಲ್ಲರೂ ಮೂರ್ತಿ ಯವರನ್ನು ಅಪೇಕ್ಷಿಸಿದ ವಿಷಯವನ್ನು ಹೇಳಬೇಕೆಂದಿದ್ದೆ. "ನಿಮಗೊಂದು ಅಚ್ಚರಿಯ ಸಂಗತಿ ಹೇಳಲು ಬಂದೆ. ಅದು ಮೋಹನನ ಬಗ್ಗೆ." ಮೂರ್ತಿ ಅಂದರು. "ಏನಪ್ಪಾ ಅದು. ಮತ್ತೆ ಲೂಸಿಯನ್ನು ಪ್ರೀತಿಸಲು ಪ್ರಾರಂಭಿಸಿದರೇ? ಯಾಕೆಂದರೆ ಅಮೇರಿಕೆಯಲ್ಲಿ ಇಂಥ ಒಂದು ಕೇಸಾಗಿದೆ. ಗಂಡ ಹೆಂಡತಿ ಮದುವೆಯ ಪೂರ್ವ ದಲ್ಲಿ ಅತಿಶಯ ಪ್ರೀತಿ ಮಾಡುತ್ತಿದ್ದರಂತೆ. ನಂತರ ಒಬ್ಬರು ಇನ್ನೊಬ್ಬರನ್ನು ಸಂಶಯ ದೃಷ್ಟಿಯಿಂದ ನೋಡಿ ಜಗಳಾಡಿ ಡೈವೋರ್ಸ್ ಪಡೆದರಂತೆ. ಆಮೇಲೆ ತಪ್ಪು ತಿಳಿದು ಮತ್ತೆ ಒಂದೆಡೆ ಬಂದು ಇರಲು ಪ್ರಾರಂಭಿಸಿದರು. ಅವರ ನಿರ್ಧಾರವೆಂದರೆ ಮದುವೆ ಯಾಗದೇ ಜೊತೆಯಾಗಿಯೇ ಇರೋದು. ಇಬ್ಬರೂ ಸ್ವತಂತ್ರರಾಗಿರುವುದರಿಂದ ಜಗಳವೇ ಇಲ್ಲ. ಈಗ ಅವರ ಪ್ರೀತಿ ಅಧಿಕವಾಗಿದೆಯಂತೆ!"

ನಾನೆಂದೆ "ಹಾಗೇನಿಲ್ಲ. ಇದು ಬೇರೆ ವಿಷಯ. ಮೋಹನನ ಮದುವೆಯಾಯಿತು. ಅದೂ ಎರಡೇ ವಾರಗಳಲ್ಲಿ"

"ಕಾಂಗ್ರಾಚ್ಯುಲೇಶನ್ಸ ಹೇಳಿರಿ"!

"ಹೆಂಡತಿ ಕೂಡ ಅಪ್ರತಿಮ ಇದ್ದಾಳೆ. ಅವಳೊಬ್ಬ ಡಾಕ್ಟರ್",

ನಿಮ್ಮ ಮಿತ್ರ ಲಕೀ ಇದ್ದಾರೆ. ಹಾಗಾದರೆ ನಾನೂ ಒಂದು ಅಚ್ಚರಿಯ ಸಂಗತಿ ಹೇಳಲಾ?"

"ಯಾರ ಬಗ್ಗೆ"

"ಲೂಸಿಯ ಬಗ್ಗೆ"

"ಏನು ಅವಳದೂ ಲಗ್ನವಾಯಿತೇ?"

"yes ಯಾರೊಡನೆ, ಊಹಿಸಿರಿ!"

"ಇದು ಮಾತ್ರ ಕಠಿಣವೆಂದು ತೋರುತ್ತದೆ."

"ನೀವು ಊಹಿಸಲು ಸಾಧ್ಯವೇ ಇಲ್ಲ. ನಿಮ್ಮ ಮಿತ್ರ ಮೋಹನ ಕೂಡ ಊಹಿಸಲು ಸಾಧ್ಯವಿಲ್ಲ. ಯಾರು ಗೊತ್ತೇ? ಅಂಕಲ್ ಲೂಯಿಸ್!"

"ಅಲ್ಲರಿ ಅವನ ವಯಸೇನು? ಅಲ್ಲದೆ ಅವಳು ಅಂಕಲ್ ಎಂದು ಕರೆಯುತ್ತಿದ್ದಳಲ್ಲವೆ?"

"ಹಾಗೆ ಕರೆವರೇನಾಯ್ತು. ಅಂಕಲ್ ಲೂಯಿಸ್ ಲಕ್ಷಾಧೀಶನಾಗಿದ್ದಾನೆ. ದೊಡ್ಡ ಕಾಂಟ್ರಾಕ್ಟರ್. ಅವನು ವಿಧುರನಾಗಿದ್ದ. ಮೊದಲು ಲೂಸಿಯಲ್ಲಿ ತೋರಿದ್ದು ಅನು ಕಂಪ–ನಂತರ ತೋರಿದ್ದು ಅನುರಾಗ!" ಎಂದು ಮೂರ್ತಿ ಯವರು ಹಸನ್ಮುಖರು...

# ಭಾರತೀಯ ಚಿತ್ರರಂಗ

ಈ ದೀಪಾವಳಿಯ ವಿಶೇಷ ಕೊಡುಗೆ

ಭಾರತದಲ್ಲಿ ಚಲಚ್ಚಿತ್ರಯುಗ ಪ್ರಾರಂಭವಾಗಿ ಆರು ದಶಕಗಳೀ ಸಂದವು. ಈ ದೀರ್ಘಾವಧಿಯಲ್ಲಿ ಅದು ಜನಮನರಂಜನೆಯ ಉತ್ತಮ ಮಾಧ್ಯಮವಾಗಿ ಪರಿಣಮಿಸಿದೆ. ಜೊತೆಗೆ ಒಂದು ಉದ್ದಿಮೆಯೂ ಎನಿಸಿದೆ. ಅದರ ಕಥೆ, ಅದರಲ್ಲಿ ನಿರತರಾದ ಕಲಾವಿದರ ಕಥೆ ನಿಮಗೆಲ್ಲ ರೋಚಕವೆನಿಸೀತು.... ಅಂತೆಯೇ ಕರ್ಮವೀರನ ಈ ವಿಶೇಷ ಕಾಣಿಕೆ ಇಲ್ಲಿದೆ: ಈ ದೀಪಾವಳಿ ಶುಭಸಂದರ್ಭದಲ್ಲಿ.

# ಸಿನೇಮಾದ ಜನನ- ಭಾರತದಲ್ಲದು ಬೆಳೆದು ಬಂದ ಬಗೆ

ಚಿತ್ರ-ಲೇಖನ :

ಎನ್. ಸಿ. ದೇಸಾಯಿ

ಇಂದು 'ಸಿನೇಮಾ' ಹಳ್ಳಿ-ಶಹರಿನೊಳಗೆ ವಾಸಿಸುವ ಎಲ್ಲ ವರ್ಗದ ಜನರಿಗೂ ಮನೋರಂಜನೆಯ ಸಾಧನವಾಗಿ ಪರಿಣಮಿಸಿದೆಯಷ್ಟೇ. ಇದು ಶೈಕ್ಷಣಿಕ ದೃಷ್ಟಿಯಿಂದಲೂ ಕಾರ್ಯಮಾಡಬಹುದಾಗಿದೆ. ಸಮಾಜದ ರೀತಿ-ನೀತಿಗಳನ್ನು ಬದಲಿಸುವುದಷ್ಟೇ ಅಲ್ಲ, ಹೊಸಹೊಸ ಫ್ಯಾಷನ್‌ಗಳು ಹುಟ್ಟಿಬರಲು 'ಸಿನೇಮಾ' ಮೂಲಕಾರಣ ಎಂದು ಹೇಳದಿದ್ದರೆ ಸರಿ ಎನಿಸದು. ಈ ಸಿನೇಮಾ, ತರುಣ ಪೀಳಿಗೆಯ ಮೇಲೆ ಇನ್ನೊಂದು ರೀತಿಯ ಪರಿಣಾಮ ಉಂಟುಮಾಡುತ್ತದೆ.

ಶಹರುಗಳಲ್ಲಿನ ಜನ ಕಿಕ್ಕಿರಿದು ಈ ಸಿನೇಮಾಗಳಿಗೆ ಮುಗಿಬಿದ್ದರೆ, ಹಳ್ಳಿಗಳ ಜನ ದೂರದ ಶಹರುಗಳಿಗೆ ಹೋಗಿ ಸಿನೇಮಾ ನೋಡಿ ಆನಂದಿಸಿ ಬರುತ್ತಾರೆ. ಇಂದಿನ ಜನರಿಗೆ ಸಿನೇಮಾ ನಟ ನಟಿಯರ ಬಗ್ಗೆ, ಸಿನೇಮಾ ದೃಶ್ಯ-ಸಂಗೀತ ಸಂಯೋಜನೆಯ ಬಗ್ಗೆ ಮಾತನಾಡುವುದೆಂದರೆ ಎಲ್ಲಿಲ್ಲದ ಅಕ್ಕರೆ-ಅಭಿಮಾನ. ಸಿನೇಮಾ ಹಾಡುಗಳನ್ನಂತೂ ಅತಿ ಹೆಮ್ಮೆಯಿಂದ ಹಾಡುತ್ತಾರೆ ಇಂದಿನ ಜನ. ಯಾವುದೇ ಪ್ರಸಂಗದಲ್ಲಿ ಸಿನೇಮಾ ನಟ ನಟಿಯರು ತಾವಿರುವ ಪ್ರದೇಶಗಳಿಗೆ ಆಗಮಿಸಿದರೆ ಅವರನ್ನು ನೋಡಲು ಬರುವ ಜನರ ಸಂಖ್ಯೆ ಅಪರಿಮಿತ. ಈ ದಿನಗಳಲ್ಲಿ ಸಿನೇಮಾ ಎಷ್ಟು ಪ್ರಬುದ್ಧವಾಗಿದೆ ಎಂದರೆ ಯಾವ ಪತ್ರಿಕೆಯಾದರೂ ಅದರಲ್ಲಿನ ಕೆಲ ಪುಟಗಳಾದರೂ 'ಸಿನೇಮಾ'ಕ್ಕೆ ಮೀಸಲಾಗಿರಲೇ ಬೇಕು.



ಕಿನೆಟೋಸ್ಕೋಪ್ ಹಾಗೂ ಚಲನಚಿತ್ರದ ಪ್ರಥಮ ಸಂಶೋಧಕ ಥಾಮಸ್ ಅಲ್ವಾ ಎಡಿಸನ್.

ಸಿನೇಮಾ ಎಷ್ಟು ಜನಪ್ರಿಯತೆ ಗಳಿಸಿದೆಯೋ, ಅದರಲ್ಲಿ ದುಡಿಯುವ ಜನರು ಜನಪ್ರಿಯತೆ ಗಳಿಸುವಲ್ಲಿ ಬಹುತರವಾಗಿ ಶ್ರಮಿಸಬೇಕಾಗುತ್ತದೆ. ನಟ-ನಟಿಯರನ್ನುಳಿದು ಇನ್ನಿತರ ತಾಂತ್ರಿಕವರ್ಗದ ಜನ ಬಹಳ. ಅವರ ಜೀವನಕ್ಕೆ ಚಿತ್ರೋದ್ಯಮವೇ ದಾರಿಯಾಗಿದೆ. ಸಿನೇಮಾ ಮಂದಿರದಲ್ಲಿ ಗೇಟ್‌ಕೀಪರ್‌ನೇ ಇರಲಿ, ಚಿತ್ರ ತಯಾರಿಕಾ ಸಂಸ್ಥೆಯಲ್ಲಿ ಲೈಟ್‌ಬಾಯ್‌ನೇ ಇರಲಿ, ಪಾತ್ರಗಳಿಗೆ ವಸ್ತ್ರಾಲಂಕಾರ, ಕೇಶಾಲಂಕಾರ ಮಾಡುವವನೇ ಆಗಿರಬಹುದು. ಇಲ್ಲವೇ ಛಾಯಾಗ್ರಾಹಕ, ನಿರ್ದೇಶಕ, ಧ್ವನಿಮುದ್ರಕ ಹೀಗೆ ನೂರೆಂಟು ರೀತಿಯಲ್ಲಿ ನೋಟಕನ ಕಣ್ಣಿಗೆ ಕಾಣುವ, ಕಾಣದ ಲಕ್ಷಾವಧಿ ಜನಕ್ಕೆ, ಸಿನೇಮಾ ಇಂದು ಜೀವನಕ್ಕೆ ದಾರಿಯಾಗಿದೆ ಎಂಬುದನ್ನು ಮಾತ್ರ ಮರೆಯುವಂತಿಲ್ಲ.

ಇದನ್ನೆಲ್ಲ ಲಕ್ಷ್ಯಕ್ಕೆ ತಂದುಕೊಂಡಾಗ ಸಿನೇಮಾ ಸಂಶೋಧಿಸಿದವರನ್ನು ಮನದಲ್ಲೇ ನಮಿಸಬೇಕಾಗುತ್ತದೆ. ಇದು ಎಲ್ಲಿ ಜನ್ಮ ತಳೆಯಿತು, ಹೇಗೆ ಬೆಳೆದು ಬಂತು ಎಂಬುದನ್ನು ಈ ಲೇಖನದಲ್ಲಿ ವಿವರಿಸುವ ಪ್ರಯತ್ನ ಇದೆ. ಇದೊಂದು ವಿಹಂಗಮನೋಟ ಎನ್ನುವುದೇ ಸೂಕ್ತವಾದೀತು. ಯಾಕೆಂದರೆ ವಿವರಗಳನ್ನು ಒಂದೊಂದಾಗಿ ತಿಳಿಯಹೊರಟರೆ ಇದು ಒಂದು ದೊಡ್ಡ ಹೊತ್ತಿಗೆಯೇ ಆಗುತ್ತದೆ.

× × ×

ಹಿಂದಿನ ಕಾಲದ ಚಿತ್ರಕಾರರು, ಅಂದರೆ ಛಾಯಾಗ್ರಹಣ ಶೋಧನೆಗೂ ಮುನ್ನ, ಸ್ಥಿರಚಿತ್ರವನ್ನು ಚಲಿಸುವಂತೆ ತೋರಿಸುವದೆಂತು? ಎಂದು ವಿವಿಧ ರೀತಿಯಲ್ಲಿ ಪ್ರಯತ್ನಿಸಿದರು. ಕ್ರಿ.ಶ. ೧೮೨೪ರಷ್ಟು ಹಿಂದೆಯೇ ಇಂಗ್ಲಂಡಿನ ರಾಯಲ್ ಸೊಸೈಟಿಯಲ್ಲಿ ಪೀಟರ್ ಮಾರ್ಕರೋಜೆಟ್ ಎಂಬ ವಿಜ್ಞಾನಿಯು– "A persistance of vision with regard to moving objects" ಎಂಬ ವಿಷಯದ ಮೇಲೆ ಪ್ರಬಂಧವೊಂದನ್ನು ಓದಿದನೆಂಬುದನ್ನು ಇತಿಹಾಸ ನಮಗೆ ಹೇಳುತ್ತದೆ. ಆದರೆ ಆ ಸಮಯದಲ್ಲಿ ಈ ವಿಷಯವಾಗಿ ಅಷ್ಟೊಂದು ಆಸ್ಥೆಯಿಂದ ಪ್ರಾತ್ಯಕ್ಷಿಕ ಪ್ರಯತ್ನವು ನಡೆದುದು ಕಂಡುಬರುವುದಿಲ್ಲವಾದರೂ ಈ ವಿಚಾರ ಹಿಂದಿನಿಂದ ಸಾಕಷ್ಟು ಜನರಿಗೆ ಪ್ರೋತ್ಸಾಹ ನೀಡಿದೆ.

ಕೆಲ ವಿಜ್ಞಾನಿಗಳು ಚಲನವಲನದ ವಿವಿಧ ಭಂಗಿಯ ಚಿತ್ರಗಳನ್ನು, ಚಾಲನೆಯ ಆಯಾ ಮಟ್ಟದಲ್ಲೇ ಲಕ್ಷ್ಯವಿಟ್ಟು ಚಿತ್ರಿಸಿ, ಆ ಚಿತ್ರಗಳನ್ನು ಒಂದು ಗಾಲಿಯ ಕೊನೆಯ ತುದಿಗೆ ಅಂಟಿಸಿ ಆ ಗಾಲಿಯನ್ನು ವಿಶಿಷ್ಟ ವೇಗದಲ್ಲಿ ತಿರುಗಿಸಿ ರಂಧ್ರವೊಂದರ ಮೂಲಕ ಆ ಚಿತ್ರಗಳನ್ನು ವೀಕ್ಷಿಸಿದಾಗ ಅವೆಲ್ಲಾ ಒಂದೇ ಚಾಲನೆಯನ್ನು ನೀಡಿದ್ದು ಕಂಡುಬಂತು. ಈ ಪ್ರಯತ್ನ ನಡೆದುದು ರಾಯಲ್ ಸೊಸೈಟಿಯ ಪ್ರಬಂಧದ ಪರಿಣಾಮವಾಗಿ ಎಂದು ಹೇಳಬೇಕಾದ್ದು ಅವಶ್ಯ.

## ಛಾಯಾಚಿತ್ರಕ್ಕೆ ಚಾಲನೆ

ಈ ಪದ್ಧತಿಯನ್ನು ಮ್ಯಾಜಿಕ್‌ಲ್ಯಾಂಟರ್ನ್ ಮೂಲಕ ಬೃಹದೀಕರಿಸಿ ಪರದೆಯ ಮೇಲೆ ಮೂಡಿಸುವ ಪ್ರಯತ್ನ (Projection) ನಡೆದುದು ಕ್ರಿ.ಶ. ೧೮೫೩ರಲ್ಲಿ ಒಬ್ಬ ಆಸ್ಟ್ರಿಯನ್ ಸೈನ್ಯಾಧಿಕಾರಿಯಿಂದ. ವಿವಿಧ ಭಂಗಿಯ ಚಿತ್ರಗಳನ್ನು ಜೋಡಿಸಿಯೇ ಒಂದು ಪಾತ್ರೆಯಂತಹ ವಸ್ತುವಿನ ಒಳಭಾಗಕ್ಕೆ ಚಿತ್ರಗಳನ್ನಂಟಿಸಿ, ಅದರ ಮೇಲೆ ಇನ್ನೊಂದು ಪಾತ್ರೆ (ಉದ್ದವಾದ ರಂಧ್ರವುಳ್ಳದ್ದು) ಜೋಡಿಸಿ, ಚಿತ್ರವಿದ್ದ ಪಾತ್ರೆಯನ್ನು ತಿರುಗಿಸಿದಾಗ, ಮೇಲಿನ ಪಾತ್ರೆಯ ರಂಧ್ರಗಳಿಂದ ಒಳಗಿನ ವಿವಿಧ ಭಂಗಿಯ ಚಿತ್ರಗಳ ತಮ್ಮ ಅಂಗಚಲನೆಯನ್ನು ಮೂಡಿಸುವುದು ಕಂಡುಬಂತು. ಈ ರೀತಿಯಾಗಿ ಪ್ರಯೋಗಿಸಿದಾತ ಪ್ಲಾಟೂ ಸ್ಟ್ಯಾಂಫರ್ ಎಂಬಾತ. ಇದೇ 'ರ್‍ಝೂಟ್ರೋಪ್' ಎಂಬ ಹೆಸರು ಪಡೆಯಿತು. ಆ ಕಾಲದಲ್ಲಿ ಇದೊಂದು ಮಕ್ಕಳ ಆಟಿಗೆಯಾಯಿತಾದರೂ ಮುಂದಿನ ಸಂಶೋಧಕರಿಗೆ ಈ ದಿಶೆಯಲ್ಲಿ ಮುನ್ನಡೆಯಲು ಮಹತ್ವದ ಸಾಧನವಾಗಿ ಪರಿಣಮಿಸಿತು.

ಮೇಲೆ ಹೇಳಿದ ಪ್ರಯತ್ನಗಳೆಲ್ಲ ನಡೆದುದು ಚಿತ್ರಕಲೆಯ ರಚನೆಯಿಂದ ಸಿದ್ಧವಾದ ವಿವಿಧ ಭಂಗಿಯ ಚಿತ್ರಗಳಿಂದ. ಆದರೆ ಛಾಯಾಚಿತ್ರವನ್ನು ಈ ಚಾಲನೆಯ ಗತಿಗೆ ಅಳವಡಿಸಿಕೊಳ್ಳುವ ಪ್ರಯತ್ನ ನಡೆದುದು ಕೋಲಮನ್ ಸೆಲ್ಲರ್ಸ ಎಂಬೋರ್ವ ಮೆಕ್ಯಾನಿಕಲ್ ಇಂಜನಿಯರನಿಂದ. ಆತ ತನ್ನ ಮಕ್ಕಳನ್ನೇ ಒಂದು ಮೊಳೆ ಹೊಡೆಯುವ ವಿವಿಧ ಭಂಗಿಗಳಲ್ಲಿ ನಿಲ್ಲಿಸಿ ವಿವಿಧ ಗತಿಯಲ್ಲಿ ಚಿತ್ರಗಳನ್ನು ಸಿದ್ಧಪಡಿಸಿ ಅವುಗಳನ್ನು ಒಂದು ಪೆಡಲ್ ಇದ್ದ ಗಾಲಿಯ ಕೊನೆಯಲ್ಲಿ ಅಂಟಿಸಿ ವಿಶಿಷ್ಟಗತಿಯಲ್ಲಿ ತಿರುಗಿಸಿ



ಎಡಿಸನ್‌ನ ಪ್ರಥಮ ಚಲಚಿತ್ರ ಯಂತ್ರ ಹಾಗೂ ಯಂತ್ರದಲ್ಲಿ ತೆಗೆದ ಚಿತ್ರಗಳು

ದಾಗ ಅದೂ ಸಹ 'ಝೋಟ್ರೋಪ್'ನ ರೀತಿಯ ಪರಿಣಾಮವನ್ನೇ ನೀಡಿತು. ಹೀಗೆ ಪ್ರಥಮ ಬಾರಿಗೆ ಛಾಯಾಚಿತ್ರಕ್ಕೆ ಚಾಲನೆಬಂತು. ಇದು ನಡೆದುದು ಕ್ರಿ.ಶ. ೧೮೬೦ರಲ್ಲಿ. ಈ ಕಾರ್ಯಕ್ಕೆ ಅಳವಡಿಸಿದ ಯಂತ್ರಕ್ಕೆ "ಕಿನೆಮೊಟೋ-ಸ್ಕೋಪ್" ಎಂದು ಹೆಸರಿಸಲಾಯಿತಲ್ಲದೆ, ಇದನ್ನು ಅಮೇರಿಕೆಯ 'ಪೆಟೆಂಟ್' ಪ್ರಕಾರ, ೧೮೬೧ನೆಯ ಫೆಬ್ರುವರಿ ೫ರಂದು ನೋಂದಾಯಿಸಲಾಯಿತು. ಈ ಸಮಯದಲ್ಲಿ ಇದ್ದ ದೊಡ್ಡ ಅಡಚಣೆ ಎಂದರೆ ಆಗಿನ ಫಿಲ್ಮಿಗೆ ಹೆಚ್ಚಿನ ವೇಗವಿಲ್ಲದಿರುವುದು. ಹೀಗಾಗಿ ಬಹುಕಾಲದ Exposure (ಗ್ರಹಣ) ಕೊಡಬೇಕಾಗುತ್ತಿತ್ತು.

ಮುಂದೆ ಹೇಲ್ ಎಂಬೊಬ್ಬ ಇಂಜಿನಿಯರ್‌ನಿಂದ 'ಸೆಲ್ಲರ್' ಪದ್ಧತಿಯಲ್ಲಿ ವಿವಿಧ ಭಂಗಿ-ಗತಿಯಲ್ಲಿ ಚಿತ್ರೀಕರಿಸುವ ರೀತಿಯನ್ನೇ ಅನುಸರಿಸಿ ಝೋಟ್ರೋಪ್ ಉಪಕರಣದ ರೀತಿಯಲ್ಲಿಯೇ ಚಿತ್ರಗಳನ್ನು ದೊಡ್ಡ ಆಕಾರದಲ್ಲಿ ಪರದೆಯ ಮೇಲೆ ಪ್ರತಿಬಿಂಬಿಸುವ (Projection) ಶೋಧನೆಮಾಡಿ ಯಶಸ್ವಿಯಾಗಿ ನಿರ್ವಹಿಸಿದ್ದು ಸರಿಯಾಗಿ ೯ ವರ್ಷಗಳ ನಂತರ. ಅಂದರೆ ಕ್ರಿ.ಶ. ೧೮೭೦ನೆಯ ಫೆಬ್ರುವರಿ ೫ ರಂದು. ಹೇಲ್ ಶೋಧಿಸಿದ ಈ ಉಪಕರಣ-"ಫಾಸ್ಮಾಟ್ರೋಪ್" ಎಂದು ನಾಮಕರಣ ಹೊಂದಿತು. ಬೇರೆ ಬೇರೆ ಭಂಗಿಯ ಆರು ಚಿತ್ರಗಳ ಮೂರು ಗುಂಪುಗಳನ್ನು ಈ ಉಪಕರಣದಲ್ಲಿ ಜೋಡಿಸಲಾಗಿತ್ತು. ಇದು ಚಲಿಸುವ ರೀತಿಯಲ್ಲಿ ಒಂದು ಮಹತ್ವದ ತಾಂತ್ರಿಕ ಶೋಧನೆಯನ್ನು ನಾವಿಲ್ಲಿ ಕಾಣಬಹುದು. ಪರದೆಯಮೇಲೆ ಬೀಳುವ ಪ್ರತಿ ಚಿತ್ರದ ಬಿಂಬವು ನಿರ್ದಿಷ್ಟಕಾಲ ಪಡೆದು ಮುಂದೆ ಸಾಗುವುದೇ ಈ ಮಹತ್ವದ 'ತಡೆ' ಕಣ್ಣಿಗೆ ಗೋಚರವಾಗದಿದ್ದರೂ ಚಿತ್ರಗಳ ಚಾಲನೆ ನೋಟಕರಿಗೆ ಸರಿಯಾದ ಬಿಂಬವನ್ನು ನೀಡುವದೇ ಇಲ್ಲಿಯ ಮಹತ್ವದ ತಾಂತ್ರಿಕ ಶೋಧ. ಈ ಶೋಧನೆಯ ನಂತರದ ಕಾಲುಶತಮಾನದ ನಂತರದ ಸಂಶೋಧಕರಿಗೆ ಭದ್ರ ಬುನಾದಿಯಾಯಿತೆಂದೇ ಹೇಳಬೇಕು.

ಮುಂದೆ ಎರಡು ವರುಷಗಳಲ್ಲಿಯೇ ಬ್ಯಾಟರಿ ಸಹಾಯದಿಂದ ಕ್ಯಾಮರಾ ನಡೆಯುವಂತಾಯಿತಲ್ಲದೆ ಫಿಲ್ಮಿನ ಚಿತ್ರಗ್ರಹಣದ ಗತಿಕೂಡ ಹೆಚ್ಚಾದ್ದರಿಂದ ವೇಗದ ಚಲನೆಯನ್ನೂ ಕೂಡ ಸುಲಭವಾಗಿ ಗ್ರಹಿಸುವುದು ಶಕ್ಯವಾಯಿತು.




ಎಡಿಸನ್‌ನ ಕಿನೆಟೊಸ್ಕೋಪ

ಈ ಸಫಲಪ್ರಯತ್ನ ನಡೆದುದು ಲಿಲ್ಯಾಂಡ್ ಸ್ಟ್ಯಾನ್‌ಫೋರ್ಡ ಎಂಬೋರ್ವ ಶ್ರೀಮಂತ ರೈಲು-ಮಾಲಿಕನಿಂದ. ಆತ ಈ ಕಾರ್ಯಗಳನ್ನೆಲ್ಲ ತನ್ನ ಇಂಜಿನಿಯರ್ ಜಾನ್ ಡಿ ಇಜಾಕ್ ಎಂಬಾತನಿಗೆ ಒಪ್ಪಿಸಿದ್ದ. ಇಜಾಕ್ ಸಿದ್ಧಪಡಿಸಿದ ಉಪಕರಣವನ್ನು ಯಶಸ್ವಿಯಾಗಿ ಚಲಿಸಿದವನು ಎಡ್‌ವರ್ಡ ಮೇಬ್ರಿಜ್ ಎಂಬಾತ. ತೀವ್ರಚಲನೆಯನ್ನು ಗ್ರಹಿಸುವಲ್ಲಿ ಇವರು ಸಫಲರಾಗಿದ್ದರೂ ಕೂಡ ಅಲ್ಲಿ ಕೆಲ ತೊಂದರೆಗಳು ಇಲ್ಲದಿರಲಿಲ್ಲ. ಅವುಗಳನ್ನು ನಿಗ್ರಹಿಸುವಲ್ಲಿ ಪ್ರಯತ್ನಿಸಿದಾತ ಎಡಿಸನ್‌ನು.

## ಎಡಿಸನ್- ಸಿನೇಮಾ ಜನಕ

ಸ್ಥಿರಚಿತ್ರಗಳನ್ನು ಚಲಿಸಲು ವಿವಿಧ ರೀತಿಯಲ್ಲಿ ಬೇರೆ ಬೇರೆ ದೇಶಗಳಲ್ಲಿ ನಾನಾ ರೀತಿಯ ಉಪಕರಣಗಳಿಂದ ಗ್ರಹಿಸುವ ಪ್ರಯತ್ನಗಳು ನಡೆದವೆಂಬುದನ್ನು ಸಿನೇಮಾ ಇತಿಹಾಸವನ್ನು ಅವಲೋಕಿಸಿದವರಿಗೆ ಅನುಭವಕ್ಕೆ ಬಾರದಿರದು. ಆದರೆ ಇಂದಿನ ಚಿತ್ರಕಲೆಗೆ ನಾಂದಿಯಾದುದು ಥಾಮಸ್ ಎ. ಎಡಿಸನ್‌ನಿಂದಲೇ.

ಅವನು ವಿವಿಧ ದೇಶಗಳಲ್ಲಿ ಈ ದಿಶೆಯಲ್ಲಿ ನಡೆದಿದ್ದ ಪ್ರಯತ್ನಗಳನ್ನು ಸೂಕ್ಷ್ಮವಾಗಿ ವೀಕ್ಷಿಸುತ್ತಿದ್ದನಾದರೂ ತನ್ನದೇ ಆದ ಶೋಧನೆಯ ವಿಚಾರದಲ್ಲಿ ತೊಡಗಿಯೇ ಇದ್ದ. "ಫೋನೋಗ್ರಾಫ್"ಯಂತ್ರವನ್ನೇ ಈ ದಿಸೆಯಲ್ಲಿ ಉಪಯೋಗಿಸಿಕೊಂಡು ಶೋಧನೆಯನ್ನು ಮುಂದುವರಿಸಿ ಅದರಿಂದ ಕೆಲ ಚಿತ್ರಗಳನ್ನು ತೆಗೆಯುವಲ್ಲಿ ಯಶಸ್ವಿಯಾಗಿದ್ದ ಕ್ರಿ.ಶ. ೧೮೮೭ರಲ್ಲಿ ಅವನ ಪ್ರಥಮ ಚಲನಚಿತ್ರಯಂತ್ರ (ಕ್ಯಾಮರಾ ಎನ್ನುವ ಬದಲುಯಂತ್ರ ಎಂದು ಕರೆಯುವಲ್ಲಿ ಒಂದು ವಿಶೇಷವಿದೆ. ಫೋನೋಗ್ರಾಫ್ ಡ್ರಮ್ಮನ್ನೇ ಆತ ಈ ಕಾರ್ಯಕ್ಕಾಗಿ ಅಳವಡಿಸಿಕೊಂಡುದೇ ಇದಕ್ಕೆ ಕಾರಣ.) ಕೆಲವೊಂದು ತೀರ ಚಿಕ್ಕ ಆಕೃತಿಗಳಲ್ಲಿ ಚಿತ್ರಗಳನ್ನು ಗ್ರಹಿಸಲು ಸಮರ್ಥವಾಯಿತು. ಚಿತ್ರಗಳನ್ನು ಮೂಡಿಸಿದ್ದು ಒಂದು ಸಿಲಿಂಡರ್ ಮೇಲೆ. ಚಿತ್ರಗಳು ತೀರ ಚಿಕ್ಕವಿದ್ದುದರಿಂದ ಅವನ್ನು ಮೈಕ್ರೋಸ್ಕೋಪ್ ಮೂಲಕ ನೋಡಬೇಕಿತ್ತು.

ಚಲನೆಯನ್ನು ಸರಿಯಾಗಿ ಗ್ರಹಿಸಲು ಸಾಧ್ಯವೆಂದೊಮ್ಮೆ ಅವನಿಗೆ ಭರವಸೆಯಾದೊಡನೆ ಎಡಿಸನ್‌ನು ಈ ಚಿಕ್ಕ ಚಿತ್ರಗಳನ್ನು ಇನ್ನಷ್ಟು ದೊಡ್ಡ ಆಕೃತಿಗಳಲ್ಲಿ ಗ್ರಹಿಸಲು ಪ್ರಯತ್ನಿಸಿದ. ಈ ಸಮಯ

ದಲ್ಲಿ ಅವನಿಗೆ ತಕ್ಕ ಕಚ್ಚಾಮಾಲು ಸಿಗದೇ ಬಹಳ ತೊಳಲಾಡಬೇಕಾಯಿತು. ಬೆಲ್ಟ ಆಕೃತಿಯ ವಿವಿಧ ವಸ್ತುಗಳಿಗೆ ಫೋಟೋ ಎಮಲಶನ್‌ಗಳನ್ನು ಸವರಿ ಈ ಕಾರ್ಯದಲ್ಲಿ ಪ್ರಯತ್ನಿಸಿದನಾದರೂ ಅವನಿಗೆ ಸಮಾಧಾನಕರವಾದ ವಸ್ತುವು ಸಿಕ್ಕಲೇ ಇಲ್ಲ.

## ಕೊಡಕ್ ಫಿಲ್ಮ

ಕ್ರಿ.ಶ. ೧೮೮೮ರ ಆಗಸ್ಟ ತಿಂಗಳಲ್ಲಿ ರೋಚಸ್ಟರ್ (N. Y.) ನ ಜಾರ್ಜ ಈಸ್ಟ್‌ಮನ್‌ನು ಫೋಟೋ ಫಿಲ್ಮನ್ನು ಸೆಲ್ಯೂಲಾಯಿಡ್ ಮೇಲೆ ತಯಾರಿಸಲು ಪ್ರಾರಂಭಿಸಿದನು. ಮುಖ್ಯವಾಗಿ ಯಾಂತ್ರಿಕ ಚಿತ್ರೀಕರಣಕ್ಕಾಗಿಯೇ ಈ ಫಿಲ್ಮನ್ನು ತಯಾರಿಸಲು ಯೋಚಿಸಿದ್ದನಾತ. ಅಂದರೆ Rollar Photography ಗಾಗಿಯೇ ಈ ರೀತಿಯ ಉದ್ದವಾದ ಫಿಲ್ಮನ್ನು ಸಿದ್ಧಪಡಿಸಲು ಈ ಪ್ರಯತ್ನ ನಡೆದಿತ್ತು. ಈ ವಸ್ತುವನ್ನು ಮುಖ್ಯವಾಗಿ ಈಸ್ಟ್‌ಮನ್ ಕೊಡಕ್ ಕಂಪನಿಗಾಗಿ ತಯಾರಿಸಲಾಗಿತ್ತು.

ಎಡಿಸನ್‌ನಿಗೆ ಈ ವಿಷಯವಾಗಿ ಸಮಾಚಾರ ದೊರೆತುದೇ ತಡ, ಆತನು ೫೦ ಅಡಿ ಉದ್ದದ ಒಂದು ಫಿಲ್ಮನ್ನು ೨.೫೦ ಡಾಲರಿಗೆ ಕೊಂಡು, ತನ್ನ ಫೋಟೋಯಂತ್ರಕ್ಕೆ ಸರಿಯಾದ ವಸ್ತು ಎಂಬುದನ್ನು ಪ್ರಯೋಗಗಳಿಂದ ಕಂಡುಕೊಂಡ. ಎಡಿಸನ್‌ನ ಸತತ ಪ್ರಯತ್ನ ಹಾಗೂ ಕೊಡಕ್ ಫಿಲ್ಮ ತಯಾರಿಕೆ ಎಂದರೆ ಹಾಲಿಗೆ ಸಕ್ಕರೆ ಬೆರೆತಂತಾಯಿತು. ಎಡಿಸನ್ ಕೊಡಕ್‌ಫಿಲ್ಮ ಮೇಲೆ ತಯಾರಿಸಿದ ಚಿತ್ರ 'ಕಿನೆಟೊಸ್ಕೋಪ್' ಮೇಲೆ ವೆಸ್ಟ ಆರೇಂಜ್‌ನಲ್ಲಿ ೧೮೮೯ನೆಯ ಅಕ್ಟೋಬರ್ ೬ರಂದು ಪ್ರದರ್ಶಿಸಲ್ಪಟ್ಟಿತು. ಸಿನೇಮಾತಾಂತ್ರಿಕ ಪ್ರಗತಿಯಲ್ಲಿ ಇದೊಂದು ಮಹತ್ವದ ದಿನ.

## ಕಿನೆಟೋಸ್ಕೋಪ್

ಕಿನೆಟೋಸ್ಕೋಪ್ ದೊಡ್ಡ ಆಕೃತಿಯ ಚಿತ್ರಗಳನ್ನು ಪರದೆಯ ಮೇಲೆ ಮೂಡಿಸುವ ಸಾಧನವಾಗಿರಲಿಲ್ಲ. ಚಿತ್ರವನ್ನು ಇದರಲ್ಲಿ ಇಣಿಕಿ ನೋಡಬೇಕಿತ್ತು. (Peep show) ಅದರಲ್ಲಿ ಫಿಲ್ಮ ಅಳವಡಿಸುವುದಕ್ಕೂ ಮಿತಿ ಇತ್ತು. ೫೦ ಅಡಿಗಳಿಗಿಂತ ಹೆಚ್ಚು ಚಿತ್ರವನ್ನಿದರಲ್ಲಿ ಅಳವಡಿಸುವುದು ಸಾಧ್ಯವಿರಲಿಲ್ಲ. ೫೦ಅಡಿಗಳಷ್ಟನ್ನು ಮಾತ್ರ ಈ ಇಣುಕು ರಂಧ್ರದಿಂದ ನೋಡುವುದು ಸಾಧ್ಯವಿತ್ತು. ಪ್ರತಿ ಸೆಕೆಂಡಿಗೆ ೪೮ ಚಿತ್ರಗಳು ಸರಿಯುತ್ತಿದ್ದುದರಿಂದ ಕೇವಲ ೧೩ ಸೆಕೆಂದುಗಳಲ್ಲಿ ಪೂರ್ಣನೋಟ ಮುಗಿದೇ ಹೋಗುತ್ತಿತ್ತು. ಅದೇನೇ ಇರಲಿ, ಹೇಗೆ ಇರಲಿ, ಅಂದು ಆ ಚಿತ್ರಯಂತ್ರದಲ್ಲಿ ನಡೆದ ಫಿಲ್ಮಿನ ಅಳತೆ, ಫಿಲ್ಮಿನ ಬದಿಯಲ್ಲಿ ಒಂದು ಸಮಾಂತರದಲ್ಲಿರುವ, ಯಂತ್ರದಲ್ಲಿ ಚಲಿಸಲನುಕೂಲವಾಗುವ ರಂಧ್ರಗಳು (Sprocket holes) ಮುಂದಿನ ಯುಗಮಾನಕ್ಕೇ ಒಂದು Standard ಆಗಿ ನಿಂತವು. ಅವೇ ಅಳತೆ ಇಂದಿಗೂ ಇವೆ ಎಂಬುದು ಗಮನಾರ್ಹವಾದ ಮಾತು.

ಎಡಿಸನ್ ಅಮೇರಿಕೆಯಲ್ಲಿ ಮಾತ್ರ ಕ್ರಿ.ಶ. ೧೮೯೧ರಲ್ಲಿ ಈ ಯಂತ್ರವನ್ನು ಪೇಟೆಂಟ್ ಪ್ರಕಾರ ನೋಂದಾಯಿಸಿದ್ದನು. ಮುಂದೆ ಅದು ಕೆಲಕಾಲ, ಅಂದರೆ ಲೋಂಬಾರ್ಡ ಎಂಬೊಬ್ಬ ಶ್ರೀಮಂತನು ಕಿನೆಟೋಸ್ಕೋಪನ್ನು ಅದೊಂದು ಆಶ್ಚರ್ಯಕರವಾದ ವಸ್ತು ಎಂದು ಪರಿಗಣಿಸಿ ಚಿಕ್ಯಾಗೋದಲ್ಲಿ ನಡೆದ ಒಂದು ಪ್ರದರ್ಶನಕ್ಕೆ ತೆಗೆದುಕೊಂಡು ಹೋಗುವವರೆಗೂ ಅದು ಎಡಿಸನ್‌ನ ಪ್ರಯೋಗಶಾಲೆಯಲ್ಲೇ ಇತ್ತು. ಈ ಪ್ರಚಾರದಿಂದ ಅದು ಸಾರ್ವಜನಿಕರು ನೋಡುವಂತಾಯಿತು.

ಇದೇ ವೇಳೆಗೆ ಯೂರೋಪದ ಬೇರೆ ಬೇರೆ ದೇಶಗಳಲ್ಲಿ ತರತರದ ಸಂಶೋಧನೆಗಳು ನಡೆದೇ ಇದ್ದವು. ಇಂಥ ಶೋಧನೆಗಳಲ್ಲಿ ಲುಮಿರೆ ಬಂಧುಗಳು (ಲೂಯಿಸ್ ಹಾಗೂ ಆಗಸ್ಟ) ಆಗಲೇ ಛಾಯಾಚಿತ್ರ, ವಸ್ತುಗಳನ್ನು ತಯಾರಿಸುವವರಾಗಿದ್ದರು. ಈ ವ್ಯವಸಾಯಕ್ಕೆ ತೊಡಗಲು ಹುಡುಕು ಮಾಡಿದ್ದೇ ಕಾರಣವಾಗಿ ಅವರು ಶೋಧಿಸಿದ Cinemotograph ಎಂಬ ಯಂತ್ರ, ಒಳಕೆಯಲ್ಲಿ ಬಂತು. ಅದರ ಚಾಲನೆಯು ಪ್ರತ್ಯಕ್ಷಿಕೆ ಅಲ್ಲಲ್ಲಿ ನಡೆದಿದ್ದರೂ ಸಾರ್ವಜನಿಕವಾಗಿ ೧೮೯೫ರ ಡಿಸೆಂಬರ್ ೨೮ ರಂದು ಪ್ಯಾರಿಸ್‌ನಲ್ಲಿ ನಡೆಯಿತು.



ಆರ್ಮಟರು ತಯಾರಿಸಿದ ವಿಟಾಸ್ಕೋಪ್ ಪ್ರೊಜೆಕ್ಟರ್

ಹೊಟ್ಟೆ ಮೊದಲಿನ ಮೂವಿ ಕ್ಯಾಮರಾದ ಹಿಂಬದಿ ನೋಟ

ಪ್ರಪ್ರಥಮ ೧೬ mm ಪ್ರೊಜೆಕ್ಟರ್

## ವಿಟಾಸ್ಕೋಪ್

ಹೀಗೆ ಅಲ್ಲಲ್ಲಿ ಚಲನಚಿತ್ರದ ವಿಷಯವಾಗಿ ಸರಿಯಾದ ಕ್ಯಾಮರಾ, ತಕ್ಕ ಕಚ್ಚಾಸರಕು, ಚಿತ್ರವನು ಬೃಹದೀಕರಿಸಿ ಬಿಂಬಿಸುವ ರೀತಿ, ಅದಕ್ಕೆ ಉತ್ತಮವಾದ ಯಂತ್ರ (Projector) ಮುಂತಾದವುಗಳ ಶೋಧನೆ, ಸುಧಾರಣೆಯ ಕಾಲದಲ್ಲಿ ವಾಶಿಂಗ್ಟನ್ನಿನಲ್ಲಿ ಥಾಮಸ್ ಆರ್ಮಟ್ ಎಂಬುವರು ಪ್ರೊಜೆಕ್ಟರ್ ಒಂದನ್ನು ತಯಾರಿಸಿದ್ದರು. ಅದನ್ನು ವಿಟಾಸ್ಕೋಪ್ ಎಂದು ಹೆಸರಿಸಿದ್ದನಾತ: ಇದರಲ್ಲಿ ತಾಂತ್ರಿಕ ದೃಷ್ಟಿಯಿಂದ ಸಾಕಷ್ಟು ಸುಧಾರಣೆಗಳು ಒಳಗೊಂಡಿದ್ದು, ಪರದೆಯ ಮೇಲೆ ಬೀಳುವ ಬಿಂಬದ ಚಾಲನೆ ನೋಟಕನ ಕಣ್ಣಿಗೆ ಸರಿಯಾಗಿ ಕಾಣುವಂತೆ, ಮುಂಬರುವ ಪ್ರತಿಚಿತ್ರದ ಮೊದಲು ಸ್ವಲ್ಪತಡೆ ಮುಂತಾದ ಸುಧಾರಣೆಗಳಾಗಿದ್ದವು. ಈ ಯಂತ್ರದಲ್ಲಿ ಎಡಿಸನ್‌ನು ಕಿನೆಟೋಸ್ಕೋಪ್‌ನಲ್ಲಿ ತಯಾರಿಸಿದ ಚಿತ್ರಗಳನ್ನೇ ತೋರಿಸಲಾಗುತ್ತಿತ್ತು. (ಜೂನ್ ೧೮೯೫).

## ಉದ್ಯಮದ ನಾಂದಿ

ದಿನಗಳೆದಂತೆ ತಾಂತ್ರಿಕವಾಗಿ, ಯಾಂತ್ರಿಕವಾಗಿ ಈ ಉಪಕರಣಗಳಲ್ಲಿ ಸುಧಾರಣೆಯು ನಡೆದೇ ಇತ್ತು. ಕೇವಲ ೫೦ ಅಡಿ ಚಿತ್ರವನ್ನು ರಂಧ್ರದ ಮೂಲಕವಾಗಿ ವೀಕ್ಷಿಸುವ ಬದಲು, ಇಂದು ೧೦೦೦ ಅಡಿ ಚಿತ್ರವನ್ನು ವಿಶಾಲವಾದ ಪರದೆಯ ಮೇಲೆ ಬಿಂಬಿಸುವ ಕಾಲ ಬಂದಿದೆ. ಇಷ್ಟು ಸುಧಾರಣೆಯಾದುದು ಆರ್ಮಟ್‌ನ "ವಿಟಾಸ್ಕೋಪ್" ಮೂಲಕ. ಕ್ರಿ.ಶ. ೧೮೯೬ರ ಏಪ್ರಿಲ್ ೨೩ ರಂದು ನ್ಯೂಯಾರ್ಕನಲ್ಲಿ ಸಾರ್ವತ್ರಿಕ ವಾಣಿಜ್ಯ ರೀತ್ಯಾ ಚಿತ್ರಪ್ರದರ್ಶನ ನಡೆಯಿತು. ಇದು ಜಗತ್ತಿನಲ್ಲಿ ಇನ್ನೊಂದು ವಿಶಾಲವಾಗಿ ಬೆಳೆದ ಈ ಮಹೋದ್ಯಮಕ್ಕೆ ನಾಂದಿಯಾಯಿತು.

ಈ ದಿಸೆಯಲ್ಲಿಯೇ ಕಾರ್ಯನಿರತರಾಗಿದ್ದ ಲುಮಿರೆ ಬಂಧುಗಳ ಆಸಕ್ತಿ ಇನ್ನಷ್ಟು ಹೆಚ್ಚಾಯಿತು. ಈ ಉದ್ಯೋಗದ ಭವಿಷ್ಯವನ್ನವರು ಸರಿಯಾಗಿ ಅರಿತರು. ಅವರು ಈಗ ನೀಡಿದ ಸಂಶೋಧನೆಯಲ್ಲಿ ಇನ್ನಷ್ಟು ಸುಧಾರಣೆಗಳು ಆದವು. ಅವರ "ಸಿನೇಮೊಟೋಗ್ರಾಫ್" ಚಿತ್ರ ಹಿಡಿಯುವುದಕ್ಕೂ, ಚಿತ್ರಗಳ ಮುದ್ರಣ ಪ್ರತಿಮಾಡಲೂ, ಚಿತ್ರಗಳನ್ನು ಬಿಂಬಿಸಲೂ ಒಂದು ಸಂಯುಕ್ತಯಂತ್ರವಾಗಿ ಪರಿಣಮಿಸಿತ್ತು. ಅಲ್ಲದೇ ಎಡಿಸನ್ ಶೋಧದ ಕೆಲ ತಾಂತ್ರಿಕ ಕೊರತೆಗಳನ್ನೂ ಇವರು ಸುಧಾರಿಸಿದ್ದರು. ಇದೇ ಲುಮಿರೆ ಬಂಧುಗಳು ಈ ತಮ್ಮ ಹೊಸ ಉಪಕರಣದೊಂದಿಗೆ ವಿಶ್ವಪರ್ಯಟನ ಕೈಗೊಂಡರು. ಚಿತ್ರದ ಪ್ರಚಾರವಲ್ಲದೆ, ಬೇರೆ ಬೇರೆ ದೇಶಗಳ ಜನ–ಸ್ಥಳಗಳ ಚಿತ್ರೀಕರಣ ಉದ್ದೇಶದಿಂದ ಪರದೇಶಗಳಿಗೆ ಹೊರಟರು. ಭಾರತಕ್ಕೆ ಮೊಟ್ಟಮೊದಲು ಚಲಚ್ಚಿತ್ರಗಳನ್ನು ಪರಿಚಯಿಸಿದವರೂ ಇವರೇ.

ಎಷ್ಟೋ ವಿಜ್ಞಾನಿಗಳು, ಸಂಶೋಧಕರು ಬೇರೆ ಬೇರೆ ದೇಶಗಳಲ್ಲಿ ಈ ಚಲನಚಿತ್ರ ಸಂಶೋಧನೆಯಲ್ಲಿ ದುಡಿದಿದ್ದರೂ, ಎಡಿಸನ್, ಆರ್ಮಟ್, ಲುಮಿರೆ ಬಂಧುಗಳು ಮೊದಲಿಗರಾಗಿ ನಿಲ್ಲುತ್ತಾರೆ. ಕಚ್ಚಾ ಫಿಲ್ಮ ತಯಾರಿಸುವಲ್ಲಿ ಕೊಡಕ್‌ರ ಹೆಸರನ್ನೇ ಮೊದಲಿಸುವುದು ಅವಶ್ಯ.

ಈ ಚಲಚ್ಚಿತ್ರ ಉಪಕರಣಗಳ ಸುಧಾರಣೆ ನಡೆಯುತ್ತಿದ್ದಂತೇ ಅವುಗಳು ಪೇಟೆಯಲ್ಲಿ ಬೇಕೆಂದವರಿಗೆ ಸಿಗುವಂತಾದಾಗ, ವಿವಿಧ ವಿಷಯಗಳ ಚಿತ್ರತಯಾರಕರು, ಕಲಾವಂತರು ಒಂದುಗೂಡಿದರು. ಚಿತ್ರಕ್ಕೆ ಕಥೆಯನ್ನು ಹೊಂದಿಸಿ ತಯಾರಿಸಿದ ಮೊದಲ ಚಿತ್ರವೆಂದರೆ, "The Great Train Robbery" ಎಂಬುದು. ಕ್ರಿ.ಶ. ೧೯೦೩ರಲ್ಲಿ ಎಡ್ವಿನ್ ಎಸ್. ಪೋರ್ಟರ್ ಎಂಬುವವನು ಎಡಿಸನ್ ಕ್ಯಾಮರಾ ಮೂಲಕವೇ ಸಿದ್ಧಪಡಿಸಿದ ದಾಖಲೆ ಇದೆ. ಹೀಗೆ ಸಿನೇಮಾ ತಯಾರಿಕೆಯ ಕಥೆ ಬೆಳೆದುಬರುತ್ತದೆ. ಈ ಚಿಕ್ಕ ಬರೆಹದಲ್ಲಿ ಇನ್ನೂ ಎಷ್ಟೋ ಚಿಕ್ಕ ದೊಟ್ಟ ಸಂಶೋಧಕರ, ಶೋಧನೆಗೆ ಪ್ರಯತ್ನಿಸಿದ ಮಹನೀಯರ ಹೆಸರುಗಳನ್ನು ಸ್ಥಳಾಭಾವದ ಮೂಲಕ ನಮೂದಿಸಲಾಗಿಲ್ಲ.

## ಭಾರತದಲ್ಲಿ ಚಲಚಿತ್ರ ತಯಾರಿಕೆ

ಮುಂಬಯಿಯ ಮ್ಯೂಜಿಯಂ ಎದುರಿನ ಭಾಗವನ್ನೆಲ್ಲಾ 'ಕಾಳಾಘೋಡಾ' ಎಂದೆನ್ನಲಾಗುತ್ತದೆ. ಕಿಂಗ್ ಎಡ್‌ವರ್ಡನು ಒಂದು ಕರಿಕುದುರೆಯ ಮೇಲೆ ಕುಳಿತಿದ್ದ ಪ್ರತಿಮೆ ಇಲ್ಲಿ ಇದ್ದುದರಿಂದಲೇ ಈ ಭಾಗಕ್ಕೆ "ಕಾಳಾ ಘೋಡಾ" ಎಂದೇ ಕರೆಯುತ್ತಾರೆ. ಆ ಪ್ರತಿಮೆ ಈಗ ಇಲ್ಲಿಲ್ಲವಾದರೂ ಹೆಸರು ಮಾತ್ರ ಹಾಗೆಯೇ ಇದೆ. ಈ ಭಾಗದಲ್ಲಿಯೇ "ಎಸ್‌ಪ್ಲೆನೇಡ್ ಮ್ಯಾನಶನ್" ಎಂಬುದೊಂದು ಕಟ್ಟಡ. ಇಲ್ಲಿ ಹಿಂದೆ "ವಾಟ್‌ಸನ್ ಹೋಟಲ್ಲ" ಎಂಬೊಂದು ಹೋಟಲ್ ಇತ್ತು.

ಕ್ರಿ.ಶ. ೧೮೯೬ರ ಜುಲೈ ತಿಂಗಳಿನ ೭ ರಂದು ಈ ಹೋಟೆಲ್ಲಿನಲ್ಲಿ ತಂಗಿದ್ದ ಲುಮಿರೆ ಬಂಧುಗಳು ತಮ್ಮ ಸಿನೇಮಾಟೋಗ್ರಾಫ್ ಯಂತ್ರದೊಂದಿಗಿದ್ದು, ಚಿತ್ರವನ್ನು ಪ್ರದರ್ಶಿಸಿದರು. ಬಿಳಿಪರದೆಯ ಮೇಲೆ ಚಿತ್ರಗಳು ಚಲಿಸುತ್ತಿವೆ. ಮಾತು ಮಾತ್ರ ಶೂನ್ಯ. ಅದೊಂದು ಮೂಕಚಿತ್ರ ಪ್ರದರ್ಶನ. ಆದರೆ ಭಾರತದ ಚಲಚಿತ್ರ ಇತಿಹಾಸದಲ್ಲೇ ಸುವರ್ಣಾಕ್ಷರಗಳಿಂದ ಬರೆದಿಡುವಂತಹ ಸನ್ನಿವೇಶ. ಭಾರತ ಭೂಮಿಯ ಮೇಲೆ ಪರದೆಯ ಮೇಲೆ ಚಿತ್ರ ಚಲಿಸಿದ್ದು ಅದೇ ಮೊದಲು.

ಪರದೇಶದ ಚಿತ್ರಪ್ರದರ್ಶಕರು ಎಂದಮೇಲೆ ಚಿತ್ರದ ವಿಷಯವಾದರೂ ಅದೇ ಇರಬೇಕಲ್ಲ. ಆದರೆ ಈಗ ಅವಾವೂ ಕಥಾಚಿತ್ರವಾಗಿರಲಿಲ್ಲ. ಸಾಕ್ಷ್ಯಚಿತ್ರದ ರೀತಿಯಲ್ಲಿ ಇರುವ ಕೆಲ ಚಿತ್ರಗಳೇ ಅಂದು ಪ್ರದರ್ಶಿಸಲ್ಪಟ್ಟವು. ಅದರಲ್ಲಿಯ ಕೆಲವನ್ನು ಹೆಸರಿಸಬೇಕಾದರೆ, "Arrival of a train" "Sea bath workers leaving the factory", "Ladies and soldiers on wheel" ಮುಂತಾದವುಗಳು.

Arrival of a train ಚಿತ್ರದ ಪ್ರದರ್ಶನ ಕಾಲಕ್ಕೆ ನೋಡುಗರು ಬೆರಗಾಗಿದ್ದರಷ್ಟೇ ಅಲ್ಲ. ರೈಲುಇಂಜಿನ್ ಪರದೆಯ ಮೇಲೆ ಹತ್ತಿರ ಬಂದಾಗ ತಮ್ಮ ಮೈಮೇಲೆ ಬಂದಂತಾಗಿ ಥೇಟರ್ ಬಿಟ್ಟು ಹೆದರಿ ಓಡಿಹೋದರಂತೆ! ಇದೆಲ್ಲವನ್ನೂ ಓದಿದಾಗ ಮೋಜೆನಿಸದೇ ಇರದು. ಆದರೆ ಚಿತ್ರಪಟ ನಿರ್ಮಾಣದ ಆ ಬಾಲ್ಯಾವಸ್ಥೆಯಲ್ಲಿಯೇ ಕಲೆಯ ಕಡೆಗೂ ಲಕ್ಷ್ಯಹಾಕಿದ್ದು ಗಮನಾರ್ಹ.

ಈ ಹೋಟೆಲ್ಲಿನಲ್ಲಿ ಚಿತ್ರಪ್ರದರ್ಶನ ನಡೆದಾಗ್ಗ ಪ್ರವೇಶದ ವಂತಿಗೆ ೧ ರೂ ಮಾತ್ರ. ಆದರೆ ದಿನಗಳೆದಂತೆ ನೋಡುಗರ ಸಂಖ್ಯೆ ಬೆಳೆಯುತ್ತಾ ಹೋದಂತೆಯೂ, ಎಲ್ಲ ವರ್ಗದ ಜನರಿಗೂ ಇದನ್ನು ನೋಡುವ ಲಾಭ ಸಿಗಲಿ ಎಂಬ ಉದ್ದೇಶದಿಂದ, ಚಿತ್ರಪ್ರದರ್ಶನ Novelty ಥೇಟರಿಗೆ (ನಾಟ್ಯಗೃಹ) ಸ್ಥಳಾಂತರಿಸಲಾಯಿತು. ನೋಡುಗರಿಗಾಗಿ ಮೂರು ವರ್ಗಗಳನ್ನು ಮಾಡಲಾಯಿತು.

ಪರದೆಯ ಹತ್ತಿರ ಕೊಡಲು ೨ರೂ. ಸ್ವಲ್ಪ ದೂರ




KAMATS

take pride and happiness to annuonce their Happy Deepavali Greetings to their Customers

on the eve of completion of their 25th year of Service to the Public

M/s R. P. KAMAT

Kamat Restaurant, Broadway, Hubli-20 (H. O)

With their branches in many places of –

KARNATAK, GOA, ANDHRA PRADESH & MAHARASHTRA.

ಕೂಡಲು ೧ರೂ. ಅತಿ ಹಿಂದೆ ಕುಳಿತು ನೋಡಲು ಎಂಟಾಣೆ. ಹೀಗೆ ಮೂರು ವಿಭಾಗಗಳನ್ನು ಮಾಡಲಾಗಿತ್ತು. ಇದು ಆಶ್ಚರ್ಯವಲ್ಲವೇ? ಇಂದು ತೀರ ಹಿಂದಿನ ಸ್ಥಳಗಳಿಗೆ ಹೆಚ್ಚಿನ ಬೆಲೆ ತೆರಬೇಕಾದರೆ, ಅಂದು ಆ ಲಾಭ ಕಡಿಮೆ ಹಣ ತೆತ್ತವರಿಗೆ ಸಿಕ್ಕುತ್ತಿತ್ತು. ಈ ವೇಳೆಗಾಗಲೇ Side music (ಪಕ್ಕವಾದ್ಯ)ವನ್ನು ಸೇರಿಸಲಾಗಿತ್ತು. ಜಾಹೀರಾತುಗಳಂತೂ ಪ್ರತಿದಿನ ಪತ್ರಿಕೆಗಳಲ್ಲಿ ಕಾಣಸಿಕೊಳ್ಳುತ್ತಿದ್ದವು.



ಲುಸಿರೆ ಬಂಧುಗಳು

ಲುಸಿರೆ ಬಂಧುಗಳು ನಡೆಸಿದ ಚಿತ್ರಪ್ರದರ್ಶನಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಸೇರುತ್ತಿದ್ದ ಜನರ ಗಲಭೆ ಸಂದಣಿಯಿಂದಾಗಿ ಪ್ರದರ್ಶನಾಸ್ಥಳಗಳನ್ನು ಬದಲಾಯಿಸಬೇಕಾಯಿತು. ಮುಂಬಯಿಯ ಟೌನ್ ಹಾಲ್, ಫ್ರೇಮಜಿ ಕೌಸಜೀ ಇನಸ್ಟಿಟ್ಯೂಟ್ ಮುಂತಾದ ಕಟ್ಟಡಗಳಲ್ಲಿ ನಿಯಮಿತವಾಗಿ ಚಿತ್ರಪ್ರದರ್ಶನ ನಡೆಯುತ್ತಿತ್ತು. ಅಂತೆಯೇ ಈ ಕಟ್ಟಡಗಳನ್ನೇ ಭಾರತದ ಪ್ರಪ್ರಥಮ ಸಿನೇಮಾ ಮಂದಿರಗಳೆನ್ನಲಡ್ಡಿಯಿಲ್ಲ.

ಈ ಚಿತ್ರಗಳನ್ನು ಕಂಡ ಜನ ಸಂತೋಷಿಸಿದರು. ಕೆಲವರ ಮನಸ್ಸಿನಲ್ಲಿ ಭಾರತದಲ್ಲಿಯೇ ತಾವೂ ಏಕೆ ಚಿತ್ರ ತಯಾರಿಸಬಾರದು? ಎಂಬ ಪ್ರಶ್ನೆ ಉದ್ಭವಿಸಿತು. ಈ ಕುತೂಹಲ ಅನೇಕರಲ್ಲಿ ಉಂಟಾಯಿತಾದರೂ ಕೆಲಜನ ಸುಮ್ಮನಾದರು, ಕೆಲವರು ಪ್ರಯತ್ನಿಸಿ ವಿಫಲರಾದರು. ಇನ್ನು ಕಾರ್ಯರೂಪಕ್ಕೆ ತಂದವರೆಂದರೆ ಒಬ್ಬರೇ ಒಬ್ಬರು.

## ಸಾವೆದಾದಾ

ಭಾರತ ಪರಕೀಯರ ಆಳಿಕೆಯಲ್ಲಿದ್ದ ಪರಿಣಾಮ, ದೇಶೀಯರು ಯಾವ ರೀತಿಯಲ್ಲೂ ಮುಂದುವರಿಯಬಾರದೆಂದು ಆಂಗ್ಲರು ಅಪರೋಕ್ಷವಾಗಿ






Fig. Typical strip of pictures for zoetrope. The figures appear to dance and hand round the one head which they share between them

ಝಿಯಾಟ್ರೋಪ ಮತ್ತು ಚಿತ್ರಮಾಲಿಕೆ

ಪ್ರಯತ್ನಿಸಿದ್ದುದರಿಂದಲೂ ನಮ್ಮವರ ಸಂಶೋಧಕ ಬುದ್ಧಿಗೆ ಕ್ಷಯತಗುಲಿತ್ತು. ಇಲ್ಲವಾದರೆ, ನಮ್ಮ ಪುರಾಣ ವೇದಗಳಲ್ಲಿಯೇ ನಾವು ಯಂತ್ರ, ವಿಮಾನಗಳ ವಿಷಯವಾಗಿ ತಿಳಿದಿರಲಿಲ್ಲವೇ? ಆಮೇಲೆ ಜಗತ್ತು ಮುಂದುವರಿಯುತ್ತಿದ್ದಾಗ ನಾವು ಸಾವಿರಾರು ಮೈಲಿ ಹಿಂದುಳಿದೆವು.

ಆದರೆ ಆನುವಂಶಿಕವಾಗಿ ಹುದುಗಿದ್ದ ಕಾರ್ಯಪ್ರವೃತ್ತಿಯ ಬುದ್ಧಿಗೆ, ಚಾಲನೆ ದೊರೆತರೆ ಪುಟಿದೆದ್ದು ಕುಣಿಯುತ್ತದೆ. ವಿದೇಶಗಳಲ್ಲಿ ಸಿದ್ಧವಾದ ಚಿತ್ರಗಳನ್ನು ನೋಡಿ, ಇವನ್ನು ನಾವೂ ಏಕೆ ತಯಾರಿಸಬಾರದು ಎಂದು ತೀವ್ರ ವಿಚಾರಮಾಡಿದವರು ಹರಿಶ್ಚಂದ್ರ ಸಖಾರಾಮ ಭಾಟವಡೇಕರ ಉರ್ಫ 'ಸಾವೆದಾದಾ' ಎಂಬುವವರು. ಅವರು ಕ್ಯಾಮರಾವನ್ನು ಇಲ್ಲಿಯೇ ತಯಾರಿಸಬೇಕಿರಲಿಲ್ಲ. ವಿದೇಶಗಳಲ್ಲಿ ಸಿದ್ಧವಾಗುತ್ತಿದ್ದವುಗಳನ್ನೇ (ಒಂದನ್ನು) ತರಿಸಿಕೊಂಡರು. ಭಾರತದಲ್ಲಿ ಚಲನಚಿತ್ರ ಕ್ಯಾಮರಾ ಉಪಯೋಗಿಸುವವರಲ್ಲಿ ಅವರು ಮೊದಲಿಗರಾದರು.

ಸಾವೆದಾದಾ ಅವರು ಪ್ರಥಮಹಂತದಲ್ಲಿ ಚಿತ್ರಿಸಿದ ಚಿತ್ರಗಳು ಯಾವ ಕಥಾವಸ್ತುವನ್ನೂ ಹೊಂದಿರಲಿಲ್ಲ. ಬಹ್ವಂಶ ವಿದೇಶಗಳಲ್ಲಿಯೇ ಸಿದ್ಧವಾಗುತ್ತಿದ್ದ ಚಿತ್ರಗಳ ರೀತಿಯಲ್ಲಿಯೇ ಇಂದಿನ ಸಾಕ್ಷ್ಯ ರೀತಾ ಚಿತ್ರಗಳನ್ನೇ ಅವರೂ ತಯಾರಿಸಿದರು. "ಮಲ್ಲಯುದ್ಧ" (ಕುಸ್ತಿ) "ಹಾದ್ರಿಯಲ್ಲಿ ಆಡಿಸುವ ಮಂಗನಾಟ" ಅಲ್ಲದೇ ಭಾರತೀಯರು ಪರದೇಶದಲ್ಲಿ ಶಿಕ್ಷಣ ಪಡೆದು ಮರಳಿದಾಗ ಅವರ ಸತ್ಕಾರ ಸಮಾರಂಭದ ಚಿತ್ರೀಕರಣ, ಲಾರ್ಡ ಕರ್ಝನ್‌ರ ದರಬಾರ (ಮುಂಬಯಿ) ಇಂಥ ಸಂದರ್ಭಗಳ ಚಿತ್ರೀಕರಣವನ್ನು ಮಾಡಿದರು. ಪರದೇಶದಲ್ಲಿ ತಯಾರಾಗಿ ಒಂದೇ ವರುಷದ ಅವಧಿಯಲ್ಲಿ ನಾವು ಭಾರತದಲ್ಲಿ ಚಿತ್ರಗಳನ್ನು ತಯಾರಿಸಿದೆವಲ್ಲ ಎಂಬೊಂದಭಿಮಾನ ನಮ್ಮಲ್ಲಿ ಮೂಡದೇ ಇರದು. ಆಗ ಚಿತ್ರಗಳನ್ನು ಗ್ರಹಿಸಿದರೂ, ಅವುಗಳನ್ನು ತೊಳೆಯಲು ರಾಸಾಯನಿಕ ಪ್ರಯೋಗ ಶಾಲೆಗಳಿರಲಿಲ್ಲ. ಸಾವೆದಾದಾರು ತಾವು ತೆಗೆದ ಚಿತ್ರಗಳನ್ನು ವಿದೇಶಗಳಲ್ಲಿಯೇ Process ಮಾಡಿಸಿಕೊಂಡಿದ್ದರು.

ಭಾರತೀಯರ ಸಂಶೋಧನಾ ಬುದ್ಧಿಗೆ ಗ್ರಹಣ ಹಿಡಿದಿದ್ದರೂ ಅನುಕರಣ ಶಕ್ತಿ ಮಾತ್ರ ತೀವ್ರವಾಗಿಯೇ ಇತ್ತೆಂಬುದಕ್ಕೆ ಸಾವೆದಾದಾರ ಪ್ರಯತ್ನ ಒಂದು ಸಾಕ್ಷಿಯಾಗಿದೆ. ಸಾವೆದಾದಾ ಪ್ರಥಮವಾಗಿ ಈ ಉದ್ಯೋಗದಲ್ಲಿ ತೊಡಗಿದರೂ ಅವರು ಈ ವಿಷಯದಲ್ಲಿ ಹೆಚ್ಚ ಯಶ ಗಳಿಸಿಲ್ಲವೆಂಬುದು ಚಿತ್ರದ ಇತಿಹಾಸದಿಂ ...ು ಬರುತ್ತದೆ

ಮುಂಬಯಿಯಲ್ಲಿ ಸಾವೆದಾದಾರ ಪ್ರಯತ್ನ ನಡೆದ ಕಾಲದಲ್ಲೇ ಬಂಗಾಲ (ಕಲಕತ್ತಾ)ದಲ್ಲಿ ಹೀರಾಲಾಲ ಸೇನ್, ಜ್ಯೋತಿಶ ಸರಕಾರ ಈ ಇಬ್ಬರು ಮಹನೀಯರು ಚಿತ್ರತಯಾರಿಕೆಗೆ ಪ್ರಯತ್ನಿಸಿದುದನ್ನೂ ಚಲನಚಿತ್ರ ಇತಿಹಾಸ ನಮಗೆ ಹೇಳುತ್ತದೆ. ಆರ್ಥಿಕ ಮುಗ್ಗಟ್ಟಿನಿಂದ ಅವರು ಸುಮ್ಮನಿರಬೇಕಾಯಿತು.

ಯಾವ ಕಾರಣದಿಂದಲೋ ೧೯೧೧ರ ಸುಮಾರಿಗೆ ಸಾವೆದಾದಾರು ಈ ವಿಷಯವಾಗಿ ಹಿನ್ನಡೆದಂತೆ ತೋರುತ್ತದೆ. ಇವರು ತಮ್ಮಲ್ಲಿದ್ದ ಕ್ಯಾಮರಾವನ್ನು ಏಳುನೂರ ಐವತ್ತು ರೂಪಾಯಿಗಳಿಗೆ ಎಸ್.ಎನ್. ಪಾಟಣಕರ, ವಿ.ಪಿ. ದಿವೇಕರ, ಹಾಗೂ ಎ.ಪಿ. ಕರಂದೀಕರ ಎಂಬ ಸ್ನೇಹಿತತ್ರಯರಿಗೆ ಮಾರಿದರು. ಈ ಮೂವರು ಚಿತ್ರ ನಿರ್ಮಾಣದಲ್ಲಿ ತೊಡಗಬೇಕೆಂಬ ಉದ್ದೇಶದಿಂದಲೇ ಈ ಕ್ಯಾಮರಾವನ್ನು ಕೊಂಡುಕೊಂಡರು.

## ಪ್ರಥಮ ಪ್ರಯತ್ನಗಳು

ಪೌರಾಣಿಕ ಕಥಾವಸ್ತುವನ್ನು ಆರಿಸಿ, 'ಸಾವಿತ್ರಿ' ಚಿತ್ರವನ್ನು ಇವರು ತಯಾರಿಸಿದ್ದಾರೆ. ಅದು ತೆರೆಕಾಣದಿದ್ದರೂ ಅದು ಪ್ರಪ್ರಥಮ ಭಾರತೀಯ ಕಥಾಚಿತ್ರವೆಂಬುದನ್ನು ಮರೆಯಲಾಗದು. ಚಿತ್ರವೆಲ್ಲ ಸಿದ್ಧವಾದ ಮೇಲೆಯೇ ಅದರಲ್ಲಿ ಸಾಕಷ್ಟು ತಾಂತ್ರಿಕ ದೋಷಗಳು ಉಳಿದುಕೊಂಡಿವೆ ಎಂಬುದನ್ನು ಅರಿತೊಡನೆಯೇ ಈ ಮೂವರೂ ಚಿತ್ರವನ್ನು ಮರಳಿ ಪೆಟ್ಟಿಗೆಗೆ ಸೇರಿಸಿದರು. ಹೀಗೆ ತಾವು ತಾಂತ್ರಿಕ ದೃಷ್ಟಿಯಿಂದ ಅಯಶಸ್ವಿಯಾದರೆಂದು ಅವರು ಪ್ರಯತ್ನ ಮಾತ್ರ ಬಿಡಲಿಲ್ಲ. ಭಾಗವತ ಪುರಾಣದಲ್ಲಿಯ ಜಯಮಣಿ ಮತ್ತು ವ್ಯಾಸರಿಗೆ ಸಂಬಂಧಿಸಿದ ಕಥಾವಸ್ತುವನ್ನು ಆರಿಸಿಕೊಂಡು ಹತ್ತುಸಾವಿರ ಅಡಿಯ ಚಿತ್ರವನ್ನು ನಿರ್ಮಿಸಿದರು. ಅದು ಮೂಕಚಿತ್ರ. ಅಂದ ಮೇಲೆ ಭಾಷೆಯ ತೊಡಕೂ ಇಲ್ಲ. ಈ ಚಿತ್ರಕ್ಕೆ ಇಂಗ್ಲೀಷು ಹೆಸರು "Passion V/s Learning" ಎಂದೂ, ಮರಾಠಿಯಲ್ಲಿ "ಇಂದ್ರಿಯವು ಶ್ರೇಷ್ಠವೋ ಅಥವಾ ವಿದ್ಯೆಯೋ" ಎಂದು ನಾಮಕರಣ ಮಾಡಿದರು. ಈ ಚಿತ್ರದ ಇನ್ನೊಂದು ವೈಶಿಷ್ಟ್ಯವೆಂದರೆ ಅಂದು ನಾಟ್ಯರಂಗದ ಮೇಲೆಯೇ ವಿರಳವಾಗಿ ಕಾಣುತ್ತಿದ್ದ ಸ್ತ್ರೀ ಪಾತ್ರವನ್ನು ಇವರು ಶ್ವೇತಪರದೆಯ ಮೇಲೆ ತಂದುದು. ಅಹಮದಾಬಾದಿನ "ನರ್ಮದಾ ಭಾಂಡೆ" ಎಂಬಾಕೆ ಈ ಚಿತ್ರದಲ್ಲಿ ನಟಿಸಿದ್ದು. ಈ ಮೂವರು ನಂತರ ತಯಾರಿಸಿದ ಆರುಸಾವಿರ ಅಡಿ ಉದ್ದದ ಚಿತ್ರ "ನಾರಾಯಣ ರಾವ್ ಪೇಶ್ವೆಯವರ ಮೃತ್ಯು" ಎಂಬುದು.

ಇದೇ ಸಮಯದಲ್ಲಿ, ನಾನಾಭಾಯಿ ಗೋವಿಂದ ಚಿತ್ರೆ ಎಂಬುವವರು ಚಿತ್ರ ನಿರ್ಮಾಣಕ್ಕೆ ತೊಡಗಿದರು. ಆ ಕಾಲದಲ್ಲಿ, ಪ್ರಸಿದ್ಧವಿದ್ದ ಮರಾಠಿ ನಾಟಕ ಸಂತಪುಂಡಲೀಕ ಎಂಬುದನ್ನೇ ತಮ್ಮ ಚಿತ್ರಕ್ಕಾಗಿ ಆರಿಸಿಕೊಂಡರು

ಅದರ ಚಿತ್ರಣವನ್ನು ವಿದೇಶ ಕಂಪನಿಯಾದ "ಬೆರನ್ ಆ್ಯಂಡ್ ಶೇಫರ್ಡ ಕಂಪನಿ"ಯ ಛಾಯಾಗ್ರಾಹಕ ಜಾನ್‌ಸನ್ ಮಾಡಿದರು. ದಾದಾಸಾಹೇಬ ತೋರಣೆ ಎಂಬುವರು ಈ ಚಿತ್ರವನ್ನು ದಿಗ್ದರ್ಶಿಸಿದರು. ಚಿತ್ರೆಯವರಿಗೆ ಈ ಕಾರ್ಯದಲ್ಲಿ ಅತೀವ ಸಹಕಾರಿಯಾಗಿ ನಿಂತವರು ಶ್ರೀ ಪಿ.ಆರ್. ಟಿಪನೀಸ್ ಎಂಬುವವರು. ಚಿತ್ರಪ್ರದರ್ಶನವಾದುದು ಕ್ರಿ.ಶ ೧೯೧೨ನೆಯ ಮೇ ೧೮ ರಂದು, ಮುಂಬಯಿ (ಗಿರಗಾಂವ್)ಯ ಸೆಂಡ್‌ಹರ್ಟ್ಸ್‌ರೋಡ್‌ನ ಕೊರೊನೇಶನ್ ಚಿತ್ರಗೃಹದಲ್ಲಿ.

ಶ್ರೀ ತೋರಣೆಯವರು ಗ್ರೀವ್ಸ ಕಾಟನ್ ಕಂಪೆನಿಯಲ್ಲಿ ನೌಕರರಾಗಿದ್ದರು. ಅವರಿಗೆ ಕರಾಚಿಗೆ ವರ್ಗವಾದ ನಿಮಿತ್ತ ಈ ಮೂವರು ನಿರ್ಮಾತೃರ ತಂಡ ಮುಂದೆ ಕಾರ್ಯ ಮಾಡಲೇ ಇಲ್ಲ. ಅಂದಿನ "ಟೈಮ್ಸ್ ಆಫ್ ಇಂಡಿಯಾ" ಪತ್ರಿಕೆಯಲ್ಲಿ ಪುಂಡಲೀಕ ಚಿತ್ರಪಟದ ಜಾಹೀರಾತು ಅಚ್ಚಾಗಿದೆ. ಈ ಮೂವರ ಪ್ರಯತ್ನವನ್ನು ಆ ಸಮಯದ ಮರಾಠಿಪತ್ರಿಕೆ "ಇಂದು-ಪ್ರಕಾಶ" ಶ್ಲಾಘಿಸಿ ಬರೆದಿದೆ. ಆದರೆ ಈ ಗುಂಪು ಮುರಿದುಹೋಗಿ ಮುಂದೆ ಚಿತ್ರನಿರ್ಮಾಣ ಮಾಡದಿದ್ದರೂ ಇವರ "ಪುಂಡಲೀಕ" ಚಿತ್ರವು ಪ್ರಥಮಬಾರಿಗೆ ತಯಾರಿಸಲ್ಪಟ್ಟ ಭಾರತೀಯ ಕಥಾಚಿತ್ರ ಎಂದೇ ಹೇಳಬೇಕು.

## ದಾದಾಸಾಹೇಬ ಫಾಲ್ಕೆ

ಹಾಗೆ ನೋಡಿದರೆ ಇವರಿಗಿಂತ ಮೊದಲೇ ಕೆಲ ಜನ ಚಿತ್ರನಿರ್ಮಾಣಕ್ಕೆ ಕೈಹಾಕಿದುದನ್ನು ಈ ಮೊದಲೆ ಹೇಳಲಾಗಿದೆ. ಆದರೂ ದಾದಾಸಾಹೇಬ ಫಾಲ್ಕೆ (ನಿಜನಾಮ-ಧುಂಡಿರಾಜ ಗೋವಿಂದ ಫಾಲ್ಕೆ)ಯವರೇ ಭಾರತೀಯ ಚಿತ್ರಪಿತಾಮಹರೆಂದು ಸಾರಲಾಗಿದೆ. ಐತಿಹಾಸಿಕವಾಗಿಯೇ ಅವರಿಗೆ ಈ ಮನ್ನಣೆಯನ್ನು ನೀಡಲಾಗಿದೆ. ಏಕೆ?

ಇವರಿಗಿಂತ ಮೊದಲಿನ ಪ್ರಯತ್ನಗಳು ತಾಂತ್ರಿಕ ದೃಷ್ಟಿಯಿಂದ ಪೂರ್ಣ ಭಾರತೀಯ ಆಗಿರಲಿಲ್ಲ. ವ್ಯವಸಾಯ ಉದ್ಯೋಗ ದೃಷ್ಟಿಯಿಂದಲೂ ಅವು ಪೂರ್ಣತೆಯನ್ನು ಹೊಂದಿರಲಿಲ್ಲ. ಒಂದು ಹವ್ಯಾಸಿ ರೀತಿಯಲ್ಲಿ ಫಾಲ್ಕೆಯವರಿಗಿಂತ ಮೊದಲಿನ ಪ್ರಯತ್ನಗಳು ನಡೆದವೆಂಬುದನ್ನು ಕಾಣುತ್ತೇವೆ. ಈ ಕಾರಣಗಳಿಂದಾಗಿ, ಭಾರತೀಯ ಚಿತ್ರಪಿತಾಮಹರ ಸ್ಥಾನ ದಾದಾಸಾಹೇಬ ಫಾಲ್ಕೆಯವರಿಗೇ ಸಲ್ಲುತ್ತದೆ.

ದಾದಾಸಾಹೇಬ ಫಾಲ್ಕೆ, ಒಬ್ಬ ಚಿತ್ರಕಲಾವಿದರು, ಆದರೆ ಅವರು ಕೈಹಾಕದ ಕಾರ್ಯವೇ ಇಲ್ಲ ಎಂದು ಹೇಳಬೇಕು. ಸಂಶೋಧನ ಪ್ರವೃತ್ತಿಯವರಾದ ಫಾಲ್ಕೆಯವರು ಮೆಟ್ರಿಕ್ ಪಾಸಾದ ಮೇಲೆ ಮುಂಬಯಿಯ ಜೆ.ಜೆ. ಸ್ಕೂಲ್ ಆಫ್ ಆರ್ಟನಲ್ಲಿ ಶಿಕ್ಷಣ ಪಡೆದು, ಛಾಯಾಗ್ರಹಣ ಕಲೆಯನ್ನು ಅಭ್ಯಸಿಸಿದರು. ಮುದ್ರಣ ಕಲೆಯನ್ನೂ ಅರಿತರು. ಅಂತೆಯೇ ಇನ್ನೊಬ್ಬ ಭಂಡವಾಲುದಾರನೊಂದಿಗೆ ಲಕ್ಷ್ಮಿ ಪ್ರೆಸ್ಸನ್ನು ಸ್ಥಾಪಿಸಿದರು. ಪಡಿಯಚ್ಚಿನಲ್ಲೂ ಪರಿಣತಿ ಸಾಧಿಸಿದರು. ತ್ರಿವರ್ಣ ಪಡಿಯಚ್ಚುಗಳನ್ನು ಕೂಡ ಭಾರತದಲ್ಲೇ ಸಿದ್ಧಪಡಿಸಬೇಕು ಎಂದು ಪ್ರಯತ್ನಿಸಿದವರಲ್ಲಿ ಇವರೂ ಒಬ್ಬರು. ಹೀಗೇ ಇನ್ನೂ ಕೆಲವು ತಾಂತ್ರಿಕ-ವೈಜ್ಞಾನಿಕ ಕಾರ್ಯಗಳಲ್ಲಿ ಕೈಹಾಕಿ ಹೊಸದನ್ನು ಅರಿಯಬೇಕೆಂಬ ಹಂಬಲವುಳ್ಳ ಇವರಲ್ಲಿ ರಾಷ್ಟ್ರೀಯಪ್ರಜ್ಞೆ ಮಹತ್ವಾಕಾಂಕ್ಷೆ ಬೆಳೆದುದರಲ್ಲಿ ಅಚ್ಚರಿಯೇನಿಲ್ಲ. ದೇಶೀಯಭಾವನೆ ಬಲವಾಗಿ ಬೇರೂರಿತ್ತು. ಅಂತೆಯೇ ಹೊಸದಾಗಿ ಭಾರತಕ್ಕೆ ಪ್ರವೇಶಿಸಿದ ಸಿನೇಮಾ ಕಲೆ ಇವರನ್ನು ಆಕರ್ಷಿಸಿ, ಅದರಲ್ಲಿ ಇವರು ಮಹತ್ಸಾಧನೆಗೈವಲ್ಲಿ ಮುಂದಾದುದು ಅಚ್ಚರಿಯ ಸಂಗತಿಯೇನಲ್ಲ.

ಈ ಸಮಯದಲ್ಲಿ ದಾದಾಸಾಹೇಬ ಫಾಲ್ಕೆಯವರು ಮುಂಬಯಿಯಲ್ಲೇ ವಾಸ್ತವ್ಯಹೂಡಿದ್ದರು. ಅನೇಕ ಕಾರ್ಯಗಳಲ್ಲಿ ತೊಡಗಿದ್ದರೂ ನಿತ್ಯ ಸಾಯಂಕಾಲ ಅಡ್ಡಾಡಲು ಹೋಗುವುದನ್ನು ಮಾತ್ರ ತಪ್ಪಿಸುತ್ತಿರಲಿಲ್ಲ. ಅದೊಂದು ದಿನ ಮಗುವಿನೊಂದಿಗೆ ತಿರುಗಾಡಲು ಹೋದ ಇವರು ಬಹು ವೇಳೆಯ ನಂತರ ಮನೆಗೆ ಮರಳಿದರು. ಅದಾವುದೋ ಸಂತೋಷ ಮನದಲ್ಲಿ ಆದುದನ್ನು ಇವರ ಮುಖ ಸೂಚಿಸುತ್ತಿತ್ತು. ವಿಚಾರಗಳು ಸುರುಳಿಸುರುಳಿಯಾಗಿ ಬಂದು ಹೋಗುತ್ತಿದ್ದವು. ಮಗುವಂತೂ ಅತ್ಯಾನಂದದಿಂದ ಕುಣಿಯುತ್ತಲಿತ್ತು. ಮಗು ತನ್ನ ತಾಯಿಯನ್ನು ಕಂಡೊಡನೆ,

"ಅಮ್ಮಾ, ನಾವು ಇವತ್ತೊಂದು 'ಗಮ್ಮತ್ತು' ನೋಡಿದೆವು" ಎಂದಿತು.

"ಅದೆಂಥಾ ಗಮ್ಮತ್ತೋ?..." ತಾಯಿ ಕೇಳಿದಳು.



ಎಡಿಸನ್‌ನ ಹೊಸ ಕೌತುಕ

"ಪರದೆಯ ಮೇಲೆ ಚಲಿಸುವ ಚಿತ್ರದ ಗಮ್ಮತ್ತು. ಪರದೆಯ ಮೇಲೆ ಸಾಕಷ್ಟು ಚಿತ್ರಗಳು ಚಲಿಸಿದವು. ಡಬರಿ ಟೊಪ್ಪಿಗೆಯ ಸಾಹೇಬರು, ಉಗಿಬಂಡಿ, ಆನೆ ಹುಲಿ-ಕುದುರೆ ಒಂಟೆಗಳು ಎಲ್ಲಾ ಓಡಾಡುತ್ತಿದ್ದವು. ಓಹ್! ಎಂಥಾ ಗಮ್ಮತ್ತು ಅಂತಿ." ಎಂದು ಮಗುವು ಹೇಳಿದಾಗ ತಾಯಿ ದಿಗ್ಭ್ರಮೆಗೊಂಡು ಫಾಲ್ಕೆಯವರನ್ನು ಕೇಳಿದಳು.

"ಮಗುವಿಗೇನು ತೋರಿಸಿದಿರಿ?"

"ಸಿನೇಮಾ..." ಫಾಲ್ಕೆಯವರು ನುಡಿದರು.

"ಸಿನೇಮಾ ಅಂದರೇನು?" ಎಂದು ಫಾಲ್ಕೆಯವರ ಪತ್ನಿ ಸರಸ್ವತಿಬಾಯಿಯವರು ಕೇಳಿದರು.

ದಾದಾಸಾಹೇಬರು ಆಕೆಗೆ ಹೇಗೆ ಹೇಳುವುದೆಂದು ತೋರದೆಯೇ ಹೇಳಿದರು. "ನಾಳೆ ನನ್ನೊಟ್ಟಿಗೆ ಬಾ ತೋರಿಸ್ತೀನಿ."

ಕ್ರಿ.ಶ. ೧೯೧೧ ನೆಯ ವರ್ಷದ ಕ್ರಿಸ್‌ಮಸ್ ರಜೆಯ ಒಂದುದಿನ ಸೆಂಡಹರಸ್ಟ್ ರೋಡ್‌ನಲ್ಲಿದ್ದ ಜಾಗೆ (ಇದೀಗ ಅಲ್ಲಿ ಹರಿಕಿಶನ್‌ದಾಸ ಆಸ್ಪತ್ರೆ ಇದೆ)ಯಲ್ಲಿ "ಅಮೇರಿಕಾ - ಇಂಡಿಯಾ ಸಿನೇಮಾಟೊಗ್ರಾಫ್" ಕಂಪನಿಯವರ ತಂಬೂ ಥೇಟರ್‌ಗೆ ಫಾಲ್ಕೆ ತಮ್ಮ ಪತ್ನಿ ಸರಸ್ವತಿಬಾಯಿಯವರನ್ನು ಕರೆತಂದರು. ಹೊರಗೆಲ್ಲ ಝುಗಝುಗಿಸುವ ದೀಪಗಳು, ಜನರನ್ನಾಕರ್ಷಿಸಲು ಬ್ಯಾಂಡ್ ವಾದ್ಯ. ಕ್ರಿಸ್‌ಮಸ್ ಹಬ್ಬದ ನಿಮಿತ್ತ ಅಂದು "The life of Christ" ಎಂಬ ಚಿತ್ರ ನಡೆಯುತ್ತಿತ್ತು. ಅಂತೆಯೇ ಅಂದಿನ ಪ್ರೇಕ್ಷಕರು ಹೆಚ್ಚಾಗಿ ಭಾರತೀಯ ಹಾಗೂ ಬ್ರಿಟಿಶ್ ಕ್ರಿಶ್ಚಿಯನ್ನರು, ಧರ್ಮಾಂತರಗೊಂಡವರು ಸೇರಿದ್ದರು.

ಸಿನೇಮಾ ಮುಗಿಯಿತು. ಥೇಟರ್‌ನಿಂದ ಹೊರಬೀಳುವಾಗ ಮಕ್ಕಳಂತೆ ಸರಸ್ವತಿಬಾಯಿಯವರಿಗೂ ಆಶ್ಚರ್ಯ. ಅದು ಹೇಗೆ ಗೊಂಬೆಗಳು ಪರದೆಯ ಮೇಲೆ ಚಲಿಸುತ್ತವೆ-ಮುಂತಾಗಿ ವಿವಿಧ ಪ್ರಶ್ನೆಗಳನ್ನೇ ಫಾಲ್ಕೆಯವರಿಗೆ ಕೇಳತೊಡಗಿದಳು. ದಾದಾಸಾಹೇಬರು ಸರಸ್ವತಿಬಾಯಿಗೆ ಪ್ರೊಜೆಕ್ಟರನ್ನು ತೋರಿಸಿ ವಿವ

ಠಿಸಿದರಾದರೂ ಆ ಉತ್ತರ ಸರಸ್ವತಿಬಾಯಿಯವರಿಗೆ ತಿಳಿಯದೇ ಹೋದಾಗ ದಾದಾ ಹೇಳಿದರು.

"ಎಲ್ಲಾ ನಿನಗೇ ಗೊತ್ತಾಗುತ್ತದೆ ನೋಡು ತ್ರಿರು..." ಎಂದು ಹೇಳಿದರು. ಅದೇ ವಿಚಾರದಲ್ಲಿ ಸಾಗಿದ ಸರಸ್ವತಿಬಾಯಿ ದಾರಿಯಲ್ಲಿ ಮತ್ತೆ ಕೇಳಿದರು.

"ಅದು ಹೇಗೆ?"

ಚಣಕಾಲ ಪತ್ನಿಗೆ ಏನು ಹೇಳಬೇಕೆಂಬುದೇ ಶೋಚಲಿಲ್ಲ ಫಾಲ್ಕೆಯವರಿಗೆ. ಕೊನೆಗೆ ಹೇಳಿದರು, "ಪರದೆಯ ಮೇಲೆ ಚಲಿಸುವ ಚಿತ್ರಗಳನ್ನು ತಯಾರಿಸುವುದೇ ಇನ್ನು ಮೇಲೆ ನಮ್ಮ ಉದ್ಯೋಗವಾಗಲಿದೆ." ಅವರ ಈ ನಿಶ್ಚಯದ ಧ್ವನಿಯಲ್ಲಿ ಸರಸ್ವತಿಬಾಯಿ ಸತ್ಯವನ್ನೇ ಕಂಡಳು. ದಾದಾ ಅವರ ಮುಖದ ಮೇಲೆ ನಿಶ್ಚಯ ನಿರ್ಧಾರ ಮೂಡಿದೆ.

"ಈ ಉದ್ಯೋಗ... ನಮ್ಮ ಮುಂದಿನ ಜೀವನವೇ?"

"ಅಹುದಹುದು. ಇದೇ ಇನ್ನು ಮುಂದೆ ನನ್ನ ಜೀವನದ ಧ್ಯೇಯವಾಗಲಿದೆ. ಕ್ರಿಸ್ತ ಕಂಡ ಪರದೆಯ ಮೇಲೆ ರಾಮ–ಕೃಷ್ಣರು ಬರಬೇಕು. ರಾಮ–ಕೃಷ್ಣರನ್ನು ನಮ್ಮ ಜನಕೆ ತೋರಿಸಬೇಕು..." ಎಂದರು ದಾದಾಸಾಹೇಬರು.

ಮರುಕ್ಷಣದಿಂದ ದಾದಾಸಾಹೇಬರಿಗೆ ಕೂತರೆ, ನಿಂತರೆ ಅದೇ ಚಿಂತೆ. ಚಿತ್ರನಿರ್ಮಾಣದ ವಿಷಯವಾಗಿ ಸಿಕ್ಕುವ ಪುಸ್ತಕ–ಪತ್ರಿಕೆಗಳನ್ನು ಕಲೆ ಹಾಕುವುದು, ತಂಬೂ ಥೇಟರುಗಳಿಗೆ ಹೋಗಿ, ಬಿಸಾಡಿದ ತುಂಡು ಫಿಲ್ಮಗಳನ್ನು ಕಲೆ ಹಾಕುವದು. ಯಾರು ಕಂಡರೂ ಅವರನ್ನು ಸಿನಿಮಾ ವಿಷಯವಾಗಿಯೇ ಕೇಳುವುದು... ಅದೇ ಮಾತು, ಅದೇ ಕತೆ.

ಸರಿ, ಈ ನಡತೆ ದಾದಾಸಾಹೇಬರಲ್ಲಿ ಅತೀವವಾದಾಗ ಕೆಲವರಿಗೆ ಇವರು ತಲೆಕೆಡಿಸಿಕೊಂಡಿರಬೇಕು ಎಂದಿನಿಸಿರಬಹುದು.

ದಾದಾಸಾಹೇಬರಿಗೆ ಸರಸ್ವತಿ ಪ್ರಸನ್ನಳಾಗಿದ್ದಾಳೆ ಲಕ್ಷ್ಮೀಕಟಾಕ್ಷವಾಗಿಲ್ಲ. ಚಿತ್ರನಿರ್ಮಾಣ ಮಾಡಬೇಕೆಂಬ ಛಲವಿದೆ. ಹಣವಿಲ್ಲ. ಸಾವಿರಾರು ರೂ.ಗಳ ಭಂಡವಾಲು ಬೇಕು. ಸ್ನೇಹಿತರು–ಆಪ್ತರ–ಬಾಗಿಲುಗಳನ್ನು ಇದಕ್ಕಾಗಿ ತಟ್ಟಿದರಾದರೂ ಹಾಗೆಯೇ ಮರಳಿದರು.

ಇವರಲ್ಲಿನ ಪ್ರತಿಭೆ, ಚಿತ್ರತಯಾರಿಸಬೇಕೆನ್ನುವ ಹಂಬಲ, ಮುಂತಾದವುಗಳನ್ನು ಕಂಡು ಇವರ ಸ್ನೇಹಿತರಾಗಿದ್ದ ಶ್ರೀ ನಾಡಕರ್ಣಿಯವರು ಮುಂದೆ ಬಂದು ಹತ್ತುಸಾವಿರ ರೂಪಾಯಿಗಳನ್ನು ನೀಡಿ ಪ್ರೋತ್ಸಾಹಿಸಿದರು. ಶ್ರೀ ನಾಡಕರ್ಣಿಯವರು ಫೋಟೋ ಸ್ಟುಡಿಯೋ ಒಂದನ್ನು ನಡೆಸುತ್ತಿದ್ದರು. ಹಣವು ಕೈಗೆ ಬಂದೊಡನೆಯೇ ಶ್ರೀ ಫಾಲ್ಕೆಯವರು ತಡ ಮಾಡದೇ ಲಂಡನ್ನಿಗೆ ಹೋಗಿಬಿಟ್ಟರು.

ಎರಡು ತಿಂಗಳುಗಳ ಕಾಲ ಲಂಡನ್ನಿನಲ್ಲಿ ಈ ವ್ಯವಸಾಯದಲ್ಲಿದ್ದವರನ್ನು ಕಂಡು, ಅನೇಕ ಮಾಹಿತಿ ಪಡೆದ ದಾದಾಸಾಹೇಬರು ಚಿತ್ರೀಕರಣ ಸಾಮಾಗ್ರಿಗಳೊಂದಿಗೆ ಭಾರತಕ್ಕೆ ಮರಳಿ, ಬೇರೆ ದೊಡ್ಡಮನೆಯೊಂದನ್ನು ಬಾಡಿಗೆಗೆ ಹಿಡಿದು ವಾಸಿಸತೊಡಗಿದರು. ದೊಡ್ಡಮನೆಯೇ ಸ್ಟುಡಿಯೋ, ಪ್ರಯೋಗ ಶಾಲೆಯನ್ನಾಗಿ [illegible]. ಈಗ ರಂಧ್ರಸಹಿತವಾಗಿ [illegible]

'ವಿಟಾಸ್ಕೋಪ್' ಕಂಡುಹಿಡಿದ ಥಾಮಸ್ ಆಲ್ವಾ

ಅದಕ್ಕೆ ರಂಧ್ರಗಳನ್ನು ಮನೆಯಲ್ಲೇ ಹಾಕಬೇಕಾಗುತ್ತಿತ್ತು. ಅಂಥ ಕಾರ್ಯಗಳನ್ನೆಲ್ಲ ಸರಸ್ವತಿಬಾಯಿಯವರು ನಿರ್ವಹಿಸುತ್ತಿದ್ದರು. ಹಣ ಹಾಗೂ ಸ್ಥಳಾಭಾವದ ಮೂಲಕ ನೌಕರರನ್ನು ಹೆಚ್ಚಾಗಿ ನಿಯಮಿಸಿಕೊಳ್ಳದೆಯೇ ತಮ್ಮ ಮನೆಮಂದಿಯೊಂದಿಗೆ ಉದ್ಯಮಕ್ಕೆ ಮೊದಲು ಮಾಡಿದರು. ಮೊದಮೊದಲು 'ಟ್ರಾಯಲ್' ಎಂದು ಚಿಕ್ಕ ಚಿತ್ರಗಳನ್ನು ತಯಾರಿಸಿದರು. ಅದರ ಡೆವಲಪಿಂಗ್ ಹಾಗೂ ಪ್ರಿಂಟಿಂಗ್‌ಗಳನ್ನು ಫಾಲ್ಕೆ ದಂಪತಿಗಳೇ ನಿರ್ವಹಿಸಿದರು. ಈ ಮೊದಲು ಭಾರತದಲ್ಲಿ ಈ ಕಾರ್ಯವಾಗುತ್ತಿರಲಿಲ್ಲ. ಅದಕ್ಕಾಗಿ ಲಂಡನ್ನಿಗೆ ಹೋಗಬೇಕಾಗುತ್ತಿತ್ತು.

ಫಾಲ್ಕೆಯವರ ಪ್ರಯೋಗಗಳು ಯಶಸ್ವಿಯಾದವು. ಇನ್ನು ಚಿತ್ರನಿರ್ಮಾಣಕ್ಕೆ ತೊಡಗಬೇಕು ಎಂದಾಗ ಚಿತ್ರಕ್ಕೆ ಕಥೆ ಪೌರಾಣಿಕವೋ? ಸಾಮಾಜಿಕವೋ ಎಂದು ವಿಚಾರಿಸಿದರು. ಸಿದ್ಧವಾದ ಚಿತ್ರ ಜನಮನ್ನಣೆ ಪಡೆಯಬೇಕು. ಹಾಕಿದ ಹಣ ಮರಳಬೇಕು. ಮುಂದಿನ ಚಿತ್ರನಿರ್ಮಾಣಕ್ಕೆ ಸಹಾಯವಾಗಬೇಕು. ಇವೇ ಮುಂತಾದವುಗಳನ್ನು ಯೋಚಿಸಿ ಕೊನೆಗೆ "ರಾಜಾ ಹರಿಶ್ಚಂದ್ರ" ಚಿತ್ರವನ್ನು ನಿರ್ಮಿಸುವುದೆಂದು ನಿರ್ಧರಿಸಿದರು ಫಾಲ್ಕೆ.

ಸರಿ, ಆದರೆ ಪಾತ್ರವರ್ಗ? ಪತ್ರಿಕೆಗಳಲ್ಲಿ ಜಾಹೀರಾತು ಕೊಟ್ಟಾಗ ಬೇಕಾದ–ಬೇಡಾದ ಜನವೆಲ್ಲ ಬಂದು ಸೇರಿತು, ಆದರೆ ಬರಿ ಪುರುಷರು. ಸ್ತ್ರೀ ಪಾತ್ರಗಳಿಗೇನು ಮಾಡುವುದು? ಅನೇಕರನ್ನು ಕೇಳಿ ನಿರುತ್ತರರಾಗಿ ಬಂದದ್ದೂ ಆಯಿತು. ಕೊನೆಗೆ ಕಾಂದೇವಾಡಿಯ ಹಾಗೂ ಗ್ರಾಂಟ್‌ರೋಡ್ ಮುಂತಾದ "ಕೆಂಪು ದೀಪದ" ಸ್ಥಳಗಳಿಗೂ ಹೋಗಿ ಪಾತ್ರಕ್ಕೆ ಸ್ತ್ರೀಯರನ್ನು ಅರಿಸಿ ಸಲ್ಲದ ಮಾತನ್ನಾಡಿಸಿಕೊಂಡುದೂ ಆಯಿತು.

## ಭಾರತೀಯ ಚಿತ್ರಗಳ ನಿರ್ಮಾಣದ ಹಿನ್ನೋಟ

ಭಾರತದಲ್ಲಿ ಕ್ರಿ. ಶ. ೧೮೯೭ರಿಂದ ೧೯೧೨ರ ೧೫ ವರ್ಷಗಳ ಅವಧಿಯಲ್ಲಿ ಒಟ್ಟು ೫೫ ಚಿಕ್ಕ ಚಿತ್ರಗಳು ತಯಾರಿಸಲ್ಪಟ್ಟವು.

ಮೂಕ ಚಿತ್ರಗಳ ನಿರ್ಮಾಣ ಕಾಲ (೧೯೧೨–೧೯೩೪)ದಲ್ಲಿ ಒಟ್ಟು ೧೨೭೯ ರೂಪಕ (Feature) ಚಿತ್ರಗಳು ಭಾರತದ ಬೇರೆ ಬೇರೆ ಕೇಂದ್ರಗಳಲ್ಲಿ ಸಿದ್ಧವಾದುವು.

ಕ್ರಿ. ಶ. ೧೮೯೭ನೆಯ ವರ್ಷದಿಂದ ೧೯೬೯ರ ವರೆಗೆ ಒಟ್ಟು (ಮೂಕ ಚಿತ್ರ ಸಹಿತ) ೧೦,೫೫೬ ಚಿತ್ರಗಳು ಭಾರತದಲ್ಲಿ ತಯಾರಾದವು. ಇವುಗಳಲ್ಲಿ ೩೦೫ ವರ್ಣ ಚಿತ್ರಗಳು.

ಇವುಗಳಲ್ಲಿ ೪೧೦೪ ಹಿಂದಿ ಭಾಷೆಯ ಚಿತ್ರಗಳು. ಅವುಗಳಲ್ಲಿ ೨೪೧ ವರ್ಣ ಚಿತ್ರಗಳು.

ಹಿಂದಿ ಚಿತ್ರಗಳಲ್ಲದೆ ಬೇರೆ ದೇಶೀ ಭಾಷೆಗಳಲ್ಲಿ ಚಿತ್ರಗಳು ನಿರ್ಮಾಣವಾದವು. ತಯಾರಾದ ಒಟ್ಟು ಚಿತ್ರಗಳು ೫೧೭೩. ಅವಧಿ–ಕ್ರಿ. ಶ. ೧೯೩೧–೧೯೬೯.

| | | |
|---|---|---|
| ತಮಿಳು | — | ೧೪೭೪ |
| ಬಂಗಾಲಿ | — | ೧೧೬೮ |
| ತೆಲುಗು | — | ೯೬೬ |
| ಮರಾಠಿ | — | ೪೭೩ |
| ಮಲೆಯಾಳಂ | — | ೩೬೦ |
| ಕನ್ನಡ | — | ೩೩೫ |
| ಗುಜರಾತಿ | — | ೧೩೮ |
| ಪಂಜಾಬಿ | — | ೯೪ |
| ಒರಿಯಾ | — | ೪೧ |
| ಅಸ್ಸಾಮಿ | — | ೪೦ |
| ಆಂಗ್ಲ | — | ೨೦ |
| ಭೋಜಪುರಿ | — | ೧೮ |
| ಸಿಂಧಿ | — | ೧೧ |
| ರಾಜಸ್ಥಾನಿ | — | ೧೦ |
| ಪರ್ಶಿಯನ್ | — | ೮ |
| ಕೊಂಕಣಿ | — | ೪ |
| ಅರೇಬಿಕ್ | — | ೨ |
| ಅವಾಧಿ | — | ೨ |
| ಮಗಾಧಿ | — | ೨ |
| ನೇಪಾಳಿ | — | ೨ |
| ಛತಿಸಗರ್ಥಿ | — | ೧ |
| ಡೋಗ್ರಿ | — | ೧ |
| ಕಾಶ್ಮೀರಿ | — | ೧ |
| ಪುಸ್ತು | — | ೧ |
| ಸಿಂಹಳಿ | — | ೧ |

ಒಟ್ಟು ಭಾರತದ ವಿವಿಧ ಭಾಷೆಯಲ್ಲಿ ತಯಾರಾದ ವಾಕ್‌ಚಿತ್ರಗಳು ೯೨೭೭. (ಕ್ರಿ. ಶ. ೧೯೩೧ರಿಂದ ೧೯೬೯)

ಓರ್ವ ವೇಶ್ಯೆಯನ್ನು 'ಪಾತ್ರ ಮಾಡುವಿಯಾ?" ಎಂದು ಕೇಳಿದರೆ, ಆಕೆ,

"ನನ್ನ ಸೇಟಜಿಯವರನ್ನು ಕೇಳಿ" ಎಂದಳಂತೆ.

ಇನ್ನೊಬ್ಬ ಅರೆಮುದುಕಿಯನ್ನು ಕಂಡು ಕೇಳಿದರೆ ಆಕೆ,

"ನನ್ನ ಮಗಳನ್ನು ನೀವೇ "ಹೆಣ್ಣು ಮಾಡಿ," ಅವಳೇ ನಿಮ್ಮ ಜೊತೆಯಲ್ಲಿ ಬಂದು ಕುಣಿಯುತ್ತಾಳೆ–ಪಾತ್ರ ಮಾಡುತ್ತಾಳೆ ನಿಮ್ಮ ಸಿಣಿಮಾದಲ್ಲಿ..." ಎಂದಳು.

"ನಿಮ್ಮ ಸಿಣಿಮಾದಲ್ಲಿ ಪಾತ್ರ ಮಾಡಿದರೆ ಸಂಬಳ ಎಷ್ಟು ಕೊಡ್ತೀರಿ..." ಇದು ಇನ್ನೊಬ್ಬಳ ಪ್ರಶ್ನೆ.

"೪೦–೫೦ ರೂಪಾಯಿ ಕೊಡ್ತೀನಿ." ಕಾರ್ಯ ಕೈಗೂಡಿತೆಂಬ ಆಶೆಯಿಂದ ಫಾಲ್ಕೆ ನುಡಿದರು. ಅದಕ್ಕೆ ಆ ಹೆಣ್ಣು ಬಾಯಲ್ಲಿನ ತಂಬಾಕನ್ನು ಪಿಚ್ಚೆಂದು ಉಗುಳಿ,

"ಅಯ್ಯ ಎಪ್ಪಾ... ಅಷ್ಟ ಹಣ ಒಂದೊಂದು ರಾತ್ರ್ಯಾಗ ಸಿಗತಾವ ನಮ್ಮಪ್ಪ, ನನಗೇನ್ ನಿನ್ನ ಸಿಣಿಮಾನೂ ಬ್ಯಾಡ, ಗಿಣಿಮಾನೂ ಬ್ಯಾಡ ಹೋಗು" ಎಂದು ಹೇಳಿದಳಾಕೆ.

ಇಷ್ಟಕ್ಕೇ ಸಾಕು ಎಂದುಕೊಂಡ ಫಾಲ್ಕೆ ಕೆಂಪು ದೀಪದ ಪ್ರದೇಶ ಬಿಟ್ಟು ಹೊರಟೇಬಿಟ್ಟರು. ಹೀಗೇ ಮುಂದುವರಿಯುತ್ತಿದ್ದಾಗ ದಾರಿಯಲ್ಲಿನ ಚಹದಂಗಡಿಯೊಂದಕ್ಕೆ ಹೋದರು. ಚಹಾ ತಿಂಡಿ ಕೊಡುತ್ತಿದ್ದ ಮಾಣಿಗಳೆಡೆ ಲಕ್ಷ್ಯ ಹರಿಯಿತು. "ಇವರನ್ನೇ ಸ್ತ್ರೀ ಪಾತ್ರಕ್ಕೆ ಏಕೆ ಗೊತ್ತುಮಾಡಬಾರದು?" ಎಂಬ ವಿಚಾರವು ಸುಳಿಯಿತು ಫಾಲ್ಕೆ ಅವರನ್ನು ಕೇಳಿಯೇ ಬಿಟ್ಟರು. ಒಪ್ಪಿಗೇನೂ ಸಿಕ್ಕಿತು.

## ಸೀರೆ ಉಡುವೆ, ಮೀಸೆತೆಗೀಬೇಡಿ

ಚಿತ್ರದ ಸಿದ್ಧತೆಯಾಯಿತು. ಹೆಣ್ಣು ಪಾತ್ರಧಾರಿಗೆ ಬಣ್ಣ ಬಳಿಯಬೇಕು, ಮುಖದ ಮೇಲಿನ ಮೀಸೆ ಮಾಯವಾಗಬೇಕು. ಆದರೆ ಈ ಪಾತ್ರಕ್ಕೆ ಸಿದ್ಧವಾಗಿದ್ದ ಹುಡುಗನಿಗೆ ತಾನು ಬೆಳೆಸಿದ್ದ ಮೀಸೆಯನ್ನು ತೆಗೆಯಬಾರದೆಂಬ ಛಲ. ತನಗೆ ತಾಯಿ-ತಂದೆ ಇಬ್ಬರೂ ಇದ್ದಾರೆ. ಮೀಸೆ ತೆಗೆದರೆ ಅವರೇನಂದುಕೊಂಡಾರು? ಆತ ಕೊನೆಗೆ ಹೇಳಿದ–"ಸೀರೆ ಕೊಡಿ, ಉಡುತ್ತೇನೆ. ಆದರೆ ಮೀಸೆ ಮಾತ್ರ ತೆಗೀಬೇಡಿ" ಹುಡುಗ ಹಠ ಹಿಡಿದೇಬಿಟ್ಟ ಫಾಲ್ಕೆಯವರಿಗೆ ಈಗ ಇದು ಮತ್ತೊಂದು ಸಮಸ್ಯೆಯೇ ಆಯಿತು. ಆದರೂ ಬಹಳ ಪ್ರಯತ್ನಮಾಡಿ ಹುಡುಗನನ್ನು ಒಪ್ಪಿಸಿದ್ದೂ ಆಯಿತು.



ಸಾವೆದಾದಾ-ಭಾರತದಲ್ಲಿ ಚಲಚಿತ್ರ ಕ್ಯಾಮರಾವನ್ನು ಪ್ರಥಮವಾಗಿ ಉಪಯೋಗಿಸಿದರು

ಚಿತ್ರದ ಒಳಾಂಗಣ ಚಿತ್ರೀಕರಣಕ್ಕೆ ಸೆಟ್ಟಿಂಗ್ಸ್ ಸಿದ್ಧವಾಗಬೇಕು. ಅದುವರೆಗೆ ಹೊರಾಂಗಣ ಚಿತ್ರೀಕರಣವಾದರೂ ಮುಗಿಸಿಬಿಡಬೇಕು ಎಂದುಕೊಂಡರು ಫಾಲ್ಕೆ. ಅದಕ್ಕಾಗಿ ಮುಂಬಯಿಯ ಸಮೀಪ ಪೂನಾ ರಸ್ತೆಯಲ್ಲಿದ್ದ ಪಾಂಗ್ಲೆ ಎಂಬ ಹಳ್ಳಿಯ ಹತ್ತಿರದ ಜಾಗೆಯನ್ನು ಆರಿಸಿಕೊಂಡು ಉಪಕರಣಗಳೊಂದಿಗೆ ಅಲ್ಲಿಗೆ ಹೋದರು.

ಆ ಹಳ್ಳಿಗೆ ಚಿತ್ರೀಕರಣಕ್ಕೆ ಹೋಗಿದ್ದವರೆಲ್ಲ ಉಳಿಯಬೇಕಾದುದಾದರೂ ಎಲ್ಲಿ? ಇಂದು ನಟನಟಿಯರು ಹೋರಾಂಗಣ ಚಿತ್ರೀಕರಣಕ್ಕೆ ಹೋದರೆ ಅವರೊಟ್ಟಿಗೆ ಚಲಿಸುವ 'ಅಂಬಾಸ್ಸಡರ್' ಹೊಟೆಲ್ಲೇ ಇರುತ್ತದೆ. ಆದರೆ ಅಂದು ಹಳ್ಳಿಗೆ ಹೋಗಿದ್ದ ಜನ ಒಂದು ದೇವಸ್ಥಾನದಲ್ಲಿ, ಮುರುಕು ಮಳಿಗೆಗಳಲ್ಲಿ ವಾಸಿಸಿದರು. ಸೊಳ್ಳೆಯ ಕಾಟ. ಹಳ್ಳಿಯ ಜನರೆಲ್ಲ ಆಶ್ಚರ್ಯದಿಂದ ಇವರನ್ನು ಇವರೊಂದಿಗಿನ ಉಪಕರಣಗಳನ್ನು ನೋಡತೊಡಗಿದರು.

ಕೆಲ ಹಳ್ಳಿಯ ಜನರು–ಇವರಲ್ಲಿದ್ದ ಖಡ್ಗ, ಬರ್ಚಿ, ಭಾಲೆ–ಬಿಲ್ಲು ಬಾಣಗಳನ್ನು ಕಂಡು ಇವು ಇವರ ಬಳಿ ಏಕೆ? ಎಂದು ವಿಚಾರಿಸಿ–ತಮ್ಮಲ್ಲೇ ಗುಣಾಕಾರ ಹಾಕಿ ಇವರು ದರೋಡೆಖೋರರೇ ಆಗಿರಬೇಕು ಎಂದುಕೊಂಡರು. ಅವರಲ್ಲೊಬ್ಬ ಈ ಸುದ್ದಿಯನ್ನು ಹಳ್ಳಿಗರಿಗೆಲ್ಲ ಹೇಳಿದ. ಹೀಗೆ ಬಾಯಿಂದ ಬಾಯಿಗೆ ಹೋದ ಸುದ್ದಿಯ ಸ್ವರೂಪವೇ ಬದಲಾಯಿತು. ಹೀಗೆ ಊರಿಗೆ ಊರೇ ಭಯವಿಷ್ವಲರಾಗಿ "ನಮ್ಮನ್ನು ಉಳಿಸಿ ಸಂಕಟದಿಂದ ಪಾರು ಮಾಡಿ..." ಎಂದು ಊರ ಗೌಡನಿಗೆ ಮೊರೆ-ಹೊಕ್ಕಿತು. ಗೌಡನೂ ಬಂದು ನೋಡಿದ. ನಿಜವೆಂದೇ ಭ್ರಮಿಸಿ ಪೋಲೀಸರಿಗೆ ವರದಿಮಾಡಿದ. ಸರಿ-ಪೋಲೀಸರು ಬಂದು ಪಾತ್ರಧಾರಿಗಳನ್ನೆಲ್ಲಾ ಹಿಡಿದೊಯ್ದರು.

ಆದರೆ ಫಾಲ್ಕೆಯವರು ಪಾತ್ರಧಾರಿಗಳೊಂದಿಗೆ ಬರದೇ ಅವರನ್ನು ಮುಂಚೆ ಕಳುಹಿಸಿ ನಂತರ ತಾವು ಬಂದಿದ್ದರು. ಹೀಗಾಗಿ ಅವರು ಬಂದಾಗ ಪಾತ್ರಧಾರಿಗಳೆಲ್ಲ ತುರಂಗ ಸೇರಿದ್ದರು. ಇದೊಂದು ಸಮಸ್ಯೆಯಾಗಿಯೇ ಪರಿಣಮಿಸಿತವರಿಗೆ. ಏನೂ ತಿಳಿಯದಂತಾಯಿತು. ಕೊನೆಗೆ ಗೌಡನಿಗೆ–ಪೋಲೀಸಿನವರಿಗೆ ಹೇಳಿ ಒಪ್ಪಿಸಬೇಕಾದರೆ ಸಾಕು ಬೇಕಾಯಿತು. ಸಿನೇಮಾ ಎಂದರೇನು ತಿಳಿಯಂದ ಜನಕ್ಕೆ 'ಚಿತ್ರೀಕರಣ' ಎಂದರೇನು ತಿಳಿಯಬೇಕು? ಪ್ರಯಾಸದಿಂದ ಪಾತ್ರಧಾರಿಗಳನ್ನೆಲ್ಲ ತುರಂಗದಿಂದ ಹೊರಗೆ ತಂದುದಾಯಿತು. ಕೊನೆಗೂ ಚಿತ್ರೀಕರಣ ಆಯಿತು. ನೂರಾರು ತೊಂದರೆಗಳಿಂದಲೇ ಪ್ರಾರಂಭವಾದ "ಹರಿಶ್ಚಂದ್ರ" ತೊಂದರೆಗಳಿಂದಲೇ ಮುಕ್ತಾಯಗೊಂಡಿತು. ಮೂರುಸಾವಿರದ ಏಳನೂರಡಿ ಚಿತ್ರದ ಈ ನಿರ್ಮಾಣಕ್ಕೆ ಅವರು ಎಂಟು ತಿಂಗಳು ಕಾಲ ಶ್ರಮಿಸಿದರೆಂದು ತಿಳಿದಾಗ, ಆ ಕಾಲದಲ್ಲೇ ಅವರು ಉತ್ತಮ ಚಿತ್ರ ನಿರ್ಮಾಣಕ್ಕೆ ಎಷ್ಟೊಂದು ಶ್ರಮ ವಹಿಸಿದರೆಂಬುದು ತಿಳಿಯುತ್ತದೆ. ಇದು ಗಮನೀಯ ಅಂಶವೂ ಅಹುದು.

### ಸಿನೇಮಾಸ್ಕೋಪ್

ಪ್ರಥಮವಾಗಿ ಸಿನೇಮಾಸ್ಕೋಪಿನಲ್ಲಿ ನಿರ್ಮಾಣವಾದ ಭಾರತೀಯ ಚಿತ್ರ ಕನ್ನಡಿಗರೇ ಆಗಿದ್ದ ಶ್ರೀ ಗುರುದತ್ತ ನಿರ್ಮಿಸಿದ "ಕಾಗಜಕೆ ಫೂಲ" (ಕಪ್ಪು–ಬಿಳುಪು) ಕ್ರಿ. ಶ. ೧೯೫೯ರಲ್ಲಿ ಬಿಡುಗಡೆಯಾಯಿತು.

ವರ್ಣದಲ್ಲಿ ಸಿನೇಮಾಸ್ಕೋಪ್‌ನಲ್ಲಿ ಸಿದ್ಧವಾದ ಪ್ರಥಮ ಭಾರತೀಯ ಚಿತ್ರ–ಶ್ರೀ ಮಹೇಶ್ ಕೌಲರ "ಪ್ಯಾರ್ ಕಿ ಪ್ಯಾಸ್" ಕ್ರಿ. ಶ. ೧೯೬೧ರಲ್ಲಿ ಬಿಡುಗಡೆಯಾಯಿತು.

ಅಂದು ಫಾಲ್ಕೆಯವರು ಈ ಚಿತ್ರವನ್ನು ನಿರ್ಮಿಸಿದ್ದು "ಫಾಲ್ಕೆ ಫಿಲ್ಮ ಕಂಪೆನಿ" ಎಂಬ ಹೆಸರಿನಿಂದ ಒಡೆತನವೆಲ್ಲ ಇವರದೇ ಆಗಿತ್ತು. ಏಳು ಚಿತ್ರಗಳು ಹೊರಬಂದವು. ಏಳನೆಯದೇ "ಲಂಕಾದಹನ" ಈ ಚಿತ್ರ ಬಹಳ ಲಾಭ ತಂದಿತು. ಇದರಿಂದಾಗಿ ಉಳಿದ ಕೆಲವರ ಬಾಯಲ್ಲಿ ನೀರೂರಿಸಿತು.

ಹರಿಶ್ಚಂದ್ರ ಚಿತ್ರನಿರ್ಮಾಣ ಕಾಲದಲ್ಲಿಯೇ ಈ ವ್ಯವಸಾಯಕ್ಕೆ ಮುಂಬಯಿಯ ಹವಾಗುಣ ತಕ್ಕುದಲ್ಲವೆಂದು ಮನಗಂಡ ಫಾಲ್ಕೆಯವರು ಚಿತ್ರ



೧೮೮೨ ರಲ್ಲಿ ಮಾರೇಯವರು ತಯಾರಿಸಿದ ಫೋಟೊಗ್ರಫಿಕ್ ಗನ್ ಬದಿಯಲ್ಲಿರುವದು ಅದರಲ್ಲಿ ಚಿತ್ರಿಸಿದ ಹಕ್ಕಿ ಹಾರಾಟದ ಚಿತ್ರ

ತಯಾರಿಕೆಗಾಗಿ ನಾಸಿಕಕ್ಕೆ ತಮ್ಮ ಕಾರ್ಯಾಲಯವನ್ನು ವರ್ಗಾಯಿಸಿದರು. (ಈಗಿನಂತೆ ಆಗ ಏರ್‌-ಕಂಡಿಶನ್ ಅನುಕೂಲತೆ ಇರಲಿಲ್ಲ) ಇವರ ಮೂಲ ಸ್ಥಳವೂ ಇದೆ. (ತ್ರ್ಯಂಬಕೇಶ್ವರ) ಇವರು ಅಲ್ಲಿಗೆ ಹೋಗಿ ಐದು ವರ್ಷಗಳ ನಂತರ ತುಂಬಾ ಲಾಭದಲ್ಲಿದ್ದುದನ್ನು ಕಂಡ ಕೆಲ ಸ್ನೇಹಿತರು ಇವರೊಂದಿಗೆ ತಾವೂ ಭಂಡವಲು ಹಾಕಲು ಮುಂದೆ ಬಂದರು. ಇದನ್ನು ಕಂಡ ಫಾಲ್ಕೆಯವರಲ್ಲಿದ್ದ ನಟವರ್ಗ ಹಾಗೂ ತಾಂತ್ರಿಕವರ್ಗ ಪ್ರತಿಭಟಿಸಿ, "ನಮಗೆ ಕೇವಲ ಎರಡು ಹೊತ್ತು ಊಟವನ್ನು ನೀಡಿದರೂ ಪರವಾ ಇಲ್ಲ. ಈ ಉದ್ಯಮವನ್ನು ಬೇರೆಯವರ ಹಸ್ತಾಂತರ ಮಾಡಬೇಡಿ" ಎಂದು ಪರಿಪರಿಯಾಗಿ ಫಾಲ್ಕೆಯವರನ್ನು ಬೇಡಿಕೊಂಡರು. ತಾವು ಶ್ರಮಿಸಿ ಬೆಳೆಸಿದ ಈ ಉದ್ಯಮವನ್ನು ಬೇರೆಯವರ ಕೈಗೆ ಕೊಡುವ ಇಚ್ಛೆ ಅವರಿಗಿರಲಿಲ್ಲ.

ವಿಧಿ ಬೇರೆಯೇ ಆಗಿತ್ತು. ಯಂತ್ರಸಾಮಗ್ರಿಗಳನ್ನೆಲ್ಲ ಬೆಳೆಸಬೇಕಿತ್ತು. ಇದುವರೆಗೂ ಯಾವ ಹೆಚ್ಚಿನ ಆದಾಯವೂ ಇಲ್ಲದೇ ದುಡಿದ ಸಹಕಾರಿಗಳಿಗೆ ನಿಯಮಿತ ಸಂಬಳ ಕೊಡುವ ಹಿರಿಯಾಸೆ ಫಾಲ್ಕೆಯವರಿಗಿತ್ತು. ಈ ವಿಷಯಗಳನ್ನು ಮೆಲುಕು ಹಾಕಿ ಅವರು ಬೇರೆ ಐದು ಜನ ಭಾಗೀದಾರರನ್ನು ತಮ್ಮ ಕಂಪೆನಿಗೆ ಸೇರಿಸಿಕೊಂಡರು. "ಫಾಲ್ಕೆ ಫಿಲ ಕಂಪೆನಿ" "ಹಿಂದೂಸ್ಥಾನ ಫಿಲ್ಮ ಕಂಪೆನಿ" ಆಗಿ ಮಾ[illegible]ತು.

ಫಾಲ್ಕೆಯವರು ಅತಿ ನಿಷ್ಠುರ ಸ್ವಭಾವದವರಾಗಿದ್ದರು. ಒಂದು ದೃಶ್ಯ ಸರಿಯಾಗಿ–ಪರಿಣಾಮಕಾರಿಯಾಗಿ ಮೂಡಿ ಬರಬೇಕೆಂಬ ಇಚ್ಛೆಯಿಂದ ಒಂದೊಂದು



ದಾದಾಸಾಹೇಬ ಫಾಲ್ಕೆ

ದೃಶ್ಯವನ್ನೂ ಐದಾರು ಸಲ Re-take ತೆಗೆದುಕೊಳ್ಳುತ್ತಿದ್ದರು. ಆದರೆ ಇದು ಭಾಗೀದಾರರಲ್ಲೊಬ್ಬರಾಗಿದ್ದ ಶ್ರೀ ಪಾಠಕ ಅವರಿಗೆ ಸಹನೆಯಾಗಲಿಲ್ಲ. "ಯಾಕೆ ಸುಮ್ಮನೇ ಫಿಲ್ಮ ಹಾಗೂ ಸಮಯ ಹಾಳು ಮಾಡುತ್ತೀರಿ? ಒಮ್ಮೆಯೇ take ತೆಗೆದುಕೊಳ್ಳಬಾರದೇ?..." ಎಂದರು.

ಇದನ್ನು ಕೇಳಿದ ಶ್ರೀ ಫಾಲ್ಕೆಯವರ ಕೋಪ ನೆತ್ತಿಗೇರಿತು. "ಚಿತ್ರಕಲೆಯ ವಿಷಯವಾಗಿ ನಿಮಗೇನೂ ತಿಳಿಯದು. ಈ ಬಗ್ಗೆ ನೀವೇನೂ ಮಾತಾಡಬೇಡಿ" ಎಂದು ಹೇಳಿಬಿಟ್ಟರು. ಈ ತೆರನಾದ ಘಟನೆಗಳು ಆಗಾಗ ನಡೆಯುತ್ತಲೇ ಇದ್ದವು. ಉಳಿದ ಪಾಲುದಾರರಿಗೆ ಇದರಿಂದ ಮನಸ್ತಾಪವಾಯಿತು. ಫಾಲ್ಕೆಯವರನ್ನೇ ದೂರಮಾಡಬೇಕೆಂಬ ಉದ್ದೇಶದಿಂದ, ನಟವರ್ಗ,–ತಂತ್ರಜ್ಞರು ಮುಂತಾದವರನ್ನೆಲ್ಲ ತಮ್ಮೆಡೆ ಒಲಿಸಿಕೊಂಡರು. ಹೀಗಾಗಿ ಕೊನೆಗೊಮ್ಮೆ ಫಾಲ್ಕೆ ಹೊರಬಿದ್ದರು. "ಚಿತ್ರಪಟ ಸನ್ಯಾಸ" ಪಡೆದು ಕಾಶಿಗೆ ಹೋಗಿಬಿಟ್ಟರು.

ಈ ವೇಳೆಗಾಗಲೇ ಚಿತ್ರಪಟ ತಯಾರಿಕೆಯ ಅವಧಿಯ ಒಂದು ದಶಕ ಉರುಳಿ ಹೋಗಿತ್ತು. ಚಿತ್ರನಿರ್ಮಾಣದಲ್ಲಿ ಬೇರೆ ಎಷ್ಟೋ ಕಂಪೆನಿಗಳು ತಲೆದೋರಿದ್ದವು. ಮುಂಬಯಿಯಲ್ಲಷ್ಟೇ ಅಲ್ಲ, ಕಲಕತ್ತಾ, ಮದ್ರಾಸ್, ಕೊಲ್ಹಾಪೂರಗಳಲ್ಲೂ ಈ ಉದ್ದಿಮೆ ಪ್ರಾರಂಭವಾಗಿತ್ತಲ್ಲದೇ ಉತ್ತಮವಾದ ಚಿತ್ರಗಳನ್ನು ತಯಾರಿಸಬೇಕೆಂಬ "ಕಾಂಪಿಟೇಶನ್" ಈ ಕಂಪೆನಿಗಳಲ್ಲಿ ನಡೆದಿತ್ತು. ಶ್ರೀ ಫಾಲ್ಕೆಯವರು "ಚಿತ್ರಪಟ ಸನ್ಯಾಸ" ಸ್ವೀಕರಿಸಿದ್ದರೂ ಕೂಡ ಕಲಕತ್ತಾದ ಮದನರಂತಹವರು ಇವರ ಅನುಭವಿ ಮಾರ್ಗದರ್ಶನದ ಲಾಭ ಪಡೆಯಲಿಚ್ಛಿಸಿ ಪುನಃ ಚಿತ್ರೋದ್ಯಮಕ್ಕಿಳಿಯಲು ವಿನಂತಿಸಿಕೊಂಡರು. ಜನತೆಯ, ಪತ್ರಿಕೆಗಳ ವಿನಂತಿಯ ಮೇರೆಗೆ ಶ್ರೀ ಫಾಲ್ಕೆ ಮತ್ತೆ ಮೂರು ವರ್ಷಗಳ ನಂತರ "ಹಿಂದುಸ್ಥಾನ ಫಿಲ್ಮ ಕಂಪೆನಿ"ಗೆ ಸೇರಿಕೊಂಡರು. ಆದ[illegible] ಭಾಗೀದಾರರಾಗಿ ಅಲ್ಲ. ಒಬ್ಬ ನೌಕರರಾಗಿ.

ತದನಂತರ ಕೆಲವು ಚಿತ್ರಗಳು ಫಾಲ್ಕೆಯವರ ದಿಗ್ದರ್ಶನದಲ್ಲಿ ತೆರೆ ಕಂಡವು. ಒಟ್ಟು ೪೭ ಕಥಾ ಚಿತ್ರಗಳು–ಇವರ ನಿರ್ದೇಶನದಲ್ಲಿ ತಯಾರಾದವು. ಕೊನೆಯದೇ "ಗಂಗಾವತರಣ". ಅದು 'ಮೂಕ'ಯಲ್ಲ. 'ಟಾಕಿ' (Talkie) ಚಿತ್ರ. ಇವಲ್ಲದೇ ಬೇರೆ ೨೦ ಚಿಕ್ಕ ಚಿತ್ರಗಳನ್ನು ಶ್ರೀ ಫಾಲ್ಕೆ ತೆರೆಗೆ ತಂದರು.

ಇವರಿಗಿಂತ ಮುಂಚೆಯೇ ಎಷ್ಟೋ ಜನ ಈ ಉದ್ದಿಮೆಯಲ್ಲಿ ತೊಡಗಿದ್ದರೂ ಸಹ, ಭಾರತದಲ್ಲೇ ಫಿಲ್ಮಗಳ Process ಪ್ರಾರಂಭಿಸಿದ ಕೀರ್ತಿ ಶ್ರೀ ಫಾಲ್ಕೆಯವರಿಗೆ ಸಲ್ಲುತ್ತದೆ. ಅಂತೆಯೇ ಶ್ರೀ ಫಾಲ್ಕೆ "ಚಿತ್ರಪಿತಾಮಹ"ರೆಂದೆನಿಸಿಕೊಂಡರು.

ಫಾಲ್ಕೆಯವರ ಕೊನೆಯ ದಿನಗಳು ಬಹು ಬಿಕ್ಕಟ್ಟಿನವಾಗಿದ್ದವು. ಈ ಸಮಯಕ್ಕಾಗಲೇ ವಿ. ಶಾಂತಾರಾಮರ ಪ್ರಭಾತ ಸ್ಟುಡಿಯೋ ಪುಣೆಯಲ್ಲಿ ತಲೆಯೆತ್ತಿತ್ತು. ಅವರೇ ಶ್ರೀ ಫಾಲ್ಕೆಯವರಿಗೆ ಪ್ರತಿ ತಿಂಗಳೂ ೨೫೦–ರೂ. ಪೆನ್‌ಶನ್ ನೀಡಿ ಉಪಕರಿಸಿದರು.



THE MARVEL OF THE CENTURY.
THE WONDER OF THE WORLD
LIVING PHOTOGRAPHIC PICTURES
IN
LIFE-SIZED REPRODUCTIONS
BY
MESSRS. LUMIERE BROTHERS.
CINEMATOGRAPHE
A FEW EXHIBITIONS WILL BE GIVEN
AT
WATSON'S HOTEL
TO-NIGHT.
PROGRAMME
The Diver
ADMISSION ONE RUPEE

NOVELTY THEATRE.
FOR THREE DAYS ONLY
THURSDAY
TWO EXHIBITIONS EACH EVENING
WITH CHANGE OF PROGRAMME
MESSRS. LUMIERE BROTHERS
CINEMATOGRAPHE.
THE MARVEL OF THE CENTURY
THE WONDER OF THE WORLD
ANIMATED PHOTOGRAPHIC PICTURES
LIFE SIZE REPRODUCTIONS.
Twelve Pictures at each Exhibition
ORCHESTRA STALL and DRESS CIRCLE

ಪತ್ರಿಕೆಯಲ್ಲಿ ಬಂದ ಸಿನೆಮಾದ
[illegible]



ಫಾಲ್ಕೆಯವರು ಉಪಯೋಗಿಸಿದ ಹಾಗೂ ಭಾರತದಲ್ಲಿ ಉಪಯೋಗಿಸಿದ ಪ್ರಥಮ ಕ್ಯಾಮರಾ



ನಿಮ್ಮ

ಅಗತ್ಯದ

ಪ್ರಸಂಗದಲ್ಲಿ

# 'ಕಿರ್ಲೋಸ್ಕರ ಇಲೆಕ್ಟ್ರಿಕ್'

# ನಿಮ್ಮ ಸೇವೆಯಲ್ಲಿ

ಈ ಕೆಳಗಿನ ನಿಮ್ಮ ಅವಶ್ಯಕತೆಗಳಿಗಾಗಿ:-

ಹಾಯ್ ವ್ಹೋಲ್ಟೇಜ A C ಮೋಟರುಗಳು

ಲೋ ವ್ಹೋಲ್ಟೇಜ A C ಮೋಟರುಗಳು

ಆಲ್ಟರನೇಟರುಗಳು, ಟ್ರಾನ್ಸಫಾರ್ಮರುಗಳು

ARC ವೆಲ್ಡಿಂಗ್ ಎಕ್ವಿಪ್‌ಮೆಂಟ್‌ಗಳು

ಕಂಟ್ರೋಲ್ ಎಕ್ವಿಪ್‌ಮೆಂಟುಗಳು

ಮೋಟರೈಜ್ಡ ಸ್ಪೀಡಆಲ್ ಯುನಿಟ್‌ಗಳು (ವ್ಹೆರಿಯೇಬಲ್ ಸ್ಪೀಡ್ ಮೋಟರ್ಸ್)

ಮೋಟರೈಜ್ಡ ಗಿಯರ್ ಯುನಿಟ್‌ಗಳು (ಗಿಯರ್ಡ್ ಮೋಟರುಗಳು)

ಟಾರ್ಕ (TORQUE) ಮೋಟರುಗಳು

ಆಟೋಮ್ಯಾಟಿಕ್-ಆನ್-ಮೇನ್ಸ್ ಫೆಲ್ಯುಅರ್ ಸೆಟ್ಸ್

D C ಮಶೀನುಗಳು

ಇತ್ಯಾದಿಗಳಿಗಾಗಿ

## ಕಿರ್ಲೋಸ್ಕರ ಇಲೆಕ್ಟ್ರಿಕ್ ಕಂ. ಲಿ.

ಪೋಸ್ಟ ಬಾಕ್ಸ ನಂ. ೩೧೬
ಬೆಂಗಳೂರು-೫೬೦೦೫೫

ಪೋಸ್ಟ ಬಾಕ್ಸ ನಂ. ೧೧೩
ಹುಬ್ಬಳ್ಳಿ-೫೮೦೦೩೧

## ವಾಕ್ಸಂಕ ಚಿತ್ರ

ಫಾಲ್ಕೆಯವರು ಚಿತ್ರನಿರ್ಮಾಣದಲ್ಲಿ ಮೊದಲಿಗರಾದಂತೆ ಪ್ರಥಮವಾಗಿ ಮೂಕಚಿತ್ರಕ್ಕೆ ಮಾತು ಇತ್ತವರಲ್ಲಿ ಮೊದಲಿಗರಾದವರು ಖಾನ ಬಹಾದ್ದೂರ ಅರ್ದೇಶಿರ್ ಎಂ. ಇರಾಣಿ ಅವರು. ಅವರ "ಆಲಮ್ ಆರಾ" ಭಾರತದ ಪ್ರಥಮ ವಾಕ್ಚಿತ್ರ (Talkie) ಕ್ರಿ. ಶ. ೧೯೩೧ರ ಮಾರ್ಚ ೧೪ರಂದು ಮುಂಬಯಿಯ ಮೆಜೆಸ್ಟಿಕ್ ಥೇಟರಿನಲ್ಲಿ ಪ್ರದರ್ಶಿಸಲ್ಪಟ್ಟಿತು.

ಹೀಗೆ ಭಾರತೀಯ ಚಿತ್ರರಂಗದ ಇತಿಹಾಸ ಬೆಳೆದು ಬಂದಿದೆ. ಇನ್ನಷ್ಟು ಆಳವಾಗಿ ಅರಿಯಬೇಕೆನ್ನುವವರಿಗೆ ಈ ಲೇಖನ ಅತಿ ಚಿಕ್ಕದು ಎನಿಸುವುದು ಸಹಜ. ಇಷ್ಟು ಮಾತ್ರ ನಿಜ, ಇಂದು ವಿಪುಲವಾಗಿ ಈ ಉದ್ಯೋಗದಲ್ಲಿ ಹಣಗಳಿಸುತ್ತಿರುವ ಚಿತ್ರತಯಾರಕರು, ನಟನಟಿಯರು, ತಂತ್ರಜ್ಞರು ದಿನನಿತ್ಯ ಶ್ರೀ ಫಾಲ್ಕೆಯವರನ್ನು ನೆನೆಯಲೇಬೇಕು.

## ಕನ್ನಡನಾಡಿನಲ್ಲಿ

ಚಿತ್ರಕ್ಕೆ ಮಾತು ಇರಲಿಲ್ಲ. ಭಾಷೆಯ ತೊಂದರೆಯೇ ಇರಲಿಲ್ಲ. ಕ್ರಿ. ಶ. ೧೯೩೧ರಲ್ಲಿ ಚಿತ್ರಕ್ಕೆ ಮಾತು ಸೇರಿಸಲು ಸಾಧ್ಯವೆಂಬುದನ್ನರಿತಾಗ ಭಾರತದ ಪ್ರಮುಖ ಭಾಷೆಯವರು ತಮ್ಮ ತಮ್ಮ ಭಾಷೆಯಲ್ಲಿಯೇ ಚಿತ್ರಗಳನ್ನು ನೋಡಬಯಸಿದರು. ನಿರ್ಮಾಪಕರು ತಮ್ಮ ತಮ್ಮ ಭಾಷೆಗಳಲ್ಲೇ ಚಿತ್ರಗಳನ್ನು ತಯಾರಿಸಲು ಮುಂದಾದರು. ಹಾಗೇ ಕನ್ನಡಿಗರೂ ಮುಂಬಂದರು. ಭಕ್ತಧ್ರುವ, ಸತೀಸುಲೋಚನ ಚಿತ್ರಗಳು ಕನ್ನಡದ ಮೊದಲ ಚಿತ್ರಗಳು. ಕ್ರಿ. ಶ. ೧೯೩೪ನೆಯ ಇಸ್ವಿಯಲ್ಲಿ



"ಎಲ್ಲ ಹಬ್ಬಗಳಲ್ಲೂ 'ಹಬ್ಬ ಮಾಡಿಲ್ಲ' ಅಂತ ಹೇಳಿದ್ದು ನಿಜ. ಆದರೆ ಈ ಸಲ ದೀಪಾವಳಿ ಹಬ್ಬ ಖಂಡಿತವಾಗ್ಯೂ ಮಾಡೊಲ್ಲ, ಬೆಲೆಗಳ ಏರಿಕೆಯಿಂದ"

ಆರಂಭದ ಕೆಲಕಾಲ ಕನ್ನಡ ಚಿತ್ರೋದ್ಯಮ ನಿಧಾನವಾಗಿಯೇ ಸಾಗಿದರೂ, ಕ್ರಿ. ಶ. ೧೯೬೩ರ ನಂತರದ ಪ್ರಗತಿಯನ್ನು ಗಮನಕ್ಕೆ ತಂದುಕೊಂಡರೆ ನಾವು ಯಾರಿಗೂ ಕಡಿಮೆ ಇಲ್ಲ ಎಂದೆನಿಸದೇ ಇರದು. ನಾವೂ ಸಹ ಮುಂದುವರಿಯುತ್ತಿದ್ದೇವೆ ಎಂಬ ಹೆಮ್ಮೆ ಉಂಟಾಗುತ್ತದೆ.

### ಭಾರತದ ಪ್ರಥಮ ವರ್ಣ ಚಿತ್ರಗಳು

ಕ್ರಿ. ಶ. ೧೯೫೩ರಲ್ಲಿ ಸೊಹ್ರಾಬ್ ಮೋದಿಯವರು ಪ್ರಥಮವಾಗಿ ನಮ್ಮ ದೇಶದಲ್ಲಿ (ಟೆಕ್ನಿಕಲರ್) ವರ್ಣಚಿತ್ರವನ್ನು ತಯಾರಿಸಿದರು. ಅದೇ "ಝಾನ್ಸಿ ಕಿ ರಾಣಿ". ಈ ಚಿತ್ರ ನಿರ್ಮಾಣದಲ್ಲಿ ವಿದೇಶೀ ತಂತ್ರಜ್ಞರ ಸಲಹೆ ಸಹಾಯಗಳನ್ನು ತೆಗೆದುಕೊಳ್ಳಲಾಗಿತ್ತು.

ಕ್ರಿ. ಶ. ೧೯೫೪ರಲ್ಲಿ ಶ್ರೀ ಅಂಬಾಲಾಲ ಪಟೇಲರ "ಪಂಪೋಷ್" ಚಿತ್ರವು ಗೇವಾ ಕಲರಿನಲ್ಲಿ ಚಿತ್ರಿಸಲ್ಪಟ್ಟಿತು. ಅದು ಪೂರ್ಣವಾಗಿ ಭಾರತದಲ್ಲಿಯೇ ತೊಳೆಯಲ್ಪಟ್ಟಿತು.

ಭಾರತದಲ್ಲಿ ಪ್ರಪ್ರಥಮವಾಗಿ ಭಾರತೀಯ ತಜ್ಞರು ಹಾಗೂ ಭಾರತೀಯ ಛಾಯಾಕಾರರಿಂದಲೇ ನಿರ್ಮಿತವಾಗಿರುವ ಟೆಕ್ನಿಕಲರ್ ಚಿತ್ರವೆಂದರೆ ಶ್ರೀ ವಿ. ಶಾಂತಾರಾಮರ "ಝನಕ ಝನಕ ಪಾಯಲ್ ಬಾಜೆ" (೧೯೫೫)


ದೀಪಾವಳಿಯ ಶುಭಾಶಯಗಳು ಮತ್ತು ಹೊಸ ವರ್ಷವು
ಸರ್ವರಿಗೂ ಹರ್ಷದಾಯಕವಾಗಲೆಂದು
ಹಾರೈಸುತ್ತೇವೆ !



ಮೆ॥ ಘಾಟಗೆ ಮತ್ತು ಪಾಟೀಲ
(ಟ್ರಾನ್ಸಪೋರ್ಟ್ಸ) ಪ್ರಾ. ಲಿಮಿಟೆಡ್
517 ಇ. ಪುಣೆ-ಬೆಂಗಳೂರ ರಸ್ತೆ, ಕೊಲ್ಹಾಪುರ
ಫೋನ್ : 2116, 2118, 2351

# ದೀಪಾವಳಿ ನಾನಾವಳಿ

ಬಿ.ಎನ್. ಚಂದ್ರಕಾಂತ್



ಬೆಲೆಏರಿಕೆ ಪ್ರಯುಕ್ತ - ದೀಪಾವಳಿ ಸ್ಪೆಷಲ್ ಅಡಿಗೆ - ತಿಳೀಸಾರು - ಅನ್ನ - ಮಜ್ಜಿಗೆ... ಅಳಿಯ ಮಹರಾಯರೇ... ಚೆನ್ನಾಗಿ ಊಟ ಮಾಡಿ....!!



ಈ ಸಲದ ವಿಶೇಷ - ದೀಪ ಮಾತ್ರ ದೊಡ್ಡದು - ಎಣ್ಣೆ ಮಾತ್ರ ಬಲು ಕಡಿಮೆ...!!




ನಾನು ಸಾರ್ ಪೋಸ್ಟ್‌ಮ್ಯಾನ್ ರಂಗೋಜಿ - ರಿಟೈರ್ ಆಯಿತು... ಆದ್ದರಿಂದ ಹಳೇಯ - ದೀಪಾವಳಿ ಸಂಚಿಕೆಗಳ ಅಂಗಡಿ - ಇಟ್ಟಿದ್ದೇನೆ...!!



ದೀಪಾವಳಿ ದಿನ ತಲೆಗೆ - ಎಣ್ಣೆ ನೀರಿನ ಸ್ನಾನ ಅಂದ್ರೆ - ನನಗೆ ಬಹಳ ಖುಷಿ ರಾಯ್ರೇ...!!

ದೀಪಾವಳಿಯು ಶುಭದಾಯಕವಾಗಲಿ !

ನವಜೀವನ; ನವಚೈತನ್ಯ; ನವಯೌವನಪಡೆಯಿರಿ !!

ತಾರುಣ್ಯದಲ್ಲಿ ಅಜ್ಞಾನ ವ ದುಶ್ಚಟಗಳಿಂದ ದಾಂಪತ್ಯಜೀವನದಲ್ಲಿ ಜಿಗುಪ್ಸೆ ಹೊಂದಿದವರೂ ಮತ್ತು ಗುಪ್ತ ಲೈಂಗಿಕ ರೋಗಗಳಿಂದ ಸಾವಿರಾರು ಜನರು ನಮ್ಮ 13–14 ತರದ ಯುನಾನಿ ಮತ್ತು ಆಯುರ್ವೇದಿಕ ಔಷಧಗಳಿಂದ ಗುಣಮುಖರಾಗಿ ಬರೆದುಕೊಟ್ಟ ಅಸಲಿ ಪ್ರಮಾಣ ಪತ್ರಗಳೇ ನಮ್ಮ 38 ವರ್ಷದ ನಂಬುಗೆಯ ಚಿಕಿತ್ಸೆಗೆ ಸಾಕ್ಷಿ ಇದನ್ನು ಬೇಕಾದವರು ನೋಡಿ ನಮ್ಮ ನಂಬಿಗೆಯ ಚಿಕಿತ್ಸೆಯ ಬಗ್ಗೆ ಖಾತ್ರಿ ಮಾಡಿಕೊಳ್ಳಬಹುದು. * ನರ ದೌರ್ಬಲ್ಯ * ನಿರುತ್ಸಾಹ ಸಂತಾನ ದೋಷ * ಸ್ವಪ್ನ ದೋಷ * ಹೃದಯ ತ್ರಾಸ *ಅಜೀರ್ಣತೆ * ನಿದ್ರಾ ದೋಷ * ರಕ್ತ ದೋಷ *ಮೂತ್ರ ದೋಷ *ಕಾವಿನ ದೋಷ *ಚರ್ಮರೋಗ ಮತ್ತು ಎಲ್ಲ ತರದ ಮೂಲವ್ಯಾಧಿ ವ ಸ್ತ್ರೀಯರ ಗುಪ್ತ ರೋಗಗಳಿಗಾಗಿ ಅಪರೇಷನ್ ಇಲ್ಲದೇ ಗುಣಪಡಿಸಲಾಗುವದು.



Dr. K. A. Sheikb Specialist in Sex, Venereal and Piles

ವಿ. ಸೂ. : ಪರಸ್ಥಳಕರು ೨೦ ಪೈಸೆ ಟಿಕೇಟು ಇಟ್ಟು ವಿವರದೊಂದಿಗೆ ಬರೆಯಬಹುದು. ಅಥವಾ ಸಮಕ್ಷಮ ವಿಚಾರಿಸಬಹುದು.

ಡಾ|| ಕೆ. ಎ. ಶೇಖ Govt Regd

ಮರಾಠಾಗಲ್ಲಿ (ಅಟ್ಟದ ಮೇಲೆ) ಹುಬ್ಬಳ್ಳಿ ಫೋನ-೨೮೦೧

ಮನಿ ವಿಳಾಸ:- ಕಾಳಮ್ಮನ ಅಗಸಿ ಹತ್ತಿರ ಮುಲ್ಲಾನ ಓಣಿ, ಹುಬ್ಬಳ್ಳಿ



ದೀಪಾವಳಿಯ ಶುಭಾಶಯಗಳು !

# ಪ್ರಕಾಶ್ ಬೀಡೀಸ್

ತಯಾರಕರು:

ಪ್ರಕಾಶ್ ಬೀಡೀಸ್

(ಪ್ರೈವೇಟ್) ಲಿಮಿಟೆಡ್

ಮಂಗಳೂರು--೩

ಫೋನ್ :- | H.O. 3718 Grams
Factory 3532 "ANAND"





ನಮ್ಮೆಲ್ಲ ಮೆಂಬರದಾರರಿಗೂ ಹಾಗೂ ಹಿತೈಷಿಗಳಿಗೂ ದೀಪಾವಳಿ ಹಬ್ಬದ ಶುಭಾಶಯಗಳು!





ಲತಾ ಸರ್ಕ್ಯೂಲೇಶನ್ ಸ್ಕೀಮಿನ ಮುಖಾಂತರ ಮಾತ್ರವೇ ಹಿಂದುಸ್ತಾನದ ಮೂಲೆ – ಮೂಲೆಗೂ ಪ್ರತಿದಿನವೂ ಅನೇಕ ಪಾರ್ಸಲ್‌ಗಳು ಹೋಗುತ್ತವೆ. ಕಾರಣ ೫ ವರ್ಷ ದಿಂದಲೂ ಮುಂದುವರಿಯುತ್ತಿರುವ ವಿಶ್ವಾಸವೇ ನಮ್ಮ ಯೋಜನೆಯ ಹೆಗ್ಗುರಿ!

ನಮ್ಮ ಯೋಜನೆಯಂತೆ ಕೇವಲ ೧೦/- ರೂ. ಗಳಲ್ಲಿ ನಮ್ಮ ಆರ್ಟಿಕಲ್ ಲಿಸ್ಟಿನಲ್ಲಿಯ ಯಾವದೇ ಒಂದು ಸೆಟ್ಟನ್ನು ಪಡೆಯಬಲ್ಲಿರಿ ವಿವರಗಳಿಗೆ ೨೦ ಪೈಸೆಯ ಪೋಸ್ಟ ಸ್ಟಾಂಪಿ ನೊಂದಿಗೆ ಬರೆಯಿರಿ.

# ಲತಾ ಸರ್ಕ್ಯೂಲೇಶನ್ ಸ್ಕೀಮ್

ಬೆಂಡಿಗೇರಿ ಓಣಿ, ಹುಬ್ಬಳ್ಳಿ-20

(ಜಿಲ್ಲಾ :- ಧಾರವಾಡ)

ಜೀವನವೆ ಒಂದು ದೊಡ್ಡ ಕಥೆ. ಈ ಕಥೆಯ ಬೀಸು ಬಹಳ ಹರವಾದುದು. ವೈವಿಧ್ಯಪೂರ್ಣವಾದುದು. ಈ ಕಥಾಲೋಕದಲ್ಲಿ ಸುಖವಿದೆ, ದುಃಖವಿದೆ. ಮಾನವ ದೌರ್ಬಲ್ಯಕ್ಕೂ ಜೀವನಾದರ್ಶಕ್ಕೂ ನಿರಂತರ ಹೋರಾಟ ನಡೆದಿರುತ್ತದೆ. ಲೋಕದ ಸುಖದುಃಖಗಳಲ್ಲಿ ಮತ್ಸರ ಅಸೂಯಾಭಾವನೆಗಳಲ್ಲಿ, ಕಷ್ಟಕಾರ್ಪಣ್ಯಗಳಲ್ಲಿ ಹದವಾದ ಸಾಹಿತಿಯ ಹೃದಯವು ಸಾಹಿತ್ಯ ಸೃಷ್ಟಿಯನ್ನು ಮಾಡುತ್ತದೆ. ಅನುಭವವೇ ಈ ರಸಪಾಕ ಸಿದ್ಧಿ. ಆಳವಾದ ಅನುಭವದಿಂದ ಮೂಡಿ ಬರುವ ನಿರಂತರ ಪೃಥಃಕ್ಕರಣದಲ್ಲಿ ಪರಮಾವಧಿ ಸಿದ್ಧಿಪಡೆಯುವ ಮಹಾಸಾಧನೆಯೆ ಕಥಾಸೃಷ್ಟಿಗೆ ಬುನಾದಿ.

ಈ ಸಾಹಿತ್ಯದ ಒಳಹೊಕ್ಕು ಅನುಭವಿಸಿ ರಸಸಿದ್ಧಿಯನ್ನು ಪಡೆದುಕೊಂಡು ಕಥೆಯ ವೈಭವವನ್ನು ಚಿತ್ರರಂಗದಲ್ಲಿ ಮೂಡಿಸುವುದೇ ಚಿತ್ರರಂಗದೃಷ್ಟಿ. ಈ ಸಾಹಿತ್ಯದ ಕಾದಂಬರಿ ಕ್ಷೇತ್ರದ ಕಡೆಗೆ ಹೊರಳಿತು. ಕನ್ನಡದಲ್ಲಿಯೂ ಇಂಥ ಕಥೆಗಳಿವೆ ಎಂಬ ದೃಷ್ಟಿ ಮೂಡಲು 'ಧರ್ಮದೇವತೆ' ನಾಂದಿ ಹಾಕಿದಳು. ಕಾದಂಬರಿಗಳು ಚಿತ್ರಪಟದ ಮೇಲೆ ಬರುವ ರೋಮಾಂಚಕಾರಕ ಭಾವನೆಗಳಲ್ಲಿ ನನಗೆ ಬಂದ ಕೆಲವು ಅನುಭಗಳ ನಿರೂಪಣೆಯೇ ಈ ಲೇಖನದ ವ್ಯಾಪ್ತಿ.

ಅಂದು (೩೦-೧೧-೧೯೫೮) ಮಧ್ಯಾಹ್ನ ನಾನು ಊಟಮಾಡಿ ಕುಳಿತ ಹೊತ್ತಿನಲ್ಲಿ ಒಂದು ವ್ಯಕ್ತಿ ಬಾಗಿಲ 'ಹತ್ತಿರ ಬಂದು ನನ್ನನ್ನು ನೋಡಿ "ನೀವು ಕೃಷ್ಣಮೂರ್ತಿ ಪುರಾಣಿಕರು" ಎಂದಿತು.

"ನೀವು..."

"ನಾನು ಎ. ವಿ. ಎಂ. ರಾಮನಾಥನ್! ನಿಮ್ಮ 'ಮುತ್ತೈದೆ' ಕಾದಂಬರಿಯನ್ನು ಆಧರಿಸಿ ಚಿತ್ರಪಟ ಮಾಡಬೇಕೆಂದು ಜಿ. ಕೆ. ಪ್ರೊಡಕ್ಷನ್ಸ್‌ದ ಶ್ರೀ ಬಸವರಾಜು ಕಳಿಸಿದ್ದಾರೆ."

ಪೆಟ್ಟಿಗೆ ತುಂಬಿ ಹರಿಯುತ್ತಿತ್ತು. ಇದಕ್ಕೆ ಚಂದ್ರಬಾಬು ಕಾರಣನಾಗಿದ್ದನು. 'ಮುತ್ತೈದೆ'ಯ ಕಥೆ ಹಿಂದಕ್ಕುಳಿದು ನಗೆಯ ಅಬ್ಬರವೇ ಮಿಗಿಲಾಯಿತು. ಚಿತ್ರವನ್ನು ಹೊಗಳಿದವರು ಚಂದ್ರಬಾಬುವಿನ ಹಾಸ್ಯವನ್ನೆ ಹೊಗಳಿದರಲ್ಲದೆ ಕಥೆಯನ್ನಲ್ಲ. ಕನ್ನಡ ಕಥಾಚಿತ್ರದಲ್ಲಿ ತಮಿಳಿನ ಚಂದ್ರಬಾಬು ಮೆರೆದಾಡಿದನು.

ನನ್ನ ಮನಸ್ಸಿಗೆ ಕಚ್ ಎನ್ನಿಸಿತು. ಇದು ಕನ್ನಡದಲ್ಲಿ ಆಗಲಿಲ್ಲವೆಂಬ ಕೊರಗಿನ ಜೊತೆಗೆ ಅವಾಸ್ತವ ನಗೆ ಕಥೆಗೂ ಪೋಷಕವಾಗಿದ್ದರೂ ಇಲ್ಲದ ಜೋಡಣೆಯಿಂದ ನನಗೆ ನೋವಾಯಿತು.

ನಾನು ಮನೆಗೆ ಬಂದಾಗ ಹತ್ತಾರು ಪತ್ರಗಳು ಬಂದಿದ್ದವು. 'ಕನ್ನಡದ ಕಥೆ ತಮಿಳಿನಲ್ಲಿ ವಿದ್ರೂಪವಾಯಿತು'...'ಮುತ್ತೈದೆ'ಯನ್ನು ಓದಿದಾಗ ಆದ ಸಂತೋಷ ಚಿತ್ರವನ್ನು ನೋಡಿದಾಗ ಆಗಲೇ ಇಲ್ಲ...' 'ಮುತ್ತೈದೆ ಕನ್ನಡದಲ್ಲಿ ಬರಬೇಕಾಗಿತ್ತು....'

# ಸಾಹಿತ್ಯ ಸೃಷ್ಟಿ - ರಂಗ ದೃಷ್ಟಿ

**ಕೃಷ್ಣಮೂರ್ತಿ ಪುರಾಣಿಕ**

ದೃಷ್ಟಿ ಸಾಹಿತ್ಯಸೃಷ್ಟಿಗೆಪೋಷಕವಲ್ಲ; ವ್ಯತಿರಿಕ್ತವಲ್ಲ.

ಕಾದಂಬರಿ ಓದುವ ಕಥೆ; ಚಿತ್ರ ನೋಡುವ ಕಥೆ. ಕಾದಂಬರಿ ಕಥೆಗಳಲ್ಲಿ ಬರುವ ವಿವರಗಳು ಇಲ್ಲಿ ಸಾಂಕೇತಿಕವಾಗಿ ಬರುತ್ತವೆ. ಕಾದಂಬರಿಕಾರನ ಹೃದಯವಂತಿಕೆಯನ್ನು ತೆರೆದುತೋರಿಸುವುದೆ ಚಿತ್ರರಂಗದ, ನಿರ್ದೇಶಕನ ಮಹತ್ವಪೂರ್ಣವಾದ ಕಲೆ.

ಮೂಲಕಥೆಯಿಂದ ಆ ಕಥೆಯ ಚಿತ್ರಕಥೆಯು ಭಿನ್ನವಾಗಿರುವುದಿಲ್ಲ. ಅನಕ್ಷರಸ್ಥರಿಗೂ ತಿಳಿಯುವ ಹಾಗೆ ಅಭಿವ್ಯಕ್ತಿಗೊಳಿಸುವುದೆ ರಂಗದೃಷ್ಟಿ.

ರಂಗನಿರ್ದೇಶಕನು ಕಥೆಗಾರನ ಕೊಲೆಗಾರನಲ್ಲ. ಕಥೆ ಅವನದಲ್ಲ. ಆದುದರಿಂದ ಅದನ್ನು ವಿದ್ರೂಪಗೊಳಿಸುವ ಅಧಿಕಾರ ಅವನಿಗಿರುವುದಿಲ್ಲ. "ಮೂರನೆಯ ದರ್ಜೆಯ ಕಾದಂಬರಿ ಕಥೆಯಿಂದ ಒಂದನೆ ವರ್ಗದ ಚಿತ್ರವನ್ನು ಮಾಡಬಹುದು" ಎಂಬ ಶ್ರೀ ಗಿರೀಶ ಕಾರ್ನಾಡರ ಮಾತು ನಿರ್ದೇಶನ ಪ್ರತಿಭೆಗೆ ಮಾತ್ರ ಅನ್ವಯಿಸುವ ಮಾತು. (ಧಾರವಾಡ ಜಿಲ್ಲಾ ಸಾಹಿತ್ಯ ಸಮ್ಮೇಲನ). ಕಥೆಯುವಕೌಲ್ಯವನ್ನು ಧಿಕ್ಕರಿಸದೆ ಅದನ್ನೊಂದು ಪ್ರತಿಭಾಪೂರ್ಣ ಸಾಂಕೇತಿಕ ದೃಷ್ಟಿಯಲ್ಲಿ ಮೂಡಿಸುವ ಶ್ರೀ ಗಿರೀಶ ಕಾರ್ನಾಡರ ಪ್ರತಿಭೆ ಸಾಹಿತ್ಯಸೃಷ್ಟಿಗೆ ಪೋಷಕ; ಮಾರಕವಲ್ಲ.

ಕನ್ನಡ ಚಿತ್ರರಂಗದಲ್ಲಿ ಮೊಟ್ಟಮೊದಲು ಚಿತ್ರೀಕರಣವಾದ 'ಧರ್ಮದೇವತೆ' (೩೧-೮-೧೯೬೨) "ಕರುಣೆಯೇ ಕುಟುಂಬದ ಕಣ್ಣು" ಆಗಿ ಕನ್ನಡ ಚಿತ್ರರಂಗವನ್ನು ವಿಜೃಂಭಿಸುವಮೊದಲೆ ನನ್ನ 'ಮುತ್ತೈದೆ' 'ಸಹೋದರಿ'ಯಾಗಿ (೧೧-೧೨-೧೯೫೯) ತಮಿಳು ಚಿತ್ರರಂಗದ ಮೇಲೆ ಮೆರೆದಿದ್ದಳು. ನಮ್ಮ ನಿರ್ಮಾಪಕರ, ಚಿತ್ರನಿರ್ದೇಶಕರ ದೃಷ್ಟಿ ಈಗ ಮಾತ್ರ ಕನ್ನಡವನ್ನ ಸಂತೋಷಕ್ಕೆ ಪಾರವಿಲ್ಲದಾಯಿತು. ಶ್ರೀ ರಾಮನಾಥನ್ (ಗೆಜ್ಜೆಪೂಜೆ-ರಾಮನಾಥ) ಅವರು ಕಥೆಯ ಹಕ್ಕು ಪಡೆದುಕೊಂಡು ಹೋದಾಗ ನನಗೆ ಹೆಮ್ಮೆ ಎನ್ನಿಸಿತು.

ನಾನು ಮದ್ರಾಸಕ್ಕೆ ಹೋಗಿ ಚಿತ್ರದ 'ರಶ್' ನೋಡಿ ಬಂದಾಗ ನನ್ನ ಕಣ್ಣು ತುಂಬಿದವು. 'ಜಾನಕಿ'ಯಾಗಿ ರಾಜ ಸುಲೋಚನಾ ಅದ್ಭುತವಾಗಿ ಅಭಿನಯಿಸಿದ್ದಳು. ಅನೇಕ ದಿನಗಳವರೆಗೆ ನಾನು ಇದು ಕನ್ನಡದಲ್ಲಿ ಆಗಬಹುದೆಂದುಕೊಂಡಿದ್ದೆ. ಆದರೆ ಮೊದಲು ತಮಿಳಿನಲ್ಲಿ ಚಿತ್ರೀಕರಿಸಿ ಆಮೇಲೆ ಕನ್ನಡದಲ್ಲಿ ಮಾಡಲಾಗುವುದು ಎಂಬ ಪತ್ರದಿಂದ ನಿರಾಶೆಯಾದರೂ ಕನ್ನಡದ ಕಥೆ ತಮಿಳು ಚಿತ್ರ ಪರದೆಯನ್ನು ಅಲಂಕರಿಸಿದ ಹೆಮ್ಮೆಯಾಯಿತು. ಆದರೆ ಇಂದಿಗೂ "ಮುತ್ತೈದೆ" ಕನ್ನಡದಲ್ಲಿ ಬರಲಿಲ್ಲವೆಂಬ ಕೊರಗು ಇದ್ದೇ ಇದೆ. ಒಂದೆರಡು ಸಲ ಈ ಪ್ರಯತ್ನ ನಡೆದಂತೆ ಕಂಡಿತು. ಆದರೆ ಫಲಪ್ರದವಾಗಲಿಲ್ಲ. ಸುಪ್ರಸಿದ್ಧ ನಿರ್ದೇಶಕ ಎ. ಭೀಮಸಿಂಗ್ ಈ ಚಿತ್ರವನ್ನು ನಿರ್ದೇಶಿಸಿದ್ದರು. ನಾನು ಚಿತ್ರ ನೋಡಿ ಬಂದ ಬಳಿಕ ಅದು ಬೇಗನೆ ಬಿಡುಗಡೆಯಾಗಲಿಲ್ಲ. ಈ ಚಿತ್ರವನ್ನು ನೋಡಿದ ಹಂಚಿಕೆದಾರರು ಅಲ್ಲದೆ ಶ್ರೀ ಎ. ವಿ. ಮೇಯಪ್ಪನ್ (?) ಅವರು "ಕಥೆ ಏನೋ ಚೆನ್ನಾಗಿದೆ. ಆದರೆ ದುಡ್ಡು ಬರುವುದಿಲ್ಲ. ಜನರು ಕೇವಲ ಅಳಲಿಕ್ಕೆ ಬರುವುದಿಲ್ಲ ಸ್ವಾಮಿ! ನಗೆ ಬೇಕು" ಎಂದದ್ದರಿಂದ ಇಡೀ ಚಿತ್ರವನ್ನು ಮತ್ತೆ ಪರಾಂಬರಿಸಿ ನನ್ನ ಕಥೆಯಲ್ಲಿ ಬರುವ ಹಾಲಿನವಳಿಗೊಬ್ಬ ಪ್ರಿಯಕರನನ್ನು ಸೃಷ್ಟಿಸಲಾಯಿತು. ತಮಿಳು ಚಿತ್ರರಂಗದ ಖ್ಯಾತ ಹಾಸ್ಯನಟ ಚಂದ್ರಬಾಬುವೆ ಈ ಹೊಸ ಸೃಷ್ಟಿ, ಚಿತ್ರದ ತುಂಬ ಅವನದೇ ಖ್ಯಾತಿ.

ನಾನು ಬೆಂಗಳೂರಿನಲ್ಲಿ ಚಿತ್ರ ನೋಡಿದ್ದೆ, ಗಲ್ಲಾ

ನಾನು ನನ್ನ ಅಳಲನ್ನು ಒಬ್ಬ ಪ್ರತಿಷ್ಠಿತರ ಮುಂದೆ ಹೇಳಿದಾಗ "ಇದು ಸಿನೇಮಾ ಇಂಡಸ್ಟ್ರೀ ಸ್ವಾಮಿ! ಹಣ ಎಲ್ಲಿ ಹೆಚ್ಚು ಸಿಗುತ್ತದೆಯೋ ಅದೇ ದೇವಭಾಷೆ ಅವರಿಗೆ...ಚಂದ್ರಬಾಬು ಇರದಿದ್ದರೆ ಅವರಿಗೆ ಹಣವೇ ಆಗುತ್ತಿರಲಿಲ್ಲ." ಎಂದು ಹೇಳಿದರು.

ನನ್ನದೊಂದು ಕಥೆ 'ಸಿನೇಮಾ' ಆಯಿತೆಂಬ ಹೆಮ್ಮೆ ಕರಗಿ ನನ್ನ ಸ್ವಾಭಿಮಾನ ಜಾಗೃತವಾಗಿ ನಾನು ನಿರ್ಮಾಪಕರಿಗೆ ಕಾಗದ ಬರೆದೆ. ಅವರಿಂದ ಬಂದ ಕಾಗದ ನನಗೆ ಯಾವ ಸಮಾಧಾನವನ್ನೂ ತರಲಿಲ್ಲ.

ಸಾಹಿತಿ ತನ್ನ ಕೃತಿಯನ್ನು ಸಂತೋಷಕ್ಕಾಗಿ ಬರೆಯುತ್ತಾನೆ. ಜೀವನದ ಅರ್ಥವನ್ನು ವಿವರಿಸುತ್ತಾನೆ. ಒಮ್ಮೊಮ್ಮೆ ಅವನ ಅಪಾರ ದುಃಖವೇ ಒಳ್ಳೆಯ ಕೃತಿಯನ್ನು ಸೃಷ್ಟಿಸುತ್ತದೆ.

ಚಿತ್ರರಂಗದ ದೃಷ್ಟಿ ಬೇರೆ. ಚಿತ್ರ ಇನ್ನೊಬ್ಬರ ಸಂತೋಷಕ್ಕೂ ಮನೋರಂಜನೆಗೂಸೃಷ್ಟಿಯಾಗುತ್ತದೆ. ಇಲ್ಲಿ ಹಣಕ್ಕೆ ಪ್ರಾಧಾನ್ಯ. ಗಲ್ಲಾಪೆಟ್ಟಿಗೆಯ ಕಡೆಗೆಯೇ ಲಕ್ಷ್ಯ.

ನನ್ನ 'ಧರ್ಮದೇವತೆ' ಎಲ್ಲರ ದೃಷ್ಟಿಯಿಂದಲೂ ಯಶಸ್ವಿಯಾದ ಚಿತ್ರ (೩೧-೮-೧೯೬೨). 'ಕರುಣೆಯೇ ಕುಟುಂಬದ ಕಣ್ಣು' ಅಂಬಕ್ಕನ ಪಾತ್ರವನ್ನು ವಿಜೃಂಭಿಸಿತು. ಒಟ್ಟು, ಕುಟುಂಬದ ಆದರ್ಶದೃಷ್ಟಿ ಚಿತ್ರಕ್ಕೊಂದು ಗೌರವವನ್ನೂ ಕೊಟ್ಟಿತು. ಕನ್ನಡದಲ್ಲಿ ಮೊದಲ ಕಾದಂಬರಿ ಚಿತ್ರಣವಾದದ್ದು. ಸಾಹಿತಿಗಳಿಗೂ ಹಿಗ್ಗು. ಅಭಿಮಾನ. ಪೂರ್ವಭಾವಿ ಚಿತ್ರಪ್ರದರ್ಶನ ಒಂದು ಸಾಹಿತ್ಯ ಸಮ್ಮೇಲನದಂತೆಯೆ ನಡೆಯಿತು; ಡಿ. ವಿ. ಜಿ. ಆಶೀರ್ವದಿಸಿದರು.

ಈ ಕಥೆಯಲ್ಲಿ ಬರುವ ರಜನಿ ಕಾದಂಬರಿಯಲ್ಲಿ ಮರಣ ಹೊಂದುತ್ತಾಳೆ. ಕಥಾ ಸೃಷ್ಟಿಗೆ ಆ ಸಾವು ಅನಿ

ವಾರ್ನ್. ಚಿತ್ರದಲ್ಲಿಯೂ ಅವಳು ಸಾಯುತ್ತಾಳೆ. ಆದರೆ ಈ ಸಾವನ್ನು ಹಂಚಿಕೆದಾರರು ಸಹಿಸಲಾರರು. ಅವರಿಗೆ 'ಕಾಮಿಡಿ' ಬೇಕು. ಸಾವನ್ನು ನೋಡಲು ಜನ ಬರುವುದಿಲ್ಲ, ಜನ ಬರದಿದ್ದರೆ ಹಣ ಹೇಗೆ ಬರಬೇಕು?. ನಿರ್ಮಾಪಕನು ಅವರಿಗೆ ಶರಣಾಗಲೇಬೇಕು. ಆಯಿತು. ರಜನಿಯ ಹೆಣದ ಹತ್ತಿರ ರಾಜಕುಮಾರ ಅಂಧನಾಗಿ ಅಳುತ್ತಿರುತ್ತಾನೆ. ಒಳಗೆ ಅಂಬಿಕ್ಯನಾದ ಆದವಾನಿ ಲಕ್ಷ್ಮೀದೇವಿ, ದೇವಿಯ ಮುಂದೆ ರಜನಿಯನ್ನು ಬದುಕಿಸಲು ತಲೆಗಟ್ಟಿಸುತ್ತಿದ್ದಾಳೆ. ದೇವರಿಗೆ ಆ ಗಟ್ಟಿಸುವ ತಲೆಯ ಬಗ್ಗೆ ಕರುಣೆ ಬಂದಿತೇನೊ? ಒಂದು ಹೂ ಬೀಳುತ್ತದೆ. ಆ ಹೂವನ್ನು ತೀರ್ಥದಲ್ಲಿ ಹಾಕಿ ರಜನಿಗೆ ಸಿಂಪಡಿಸುತ್ತಾಳೆ. ರಜನಿ ಸಾವಕಾಶವಾಗಿಯಾದರೂ ಪಕ್ಕನೆ ಕಣ್ಣು ತೆರೆಯುತ್ತಾಳೆ. ಜನ ಚಪ್ಪಾಳೆ ಹಾಕುತ್ತಾರೆ.

ಅಸಂಭವವು ಸಂಭವಿಸುತ್ತದೆ. ಕಥೆಗೆ ಈ ಬೆಳವಣಿಗೆ ಅಸ್ವಾಭಾವಿಕ; ಆದರೇನು? ಚಿತ್ರರಂಗಕ್ಕೆ ಈ ಅದ್ಭುತ ಪವಾಡವೂ ಬೇಕು.

ನನ್ನ ಓದುಗ ಮಿತ್ರರು ಚೆನ್ನಾಗಿ ತರಾಟೆಗೆ ತೆಗೆದುಕೊಂಡರು. 'ಧರ್ಮದೇವತೆ'ಯನ್ನು ಓದಿ ಮುಗಿಸಿದಾಗ ಕಣ್ಣೀರು ಕಾಣಿಕೆ ಕೊಟ್ಟಿದ್ದೆ. ಚಿತ್ರ ನೋಡಿದಾಗ ನಗುವು ಬಂದಿತು. ಇಂಥವೇ ಅನೇಕ ಪತ್ರಗಳು.

ನನ್ನ ಇನ್ನೊಂದು ಕಾದಂಬರಿ 'ಕುಲವಧು' ಚಿತ್ರದಲ್ಲಿಯೂ ಕುಲವಧು. ಕಥೆಯ ಜಾಡನ್ನು ಕೊನೆಯವರೆಗೂ ಕಾಪಾಡಿಕೊಂಡಿದೆ. ನನ್ನ ಕಥೆಯಲ್ಲಿ 'ವರದಕ್ಷಿಣೆ' ಮಾಡಿದ ದುರಂತವನ್ನು ಸ್ವಲ್ಪ ವ್ಯತ್ಯಾಸಗೊಳಿಸಿ ಸಾಲದ ಬಗ್ಗೆ ಈ ದುರಂತವಾಯಿತೆನ್ನುವಂತೆ ಚಿತ್ರಿಸಲಾಗಿದೆ. ರಾಜಕುಮಾರ, ಲೀಲಾವತಿ ಕಥೆಯ ಸವಿಯನ್ನು ಚೆನ್ನಾಗಿ ಉಣಬಡಿಸಿದ್ದಾರೆ. (೩೧-೫-೧೯೬೩) ಇಲ್ಲಿ ಕೂಡ ಹಾಸ್ಯವನ್ನು ಎಳೆದು ತಂದು ನರಸಿಂಹರಾಜು, ಬಾಲಕೃಷ್ಣರಿಗೆ ಅವಕಾಶ ಮಾಡಿಕೊಡಲಾಗಿದೆ. ನಮ್ಮ ಚಿತ್ರರಂಗದಲ್ಲಿ ಕೆಲವರಿಗಾಗಿ ಸನ್ನಿವೇಶ ನಿರ್ಮಾಣ ಮಾಡುತ್ತಾರೆ. ಇದು ಇನ್ನಷ್ಟು ಅಸಹ್ಯವಾಗಿ 'ಬಂಗಾರಿ'ಯಲ್ಲಿ ತಮಿಳು ದೃಶ್ಯದ ಪಡಿಯಚ್ಚಾಗಿ ಬಂದಿದೆ. ಜಿ. ವಿ. ಅಯ್ಯರ್ ಈ ದೃಶ್ಯವನ್ನು ನರಸಿಂಹರಾಜು ಅವರಿಗಾಗಿಯೆ ಸೃಷ್ಟಿಸಿದಂತಿದೆ. ಕಥೆಗೂ ಈ ಸನ್ನಿವೇಶಕ್ಕೂ ಸಂಬಂಧವೇ ಇಲ್ಲ.

"ಬಂಗಾರಿ" ನನ್ನ 'ದೇವರ ಕೂಸು' ಕಾದಂಬರಿಯ ಚಿತ್ರ. ನಿರ್ಮಾಪಕ, ನಿರ್ದೇಶಕ, ಚಿತ್ರಬ್ರಹ್ಮ ಬಿರುದಾಂಕಿತ ಶ್ರೀ ಜಿ. ವಿ. ಅಯ್ಯರ್ ಈ ಕಥೆಯನ್ನು ತಮಗೆ ಬೇಕುಬೇಕಾದ ಹಾಗೆ ಚಿತ್ರಿಸಿದ್ದರಿಂದ ಕನ್ನಡದ ಜನತೆ ಉತ್ಸಾಹವನ್ನು ತೋರಿಸಲೇ ಇಲ್ಲ. (೧-೧೧-೧೯೬೩) ಒಂದು ಸಾಮಾನ್ಯ ಗೌಡನ ಕಥೆಯನ್ನು ನವಾಬನಂತೆ ಚಿತ್ರಿಸಲಾಗಿದೆ. ಅಸಂಭಾವ್ಯ ದೃಶ್ಯಗಳಿಂದ ಕಥೆಯ ಸೌಂದರ್ಯ ಮಾಸಿಹೋಗಿದೆ. ಕಲ್ಯಾಣಕುಮಾರ್, ವಂದನಾರಿಗೆ ಕಥೆಯ ಹರವು ತಿಳಿಯದಂತೆ ನಿರ್ದೇಶನ ಬಂದಿದೆ. ಕಥೆ ಹಾಗೂ ಕಥೆಗಾರನು ಇವರಿಗೆ ಗೌಣ. ಸಾಂಕೇತಿಕವಾಗಿ ಬರಬೇಕಾದ ತಾಯಿಯ ಭೂತವು ಹಿಂದೀ ಚಿತ್ರದ ಭಯಂಕರ ಭೂತವಾಗಿ ಚಿತ್ರದ ತುಂಬ ಹರಡಿಕೊಂಡಿದೆ. ಪರಿಣಾಮ ದೃಷ್ಟಿಯಿಂದ ದೊಡ್ಡ ಸೋಲು. ಚಿತ್ರಬ್ರಹ್ಮನೊಬ್ಬ ಚಿತ್ರ ನಿರ್ದೇಶನದಲ್ಲಿ ಚಿತ್ರ ಸುದಾಮನಾದದ್ದು ನೋಡಿದರೆ ನನಗೆ ನನ್ನ ಕನ್ನಡ ಜನತೆಯನ್ನು ಅಭಿನಂದಿಸಬೇಕೆನ್ನಿಸುತ್ತದೆ.

ಈ 'ಬಂಗಾರಿ' ಚಿತ್ರದ ಪ್ರದರ್ಶನಕ್ಕೆ ಹೋದಾಗ 'ಭಾಗೀರಥಿ' ಕಥೆಯ ಚರ್ಚೆಗಾಗಿ ಒಬ್ಬ ನಿರ್ಮಾಪಕರು, ಒಂದು ಎರಡು ದಿನ ಹಾಡಿದ್ದನ್ನೇ ಹಾಡಿದರು.

'ಭಾಗೀರಥಿ'ಯ ಕಥೆಯಲ್ಲಿ 'ಅವಳು ವಿಧವೆಯಾದ ಬಳಿಕ ಅವಳ ವ್ಯಕ್ತಿತ್ವಕ್ಕೊಂದು ಅರ್ಥ ಬರುತ್ತದೆ. ಮಕ್ಕಳನ್ನು ಸಾಕಲು ಅವಳು ಹೋರಾಡುತ್ತಾಳೆ. ಈ ಹೋರಾಟದ ಬದುಕೇ 'ಭಾಗೀರಥಿ'ಯ ಕಥೆ. ನಮ್ಮ ನಿರ್ಮಾಪಕರಿಗೆ ಭಾಗೀರಥಿ ವಿಧವೆಯಾಗುವುದು ಬೇಡವಾಯಿತು.

"ಸ್ವಾಮಿ, ಪ್ರೇಕ್ಷಕರು ಹಸಿರು ಹಣೆ, ಬೋಳು ಕೈಗಳನ್ನು ನೋಡಲು ಬರುವುದಿಲ್ಲರಿ. ಅಲ್ಲದೆ ಈ ಪಾತ್ರಕ್ಕೆ ಬರುವ ಸುಂದರಿ ಇದನ್ನು ಹೇಗೆ ಒಪ್ಪಿಯಾಳು? ಹೂವು ಮುಡಿದುಕೊಂಡು, ಭರ್ಜರಿ ಸೀರೆ ಉಟ್ಟುಕೊಂಡು, ನವಿಲಿನ ಹೆಜ್ಜೆಯಲ್ಲಿ ತಾರೆ ಬಂದರೆ ಒಂದು ಸೊಗಸು. ಒಪ್ಪಿ ಸ್ವಾಮಿ. ಚಿತ್ರ ಹೇಗೆ ಆಗುತ್ತದೆ ನೋಡಿ."

ನಾನು ಒಪ್ಪಲಿಲ್ಲ.

"ಕಥೆ ಇರುವುದೇ ಹಾಗೆ. ನಿಮ್ಮ ಸುಂದರಿಗಾಗಿ ನಾನು 'ಭಾಗೀರಥಿ'ಯ ಸೃಷ್ಟಿ ಮಾಡಲಿಲ್ಲ." ಎಂದು ಖಂಡಿತವಾಗಿ ಹೇಳಿದೆ.

"ಆಗಲಿ ಸ್ವಾಮಿ, ನಿಮ್ಮ ಮಾತನ್ನೇ ಕೇಳುತ್ತೇನೆ. ಭಾಗೀರಥಿಯ ಗಂಡ ಬದುಕಿದ್ದರೂ ಸತ್ತಂತೆ ಮಾಡಿದರಾಯಿತಲ್ಲ."

"ಅಂದರೆ?"

"ಅವನಿಗೆ ಲಕ್ವಾ (ಅರ್ಧಾಂಗ) ಹೊಡಿಸಿ, 'ಕಾಟ್'ನ ಮೇಲೆ ಮಲಗಿಸಿದರಾಯಿತು. ನಿಮ್ಮ ಕಥೆಯಂತೆ ಗಂಡ ಸತ್ತಂತೂ ಆಯಿತು; ಭಾಗೀರಥಿಯ ಕುಂಕುಮವೂ ಉಳಿಯಿತು. ಹೇಗಿದೆ ಐಡಿಯಾ ಸರ್!"

ನನಗೆ ನಗಬೇಕೋ ಅಳಬೇಕೋ ತಿಳಿಯದಾಯಿತು. ಕೊನೆಗೆ ಪಂಢರೀಬಾಯಿಯವರು ಈ ಪಾತ್ರಕ್ಕೆ ಆಯ್ಕೆಯಾದಾಗ ಎಲ್ಲವು ಕಥೆಯಂತೆ ನಡೆಯಿತು. (೨೦-೬-೧೯೬೯)

ಇದು ಚಿತ್ರರಂಗದ ದೃಷ್ಟಿ. ಕಥೆಗಿಂತ ಕಥೆಯ ಚೌಕಟ್ಟಿನಲ್ಲಿ ಇಲ್ಲವೆ ತುಸು ಅತ್ತ ಇತ್ತ ಸರಿದು ಅವಾಸ್ತವ ಸನ್ನಿವೇಶಗಳನ್ನು ಗಲ್ಲಾಪೆಟ್ಟಿಗೆಗಾಗಿ ತುರುಕುವುದು. ಸಾಮಾನ್ಯ ಮಧ್ಯಮವರ್ಗದ ಕಥೆಯಲ್ಲಿ 'ರಾಕ್ ಅಂಡ್ ರೋಲ ಕ್ಯಾಬರೆ' ತಂದರೇ ದುಡ್ಡು ಬರುವುದೆಂಬ ಭ್ರಾಂತಿ ನಿರ್ಮಾಪಕರಿಗೆ.

"ಭಾಗೀರಥಿ" ಚಿತ್ರ, ಕಥೆಯ ಜಾಡಿನಲ್ಲಿಯೇ ಹೊರಟು ಯಶಸ್ವಿಯಾಯಿತು. ಅಂದರೆ ಹಣ ಗಳಿಸಿತು.

"ಮದುವೆಯ ಹಾಡು" (೬-೧-೭೧) 'ಹೂಬಿಸಿಲು' ಆಗಿ 'ವಸುಂಧರಾ' 'ಅನಿರೀಕ್ಷಿತ'ವಾಗಿ ಅತ್ಯಂತ ಅಪಯಶಸ್ಸನ್ನು ಪಡೆದ ಕಾರಣ ಸ್ಪಷ್ಟ. ಇಲ್ಲಿ ಕಥೆ ಪಲ್ಲಟವಾಗಿ ನಾನೇ ನನ್ನ ಕಥೆಯನ್ನು ಹುಡುಕುವಂತಾದದ್ದು. ಕನ್ನಡ ಓದುಗಬಳಗವು ಸರಿಯಾಗಿ ಉತ್ತರ ಕೊಟ್ಟಿತು.

ಇಷ್ಟೆಲ್ಲ ಹೇಳಿದ ಬಳಿಕ ಒಂದು ಮಾತನ್ನು ಹೇಳಲೇಬೇಕು. ಕನ್ನಡ ಕಾದಂಬರಿಗಳು ಚಿತ್ರ ಜಗತ್ತಿಗೆ ಒಂದು ವಿಶೇಷ ದೃಷ್ಟಿಕೋನವನ್ನು ತಂದುಕೊಟ್ಟಿವೆ. ಸುಸಂಬದ್ಧವಾದ ಕಥೆ, ಬದುಕಿನ ಬೆಳವಣಿಗೆ, ವ್ಯಕ್ತಿಯ ಹೋರಾಟ ಚಿತ್ರ, ಸಾಮಾಜಿಕ ಜೀವನದ ಯಥಾರ್ಥ ಸ್ವರೂಪಗಳ ನಿರೂಪಣೆ ಈ ಚಿತ್ರಗಳನ್ನು ಜನಜೀವನದ ಹತ್ತಿರ ತಂದವು. ತಮಿಳು, ತೆಲುಗು, ಹಿಂದೀ ಕಥೆಗಳಿಗೆ ಶರಣಾಗತರಾದ ನಿರ್ಮಾಪಕರು ಕನ್ನಡದ ಕಥಾವಿಸ್ತಾರವನ್ನು ಕಂಡುಕೊಂಡರು.

ಗಲ್ಲಾಪೆಟ್ಟಿಗೆಯ ಅತಿವ್ಯಾಮೋಹವನ್ನು ತೊರೆದು ಕಥೆಯ ತಿರುಳನ್ನೇ ಕಲಾತ್ಮಕವಾಗಿ ತೋರಿಸುವ ಚಿತ್ರಗಳು ಅಪರೂಪವಾಗಿ ಬಂದರೂ ಅವು ಚಿತ್ರರಂಗದಲ್ಲಿ ಮೈಲುಗಲ್ಲುಗಳಾಗಿ ನಿಲ್ಲುತ್ತವೆ. ಗೆಜ್ಜೆ ಪೂಜೆ, ನಾಗರಹಾವು, ಬಂಗಾರದ ಮನುಷ್ಯ, ಸಂಸ್ಕಾರ, ವಂಶವೃಕ್ಷಗಳಲ್ಲಿ ಕಥೆ, ನಿರ್ದೇಶನಸಾಮರ್ಥ್ಯದೊಡನೆ ವಿಜೃಂಭಿಸಿದೆ. ಜೀವನದ ವಿವಿಧ ಮುಖಗಳನ್ನು ತೋರಿಸುವ ಕಾದಂಬರಿಗಳು ಚಿತ್ರದ ಮಹತಿಯನು ಹೆಚ್ಚಿಸಿ ಸಮಾಜ ಜೀವನಕ್ಕೆ ಉಪಕಾರ ಮಾಡುತ್ತವೆ.

ಕರ್ಮವೀರ


*WITH BEST COMPLIMENTS FROM*



Gram : FURFUROL
Office : 316968
Resi : 294656

SCIENTIFIC & INDUSTRIAL SUPPLIES CORPN.

22nd Anand Bhuvan,
Princess Street,
BOMBAY-400 002.

FINE CHEMICALS AND BIOCHEMICALS

ಕಾದಂಬರಿ ಭಕ್ತರಿಗೆ ಕಾದಂಬರಿ ಚಿತ್ರ ಪೂರ್ಣವಾಗಿ ಹಿಡಿಸುವುದು ಸಾಧ್ಯವಿಲ್ಲ. ಕಾದಂಬರಿಯಲ್ಲಿ ಬಂದ ಪ್ರತಿಯೊಂದು ಸನ್ನಿವೇಶವನ್ನೂ ಚಿತ್ರದಲ್ಲಿ ಅಳವಡಿಸಲು ಸಾಧ್ಯವಿಲ್ಲವಾಗುತ್ತದೆ. ಅಂಥವರಿಗೆ ಅತೃಪ್ತಿಯುಂಟಾಗುತ್ತದೆ. ಸಮರ್ಥ ನಿರ್ದೇಶಕನು ಇದನ್ನು ಹೋಗಲಾಡಿಸಲು ಸಾಧ್ಯವಿದ್ದರೂ ಕಥಾವಿಸ್ತಾರದ ಭಯದಲ್ಲಿ ಅವನು ಕೆಲವನ್ನು ಮೊಟಕುಗೊಳಿಸಬೇಕಾಗುತ್ತದೆ. ಅಲ್ಲದೆ ಚಿತ್ರರಂಗವೊಂದು ಉದ್ಯಮ. ಈ ಉದ್ಯಮದ ಯಶಸ್ಸಿಗೆ ಹಣ ಮುಖ್ಯ. ಆದುದರಿಂದ ಕೆಲವು ಚಿತ್ರಗಳಲ್ಲಿ ಕಾದಂಬರಿಗೆ ವ್ಯತಿರಿಕ್ತವಾದ ಸನ್ನಿವೇಶಗಳೂ ಬಂದಿವೆ. ('ಭಾಗೀರಥಿ'ಯಲ್ಲಿ ಕ್ಲಬ್ ನೃತ್ಯ.)

ನಾನೊಬ್ಬ ಪ್ರಖ್ಯಾತ ತಮಿಳು, ಹಿಂದೀ ನಿರ್ದೇಶಕರೊಡನೆ ಮದ್ರಾಸದಲ್ಲಿ ಮಾತಾಡುತ್ತಿರುವಾಗ ಅವರು "ಜನರ ಅಭಿರುಚಿಯಂತೆ ಚಿತ್ರವನ್ನು ತಯಾರಿಸಬೇಕಾಗುತ್ತದೆ. ಅದು ಕೀಳು ಅಭಿರುಚಿ ಇದ್ದರ ಅದು ಸಾಮಾಜಿಕ ದೋಷ"ವೆಂದರು.

"ಆದರೆ ಅಭಿರುಚಿಯನ್ನು ತಿದ್ದುವುದೂ ಚಿತ್ರರಂಗದ ತತ್ವವೂ ಅಹುದಲ್ಲ. ಜನ ಇಂಥದನ್ನು ಬೇಡುತ್ತಾರೆಂದು ಕಲ್ಪಿಸಿ ಕೀಳು ಅಭಿರುಚಿಯನ್ನೇಕೆ ಪ್ರದರ್ಶಿಸಬೇಕು?" ಎಂದು ನಾನು ಕೇಳಿದೆ. 'ಕ್ಯಾಬರೆ' 'ಕ್ಲಬ್ ಡಾನ್ಸ' 'ರಾಕ್ ಆಂಡ್ ರೋಲ' 'ಅರೆ ನಗ್ನ ಸ್ನಾನ ಪ್ರದರ್ಶನ'ಗಳನ್ನು ನಮ್ಮ ಬೋರೇಗೌಡನೇನು ಬಲ್ಲ ನಿರ್ದೇಶಕರೆ! ಇಂಥದೂ ಇದೆ ಎಂದು ಅವನು ನಿಮ್ಮ ಚಿತ್ರದಿಂದಲೇ ಕಲಿಯಬೇಕು. ಇದು ಎಂತಹ ರೀತಿ?" ಎಂದು ಮತ್ತೆ ಕೇಳಿದೆ.

ನಿರ್ದೇಶಕರು ನಕ್ಕರು. ನಾನು ಮತ್ತೆ ಹೇಳಿದೆ. "ಭಾರತ ಚಿತ್ರಗಳಲ್ಲಿ ಭಾರತೀಯ ಸಂಸ್ಕಾರವೇ ಮಾಯವಾಗತೊಡಗಿದೆ. ವೇಷ ಭೂಷಣಗಳಲ್ಲಿ, ಅಲಂಕಾರ ಪರಿಕರಗಳಲ್ಲಿ ಎಲ್ಲವೂ ಪಾಶ್ಚಿಮಾತ್ಯ ಚಿತ್ರಗಳ ಅನುಕರಣ. ಕನ್ನಡದ ಹುಡುಗಿ ಲಂಡನ್‌ದ ಮರಿಯಾಗುತ್ತಾಳೆ, ಇದರಿಂದ ಭಾರತ ಸಂಸ್ಕೃತಿಗೆ ಚಿತ್ರರಂಗ ಅನ್ಯಾಯ ಮಾಡುವುದಿಲ್ಲವೆ? "

"ಅದು ಸರಿ...ಆದರೆ..."

"ಹಣಕ್ಕಾಗಿ ಸಂಸ್ಕೃತಿಯು ಹೆಣ ಮಲಗಿಸಿದರೆ ಚಿತ್ರವು ಸಂಚಾರಿ ವಿಶ್ವವಿದ್ಯಾಲಯ ಹೇಗಾದೀತು? ನಮ್ಮ ಧರ್ಮ, ನಮ್ಮ ಸಂಸ್ಕೃತಿ, ನಮ್ಮ ರೀತಿ, ನಡಾವಳಿಗಳ ಪ್ರದರ್ಶನವೇ ಚಿತ್ರದಲ್ಲಿ ಹಾಸುಹೊಕ್ಕಾಗಿರಬೇಕು, ಅಲ್ಲವೆ?"

ಬಹುಶಃ ನಿರ್ದೇಶಕರಿಗೆ ಚರ್ಚೆಯನ್ನು ಮುಂದುವರಿಸುವುದು ಬೇಡವಾಗಿರಬಹುದು, ಅವರು ಮಾತನ್ನು ಬದಲಾಯಿಸಿದರು,

"ಕನ್ನಡದ ಈರಯ್ಯನಿಗೆ ಕುರ್ತಾಪಾಯಿಜಾಮಾ ಕಸಿಯ ಅಂಗಿಯನ್ನು ತೊಡಿಸಿದರೆ ಅವನು ಪ್ರಾದೇಶಿಕ ಸನ್ನಿಧಾನವನ್ನೇ ಕಳೆದುಕೊಳ್ಳುವುದು ಸ್ಪಷ್ಟ (ಚಿತ್ರ–ಬಂಗಾರಿ). ಕನ್ನಡ ಸಮಾಜದ ಮದುವೆ ಮುಂಜಿಗಳಲ್ಲಿ ಬಂಗಾರಾ ನೃತ್ಯ ಎಷ್ಟು ಅಸ್ವಾಭಾವಿಕ? (ಚಿತ್ರ ಕರುಣೆಯೋ ಕುಟುಂಬದ ಕಣ್ಣು) ಕನ್ನಡ ಜನಜೀವನದಲ್ಲಿ ಹಳ್ಳಿ ನೃತ್ಯಗಳಿಲ್ಲವೆ? ಉಡುಗೆ ತೊಡುಗೆಗಳೂ ಪರದೇಶಿಯವೇಕೆ?"ನನ್ನ ಹಿರಿಯ ಮಿತ್ರ ಶ್ರೀ ಎಂ.ಆರ್ ವಿಠ್ಠಲ ಅವರನ್ನು ನಾನು ಗೋಕಾಕದ ಸುತ್ತು ಮುತ್ತು ತಿರುಗಾಡಿಸಿ ಅಲ್ಲಿ ಕೆಲಸ ಮಾಡುತ್ತಿರುವ ಹೆಣ್ಣು ಮಕ್ಕಳ, ಗಂಡುಮಕ್ಕಳ ವೇಷಗಳನ್ನು ಗಮನಿಸಲು ಹೇಳಿದಾಗ ಅವರು "ಈ ವೇಷವನ್ನು ಅಳವಡಿಸುವುದೆ ಚಿತ್ರಕ್ಕೆ ಮೆರುಗು" ಎಂದು ಒಪ್ಪಿದರು. (ಸಂದರ್ಭ 'ಬೆವರಿನ ಬೆಲೆ' ಚಿತ್ರೀಕರಣಕ್ಕಾಗಿ ಪೂರ್ವಭಾವಿ ಹೊರಾಂಗಣ ದೃಶ್ಯ ನೋಡಲು ಗೋಕಾಕಕ್ಕೆ ಬಂದಾಗ) ಅದ್ದೂರಿಯ ವಿಲಾಸಮಯ ದೃಶ್ಯಗಳನ್ನು ಕಂಡ ಕಾದಂಬರಿ ಭಕ್ತನು ಈ ಕಥಾ ಪಲ್ಲಟವನ್ನು ನೋಡಿ ಖಿನ್ನನಾಗುತ್ತಾನೆ. ಕಥೆಗೂ ಚಿತ್ರಕ್ಕೂ ಹೊಂದಾಣಿಕೆಯಾಗದ ಆತ್ಮೀಯತೆಯನ್ನು ಕಂಡು ಅವನು ಬೇಸರಗೊಳ್ಳುತ್ತಾನೆ.

ಕಾದಂಬರಿಗೂ, ಚಿತ್ರಕ್ಕೂ ಕಥೆಯೇ ಬೆನ್ನೆಲುಬು. ಒಳ್ಳೆಯ ಕಥೆಯೇ ಕಾದಂಬರಿಯ ಜೀವನಾಡಿಯಾಗಿರುವಂತೆ ಒಳ್ಳೇ ಚಿತ್ರಕ್ಕೆ ಕಥೆಯೆ ಜೀವನಾಡಿ. ಈ ಕಥಾ ಪ್ರಪಂಚದಲ್ಲಿ ಆತ್ಮೀಯತೆಯನ್ನು ತೋರುವ ನಿರ್ದೇಶನ ತಂತ್ರವೇ ನಿರ್ದೇಶಕನ ಜಾಣತನ. ಶ್ರೀ ಎಸ್. ಆರ್. ಪುಟ್ಟಣ್ಣ, ಕಣಗಾಲ್ ಅವರ ಯಶಸ್ಸಿನ ಗುಟ್ಟು ಇಲ್ಲಿಯೇ ಇದೆ. ಅವರು ಕಾದಂಬರಿಯನ್ನು ಓದಿ ಆ ಲೋಕದಲ್ಲಿ ತಲ್ಲೀನರಾಗಿ ಲೇಖಕನ ಕಥಾಸೃಷ್ಟಿಯನ್ನು ಅಭಿವ್ಯಕ್ತಿಗೊಳಿಸುತ್ತಾರೆ. ಬೆಳ್ಳಿಮೋಡ, ಶರಪಂಜರಗಳಂತಹ ಕಥೆಯಲ್ಲಿ ಕಂಡು ಬರುವ ನಿರ್ದೇಶಕನ ಆತ್ಮೀಯತೆ ಕಥೆಗೊಂದು ಅಪೂರ್ವ ಸಂಸ್ಕಾರವನ್ನು ಕೊಟ್ಟಿದೆ. ಈ ಕಥೆಗಳಲ್ಲಿ ಕಥಾನಾಯಕಿಯಾದ ಮಿನುಗುತಾರೆ ಕಲ್ಪನಾ ಕಥಾಸ್ಫೂರ್ತಿಯನ್ನು ಪಡೆದು ತೋರಿದ ಸಹಜ ಅಭಿನಯವು ಸಾಮಾಜಿಕ ಕಾದಂಬರಿಗಳಿಗೆ ಕಿರೀಟಪ್ರಾಯವಾಗಲು ಕಾದಂಬರಿ ಮಹತಿಯೂ, ದಿಗ್ದರ್ಶನ ಶ್ರೇಷ್ಠತೆಯೂ ಕಾರಣವಾಗಿದೆ.

ಇತ್ತೀಚೆಗೆ ನಮ್ಮ ಚಿತ್ರೋದ್ಯಮಿಗಳಲ್ಲಿ ಕಂಡು ಬರುವ ಕಾದಂಬರಿ ಚಿತ್ರೀಕರಣ ಪ್ರೀತಿಯು ನಮ್ಮ ಸಾಹಿತ್ಯ ಪ್ರಪಂಚಕ್ಕೂ ಚಿತ್ರ ಪ್ರಪಂಚಕ್ಕೂ ಪರಸ್ಪರ ಗೌರವಪೂರ್ಣವಾಗಿದೆ,



"ಅಲ್ರೀ, ಹಬ್ಬಕ್ಕೆ ಸೀರೆ ತರೋದು ಮರೆತು ಬಿಡ್ತೀರಾ ಅಂತ ನಿಮಗೆ ಜ್ಞಾಪಕ ಬರಲಿ ಅಂತ ಈ ರೀತಿ ಮಾಡಬೇಕಾಯ್ತು.

ಕಾದಂಬರಿ ಕಥೆಗಳ ಚಿತ್ರೀಕರಣದಿಂದ ಚಿತ್ರೋದ್ಯಮದ ಘನತೆ ಹೆಚ್ಚಾಗಿದೆ.

ಸಾಹಿತ್ಯಸೃಷ್ಟಿಗೆ ರಂಗದೃಷ್ಟಿ ಪೋಷಕವಾಗಿ ವಾಸ್ತವಿಕ ಪ್ರಪಂಚದ ಪ್ರಜ್ಞೆಯಲ್ಲಿ ಮುನ್ನುಗ್ಗುವ ಚಿತ್ರಸೃಷ್ಟಿಗೆ ಭವ್ಯ ಭವಿಷ್ಯತ್ತು ಕಾದಿದೆ.

***




*WISH YOU HAPPY DEEPAVALI*

**Balanja Industries**

8/209 Kambla Cross Road,

MANGALORE-3 (S.K.)

*Grams:* BALANJA    *Phones:* Office : 6054, Factory : 82 5

Manufacturers of :

POLYTHYLENE BAGS, SHEETINGS, ROLS, NURSERY BAGS SURGICAL EQUIPMENTS AND SHEET METAL FABRICATIONS

—: ಶ್ರೀ ಜಗದಂಬಾ ಪ್ರಸನ್ :—

ದೀಪಾವಳಿಯು ನಮ್ಮ ಎಲ್ಲ ಗ್ರಾಹಕರಿಗೆ
ಶುಭದಾಯಕವಾಗಲೆಂದು ಕೋರುತ್ತೇವೆ



ಫೋನ್:
ಅಂಗಡಿ: 2449 ಮನೆ: 4249
HAPPY NEW YEAR

# ಎಸ್. ಡಿ. ಮೆಹರವಾಡೆ & ಸನ್ಸ್

ನೂತನ ಶೋರೂಮು  ಬೆಳಗಾವಿ ಗಲ್ಲಿ, ಹುಬ್ಬಳ್ಳಿ

# S. D. MEHARWADE & SONS

NEW SHOW ROOM, BELGAUM GALLI, HUBLI

ಅವಶ್ಯ ಸಂದರ್ಶಿಸಿರಿ:

Dharmavaram-Kancheepuram
Bangalore, Banaras, Pure Silk Sarees
Band Modern Hand-loom Sarees
Hubli Tope Silk Sarees.

ಕಾಂಜೀವರಂ, ಧರ್ಮಾವರಂ, ಬನಾರಸ ಪೀತಾಂಬರಗಳು, ಬೆಂಗಳೂರು ಸೀರೆ, ಹುಬ್ಬಳ್ಳಿ ತೋಪ ರೇಶ್ಮೆ ಸೀರೆಗಳು, ನಿತ್ಯೋಪಯೋಗದ ಹೊಸ ಹೊಸ ಮಾದರಿಯ ಹ್ಯಾಂಡಲೂಮ್ ಸೀರೆಗಳು ಮತ್ತು ಮ್ಯಾಚಿಂಗ್ ಬ್ಲೌಜಪೀಸುಗಳ ಭರಪೂರ ಸಂಗ್ರಹ

# ಶ್ರೀ ದುರ್ಗಾ ಭವನ

## ಭದ್ರಾವತಿ

ಕೈಗಾರಿಕಾ ಕೇಂದ್ರದ, ಆಧುನಿಕ ಸುಸಜ್ಜಿತ

## ಬೋರ್ಡಿಂಗ್, ರೆಸ್ಟೋರೆಂಟ್ ಮತ್ತು ಲಾಡ್ಜಿಂಗ್

ಆರೋಗ್ಯಕರ, ಶುಚಿ, ರುಚಿಯಾದ ತಿಂಡಿ ಹಾಗೂ ಊಟಕ್ಕೂ
ಮತ್ತು ಗಾಳಿ ಬೆಳಕುಗಳಿಂದ ಕೂಡಿದ ವಿಶಾಲ ರೂಮುಗಳಿಗೂ
ಮತ್ತು ನಮ್ಮ ನಮ್ರ ಸೇವೆಗೂ ಇಂದೇ ಭೇಟಿಕೊಡಿ

Phone: 382

ಪ್ರೊಪ್ರೈಟರ್: ಶ್ರೀನಿವಾಸ ಅಡಿಗ

ದೀಪಾವಳಿಯ ಹರ್ಷದ ಶುಭಾಶಯಗಳು





# ಸಿನೇಮಾ ಮತ್ತು ಸಮಾಜ

ಎನ್ಕೆ

ನಿರ್ವಿವಾದವಾಗಿ ಇದು ಸಿನೇಮಾಯುಗೆ. ಇಂದಿನ ಯುವಜನರ ಜೀವನದ ರೀತಿನೀತಿಗಳೆಲ್ಲವು ರೂಪಗೊಳ್ಳುವುದು ಸಿನೇಮಾದಿಂದಲೆ. ಯುವಜನರನ್ನು ಗೊಂಬೆಯಂತೆ ಕುಣಿಸುವ ಶಕ್ತಿ ಸಿನೇಮಾದಲ್ಲಿದೆ. ಅವರ ಮಂಗಮನಸ್ಸಿಗೆ ಮದ್ಯಸೇವನೆಯಾಗಿದೆ ಸಿನೇಮಾ. ಇಂದಿನ ಹಿಪ್ಪೀ ಫ್ಯಾಶನ್, ಇಂದಿನ 'ಹರೇ ರಾಮ, ಹರೇ ಕೃಷ್ಣ' ಪಂಥ ಇವೆಲ್ಲಕ್ಕೂ ಉಗಮ ಇಂದಿನ ಸಿನೇಮಾ. ಇಂದಿನ ಬ್ರೀಫ್‌ಕೇಸ್‌ಗಳಿಗೆ 'ಜೇಮ್ಸ್ ಬಾಂಡ್ ಬ್ಯಾಗ್' ಎಂದು ಹೆಸರು. ಇಂದಿನ ತರುಣಿಯರ ಜುಲುಪಿಗೆ ಸಾಧನಾಕಟ್ ಎನ್ನುತ್ತಾರೆ. ತರುಣರು ಇಂದು ಧರಿಸುವ ಜುಬ್ಬ + ಫಿಟ್‌ಪ್ಯಾಂಟ್ ವೇಷ ರಾಜೇಶ್‌ಖನ್ನಾ ಫ್ಯಾಶನ್! ಇಂದಿನ ಕಟಬಾಯಿ ಮೀಸೆ, ಪೊರಕೆ ಕಟ್‌ಉ–ಶತ್ರುಘ್ನಸಿಂಹನ ಅವತಾರವೊ ಭರತಮುನಿಯ ಶಾಪವೊ ಹೇಳಲಿಕ್ಕಾಗದು. ಆ ಹೆಗಲ ಮೇಲೆ ಬೀಳುವ ಚಾಮರದಂತಹ ಕೂದಲೊ! ದೇವರೇ ಕಾಪಾಡಬೇಕು. ಸಿನೇಮಾದಲ್ಲಿ ನರೆಗೂದಲಿನ ಮುದಿ ನಕ್ಷತ್ರಗಳೂ ಹೀಗೆ ಹೆಗಲ ಮೇಲೆ 'ಆಯಾಲು' ಬಿಡುವುದನ್ನು ನೋಡಿ ಗ್ಯಾಜಟೆಡ್ ಆಫೀಸರರೂ ಹೇರ್‌ಕಟ್ ಸನ್ಯಾಸವನ್ನು ಪಾಲಿಸುತ್ತಿರುವುದನ್ನು ನೋಡಿದರೆ ಈ ಫ್ಯಾಶನ್‌ನ ಹುಚ್ಚುಹೊಳೆಗೆ ಅರ್ಥವೇ ಇಲ್ಲವೇನೊ ಎನಿಸುತ್ತದೆ. ಫ್ಯಾಶನ್ ಎಂದರೆ ಇಷ್ಟೊಂದು ಹೇಸಿಗೆ ಬರುವಂತಹ ಕುರುಡು ಹಾದಿಯನ್ನು ಹಿಡಿಯುತ್ತದೆಂದು ತೋರಿರಲಿಲ್ಲ. "ರೂಢಿರ್ಬಲೀಯಸೀ" ಎನ್ನುವುದಕ್ಕೆ ಈ ಹೇರಕಟ್ ಸನ್ಯಾಸದ ಹೊಲಸು ಫ್ಯಾಶನ್ನೇ ಸಾಕು.

ಈಗ ಎರಡು ಮೂರು ವರ್ಷಗಳ ಕೆಳಗೆ ನಾನು ರಾಜೇಶ್ ಖನ್ನಾನ ಚಲನಚಿತ್ರಗಳನ್ನು ನೋಡುತ್ತಿದ್ದೆ. ಅವನ ಮುಖ ಲಕ್ಷಣ, ಅವನ ಸುಂದರವಾದ ದಂತಪಂಕ್ತಿ, ಅವನ ಮೋಹಕ ಹಾವಭಾವಗಳು ಆಕರ್ಷಕವೆನಿಸುತ್ತಿದ್ದವು. ಆದರೆ! ಆ 'ಬಾವರ್ಚಿ' ಪಿಕ್ಚರ್‌ನಲ್ಲಿ ಕರಡಿಯಂತೆ ಹಿಂಗೂದಲನ್ನು ಬಿಟ್ಟು ಮೇಲೆ ಒಂದು ಗಾಂಧೀ ಟೊಪ್ಪಿಗೆ ಧರಿಸಿದ ಆತನ ಅಸಡ್ಡಾಳ ಹೇರ್ ಫ್ಯಾಶನ್ ನೋಡಿ ಜಿಗುಪ್ಸೆಗೊಂಡೆ. ಅಡುಗೆಯುವನ ಪಾತ್ರ! ಆ ಪಾತ್ರಕೆ ಬಹುಶಃ ಇಂತಹ ದರಿದ್ರ ಹೇರ್ ಸ್ಟೈಲ್ ಅವಶ್ಯವೇನೊ ಎಂದುಕೊಂಡರೆ ಮುಂಬರುವ ಎಲ್ಲ ಚಿತ್ರಗಳಲ್ಲೂ ಈ ಯುವಜನ ಹೀರೋ ಹೀಗೇ ಚಿಂಪ್ಯಾಂಜೀ ಕೂದಲು ಬಿಟ್ಟಿರಬೇಕೆ? ಮೊನ್ನೆಮೊನ್ನೆ ಈತನ ಕೈ ಹಿಡಿದ ಆ ಡಿಂಪಲ್ ಆದರೂ ಒಂದು ಮಾತು ಹೇಳಿ ಗಂಡನ ಹೇರ್‌ಕಟ್ ಮಾಡಿಸಬಾರದೆ ಎನಿಸಿತು.

ಈ ಹೇರ್ ಫ್ಯಾಶನ್ ಬಹುಶಃ ರೇಶಿಮೆಯಂತಹ ನುಣುಪಾದ ಗುಂಗುರುಗೂದಲಿಗರಿಗೆ ಒಪ್ಪಬಹುದೇನೊ! ಅರ್ಧ ಶತಮಾನಕ್ಕೂ ಮುಂಚೆಯೆ ಮಹರ್ಷಿ ಅರವಿಂದರು, ಕಾವ್ಯರ್ಷಿ ರವೀಂದ್ರರು ಹೀಗೆ ಜಟೆ ಬಿಟ್ಟುದನ್ನು ನೋಡಿದಾಗ ಅವರ ಆರ್ಷೇಯತ್ವಕ್ಕೆ ಅದು ಒಪ್ಪುತ್ತಿತ್ತು. ಆದರೆ ಇತ್ತೀಚಿನ ಹಿಪ್ಪೀ ಅಂಧಾನುಕರಣೆಗಳು ಕರಿ–ನರೆಗಳ ಮಿಶ್ರಣದಲ್ಲಿ ಹಿಂದಿನ ಕತ್ತನ್ನು ಹುಲುಸಾಗಿ ವ್ಯಾಪಿಸಿದ ಹೇರ್ ಫ್ಯಾಶನ್ ನೋಡಿದರೆ ಏನು ದರಿದ್ರತನ ಬಂತಪ್ಪ ಇವಕ್ಕೆ ಎನಿಸಿದೆ.

ಇಂದಿನ ಸ್ತ್ರೀ ಪುರುಷರ ವೇಷಭೂಷಣಗಳ ಫ್ಯಾಶನ್‌ಗಳಿಗೆ ಮಾಡೆಲ್ ಎಂದರೆ ಸಿನೇಮಾಗಳು. ಕೆಲ ದಿನಗಳ ಹಿಂದೆ ಪುರುಷರ ಕಫ್‌ಬಟನ್ ಎಂದರೆ ನೈಲಾನ್ ಜಿರಡೆಗಳಾಗಿದ್ದವು. ಆಮೇಲೆ ಯಾವನೊ ಭೂಪತಿಡಬ್ಬಲ್ ಕಫ್‌ಬಟನ್‌ಪದ್ಧತಿ ತೆಗೆದ. ನಾನಾ ಬಗೆಯ ಆಕೃತಿಗಳ ಹೊಳೆಹೊಳೆಯುವ ರೋಲ ಗೋಲ್ಡಿನ ಕಫ್‌ಬಟನ್‌ಗಳ ಒಂದು ಯುಗವೇ ಆರಂಭವಾಯಿತು. ಇಂತಹ ಹೊಸತನ ಕಾಲೇಜು ಯುವಕರನ್ನು ಲೋಹಚುಂಬಕದಂತೆ ಸೆರೆಹಿಡಿದು ಬಿಡುತ್ತದೆ. ಹಿಡಿಯಲಿ. ಇದಕ್ಕೆ ನನ್ನದೇನೂ ಆಕ್ಷೇಪವಿಲ್ಲ. ನನ್ನ ಆಕ್ಷೇಪ ಬರುವುದು–ಆ ಫ್ಯಾಶನ್ ತಮಗೆ ಒಪ್ಪದಿದ್ದಾಗಲೂ, ಅತ್ಯಂತ ಅಸಡ್ಡಾಳವಾಗಿ ಕಾಣುತ್ತಿದ್ದಾಗಲೂ ಅದನ್ನು ಅಂಧಾನುಕರಣವೆಂಬಂತೆ ಅಂಗೀಕರಿಸುತ್ತಾರಲ್ಲ ಆವಾಗ.

ವೇಷ ಭೂಷಣಗಳ ಮಾದರಿಗಳೇನೋ ಬಾಳಿನ ಬಾಹ್ಯ ರೂಪವಾಯ್ತು. ಅದರಿಂದ ಹೆಚ್ಚಿನ ನಷ್ಟವೇನೂ ಇಲ್ಲ ಎಂದು ತಿಳಿಯೋಣ. ವೇಷ ಧರಿಸುವ ಫ್ಯಾಶನ್‌ನಲ್ಲಿ ಮೈ ಮೇಲೆ ಬಟ್ಟೆಗಳಾದರೂ ಇರುತ್ತವಲ್ಲ ಎಂದು ಸಮಾಧಾನಪಡಬಹುದು. ಆದರೆ ಸಿನೇಮಾ ಹಿರಾಯಿನ್‌ಗಳು ಎದೆಗೊಂದು ತುಂಡು, ಸೊಂಟಕ್ಕೊಂದು ತುಂಡು ಬಟ್ಟೆ (ಧರಿಸಿ ಅಲ್ಲ) ಕಟ್ಟಿಕೊಂಡು ಬರುತ್ತಾರಲ್ಲ! ನಮ್ಮ ಫ್ಯಾಶನ್‌ಪ್ರಿಯ ಯುವ ಮಹಿಳಾ ಲೋಕ ಯಾಕೋ ಇನ್ನೂ ಬಹಿರಂಗವಾಗಿ ಈ ಎರಡು ತುಂಡು ಬಟ್ಟೆಗಳ ಫ್ಯಾಶನ್‌ಗೆ ಇಳಿದಿಲ್ಲ. ಭಾರತ ಮಾತೆಯ ಪುಣ್ಯ ದೊಡ್ಡದು ಎನ್ನಬೇಕು. ಆದರೂ ಸೀರೆ ಉಡುವ ಪದ್ಧತಿ ಕುಂಕುಮದ ಬೊಟ್ಟು, ಹೇರ್ ಸ್ಟೈಲ್, ಬ್ಲೌಜ್‌ನ ನಮೂನೆ (ಒಮ್ಮೆ ಗಿಡ್ಡ ತೋಳು ಒಮ್ಮೆ ಉದ್ದವಾದ ತೋಳು–ಕೊನೆಗೊಮ್ಮೆ Sleeve-less ಬ್ಲೌಜ್!.., ಮುಂದೆ ಬ್ಲೌಜ್ (less) ಸ್ಲೀವ್ಸ್‌ಗಳೂ ಬರಬಹುದು!) ಹೀಗೆಲ್ಲಾ ವಿಧದಲ್ಲಿ ನಮ್ಮ ಮಹಿಳಾ ಮಣಿಗಳ ಆದರ್ಶಗಳೆಂದರೆ ತಾರಾಮಣಿಗಳು. ಇತ್ತೀಚೆಗೆ ತಲೆಗೆ ಎಣ್ಣೆ ಹಚ್ಚಿಕೊಂಡು ಹೆಳಲು ಬಾಚಿಕೊಳ್ಳುವುದು ಅಳಿದುಹೋದ ಪದ್ಧತಿಯಾಗಿದೆ. ತಲೆಯ ಮೇಲೆ ಎಣ್ಣೆಯಿಲ್ಲದ ಒಣಒಣವಾಗಿ ಮಿಂಚುವ ಕೂದಲನ್ನು ಸೇರಿಸುವುದೆ ಒಂದು ಹೇರ್ ಸ್ಟೈಲ್ ಕುದುರೆಯ ಬಾಲ, ತಲೆಯಲ್ಲಿ ಬನ್ನುಗಳು, ಬಟಾಟೆಗಳನ್ನು ಧರಿಸಿ ಮುಡಿ ಕಟ್ಟುವುದು ಇವೆಲ್ಲವೂ ಸಿನೆಮಾದ ಕಾಣಿಕೆಗಳಾಗಿವೆ. ಮಿನಿಸ್ಕರ್ಟ್‌ಗಳೂ ಸಿನೇಮಾ ಕಾಣಿಕೆಗಳೆ. ಆದರೆ ಹಾಕಿರುವುದು ಮಿನಿಸ್ಕರ್ಟ್ ಎಂದು ಗೊತ್ತಿದ್ದರೂ ಮತ್ತೆ ಮತ್ತೆ ಅದನ್ನು ಕೆಳಗೆ ಜಗ್ಗಿಕೊಳ್ಳುವ ತರುಣಿಯರು ಶಾಲೀನತೆಯೇ ಹೆಣ್ಣಿನ ಇನ್ನೊಂದು ಹೆಸರು ಎಂಬುದನ್ನೆತ್ತಿ ತೋರುತ್ತದೆ. ಆದರೆ ಇಂದಿನ ಸಿನೇಮಾಗಳು ನಮ್ಮ ತರುಣ ಸಮಾಜದ ಮೇಲೆ ಬೀರುತ್ತಿರುವ ನೈತಿಕ ಪ್ರಭಾವವೇನು? ಇದನ್ನು ನೆನೆದರೆ ಮೈ ನಡುಗುತ್ತದೆ. ಸುಮ್ಮನೆ ಕೆಲವು 'ಪೋಸ್ಟರ್'ಗಳನ್ನು ನೋಡಿದರೆ ಸಾಕು–ನಮ್ಮ ಮನೆತನದ ಹೆಣ್ಣುಮಕ್ಕಳು ನಾಚುಗೆಯಿಂದ ತಲೆ ತಗ್ಗಿಸಿಕೊಂಡು ಹೋಗಬೇಕು. 'ವಿಕ್ಟೋರಿಯಾ ೨೦೩' 'ಸಿ. ಐ. ಡಿ. ೭೨', 'ಚೇತನಾ', 'ದಸ್ತಕ್' 'ಧಡಕನ್' 'ದೋ ರಾಹಾ' ಇಂತಹ ಪೋಸ್ಟರ್ ಮಾತ್ರದಿಂದಲೆ ಪಿಕ್ಚರ್‌ನ ಅಂತಸ್ಸು ಬಯಲಾಗುತ್ತದೆ. ಪಿಕ್ಚರ್ ನೋಡದಿದ್ದವರ ಮೇಲೂ ಬರಿ ಪೋಸ್ಟರ್‌ಗಳೆ ಬೇಕಾದಷ್ಟು ಮೋಹ–ಮಾಯಾಜಾಲವನ್ನು ಬೀರಲಿಕ್ಕೆ ಸಾಕು. ಇಂತಹ ಪೋಸ್ಟರ್ ವಿರುದ್ಧ ಜಾಹೀರ ವೇದಿಕೆಗಳಿಂದ, ಲೋಕಸಭೆಯವರೆಗೂ ಕೂಗುಗಳು ಕೇಳಿ ಬಂದದ್ದುಂಟು. ಆದರೂ ಅಂಗನೆಯರ ಅಂಗಾಂಗ ಪ್ರದರ್ಶನಗಳ ಪೋಸ್ಟರ್‌ಗಳು ಮಹಾನಗರಗಳ ರಾಜಬೀದಿಗಳ ಕೂಟಕೂಟಕ್ಕೇ ಮೆರೆಯುತ್ತಲೆ ಇರುತ್ತವೆ.

ಪೋಸ್ಟರ್‌ಗಳನ್ನು ನೋಡಿ ಕದ್ದು ಕದ್ದು ಪಿಕ್ಚರಗಳಿಗೆ ಹೋಗುವ ನರೆ–ಹರೆಯ ಉಭಯತರಿಗೂ ತೆರಪೇ ಇಲ್ಲ. ಸಣ್ಣವರ ಕಣ್ಣು ತಪ್ಪಿಸಿ ಹಿರಿಯರು ಹೋದರೆ, ಉಭಯತರೂ ಅಲ್ಲಿಯೇ ಸಿಕ್ಕು ಬೀಳುವ ಸನ್ನಿವೇಶಗಳು! ಒಮ್ಮೆ 'ನೈಟ್ ಇನ್ ಲಂಡನ್' ಪಿಕ್ಚರಿಗೊ With Love Form Russia ಪಿಕ್ಚರಿಗೊ ಇಬ್ಬರು ಸಾಯಿಬಾಬಾ ಭಕ್ತರು ಬದಿ ಬದಿಯ ಸೀಟುಗಳಲ್ಲೇ ಸಿಕ್ಕಿ ಹಾಕಿಕೊಂಡು ಪಟ್ಟ ಪಾಡನ್ನು ವರ್ಣಿಸಲೇಕೆ, ಕಲ್ಪಿಸಿದರೇ ಸಾಕಲ್ಲ? ಸಂತನಾಗಲಿ, ಸಾಧಕನಾಗಲಿ ಭಕ್ತನಾಗಲಿ, ಭಾಗವತನಾಗಲಿ ಮನುಷ್ಯ ಮನುಷ್ಯನೆ ಅಲ್ಲವೆ? ಆದರೆ ಇಂತಹ ನೈಟ್‌ಕ್ಲಬ್‌ನ ಚಲನಚಿತ್ರಗಳು ಚಿತ್ತಗಳನ್ನೂ ಚಲನಗೊಳಿಸುವುದರಿಂದ ಆಗುವ ಅನಿಷ್ಟದತ್ತ ನಾವು ಸಾಕಷ್ಟು ಗಮನ ಪೂರೈಸಿಲ್ಲವೆಂದೇ ಹೇಳಬೇಕು. ಅಶ್ಲೀಲಚಿತ್ರ, ಚಲನ ಚಿತ್ರಗಳನ್ನು ಬಹಿಷ್ಕರಿಸುವ ಬಗ್ಗೆ ಬಹಿರಂಗ ಆಂದೋಲನಗಳು ನಡೆದಾಗಲೆಲ್ಲ ಎಷ್ಟು ಜನ ರಸಿಕರು 'ಯಾಕಪ್ಪ ಈ ಆಂದೋಲನಗಳು' ಎಂದು ಒಳಗೊಳಗೇ ಉದ್ಗಾರ ತೆಗೆದಿದ್ದರೆ ಆಶ್ಚರ್ಯ ಪಡಬೇಕಾದುದೇನೂ ಇಲ್ಲ.

ಲೈಂಗಿಕ ಪ್ರಚೋದನೆ ಇಂದಿನ ಸಿನೇಮಾಗಳ ಏಕಮೇವ ಗುರಿ ಎಂದರೆ ತಪ್ಪಾಗಲಿಕ್ಕಿಲ್ಲ. ಹಾಗಾದರೆ ಸೆನ್ಸಾರ್‌ಶಿಪ್? ದೇವರೇ ಬಲ್ಲ! ಸ್ವಚ್ಛವಾದ ನಗ್ನತೆ ಒಂದು ವೇಳೆ ಕಡಿಮೆ ಅಪಾಯಕಾರಿ ಎನಿಸೀತು. ಈ ಬಗೆಯ ಕುತೂಹಲಕಾರೀ ಗುಪ್ತಪ್ರಚೋದನೆಗಳು -ರವಿವರ್ಮನ ವರ್ಣಚಿತ್ರಗಳಂತೆ–ತರುಣ ವಯಸ್ಸಿನ ಮೇಲೆ ಇನ್ನೆಷ್ಟು ವಿಪರೀತ ಪರಿಣಾಮವನ್ನುಂಟು ಮಾಡುವವು, ಇಂದಿನ ಭ್ರಷ್ಟಾಚಾರದ ಯುಗದಲ್ಲಿ

ಸೆನ್ಸಾರ್ ಬೋರ್ಡಿನಿಂದ ಎಂಥದನ್ನೂ ಪಾಸ್ ಮಾಡಿಸಿಕೊಳ್ಳಬಹುದು. ಆದರೆ ಶ್ರೀಸಾಮಾನ್ಯ ಪ್ರೇಕ್ಷಕನೆಂಬ ಸೆನ್ಸಾರ್ ಕಣ್ಣಿಗೆ ಮಣ್ಣೆರಚಲು ಸಾಧ್ಯವೆ? ಇನ್ನೂ ಎಷ್ಟೋ ಪ್ರಕಾರದ ಅತಿ ಪ್ರಚೋದನಾತ್ಮಕ ಪಿಕ್ಚರ್‌ಗಳನ್ನು ದಿಲ್ಲಿಯ ವಿಶಿಷ್ಟ V.I.P ಜನ ಒಳಗೊಳಗೇ ಗುಪ್ತವಾಗಿ ನೋಡುತ್ತಾರಂತೆ! ಹೋಗಲಿ ಬಿಡಿ, ನೋಡಿಕೊಳ್ಳಲಿ. ಬಹಿರಂಗಕ್ಕೆ ಬಂದು ಚಿತ್ರಗುಪ್ತರ ಆ ಗುಪ್ತಚಿತ್ರಗಳು ಜನಸಾಮಾನ್ಯರ ಮನಗಳನ್ನು ಕದಡಿ ಕೆಡಿಸದಿದ್ದರೆ ಸಾಕು.

ಸೆನ್ಸಾರ್‌ನಿಂದ A.1 ಸರ್ಟಿಫಿಕೇಟ್ ಪಡೆಯುವುದರಲ್ಲಿಯೂ ನಿರ್ಮಾಪಕನ ಕೌಶಲ್ಯವಿದೆ. For Adults only (ವಯಸ್ಕರಿಗೆ ಮಾತ್ರ) ಎಂಬ ಚೀಟಿಯಿದ್ದುಬಿಟ್ಟರೆ ಸಾಕು, ಬಾಕ್ಸ್ ಆಫೀಸ್ ಭರ್ತಿ ಎಂದೇ ತಿಳಿಯಬಹುದು. ಈ ಬಾಕ್ಸ್ ಆಫೀಸ್‌ಗಾಗಿಯೇ ಇಂದಿನ ಸಿನೇಮಾ ತಯಾರಿಕೆಯ ಏಕಮೇವ ಉದ್ದೇಶ. ಅಂದ ಮೇಲೆ ಅದಕ್ಕೆ ಲೈಂಗಿಕ ಪ್ರಚೋದನೆಯ ದೃಷ್ಟಿಯಿಂದ ಏನೇನು ಮಸಾಲೆ ಸಾಮಾನುಗಳು ಬೇಕೊ ಅವನ್ನೆಲ್ಲ ತುಂಬುತ್ತಾರೆ. ಇದರಿಂದ ಯುವಜನ ಸಮಾಜದ ಮೇಲೆ ಉಂಟಾಗುವ ಪರಿಣಾಮವೇನು ಎಂಬ ಬಗ್ಗೆ ವಿಚಾರ ಮಾಡುವವರು ಯಾರು? 'ಕವಿಸಮಯ'ದ ಮಹಾಕಾವ್ಯದಲ್ಲಿ ಅಷ್ಟಾದಶವರ್ಣನೆಗಳು ಬರುವುದು ಹೇಗೆ ಶಾಸ್ತ್ರವಿಧಿಯೊ ಹಾಗೆಯೆ ಇಂದಿನ ಸಿನಿಮಾ ಸಮಯದಲ್ಲಿ ಹುಡುಗ ಹುಡುಗಿಯ ಭೆಟ್ಟಿ, ಸ್ನಾನದ ದೃಶ್ಯ, ಅಂಗಾಂಗ ಪ್ರದರ್ಶನ, ದಾರ್ಜಿಲಿಂಗ ದೃಶ್ಯ, ಕಾಶ್ಮೀರಿ ಕೊಳ್ಳ, ಹಿಮಾಲಯದ ಬೆಟ್ಟಗಳು, ಕ್ಯಾಬರೇ ನೃತ್ಯ ಇತ್ಯಾದಿಗಳು ಶ್ರಾದ್ಧ ನಿಯಮಗಳಿದ್ದಂತೆ ಅನಿವಾರ್ಯವಾಗಿ ಬರಲೇಬೇಕು. ಇಂದಿನ ಯಾವುದೆ ಹಿಂದೀ ಪಿಕ್ಚರ್ ನೋಡಿರಿ. ಹೀರೋ ಹೀರಾಯಿನ್ ಹನಿಮೂನ್‌ಗೆಂದೊ ಇನ್ನೇತಕ್ಕಾಗಿಯೊ ಹಿಮಾಲಯ ಹತ್ತಲೇ ಬೇಕು. ಅಲ್ಲಿ ಹಿಮದ ಮೇಲೆ ಹೊರಳಾಡಲೇಬೇಕು. ಮರುಕ್ಷಣ ಸಮುದ್ರತೀರ! ಅಲ್ಲಿಯ ಮಳಲ ರಾಶಿಯಲ್ಲಿ ಹೊರಳಾಟ! ಅಂತೂ ಇಂದಿನ ಹಿಂದೀ ಸಿನೆಮಾ ಎಂದರೆ ಹೆಣ್ಣು ಗಂಡುಗಳ ಹೊರಳಾಟ, ಉರುಳಾಟ.

ಈ ಕ್ಯಾಬರೇಗಳಂತೂ ಇಂದು ಸಿನೇಮಾ ಮಾತ್ರದಲ್ಲಿ ಅಲ್ಲ, ರಸಿಕ ಜೀವನದ ಸಂತೋಷ ಕೂಟಗಳ ಸಂಕೇತಗಳೂ ಆಗಿವೆ. ಹೋಟೆಲ್‌ಗಳಲ್ಲಿ, ಕ್ಲಬ್‌ಗಳಲ್ಲಿ, ಸತ್ಕಾರ ಸಮಾರಂಭಗಳಲ್ಲಿ ಕ್ಯಾಬರೇಗಳು ಮೈ-ಬರೇಗಳು! ಇದಕ್ಕೆ ಕಾರಣ ಸಿನೆಮಾ. ಸಿನೆಮಾ ತೆರೆಯ ಮೇಲೆ ಸೆಲ್ಯೂಲಾಯ್ಡ್ ಮೇಲೆ ಬರಿ ನೆರಳುಗಳ ನಗ್ನತೆಯನ್ನು ನೋಡಿ ತೃಪ್ತರಾಗದೆ ಜೀವನದಲ್ಲೂ ಈ ಕುಡಿತ, ಕುಣಿತಗಳನ್ನು ಭೋಗಿಸುವ ಆಸೆ. ಇಂದಿನ ಸಾಮಾಜಿಕ ಜೀವನ, ಅದರಲ್ಲೂ ರಸಿಕ ಸಾಮಾಜಿಕ ಜೀವನ ರೂಪಗೊಂಡುದೆ ಸಿನೇಮಾದಿಂದ ಎಂದು ಹೇಳಿದರೆ ಅತಿಶಯೋಕ್ತಿಯೇನೂ ಅಲ್ಲ. ನಮ್ಮ ಸಾಮಾಜಿಕ ಜೀವನದ ಪಾಶ್ಚಾತ್ಯೀಕರಣ ನಡೆದುದು ವಿದೇಶೀಯ ನೇರವಾದ ಪ್ರಭಾವಕ್ಕಿಂತ ಸಿನೇಮಾ ಪ್ರಭಾವವೆಂದೇ ಹೇಳಬೇಕು. ನಿರ್ನಿಮಿತ್ತವಾಗಿ ಒಬ್ಬ ಸಿನೆಮಾ ಹೀರೊ ವಿದೇಶೀ ಯಾತ್ರೆ ಕೈಗೊಳ್ಳುತ್ತಾನೆ. ಅಲ್ಲಿಯ ಸ್ವಚ್ಛಂದ ಜೀವನ ಮೋಹಕತೆಗೆ ಮರುಳಾಗಿ ತನ್ನ ದೇಶಕ್ಕೆ ಮರಳಿ ಆ ವಿದೇಶೀ ಸ್ವಚ್ಛಂದತೆಯನ್ನು ತನ್ನ ಸಮಾಜದಲ್ಲಿ ತನ್ನ ಜೀವನದಲ್ಲಿ ಕಾಣಬಯಸುತ್ತಾನೆ.

ಇದು ಇಂದಿನ ಸಿನೇಮಾಗಳ ಪ್ರಗತಿ!

ಇಂದಿನ ಸಾಮಾಜಿಕ ಕೌಟುಂಬಿಕ ಜೀವನದ ಮೇಲೆ ಸಿನೇಮಾ ಪ್ರಭಾವ ಅಳಿಸದಂತಹದಿದೆ. ಇಂದಿನ ಅವಿವಾಹಿತ ಒಬ್ಬ ತರುಣಿ ಮಾಡುವ ಫ್ಯಾಶನ್, ತಳೆಯುವ ದಿಟ್ಟತನದ ಮನೋವೃತ್ತಿ ಅತಿಯಾಗಿ Social ಆಗಿರುವುದರ ಹಿನ್ನೆಲೆಯ ಕಾರಣ ಈ ಸಿನೇಮಾಗಳೆ. ಶಾಲೆ ಕಾಲೇಜುಗಳಲ್ಲಿ ಅವರು ಮಾತನಾಡುವುದು, ಸಿನೇಮಾ ಪ್ರಪಂಚವೆ. ಸಂಜಯ್ , ಅನಿಲ್‌ಧವನ್, ಅಮಿತಾಬ್, ಎಂಬವರ ಹರಟೆಯ ವಿಷಯ ತರುಣಿಯರದಾದರೆ, ಹೇಮಾಮಾಲಿನಿ, ಲೀನಾಚಂದಾವರಕರ, ಮುಮ್ತಾಜ್, ಜಯಾಬಾಧುರಿ, ಭಾರತಿ ಇವರೆಲ್ಲರುಗಳ ಕುಲಗೋತ್ರ ವಿಚಾರ ತರುಣರ ವಿಷಯ. ಸಿನೇಮಾ ಕಥೆ, ಅದರ ಧ್ವನಿ, ಅದರ ವಿಮರ್ಶೆಗಿಂತ ಹಿರಾಯಿನ್ ಉಟ್ಟಿದ್ದ ಬಣ್ಣದ ಬಾರ್ಡರಿನ್ನ ಲುಂಗಿಯ ವಿಮರ್ಶೆಯಲ್ಲಿ ತರುಣಿಯರು ಆಸಕ್ತಿ ವಹಿಸಿದರೆ, ಜಿತೇಂದ್ರನ ಸ್ನಾನದ ಚಡ್ಡಿಯ ಚರ್ಚೆ ತರುಣರದಾಗಿರುತ್ತದೆ.

ಮನೆಯಲ್ಲಿ ನಮ್ಮ ಚಿರಂಜೀವ ತನ್ನ ಹಿಂದೀಭಾಷೆಯನ್ನು ಸುಧಾರಿಸಿಕೊಳ್ಳುವುದಕ್ಕಾಗಿ ಹಿಂದೀ ಚಿತ್ರಗಳನ್ನು ನೋಡುತ್ತಿರುವುದಾಗಿ ಸಾಧು ಕಾರಣವನ್ನು ವಿವರಿಸಿದಾಗ ನನಗೆ ಮೋಜೆನಿಸಿತ್ತು. ಇಷ್ಟೇ ಅಲ್ಲ ಹಿಂದೀ ಪರೀಕ್ಷೆಯಲ್ಲಿ ಆತನೊಂದು ಪ್ರಬಂಧ ಬರೆದಿದ್ದ–'ಹಮಾರಾ ಭಾರತ್' 'ಜಿಸ್ ದೇಶಮೇ ಗಂಗಾ ಬಹತೀ ಹೈ ವಹ್ ಹೈ ಹಮಾರಾ ಭಾರತ್! ಜಿಸ್ ಹಿಮಾಲಯಕೇ ಗೋದಮೇ...' ಹೀಗೆಯೆ ಸೀನೆಮಾಗಳ ಶೀರ್ಷಿಕೆಗಳ ಶಿರೀಷ ಕುಸುಮ ಮಾಲಿಕೆಯನ್ನೆ ಹೆಣೆದು ತನ್ನ ಸುಂದರ ಪ್ರಬಂಧವನ್ನು ರಚಿಸಿದ್ದ ಆತನ ಜಾಣ್ಮೆಯನ್ನು ಮೆಚ್ಚಿಕೊಂಡು–'ಸಿನೇಮಾಗಳಷ್ಟು ಆಸಕ್ತಿಯನ್ನು ನಿಮ್ಮ ಪಠ್ಯಗಳು ನಿರ್ಮಿಸುವಂತಾಗಿದ್ದರೆ ಎಷ್ಟು ಪ್ರಯೋಜನಕಾರಿಯಾಗುತ್ತಿತ್ತಪ್ಪ' ಎಂದು ಉದ್ಗಾರ ತೆಗೆದಿದ್ದೆ.

ಸಿನೇಮಾ ಸಂಗೀತವಂತೂ ನಮ್ಮ ರಸಿಕರ ಉಸಿರಾಗಿದೆ. ನಾಲ್ಕು ಜನ ತರುಣರು ಲೋಕಲ್ ಗಾಡಿಯಲ್ಲಿ ಸೇರಿದರೆ ತೀರಿಯೆ ಹೋಯಿತು. ಅಲ್ಲೊಂದು 'ಜನಾಕಾ' ಕಾರ್ಯಕ್ರಮವೆ ಪ್ರಾರಂಭವಾಗುತ್ತದೆ. 'ಈ ಸಿನೇಮಾ ಸಂಗೀತ ಒಂದು ಶಾಸ್ತ್ರೀಯ ಸಂಗೀತ ಮೂಲೆಗೆ ಬಿತ್ತು' ಎಂದು ಒಬ್ಬ ಅಭಿಜಾತ ಸಂಗೀತಪ್ರಿಯ ಗೊಣಗಿದರೆ 'ನಮ್ಮ ಮಗಳು ಕವಿತಾ ಸಂಗ್ರಹದೊಳಗ ಸಿನೇಮಾ ಪದ್ಯಾವಳಿ ಇಟ್ಟುಕೊಂಡು ಕಾವ್ಯವನ್ನು ಕಂಠಪಾಠ ಮಾಡತಾಳ' ಎಂದು ಮತ್ತೊಬ್ಬ ತಂದೆ ತನ್ನ ವ್ಯಥೆಯ ಕಥೆ ತೋಡಿಕೊಳ್ಳುತ್ತಾನೆ. ನನಗಂತೂ ನಮ್ಮ ಮನೆಯಲ್ಲಿ ಒಂದು ಗಳಿಗೆ ಸುದ್ದಿ ಸಮಾಚಾರ, ಒಂದಿಷ್ಟು ಶಾಸ್ತ್ರೀಯ ಸಂಗೀತ ಕೇಳಲು ಬಿಡುವುದಿಲ್ಲ. ವಿವಿಧ ಭಾರತಿ, ತಪ್ಪಿದರೆ ರೇಡಿಯೋ ಸಿಲೋನ್ ಕಾ ವ್ಯಾಪಾರ ವಿಭಾಗ–ಇವನ್ನೆ ಹಚ್ಚುತ್ತಾನೆ. ಈ ಸಂಗೀತದಲ್ಲಿ ಏನು ಅಂತಹ ಮೋಹಕತೆಯೊ ನನಗಿನ್ನೂ ಅರ್ಥವಾಗಿಲ್ಲ. ಚಿತ್ರಗಳಲ್ಲಿ ಕಂಡುಬರುವ ಲೈಂಗಿಕ ಪ್ರಚೋದನೆ ಈ ಸಿನೆಮಾ ಹಾಡುಗಾರಿಕೆಯಲ್ಲೂ ಕಂಡುಬರುತ್ತದೆ. ಆಶಾಭೋಸಲೆ ಹಾಡಿರುವ ಎಲ್ಲ ಕ್ಯಾಬರೇ ಗೀತಗಳೂ ಇದೇ ಮಾದರಿಯವಾಗಿವೆ. ದಮ್ಮು ಹತ್ತಿ ಏದುತ್ತಿರುವಂತೆ ಧ್ವನಿ ತೆಗೆಯುವುದರಿಂದ ಪ್ರತಿಧ್ವನಿಸುವ ಲೈಂಗಿಕ ಪ್ರಚೋದಕತೆ ಸಂಗೀತ ನಿರ್ದೇಶಕನ ಪ್ರತಿಭೆ, ಕಲ್ಪಕತೆಗೆ ನಿದರ್ಶನವೆಂದರೂ ಎಂತಹ ಪ್ರತಿಭೆ ಎಲ್ಲಿ ಉಪಯೋಗವಾಯಿತಲ್ಲ ಎಂದು ವ್ಯಸನವೂ ಎನಿಸದಿರದು. ಒಂದೊಂದು ಕ್ಯಾಬರೇ ಸನ್ನಿವೇಶವಂತೂ ಆಯಾ ಗೀತದ ಹಿನ್ನೆಲೆಯ ಮಿದುವಾದ, ಮಂದ್ರವಾದ, ಮದೋನ್ಮತ್ತವಾದ ವಾದ್ಯಗಳ ಲಯದಿಂದಲೆ ಧ್ವನಿತವಾಗುತ್ತದೆ. ನಿಶೆಯೇರಿ ಮತ್ತವಾದ ಏರುಂಜವ್ವನೆ, ಎದೆ ಬಿರಿಯುವಂತೆ ಕ್ಯಾಬರೆ ನೃತ್ಯ ಮಾಡುವ ಪ್ರತಿಬಿಂಬ ಈ ಸಂಗೀತದಿಂದ ಪ್ರತಿಮಿಸಲ್ಪಡುತ್ತದೆ. ಅವೊಂದು ಗೀತವಿದೆ ನೋಡಿ! ಅದರ ಶಬ್ದಗಳೇನೊ ತಿಳಿದಿಲ್ಲ ನನಗೆ. "ಫ್ರೀಡಂ ಫ್ರೀಡಂ ತುರ ತುರು ತುರು..." ಎಂದು ಏನೇನೋ ಮೊದಲಾಗಿ "ದುನಿಯಾಮೇ..." ಎಂಬ ಶಬ್ದದಿಂದ ಆರಂಭವಾಗುತ್ತದಲ್ಲ ಏನು ಅದರ ಲೋಕಪ್ರಿಯತೆ!

ಸಿನೆಮಾ ಸಂಗೀತ ನಿರ್ದೇಶಕರು ಗ್ರಾಮಾಂತರಗಳಲ್ಲಿ ಹೋಗಿ ಅಪೂರ್ವವಾದ , ಉತ್ತಮೋತ್ತಮವಾದ ಜಾನಪದ ಧಾಟಿಗಳನ್ನು ಎತ್ತಿಕೊಂಡು ಅವುಗಳಿಗೆ ಸುಧಾರಣೆಯ ಸರಗು ಬೀಸಿ ತಮ್ಮದೇ ಒಂದು ಹೊಸ ಸಂಸ್ಕಾರ ನೀಡಿ ಬಳಕೆಯಲ್ಲಿ ತರುವ ಉಪಕ್ರಮವನ್ನು ಮೆಚ್ಚಬಹುದಾಗಿತ್ತು. ಆದರೆ ಈಗೀಗ ಅದೆಲ್ಲ ಹಿಂದೆ ಬಿದ್ದು ಕುಡಿತದ, ಕುಣಿತದ Rhythm ನಲ್ಲಿ ರಚಿತವಾಗುತ್ತಿರುವ ಸಂಗೀತವನ್ನು ತರುಣರ ಚಂಚಲಚಿತ್ತಗಳನ್ನು ಅಪಹರಿಸಿಕೊಂಡು ಎಲ್ಲಿಗೆ ಒಯ್ದು ಒಗೆಯುತ್ತಿದೆಯೊ ಹೇಳಲಿಕ್ಕಾಗದು.

ಕ್ಷಮಿಸಿ, ಇಂದಿನ ಸಮಾಜದ ಮೇಲೆ ಅದರಲ್ಲೂ ತರುಣ ಸಮಾಜದ ಮೇಲೆ ಉಂಟಾಗುತ್ತಿರುವ ಸಿನೇಮಾ ಪ್ರಭಾವವನ್ನು ಕುರಿತು ಒಂದಿಷ್ಟು ವಿಷ್ವಗೊಂಡು ಬರೆದಿದ್ದೇನೆ. ಇದರಿಂದ ಸಿನೇಮಾದ ಒಳ್ಳೆಯ ಅಂಶಗಳನ್ನು ಬೆಳ್ಳಿಯತೆರೆಯ ಮೇಲೆ ಕಪ್ಪುತೆರೆಯನ್ನೆಳೆ

WISH HAPPY DEEPAVALI GREETINGS

VIJAYALAKSMI Financiers, (Regd)
CHAMARAJAPET, DAVANGERE-1

*We Give Credit Fecilities On* .
Hundis, Promissory Notes, Hire Purchases, Dates Loans, Instalment Loans, Short & Long Term Loans.

We accept fixed deposits at 12% to 14% depending upon period.
Any amount deposited to-day will fetch you double the amount after Six years.

S. SREENIVASA MURTHY B.SC.
Managing partner



# ದೀಪಾವಳಿ . . . . . . . .

ದೀಪಾವಳಿ-ನಮ್ಮ ದೇಶದ ಇತಿಹಾಸದಲ್ಲಿ ಒಂದು ಅರ್ಥ-ಗರ್ಭಿತವಾದ ಸಂದರ್ಭ. ದುಷ್ಟ ಶಕ್ತಿಗಳ ಮೇಲೆ ಶಿಷ್ಟ ಮತ್ತು ಉದಾತ್ತ ಶಕ್ತಿಗಳ ವಿಜಯದ ಸಂಕೇತ. ಇದುವೇ ವಿಜಯೋತ್ಸವದ ಹರ್ಷದಾಯಕ ಆಚರಣೆ. ಸ್ವಲ್ಪದರಲ್ಲಿ—ಇದು ಸುಖ-ಸಂತೋಷಗಳ ವಿಶೇಷ ಸಂದರ್ಭ. "ಸುಖ"ವೆಂದರೆ—ಜನರಿಗೆ ಸಾಕಷ್ಟು ಉಣ್ಣಲು ಆಹಾರ ಇರಬೇಕು, ಉಡಲು ಬಟ್ಟೆ ಬೇಕು. ವಾಸಿಸಲು ಮನೆ ಇರಬೇಕು. ಇವೆಲ್ಲವುಗಳನ್ನು ಗಳಿಸಿಕೊಡಲು "ಉದ್ಯೋಗ"ವೇ ಮುಖ್ಯ ಸಾಧನ. ಈ ಸಾಧನ ಒದಗಿಸಿಕೊಡಲು ನಾವಿದ್ದೇವೆ. ನಿರುದ್ಯೋಗಸ್ಥರಿಗೆ ಸಹಾಯವಾಗಿ ಸ್ವಂತ ವ್ಯವಸಾಯವೊಂದನ್ನು ಪ್ರಾರಂಭಿಸ ಹಚ್ಚುತ್ತೇವೆ. ಯಾಕಂದರೆ ಸ್ವೊ-ದ್ಯೋಗವೇ ಪ್ರಗತಿಯ ಹಾಗೂ ಅಭಿವೃದ್ಧಿಯ ಮುಖ್ಯ ಸೂತ್ರವೆಂದು ನಾವು ನಂಬಿದ್ದೇವೆ. ನಿಜ ಹೇಳಬೇಕೆಂದರೆ— ಇದು ನಮ್ಮ ಮೂಲ ಉದ್ದೇಶವಾಗಿಯೇ ನಡೆದುಕೊಂಡು ಬಂದಿದೆ.

## ಸೇವೆಗಾಗಿ ಪ್ರಗತಿ–ಪ್ರಗತಿಗಾಗಿ ಸೇವೆ

# ಕೆನರಾ ಬ್ಯಾಂಕ್

ಮುಖ್ಯ ಕಚೇರಿ — ಬೆಂಗಳೂರು-೨

ಯುವುದು ನನ್ನ ಉದ್ದೇಶವಲ್ಲ. ಆದರೆ ಸ್ವಾತಂತ್ರ್ಯ ಪೂರ್ವದಲ್ಲಿ ನಾನು ನೋಡಿದ ಮರಾಠಿ 'ಕುಂಕೂ' ಹಿಂದೀ 'ಕಂಗನ್' 'ಬಂಧನ್' ಮೊದಲಾದ ಚಿತ್ರಗಳು ಅವಿಸ್ಮರಣೀಯ ಎಂಬುದನ್ನು ನನ್ನ ಅಭಿಪ್ರಾಯ. ಇತ್ತೀಚಿನ ಶಾಂತಾರಾಮರ 'ಪಿಂಜರಾ' ಸ್ವಾತಂತ್ರ್ಯೋತ್ತರದಲ್ಲೂ ಪರಿಣಾಮಕಾರಿಯಾದ ಚಿತ್ರ. ಇಂತಹ ಇನ್ನೂ ಒಂದೆರಡು ಚಿತ್ರಗಳು ಸಮಾಜದ ವೈಚಾರಿಕ ಮನಸ್ಸಿನ ಮೇಲೆ ಅಳಿಸಲಾರದಂತಹ ಅಚ್ಚೊತ್ತಿವೆ. ನಿಜ. ಆದರೆ ಮೂವತ್ತೈದು ವರುಷಗಳ ಹಿಂದೆ ನಾನು ನೋಡಿದ ಇದೇ ಶಾಂತಾರಾಮರು ತಯಾರಿಸಿದ 'ಕುಂಕು' ಸಿನೇಮಾ ಹಿಡಿಸಿದ ಗುಂಗು ಇನ್ನೂ ಮನದ ಒಂದು ಓವರಿಯಲ್ಲಿ ಅವಿತುಕೊಂಡೇ ಇದೆ. 'ಬಂಧನ್'ದಂತಹ ಬಾಂಬೇ ಟಾಕೀಜ್‌ನ ಒಂದು ಚಿತ್ರ ಒದಗಿಸುವ ಮನೋರಂಜನೆ ಮಿಗಿಲಾದದ್ದು ಎನಿಸಿತ್ತು. ನ್ಯೂ ಥಿಯೇಟರ್‌ನ 'ದೇವದಾಸ್' ಅಂತೂ ವರುಷಗಟ್ಟಲೆ ಪ್ರಭಾವವನ್ನು ಬೀರುವಂತಹ ಸಮರ್ಥ ಸತ್ವಶಾಲೀ ಚಿತ್ರ. ಆದರಲ್ಲೂ ಸೈಗಲ್‌ನ ಪಾತ್ರ ಮನಃಪಟಲದಿಂದ ಮರೆಯಾಗದಂತಹುದು. ಅಂತಹ ಕಣ್ಣೀರಿನ ಕಥೆಯ ದುರಂತ ಚಿತ್ರ ಅದು. ಅದ್ಭುತ ರಮ್ಯತೆಯಲ್ಲಿ ಪೃಥ್ವೀರಾಜ ಮತ್ತು ಸೊಹರಾಬ ಮೋದಿ ಪಾತ್ರ ವಹಿಸಿದ್ದ ಸಿಕಂದರನ ಐತಿಹಾಸಿಕ ಚಿತ್ರವಂತೂ ರೋಮಾಂಚಕಾರಿ ಎನಿಸಿತ್ತು. 'ಜಿಂದಗೀ ಹೈ ಪ್ಯಾರಸೇ' ಎಂಬ ಆ ಸೈನಿಕ ಸಾಮೂಹಿಕಗೀತವಂತೂ ಅತ್ಯಂತ ಪ್ರಭಾವಿಯಾಗಿದ್ದಿತು. ಈ ಎಲ್ಲ ಮತ್ತು ಇನ್ನೂ ಅನೇಕ ಸ್ವಾತಂತ್ರ್ಯಪೂರ್ವದ ಸಾಮಾಜಿಕ, ಐತಿಹಾಸಿಕ ಚಿತ್ರಗಳಲ್ಲಿ ಅಶ್ಲೀಲತೆ, ಲೈಂಗಿಕತೆ ಎಳ್ಳಷ್ಟೂ ಇರದೆ ಅವು ನೀಡುತ್ತಿದ್ದ ಮನಃಪ್ರಸಾದ, ಹೃತ್‌ಪರಿಣಾಮ ಎಂತಹದು! ಲೈಲಾ-ಮಜನೂ ಎಂಬ ಚಿತ್ರವಂತೂ ಎಷ್ಟೂ ಅತಿ ಶೃಂಗಾರವೆನಿಸದೆ ಮಾದಕವಾದ ಒಂದು ಕಥೆಯಾಗಿತ್ತು. ಪ್ರಭಾತ, ನ್ಯೂ ಥಿಯೇಟರ್ಸ್, ಬಾಂಬೆ ಟಾಕೀಜ್‌ಗಳಂತಹ ನಿರ್ಮಿತಿಗಳು ಆಗಿನ ಸಮಕಾಲೀನ ಸಮಾಜದಮೇಲೆ ಒಳ್ಳೆಯ ಪರಿಣಾಮವನ್ನೇ ಬೀರಿದವು ಎನ್ನಬೇಕು.

ಆದರೆ ಸ್ವಾತಂತ್ರ್ಯೋತ್ತರ ಸಿನೇಮಾರಂಗ ಅಧೋಗತಿಯ ದಾರಿಯನ್ನೇ ಹಿಡಿದಿದೆ ಎಂದರೆ ಪೂರ್ವಗ್ರಹ ಪೀಡಿತ ಶಕ್ತಿಯೇನೂ ಅಲ್ಲ. ಲೈಂಗಿಕ ಪ್ರಚೋದಕತೆಯೊಂದೆ ಏಕಮೇವ ಉದ್ದೇಶವಾಗಿರುವ ಈಗಿನ ಚಿತ್ರಗಳಲ್ಲಿ ನಗ್ನತೆ, ಅರೆ ನಗ್ನತೆಗಳನ್ನುಳಿದರೆ ಹುರುಳು ಹೂರಣಗಳೆ ಇಲ್ಲ. ಸ್ವಾತಂತ್ರ್ಯೋತ್ತರದ ಇಂದಿನ ಸಾಹಿತ್ಯ, ಸ್ವಾತಂತ್ರ್ಯೋತ್ತರ ಸಿನೇಮಾ, ಸ್ವಾತಂತ್ರ್ಯೋತ್ತರದ ಸರಕಾರ ಎಲ್ಲವೂ ನೈತಿಕ ಉನ್ನತಿಕೆಯ, ಶೀಲ ಕಳಚಿ ಶೈಥಿಲ್ಯದ ಸಂತೆಯನ್ನೆ ನೆರವಿಸಿವೆ. ಇದಕ್ಕೆ ಕಾರಣವೇನು? ಇದರಿಂದ ನಾಳಿನ ಸಮಾಜದ ಭವಿಷ್ಯವೇನು? ಈ ಸವಾಲುಗಳಿಗೆ ಉತ್ತರ ಕೊಡುವವರು ಯಾರು?

ಸಮಾಜದ ಮೇಲೆ ರೇಡಿಯೋ–ವೃತ್ತಪತ್ರಿಕೆಗಳು ಉಂಟು ಮಾಡುವುದಕ್ಕಿಂತ ಹೆಚ್ಚಿನ ಪರಿಣಾಮವನ್ನು 'ಸಿನೇಮಾ'ಗಳು ಬೀರುತ್ತವೆ. ಇಂದಿನ ಸಮಾಜದ ಬಹು ಭಾಗವನ್ನು ಸಿನೇಮಾ ಆಕ್ರಮಿಸಿ ಬಿಟ್ಟಿದೆ ಎಂದು ಹೇಳಬಹುದು. ದಿನೇ ದಿನೇ ಸಿನೇಮಾ ಹೆಚ್ಚೆಚ್ಚು ಜನಪ್ರಿಯತೆಯನ್ನು ಗಳಿಸತೊಡಗಿದೆ. ದೆಹಲಿ, ಮೀರತ್ ಹಾಗೂ ನೈನಿತಾಲ್‌ಗಳಲ್ಲಿ ನಡೆಯಿಸಿದ ಸರ್ವೇಕ್ಷಣೆಯಿಂದ ಯಾವ ಯಾವ ಮಟ್ಟದ ಜನ ಎಷ್ಟೆಷ್ಟು ಚಿತ್ರಗಳನ್ನು ನೋಡುತ್ತಾರೆಂಬುದನ್ನು ಕಂಡು ಹಿಡಿಯಲಾಯಿತು. ಈ ಸರ್ವೇಕ್ಷಣೆಯಲ್ಲಿ ಒಟ್ಟು ೨ ಸಾವಿರ ಕುಟುಂಬಗಳ ೨ ಸಾವಿರ ವ್ಯಕ್ತಿಗಳ ಮೇಲೆ ಸರ್ವೇಕ್ಷಣೆ ನಡೆಸಲಾಗಿದ್ದು ಪರಿಣಾಮಗಳು ಈ ಕೆಳಗಿನಂತಿವೆ.–

ಸಿನೇಮಾ ನೋಡುಗರಲ್ಲಿ ಶೇಕಡಾ ೪೯ರಷ್ಟು ಮಹಿಳೆಯರು ಹಾಗೂ ಶೇಕಡಾ ೫೧ರಷ್ಟು ಪುರುಷರು ಇದ್ದಾರೆ.

ವಯೋಮಾನಕ್ಕನುಗುಣವಾಗಿ ಪರಿಶೀಲನೆ ನಡೆಸಿದಾಗ ಕೆಳಗಿನಂತೆ ಪರಿಣಾಮ ಕಂಡು ಬಂತು. ೧೨ ರಿಂದ ೧೭ ವರ್ಷದವರು–ಶೇಕಡಾ ೧೦ರಷ್ಟು. ೧೮ರಿಂದ ೩೦ ವರ್ಷದವರು ಶೇಕಡಾ ೩೫ ರಷ್ಟು. ೩೧ ರಿಂದ ೪೦ ವರ್ಷದವರು ಶೇಕಡಾ ೨೩ ರಷ್ಟು. ೪೧ ರಿಂದ ೪೫ ವರ್ಷದವರು ಶೇಕಡಾ ೧೨ರಷ್ಟು, ೪೬ ರಿಂದ ೬೫ ವರ್ಷದವರು ಶೇಕಡಾ ೧೯ ರಷ್ಟು. ೬೫ಕೆ ಮೇಲ್ಪಟ್ಟವರು. ಶೇಕಡಾ ೧ ರಷ್ಟು.

* * *

ವಿವಾಹಿತರು—ಅವಿವಾಹಿತರ ಮೇಲೆ ಸರ್ವೇಕ್ಷಣೆ ನಡೆಸಿದಾಗ ಕಂಡು ಬಂದ ಪರಿಣಾಮ— ವಿವಾಹಿತರು—ಶೇಕಡಾ ೪೧ರಷ್ಟು, ಅವಿವಾಹಿತರು ವಿಧುರ ವಿಧವೆಯರು. ವಿವಾಹ ವಿಚ್ಛೇದನ ಪಡೆದವರು–ಶೇಕಡಾ ೫೯ ರಷ್ಟು.

* * *

ನೌಕರ ವರ್ಗದವರನ್ನು ಮೂರುಗುಂಪುಗಳಾಗಿ ವಿಂಗಡಿಸಿ ಹಾಗೂ ಇತರರನ್ನು ಒಂದು ಗುಂಪಿನಲ್ಲಿ ಅವರವರ ವರಮಾನಕ್ಕೆ ಅನುಗುಣವಾಗಿ ಪರಿಶೀಲನೆ ನಡೆಯಿಸಿದಾಗ ಈ ಕೆಳಗಿನಂತೆ ಪರಿಣಾಮ ಕಂಡು ಬಂತು.

ಕೆಳವರ್ಗ—ತಿಂಗಳಿಗೆ ರೂ. ೬೦–೧೫೦ ವರಮಾನದವರು–ಶೇಕಡಾ ೬೦.

ಮಧ್ಯಮ ವರ್ಗ—ತಿಂಗಳಿಗೆ ರೂ. ೧೫೧–೫೦೦ ವರಮಾನದವರು–ಶೇಕಡಾ ೨೯.

ಉಚ್ಚ ವರ್ಗ–ತಿಂಗಳಿಗೆ ರೂ. ೫೦೦ಕ್ಕಿಂತ ಹೆಚ್ಚು ವರಮಾನದವರು–ಶೇಕಡಾ ೯.

ಇತರರು— ಶೇಕಡಾ ೨.

ಈ ಮೇಲಣ ಪರಿಣಾಮಗಳಲ್ಲದೆಯೇ ಬೇಸಗೆಯ ಕಾಲಕ್ಕಿಂತ ಉಳಿದ ಸಮಯದಲ್ಲಿ ಸಿನೇಮಾ ನೋಡುಗರ ಸಂಖ್ಯೆ ಸ್ವಲ್ಪ ಹೆಚ್ಚಿಗಿರುತ್ತದೆ ಎಂಬೊಂದಂಶವೂ ಹೊರಬಂತು.

ಹೆಂಗಸರಿಗಿಂತ ಗಂಡಸರು ಹೆಚ್ಚಾಗಿ ಸಿನೇಮಾಗಳಿಗೆ ಹೋಗುತ್ತಾರೆ. ಯುವಜನಾಂಗ ಸಿನೇಮಾಕ್ಕೆ ಹೆಚ್ಚಾಗಿ ಹೋಗುತ್ತದೆ. ವಯಸ್ಸಾದವರು ಆಗೊಮ್ಮೆ ಈಗೊಮ್ಮೆ ಸಿನೇಮಾಕ್ಕೆ ಹೋದರೆ, ವಿವಾಹಿತರಿಗಿಂತ ಅವಿವಾಹಿತರು ಸಿನೇಮಾಕ್ಕೆ ಹೋಗುವುದೇ ಹೆಚ್ಚು.

ಅವಿವಾಹಿತ ಸ್ತ್ರೀಯರು–ವಿವಾಹ ವಿಚ್ಛೇದನ ಪಡೆದ ಸ್ತ್ರೀಯರು ಹಾಗೂ ವಿಧವೆಯರು ಮೇಲಿಂದ ಮೇಲೆ ಸಿನೇಮಾ ನೋಡುತ್ತಾರೆ ಎಂಬುದೊಂದು ಗಮನೀಯ ಸಂಗತಿ.

ಇದಕ್ಕಿಂತ ಗಮನವೀಯಲೇಬೇಕಾದ ಇನ್ನೊಂದು ಸಂಗತಿ ಎಂದರೆ, ಕೆಳ ದರ್ಜೆಯವರು, ಕಡಿಮೆ ಸಂಬಳದವರು ಹಾಗೂ ನಿರುದ್ಯೋಗಿಗಳು ಮೇಲಿಂದ ಮೇಲೆ ಸಿನೇಮಾಗಳಿಗೆ ಹೋಗುತ್ತಾರೆ ಎಂಬುದು.

ಮ್ಯಾಟಿನಿ ಶೋಗಳಿಗಿಂತ ನಿತ್ಯ ಶೋಗಳಿಗೆ ಜನಸಂದಣಿ ಹೆಚ್ಚಿರುತ್ತದೆ. ರಜೆಯ ದಿನಗಳು ಹಾಗೂ ಭಾನುವಾರವೂ ಸಿನೇಮಾ ಥಿಯೇಟರುಗಳು ತುಂಬಿರುತ್ತವೆ ಎಂಬುದನ್ನು ಬೇರೆ ಹೇಳಬೇಕಿಲ್ಲ.

ಸಿನೇಮಾದಿಂದ ಯುವಜನರಲ್ಲಿ ಕಾರ್ಯಕ್ಷಮತೆ ಕಡಿಮೆಯಾಗುತ್ತದೆ. ಉನ್ನತ ಲಕ್ಸುರಿ ಜೀವನವನ್ನವರು ನಡೆಸಲು ಪ್ರಯತ್ನಿಸುತ್ತಾರೆ.

ಸಿನೇಮಾ ಕೆಲವರಲ್ಲಿ ಸಮಾಜ ವಿರೋಧೀ ಮನೋಭಾವವನ್ನು ಬೆಳೆಸುತ್ತದೆ. ●

★ ★ ★ ★ ★



ದೀಪಾವಳಿಯ ಹಾರ್ದಿಕ ಶುಭಾಶಯಗಳು !!


ಸ್ಥಾಪನೆ:- ೧೯೩೭. ಫೋನು:- ೩೫೧೨.

ಕೊಪ್ಪಿಸನ್ ಆ್ಯಂಡ ಕಂಪನಿ

ನೇತ್ರ ತಜ್ಞರು ಮತ್ತು ಚಾಳೀಸುಗಳ ಪೂರೈಕೆಗಾರರು.

೨೨/೨ ಕಲಾದಗಿಗಲ್ಲಿ (ದುರ್ಗದ ಬೈಲ ಹತ್ತಿರ) ಹುಬ್ಬಳ್ಳಿ-೨೦

- ಶಾಸ್ತ್ರೋಕ್ತ ಕಣ್ಣಿನ ತಪಾಸಣೆ ಹಾಗೂ ಯೋಗ್ಯದರದಲ್ಲಿ ಚಾಳೀಸುಗಳ ಪೂರೈಕೆ ನಮ್ಮ ವೈಶಿಷ್ಟ್ಯ.
- ಡಾಕ್ಟರರು ಶಿಫಾರಸು ಮಾಡಿದ ನಂಬರ ಪತ್ರಿಕೆಯ ಪ್ರಕಾರ ನಿರ್ದಿಷ್ಟ ನಂಬರಿನ ಚಾಳೀಸುಗಳನ್ನು ಪೂರೈಸುತ್ತೇವೆ.

★ ೩೬ ವರ್ಷಗಳ ವಿಶ್ವಾಸಾರ್ಹ ಸೇವೆಯು ಹಿನ್ನೆಲೆ ಇದೆ.

ನಮ್ಮ ಶಾಖೆಗಳು:- ಸಿರ್ಸಿ ಮತ್ತು ಕುಮಟಾ.

# ಶೈಕ್ಷಣಿಕ ಚಲನಚಿತ್ರ

ಎಸ್. ಎಸ್. ಬ್ಯಾತನಾಳ

ಚಿಕ್ಕ ಮಕ್ಕಳು—ಸುಮಾರು ಐದುವರ್ಷದಿಂದ ಹದಿನೈದುವರ್ಷದವರೆಗಿನವರು—ಸಿನೇಮಾ ನೋಡಲೇ ಕೂಡದು. ಆದರಿಂದ ಮಕ್ಕಳು ಕೆಟ್ಟು ಅಡ್ಡದಾರಿ ಹಿಡಿಯುತ್ತಾರೆ. ಅವರ ವ್ಯಕ್ತಿತ್ವ ಹಾಳಾಗಿ, ಜೀವನ ಚರಿತ್ರೆ ವಿಘಾತಕವಾಗಿ ಪರಿಣಮಿಸುತ್ತದೆ. ಸಿನೇಮಾಗಳಿಂದ ದುಷ್ಪರಿಣಾಮಗಳೇ ಹೆಚ್ಚು. ಸಿನೇಮಾಕ್ಕೆ ಮಕ್ಕಳನ್ನು ಕಳಿಸದಂತೆ ತಾಯಿ—ತಂದೆಗಳು ತುಂಬಾ ಎಚ್ಚರಿಕೆವಹಿಸಬೇಕೆಂಬ ಬಹುಕಾಲದ ಹೇಳಿಕೆಯೊಂದುಂಟು. ಪ್ರಸ್ತುತ ಲೇಖನ ಕೇವಲ ಶೈಕ್ಷಣಿಕ ಚಲನಚಿತ್ರಗಳಿಗೆ ಮಾತ್ರ ಸೀಮಿತವಾಗಿರುರುವುದರಿಂದ ಮೇಲಿನ ಹೇಳಿಕೆಯ ಸತ್ಯಾಸತ್ಯತೆಗಳ ಚರ್ಚೆ ಇಲ್ಲಿ ಮುಖ್ಯವಲ್ಲ. ಆದರೆ ಇಂತಹ ಅಭಿಪ್ರಾಯವನ್ನು ಯಾವ ವಿಚಾರವಂತನೂ ಕಡೆಗಣಿಸುವಂತೆಯೂ ಇಲ್ಲ. ಇಂದಿಗೂ ಈ ಬಗೆಯ ಭಾವನೆ ಅಲ್ಲಲ್ಲಿ ಕೇಳಬರುತ್ತಿದೆ. ಈಗ ಕಾಲಧರ್ಮ ಬದಲಾಗಿದೆ. ಜೀವನದೃಷ್ಟಿ ಬದಲಾಯಿಸುತ್ತಿದೆ. ಹಿರಿಯರು ಒಪ್ಪಲಿ, ಬಿಡಲಿ; ಕಿರಿಯರು ಸಿನೇಮಾಕೆ, ಹೋಗುತ್ತಾರೆ. ಅಷ್ಟೇ ಏಕೆ; ಸಿನೆಮಾ ನೋಡುವುದೂ ಬಿಡಲಾರದ ಒಂದು ಚಟವಾಗಿ ಬಿಟ್ಟಿದೆ. ಸಿನೇಮಾ ನೋಡುವುದು ಒಳ್ಳೆಯದೇ? ಅಲ್ಲವೇ? ಎಂಬ ಪ್ರಶ್ನೆಯೇ ಸಲ್ಲದು ಎಂಬಷ್ಟು ಪರಿವರ್ತನೆಯಾಗಿದೆ. ಅಂತೆಯೇ, ಮಕ್ಕಳು, ಸಿನೇಮಾಕ್ಕೆ ಹೋಗುವುದನ್ನು ತಪ್ಪಿಸಲು ಸಾಧ್ಯವಾಗುತ್ತಿಲ್ಲ.

## ಸಡಿಲುಗೊಂಡ ಸಮಸ್ಯೆ

ಮೇಲಿನ ಸಮಸ್ಯೆ ವಿಶೇಷತಃ ಪಟ್ಟಣವಾಸಿಗಳಿಗೆ ಹೆಚ್ಚು ಸಂಬಂಧಪಟ್ಟಿದೆನ್ನಬಹುದು. ಇತ್ತೀಚೆ ಹಳ್ಳಿಗಳಲ್ಲಿಯೂ ಸಿನೇಮಾಗಳ ಹಾವಳಿ ಹೆಚ್ಚಿದೆ; ಇದೊಂದು ಸಾರ್ವತ್ರಿಕ ಸ್ವರೂಪದ ಸಮಸ್ಯೆಯೆಂದೇ ಹೇಳಬೇಕು. ಈ ಸಮಸ್ಯೆ ಭಾರತದಲ್ಲಷ್ಟೇ ಅಲ್ಲ; ವಿದೇಶಗಳಲ್ಲಿಯೂ ಉಂಟಾಗಿತ್ತು. ಚಿಕ ಮಕ್ಕಳು, ಅಂದರ ವಿದ್ಯಾರ್ಥಿಗಳು ಸಿನೇಮಾ ನೋಡಿಯೇ ನೋಡುತ್ತಾರೆಂದ ಮೇಲೆ, ಅವರಿಗೆ ಪ್ರಯೋಜನಕಾರಿಯಾಗುವಂತೆ ಚಲನಚಿತ್ರಗಳನ್ನು ಯಾವ ರೀತಿಯಲ್ಲಿ ತಯಾರಿಸಬೇಕೆಂದು ಪಾಲಕರು, ವಿಚಾರವಂತರು, ಸಮಾಜ ಸೇವಕರು, ಶಿಕ್ಷಣತಜ್ಞರು ತಲೆತುರಿಸಿಕೊಳ್ಳತೊಡಗಿದರು. ಇವರೆಲ್ಲರ ನೆರವಿಗೆ ಮನೋವಿಜ್ಞಾನಿಗಳೂ ಸಿದ್ಧರಾದರು. ಇವರೆಲ್ಲರ ಪರಿಶ್ರಮದ ಫಲವಾಗಿ, ಮಕ್ಕಳ ಮನಸ್ಸು, ಬುದ್ಧಿಗಳು ವಿಕಾಸಗೊಳ್ಳಬೇಕೆಂಬ ಸದುದ್ದೇಶದಿಂದ ಶೈಕ್ಷಣಿಕ ಚಲನಚಿತ್ರಗಳು ರೂಪಗೊಂಡವು; ಉತ್ಪಾದನೆ ಪ್ರಾರಂಭವಾಯಿತು. ಚಿತ್ರಗಳು ಬಳಕೆಯಲ್ಲಿಯೂ ಬಂದವು.

ಇಂಗ್ಲಂಡದ 'ಎಡ್ವರ್ಡ ಮೇಬ್ರಿಜ್' ಎಂಬವರು ಕ್ರಿ.ಶ. ೧೮೭೨ರಲ್ಲಿ 'ಪೆನ್ಸಿಲ್ವಾನಿಯಾ' ವಿಶ್ವವಿದ್ಯಾಲಯದಲ್ಲಿ ಪ್ರಥಮ ಶೈಕ್ಷಣಿಕ ಚಲನಚಿತ್ರವನ್ನು ಪ್ರದರ್ಶಿಸಿದರು. ಅಂದಿನಿಂದ, ಶಿಕ್ಷಣ ಬೋಧನಾಕಾರ್ಯದಲ್ಲಿ ಚಲನಚಿತ್ರಗಳನ್ನು ಉಪಯೋಗಿಸುವ ವಿಚಾರ ಶಿಕ್ಷಣತಜ್ಞರ ಗಮನವನ್ನು ಸೆಳೆಯಿತು. ಅವುಗಳ ಮಹತ್ವ; ಪ್ರಯೋಜನ, ಉತ್ಪಾದನೆ ಮೊದಲಾದ ಸಂಬಂಧಿಸಿದ ವಿಷಯಗಳನ್ನು ಕುರಿತು ಪ್ರಾಯೋಗಿಕ ಪ್ರತ್ಯಕ್ಷಿಕೆಗಳು ಭರದಿಂದ ಸಾಗಿದವು. ಬ್ರಿಟನ್, ಜರ್ಮನಿ, ರಶಿಯಾ ಮೊದಲಾದ ದೇಶಗಳಲ್ಲಿ ಶೈಕ್ಷಣಿಕ ಚಲನಚಿತ್ರಗಳ ಬಗೆಗೆ ವಿಚಾರಕ್ರಾಂತಿಯೇ ತಲೆದೋರಿತು. ಸಮಿತಿಗಳ ನೇಮಕವಾಯಿತು. ವಿವಿಧ ಮಟ್ಟದ, ವಯಸ್ಸಿನ ವಿದ್ಯಾರ್ಥಿಗಳನ್ನು ಪರೀಕ್ಷಿಸಿ ಮಕ್ಕಳ ಚಲನಚಿತ್ರಗಳ ಸ್ವರೂಪ, ಅವಧಿ, ಪರಿಣಾಮಗಳ ಬಗೆಗೆ ಸಂಶೋಧನೆಗಳು ನಡೆದವು. ಅಂಕಿ—ಸಂಖ್ಯೆಗಳ ಸಬಲ ಆಧಾರಗಳಿಂದ ಹಲವಾರು ನಿರ್ಣಯಗಳು ಬೆಳಕು ಕಂಡವು. ಇಂತಹ ಸತತ ಪ್ರಯತ್ನಗಳ ಫಲವಾಗಿ ಒಂದುಮಾತು ಗಟ್ಟಿಯಾಗಿ ನಿಂತಿತು. ವಿದ್ಯಾಭ್ಯಾಸಕ್ರಮದಲ್ಲಿ ಚಲನಚಿತ್ರಗಳ ಉಪಯೋಗ ಪರಿಣಾಮಕಾರಿಯಾದುದು; ಮತ್ತು ಇಂತಹ ಚಿತ್ರಣಗಳಿಂದ ವಿದ್ಯಾರ್ಥಿಗಳ ನೈತಿಕತೆ, ವ್ಯಕ್ತಿತ್ವಗಳ ಮೇಲೆ ಯಾವ ಬಗೆಯ ದುಷ್ಪರಿಣಾಮಗಳೂ ಆಗುವುದಿಲ್ಲ. ಅವರ ಮಾತುಕತೆ, ವೇಷ—ಭೂಷಣಗಳಲ್ಲಿ ಕೆಲಮಟ್ಟಿನ ಪ್ರಭಾವ ಕಂಡುಬರಬಹುದು. ಇಂತಹ ಪರಿಣಾಮಗಳೂ ಸ್ಥಿರಕಾಲಿಕವಾದುವಲ್ಲ; ಬದಲಾವಣೆಗೆ ಒಳಪಟ್ಟವುಗಳು. ಇಂದು ಕಂಡು ನಾಳೆ ಕಣ್ಮರೆಯಾಗುವ ಮಾರ್ಪಾಡುಗಳಿಂದ ವಿದ್ಯಾರ್ಥಿಗಳ ವ್ಯಕ್ತಿತ್ವವೇ ಕೆಡುತ್ತದೆ. ಜೀವನವೇ ಹಾಳಾಗುತ್ತದೆ ಎಂದು ಬೊಬ್ಬೆಹಾಕುವುದು ಉಚಿತವೆನಿಸದು. ಕಾಲ್ಪನಿಕ ಭಯ ಬೇಡ. ತಾಳ್ಮೆಯಿಂದ ಪರಿಶೀಲಿಸಬೇಕು. ವಾಸ್ತವತೆಯನ್ನು ಅಲ್ಲಗಳೆಯಬಾರದು. ಚಲನಚಿತ್ರಗಳೆಂದೊಡನೆ ಹಾನಿಕಾರಕಗಳೆಂಬ ಪೂರ್ವಗ್ರಹ ಪೀಡಿತ ಮನೋಭಾವ ಶೋಭಿತರದು; ಶುಭಕರವಾಗದು. ಸಾಧಕ—ಬಾಧಕಗಳ ಸಹೃದಯದ ಸಮತೋಲ ನೋಟ ಹಿತಕರ. ವಿದೇಶಗಳಲ್ಲಿ ನಡೆದ ಪ್ರಯೋಗಗಳಿಂದ, ಚಲನಚಿತ್ರಗಳಿಂದ ಕಿರಿಯರ ಸಂಸ್ಕೃತಿ ಸಡಿಲಾಗುವುದಿಲ್ಲ, ನಾಗರಿಕತೆ ನರಳುತ್ತದಷ್ಟೆ!

ಮನೋರಂಜನೆಗಾಗಿಯೇ ಇರುವ ಚಲನಚಿತ್ರಗಳಿಗೂ, ಶೈಕ್ಷಣಿಕ ಚಲನಚಿತ್ರಗಳಿಗೂ ಅಂತರವಿದೆ ಶೈಕ್ಷಣಿಕ ಚಲನಚಿತ್ರಗಳಿಗೆ ವಿಶಿಷ್ಟವಾದ ಉದ್ದೇಶವಿದೆ. ಅವುಗಳ ಪ್ರಯೋಗ ನಿರ್ದಿಷ್ಟವಾದುದು; ಪರಿಣಾಮ ನೇರವಾದುದು; ಮರ್ಯಾದಿತವಾದುದು. ಜ್ಞಾನ ಸಂಪಾದನೆಯ ಕಾರ್ಯ ಮುಖ್ಯವಾಗಿ ನಮ್ಮ ಪಂಚೇಂದ್ರಿಯ ಮೂಲಕ ನಡೆಯುತ್ತಿದೆ. ಮನಸ್ಸನ್ನು ಸುಸಂಸ್ಕೃತಗೊಳಿಸುವುದೇ ಶಿಕ್ಷಣದ ಮೂಲ ಉದ್ದೇಶ. ಈ ಕಾರ್ಯದಲ್ಲಿ ಕಣ್ಣು, ಕಿವಿಗಳ ಪಾತ್ರ ಹಿರಿದಾದುದು. ವರ್ಗದಲ್ಲಿ ಶಿಕ್ಷಕ, ಪಾಠ ಹೇಳುವುದನ್ನು ಕಿವಿ ಕೇಳುತ್ತದೆ; ಕರಿಹಲಗೆಯ ಮೇಲೆ ಬರೆದುದನ್ನು ಕಣ್ಣು ನೋಡುತ್ತದೆ; ಕಣ್ಣು, ಕಿವಿಗಳಿಂದ ಸಂಪಾದಿಸಿದ ಜ್ಞಾನವನ್ನು ಸ್ಮರಣಶಕ್ತಿ ಹಿಡಿದಿಟ್ಟುಕೊಳ್ಳುತ್ತದೆ; ಬುದ್ಧಿ ಅದನ್ನು ವಿಚಾರಿಸುತ್ತದೆ; ಮನಸ್ಸು ಚಿಂತನೆ ಮಾಡುತ್ತದೆ. ಜ್ಞಾನ ಸಂಪಾದನೆ ಹೀಗೆ ಒಂದು ವರ್ತುಲಾಕಾರವಾಗಿ ಸಾಗುತ್ತದೆ.

## ಉದ್ದೇಶ ಫಲಕಾರಿಯೇ?

ಅಧ್ಯಾಪನದಲ್ಲಿ ಸಹಾಯಕವಾಗುವಂತಹ ಚಲನಚಿತ್ರಗಳೇ ಶೈಕ್ಷಣಿಕ ಚಲನಚಿತ್ರಗಳು.* ಪ್ರಾರಂಭದಲ್ಲಿ, ಒಂದು ಮಾತನ್ನು ನೆನಪಿನಲ್ಲಿರಿಸಿಕೊಳ್ಳುವುದು ಅವಶ್ಯ. ಕೇವಲ ಚಲನಚಿತ್ರಗಳೇ ಶಿಕ್ಷಣ ಮಾಧ್ಯಮವಾಗಿ ನಿಲ್ಲಬಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಎದುರು ನಿಲ್ಲುತ್ತದೆ. ಶಿಕ್ಷಕನ ಅವಶ್ಯಕತೆಯೇ ಇಲ್ಲ. ಅವನ ಕಾರ್ಯವನ್ನು ಚಲನಚಿತ್ರಗಳೇ ಯಥಾವತ್ತಾಗಿ ನಿರ್ವಹಿಸಬಲ್ಲವು ಎಂಬ ಗ್ರಹಿಕೆ ಹೆಚ್ಚು ಸಾಧುವಾದುದಲ್ಲ. ಶಿಕ್ಷಕನ ಕಾರ್ಯ ಮೂಲ ಮತ್ತು ಮುಖ್ಯ; ಅವನಿಗೆ ಸಹಾಯಕಗಳಾಗಿ, ಪೂರಕಗಳಾಗಿ ಚಲನಚಿತ್ರಗಳು ನಿಲ್ಲುತ್ತವೆ. ಶಿಕ್ಷಣ ಕಾರ್ಯದಲ್ಲಿ ಇವುಗಳ ಸ್ಥಾನ ಮರ್ಯಾದೆಯನ್ನು ಸ್ಪಷ್ಟವಾಗಿ ಅರಿತಿರುವುದು ಒಳಿತು.

ಶಿಕ್ಷಕನು ಪಾಠಕಲಿಸುವಾಗ ವಿದ್ಯಾರ್ಥಿಗಳಿಗೆ ವಿಷಯದ ಕಾಲ್ಪನಿಕ ಚಿತ್ರವನ್ನು ಕೊಡುತ್ತಾನೆ. ಚಿಕ್ಕಮಕ್ಕಳ ಮನಸ್ಸು ಕಲ್ಪನಾ ಚಿತ್ರವನ್ನು ಹಿಡಿದಿಟ್ಟುಕೊಳ್ಳಲು ಅಸಮರ್ಥವಾಗುವ ಸಂದರ್ಭಗಳೇ ಹೆಚ್ಚು. ಇತಿಹಾಸ, ಭೂಗೋಲ, ಚರಿತ್ರೆ, ಪ್ರಕೃತಿ—ವಿಕೃತಿ, ವಿಜ್ಞಾನ, ಜನಜೀವನ, ಕೈಗಾರಿಕೆ, ತೀರ ಇತ್ತೀಚಿನ ಮಹತ್ವಪೂರ್ಣ ಘಟನೆಗಳು, ಮೊದಲಾದುವನ್ನು ಕೇವಲ ಕಿವಿಯಿಂದ ಪುರಾಣ ಕೇಳುವುದಕ್ಕಿಂತ, ಅವುಗಳ ಪ್ರತ್ಯಕ್ಷ ಪರಿಚಯವಾದರೆ, ವಿಷಯ ನಿಕಟಸಂಪರ್ಕ ಬೆಳೆದು ತಿಳಿವಳಿಕೆಗೆ ಸಹಾಯವಾಗುತ್ತದೆ. ಕಣ್ಮುಟ್ಟಿ ನೋಡುವುದರಿಂದ ಮಕ್ಕಳ ಮನಸ್ಸಿನ ಮೇಲೆ ಅಚ್ಚಳಿಯದ ಚಿತ್ರ ಮೂಡುತ್ತದೆ, 'ಏನೋ ಕೇಳಿದ್ದೆ' ಎನ್ನುವುದಕ್ಕಿಂತ 'ನಾನೇ ಕಂಡಿದ್ದೆ' ಎನ್ನುವುದು ಮೇಲಲ್ಲವೆ! ಆದುದರಿಂದ ಚಲನಚಿತ್ರಗಳ ಉಪಯೋಗದಿಂದ

---

* ಈ ಮುಂದೆ 'ಚಲನಚಿತ್ರ' ಎಂಬ ಶಬ್ದ 'ಶೈಕ್ಷಣಿಕ ಚಲನಚಿತ್ರ' ಎಂಬ ಅರ್ಥದಲ್ಲಿಯೇ ಉಪಯೋಗಿಸಲಾಗಿದೆ.



'ಹಮ್ ಪಂಛಿ ಏಕ ಡಾಲಕೆ' ಮಕ್ಕಳ ಚಿತ್ರದಲ್ಲಿ ಬಾಲ ನಟರೇ ಕಾಣಿಸಿಕೊಂಡ ಒಂದು ದೃಶ್ಯ

ಸ್ಥಿತಿ, ವಸ್ತು, ವಿಷಯ, ಘಟನೆಗಳ ಸರಿಯಾದ ಮತ್ತು ಸಂಪೂರ್ಣವಾದ ಜ್ಞಾನ ಲಭಿಸುವುದು. ಈ 'ಸಂಪೂರ್ಣ'ಕ್ಕೂ ಒಂದು ಮಿತಿಯುಂಟೆಂಬುದನ್ನು ನಾವು ಮರೆಯಬಾರದು. ಚಲನಚಿತ್ರ ಪ್ರದರ್ಶನದಿಂದ ಸ್ಮರಣಶಕ್ತಿಗೆ ಪ್ರೇರಣೆ ದೊರೆಯುವುದು. ಶಿಕ್ಷಕ ಎಷ್ಟೇ ರಸವತ್ತಾಗಿ ವಿಷಯ ನಿರೂಪಣೆ ಮಾಡಿದರೂ, ವಿದ್ಯಾರ್ಥಿಗಳ ಕಣ್ಣು ಮಾಸ್ತರರ ಮುಖವನ್ನೋ, ಗೋಡೆ ಕಿಟಕಿಗಳನ್ನೋ ನೋಡಬೇಕಾಗುವುದು. ಆದರೆ ಚಿತ್ರಗಳಿಂದ ಕಣ್ಣು-ಕಿವಿ ಮೆದುಳುಗಳು ಒಂದೇ ದಾರಿಯಲ್ಲಿ, ಮುಪ್ಪುರಿಯಾಗಿ ಕೆಲಸಮಾಡುತ್ತವೆ. ಶಿಕ್ಷಕನ ಶ್ರಮ ಉಳಿತಾಯದ ಜೊತೆಗೆ ಉದ್ದೇಶವೂ ಸಾರ್ಥಕ, ಸಫಲ.

ಚಲನಚಿತ್ರಗಳಲ್ಲಿ ಎರಡು ಬಗೆ: ೧) ಮೂಕ, ೨) ಧ್ವನಿಮುದ್ರಿತ: ಮೂಕಚಿತ್ರವಾಗಲಿ, ಧ್ವನಿಮುದ್ರಿತವಾಗಲಿ, ವಿದ್ಯಾರ್ಥಿಗಳಿಗೆ ಶಿಕ್ಷಕನ ವಿವರಣೆ ಬೇಕೇಬೇಕು. ಶಿಕ್ಷಕನ ವಿವರಣೆಯೊಂದಿಗೆ ಚಿತ್ರ ಪ್ರದರ್ಶನವಾದರೆ ವಿಷಯದ ನಿಕಟಪರಿಚಯ ಸುಲಭವಾಗುತ್ತದೆ; ಒಟ್ಟಿನಲ್ಲಿ ಶಿಕ್ಷಣಕಾರ್ಯ ಸುಂದರವಾಗುತ್ತದೆ. ಈ ಸಾಮೂಹಿಕ ಅಧ್ಯಾಪನದಿಂದ ಇಬ್ಬಗೆಯ ಲಾಭವುಂಟು. ಶಿಕ್ಷಕನ ಅನುಭವ ಕ್ಷೇತ್ರ ವಿಶಾಲವಾಗುತ್ತದೆ; ವಿದ್ಯಾರ್ಥಿಗಳಲ್ಲಿ ಕಲಿಯುವ ಕುತೂಹಲ ಕೆರಳುತ್ತದೆ. ಚಲನಚಿತ್ರಗಳನ್ನು ಪ್ರದರ್ಶಿಸುವ ರೀತಿಗಳೂ ಹಲವು ಬಗೆಯಾಗಿವೆ. ಮುಖ್ಯವಾಗಿ, ಕೆಳಗಿನವುಗಳನ್ನು ಗಮನಿಸಬಹುದು.

೧ ಕೇವಲ ಚಲನ ಚಿತ್ರಣ-ಶಿಕ್ಷಕನ ವಿವರಣೆಯಿಲ್ಲ.
೨ ಚಲನಚಿತ್ರಣ-ಶಿಕ್ಷಕನ ವಿವರಣೆಯೊಂದಿಗೆ.
೩ ಕೇವಲ ಸ್ಲ್ಯಾಡ್ಸ್-ಶಿಕ್ಷಕನ ವಿವರಣೆಯಿಲ್ಲ,
೪ ಸ್ಲ್ಯಾಡ್ಸ್-ಶಿಕ್ಷಕನ ವಿವರಣೆಯೊಂದಿಗೆ.

ಈ ಪ್ರಕಾರದ ಪ್ರದರ್ಶನ ಪದ್ಧತಿಗೆ ಮೂಕ ಅಥವಾ ಧ್ವನಿ ಮುದ್ರಿತ ಚಲನಚಿತ್ರಗಳೆರಡನ್ನೂ ಉಪಯೋಗಿಸಿಕೊಳ್ಳಬಹುದಾಗಿದೆ. ಇಂಗ್ಲಂಡ ಮೊದಲಾದ ವಿದೇಶಗಳಲ್ಲಿ ಮೇಲಿನ ಮತ್ತು ಇನ್ನಿತರ ಪದ್ಧತಿಗಳನ್ನು ವಿದ್ಯಾರ್ಥಿಗಳ ಮೇಲೆ ಪ್ರತ್ಯಕ್ಷವಾಗಿ ಪ್ರಯೋಗಿಸಿ, ಶಿಕ್ಷಕನ ವಿವರಣೆಯೊಂದಿಗಿರುವ ಚಲನಚಿತ್ರವೇ ಹೆಚ್ಚು ಪರಿಣಾಮಕಾರಿ ಎಂದು ನಿರ್ಧರಿಸಲಾಗಿದೆ. ಗುಣ, ಸಂಖ್ಯೆ, ವೇಳೆಯ ಉಳಿತಾಯಗಳ ದೃಷ್ಟಿಯಿಂದ ಈ ಬಗೆಯ ಶಿಕ್ಷಣಕ್ರಮ ಯಶಸ್ವಿಯಾಗುತ್ತದೆ.

ಚಲನಚಿತ್ರಗಳ ನಿರ್ಮಾಪಕರ ಜವಾಬ್ದಾರಿಯೂ ತೀರ ದೊಡ್ಡದು. ನಿರ್ಮಾಪಕರು ಲಕ್ಷಿಸಲೇಬೇಕಾದ ಕೆಲವು ಅಂಶಗಳನ್ನು ನೋಡೋಣ.

೧ ಚಲನಚಿತ್ರದ ವಿಷಯ ಸ್ಪಷ್ಟವಾಗಿರಬೇಕು.
೨ ಪ್ರಸ್ತುತ ವಿಷಯದ ಬಗೆಗೆ ಮಾಹಿತಿ ಸಂಗ್ರಹ ಪರಿಪೂರ್ಣವಾಗಿರಬೇಕು.
೩ ವಿಷಯ ನಿರೂಪಣೆ ಚಿಕ್ಕದಾಗಿ ಚೊಕ್ಕಟವಾಗಿರಬೇಕು. ಬೇಸರ ತರಿಸುವಂತಿರಬಾರದು. ವಿದ್ಯಾರ್ಥಿಗಳ ಅಭಿರುಚಿ ಹೆಚ್ಚುವಂತಿರಬೇಕು; ಮೆಚ್ಚುವಂತಿರಬೇಕು.
೪ ವಿಷಯ ನಿರೂಪಣೆಯಲ್ಲಿ ಕಲ್ಪನೆ, ಅತಿರಂಜನೆ, ಸಂದೇಹಗಳಿಗೆಡೆಯಿಲ್ಲದಂತೆ ವಾಸ್ತವವಾಗಿರಬೇಕು.
೫ ಧ್ವನಿಮುದ್ರಿಕೆಯ ಉಚ್ಚಾರ ಸ್ಪಷ್ಟ ಮತ್ತು ಖಚಿತವಾಗಿರಬೇಕು.
೬ ಚಲನಚಿತ್ರದ ವಿಷಯ, ಭಾಷೆ ಆಯಾ ಮಟ್ಟದ ವಿದ್ಯಾರ್ಥಿಗಳ ಬುದ್ಧಿ, ಅನುಭವಗಳ ಮಟ್ಟಕ್ಕೆ ಹೊಂದಿಕೆಯಾಗಿರಬೇಕು.
೭ ದುಃಖ, ಭಯ, ಪ್ರೇಮ, ಶಾಲೆಯ ವಾತಾವರಣ ಮೊದಲಾದುವು ಇಲ್ಲದಂತೆ ನೋಡಿಕೊಳ್ಳಬೇಕು.
೮ ಚಲನಚಿತ್ರದ ಮಧ್ಯದಲ್ಲಿ, ಅವಶ್ಯಕಂಡಲ್ಲೆಲ್ಲ-ಉಪತಲೆಬರಹಗಳನ್ನು ಹಾಕಬೇಕು.
೯ ವಿಷಯಜ್ಞಾನದೊಂದಿಗೆ ಮನರಂಜನೆಯೂ ಸೇರಿರಬೇಕು.
೧೦ ಛಾಯಾಗ್ರಹಣ ಮಸುಕಾಗಿರಬಾರದು.
೧೧ ಚಿತ್ರದ ಅವಧಿ ತೀರ ದೀರ್ಘವಾಗಿರಬಾರದು; ಅತಿ ಹೆಚ್ಚೆಂದರೆ ಎರಡು ಗಂಟೆ ಕಾಲಾವಧಿ.

## ಆಕ್ಷೇಪಣೆಯೂ ಉಂಟು !

ಮೇಲಿನವು ಮುಖ್ಯಾಂಶಗಳು ಮಾತ್ರ; ಇವುಗಳಿಗೆ ಸಂಬಂಧಿಸಿದ ಚಿಕ್ಕ-ಮುಟ್ಟ ಅಂಶಗಳನ್ನು ಇಲ್ಲಿ ಹೇಳಿಲ್ಲ. ಚಲನಚಿತ್ರಗಳ ನಿರ್ಮಾಪಕ ಎಲ್ಲ ಮಾತುಗಳನ್ನು ಗಮನಿಸಿ, ತನ್ನ ಹೊಣೆಯನ್ನರಿತು, ದಕ್ಷತೆಯಿಂದ ಉತ್ತಮಚಿತ್ರವನ್ನೇ ತಯಾರಿಸುಬೇಕು; ತಯಾರಿಸುತ್ತಾನೆ ಎಂದು ಗ್ರಹಿಸಿದರೂ, ಶಿಕ್ಷಣ ಕ್ರಮದಲ್ಲಿ ಚಲನಚಿತ್ರಗಳ ನೇರವಾದ ಪ್ರಯೋಜನದ ಬಗೆಗೆ ಭಿನ್ನಾಭಿಪ್ರಾಯಗಳು ಉಂಟೇ ಉಂಟು. ಭಿನ್ನಾಭಿಪ್ರಾಯಗಳಿಲ್ಲದಿದ್ದರೆ ತಜ್ಞರಿಗೆ ಬೆಲೆಯುಂಟೇ! ತೀವ್ರತರ ವಿರೋಧಾಭಿಪ್ರಾಯಗಳನ್ನು ವ್ಯಕ್ತಪಡಿಸುವುದೇ ತಜ್ಞರ ಲಕ್ಷಣ.

ಶಿಕ್ಷಣ ನಿರ್ವಹಣೆಯಲ್ಲಿ ಚಲನಚಿತ್ರಗಳಿಂದ ಅಪೇಕ್ಷಿತ ಪರಿಣಾಮವಾಗುವುದಿಲ್ಲ; ಪ್ರತಿಯಾಗಿ ದುಷ್ಪರಿಣಾಮಗಳೇ ಹೆಚ್ಚುತ್ತವೆಂಬ ವಿಚಾರಸರಣಿಯನ್ನು ತಳೆದವರ ಆಕ್ಷೇಪಣೆಗಳ ಮುಖ್ಯಾಂಶಗಳು ಇಂತಿವೆ

೧) ಚಲನಚಿತ್ರಗಳ ಪ್ರದರ್ಶನದಿಂದ ವಿದ್ಯಾರ್ಥಿಗಳ ಮೇಲಾಗುವ ಲಾಭ ಅಸ್ಪಷ್ಟ: ಅವುಗಳ ಪ್ರಯೋಜನ ಇಂತಿಷ್ಟೆಂದು ನಿರ್ದಿಷ್ಟವಾಗಿ ಹೇಳುವುದು ಸಾಧ್ಯವಿಲ್ಲ.

೨) ಚಲನಚಿತ್ರವು ಯಾಂತ್ರಿಕವಾಗಿರುವುದರಿಂದ ಎಲ್ಲ ವಿದ್ಯಾರ್ಥಿಗಳ ಮೇಲೆ ಒಂದೇ ಬಗೆಯ ಪರಿಣಾಮವನ್ನುಂಟು ಮಾಡುತ್ತದೆ. ವಿದ್ಯಾರ್ಥಿಗಳು ಚಿತ್ರ ನೋಡಿದ ನಂತರ ಪ್ರತಿಕ್ರಿಯೆಗಳನ್ನೂ ಒಂದೇ ರೀತಿಯಲ್ಲಿ ವ್ಯಕ್ತಪಡಿಸುವರು.

೩) ಎರಡು ಚಿತ್ರಗಳ ನಡುವಣ ಸಂಬಂಧ ತಿಳಿಯುವಲ್ಲಿ, ವಿದ್ಯಾರ್ಥಿಗಳಿಗೆ ತಪ್ಪುಕಲ್ಪನೆಯಾಗುವ ಸಂದರ್ಭಗಳೇ ಹೆಚ್ಚು. ಇದರಿಂದ ವಸ್ತುಗಳ ಸರಿಯಾದ ನಿರೀಕ್ಷಣೆ ಮತ್ತು ಅವುಗಳ ಸಂಬಂಧ ಯೋಚಿಸುವಲ್ಲಿಯ ಅಂತರ ಹೆಚ್ಚಾಗುತ್ತದೆ. ವಿಷಯ ಅಪರಿಚಿತವಾಗಿದ್ದರಂತೂ ದೇವರೇ ಗತಿ.

೪) ವಿದ್ಯಾರ್ಥಿಗಳಲ್ಲಿ ಏಕಾಗ್ರಚಿತ್ತ ಉಳಿಯದು: ಅವರಲ್ಲಿ ಕಷ್ಟಪಟ್ಟು ವಿಷಯ ಸಂಗ್ರಹಿಸಬೇಕೆಂಬ ಪ್ರವೃತ್ತಿಯೇ ಅಳಿಯುತ್ತದೆ, ಭಾಷೆಯ ಮೇಲಿನ ಹಿಡಿತ ತಪ್ಪುತ್ತದೆ. ವಿಷಯ ಸಂಗ್ರಹಕ್ಕಿಂತ ಮನೋರಂಜನೆಯೇ ಪ್ರಧಾನವಾಗುತ್ತದೆ. ವಿದ್ಯಾರ್ಥಿಗಳ ಕಲ್ಪನಾಶಕ್ತಿ ಹ್ರಾಸವಾಗುತ್ತದೆ. ಅಭ್ಯಾಸಕ್ಕಾಗಿ ಶ್ರಮಿಸುವ ಮನೋಭಾವವೇ ಮಾಯವಾಗುತ್ತದೆ.

ಕರ್ವವೀರ

೫) ಚಲನಚಿತ್ರಗಳ ವೇಗ ಹೆಚ್ಚಿರುವುದರಿಂದ ಗ್ರಹಣ ಶಕ್ತಿಗೆ ಅವಕಾಶ ತೀರ ಅಲ್ಪ. ನೆನಪಿಡಲು ತೊಂದರೆ. ಕಣ್ಣು, ಮನಸ್ಸುಗಳ ಮೇಲೆ ವೇಗದ ಪರಿಣಾಮ ವಾಗುತ್ತದೆ.

೬) ಶಿಕ್ಷಕ ಮತ್ತು ಪಠ್ಯಪುಸ್ತಕಗಳ ಸ್ಥಾನವನ್ನು ಚಿತ್ರಗಳು ತುಂಬಿಕೊಡಲಾರವು. ವಿದ್ಯಾರ್ಥಿಗಳು ಶಾಲೆ ಕಲಿಯುವುದನ್ನೇ ಹಗುರಾಗಿ ಕಾಣುವರು. ಶಿಕ್ಷಕನ ಪಾಠಗಳಲ್ಲಿ ಒಂದು ಬಗೆಯ ಜಿಗುಪ್ಸೆ ಬೆಳೆಯುತ್ತದೆ.

೭) ಬೇಕಾದ ಚಿತ್ರವನ್ನು ಬೇಕಾಗುವಷ್ಟು ನಿಲ್ಲಿಸಿ ನೋಡಲು ಆಗುವುದಿಲ್ಲ. ಮತ್ತೊಮ್ಮೆ ಚಿತ್ರ ಪ್ರದರ್ಶಿಸಲು ಖರ್ಚು ಹೆಚ್ಚಾಗುತ್ತದೆ.

೮) ಶಿಕ್ಷಕನ ಪಾಂಡಿತ್ಯ, ಅನುಭವಗಳಿಗೆ ಬೆಲೆಯಿಲ್ಲದಂತಾಗುತ್ತದೆ. ಅವುಗಳ ಲಾಭ ವಿದ್ಯಾರ್ಥಿಗಳಿಗಾಗದು. ಅಲ್ಲದೆ, ಶಿಕ್ಷಕ–ವಿದ್ಯಾರ್ಥಿಗಳಲ್ಲಿಯ ನಿಕಟ ಸಂಪರ್ಕವೇ ತಪ್ಪಿ ಹೋಗುತ್ತದೆ. ಈ ಹಾನಿಯನ್ನು ಬೇರೆ ಯಾವ ವಿಧಾನದಿಂದಲೂ ತುಂಬಿಕೊಳ್ಳಲು ಸಾಧ್ಯವಿಲ್ಲ.

೯) ಚಲನಚಿತ್ರ ಪ್ರದರ್ಶನಕೆ ಕತ್ತಲೆ ಕೋಣೆ ಬೇಕು. ಕತ್ತಲೆಯಿಂದಾಗಿ, ವಿದ್ಯಾರ್ಥಿಗಳು ಚಲನಚಿತ್ರವನ್ನೇ ನೋಡುವರೇ? ಹರಟುವರೇ? ಬೇರೆ ವಿಚಾರಗಳಲ್ಲಿ ತೊಡಗಿರುವರೇ? ನಿದ್ದೆ ಮಾಡುವರೇ? ಎಂಬುದು ಶಿಕ್ಷಕನಿಗೆ ತಿಳಿಯದು. ಇದರಿಂದ ಶಿಕ್ಷಕನ ದಕ್ಷತೆ ನಿಷ್ಫಲವಾಗುವುದು.

೧೦) ಯೋಗ್ಯ ಚಲನಚಿತ್ರಗಳ ಅಭಾವ. ಹೆಚ್ಚಿನ ಚಿತ್ರಗಳಲ್ಲಿ ಅಸಂಬದ್ಧತೆ; ಅಸತ್ಯ, ಅಶ್ಲೀಲಗಳೇ ತುಂಬಿರುತ್ತದೆ. ಕಿರಿಯ ವಿದ್ಯಾರ್ಥಿಗಳ ಮನಸ್ಸು, ಆರೋಗ್ಯಗಳ ಮೇಲೆ ಇದರ ಪರಿಣಾಮವಾಗುತ್ತದೆ.

೧೧) ವಿದ್ಯಾರ್ಥಿಗಳಿಗಾಗಿಯೇ ತಯಾರಾದ ಚಲನಚಿತ್ರಗಳಿಗೆ ಆರ್ಥಿಕಹಾನಿ ತಪ್ಪದು. ಆದ್ದರಿಂದ, ನಿರ್ಮಾಪಕರು, ಈ ದಿಶೆಯಲ್ಲಿ ಮುಂದುವರಿಯುವುದಿಲ್ಲ. ಇಂತಹ ಚಿತ್ರಗಳ ಉತ್ಪಾದನೆ ಕುಂಠಿತವಾಗುತ್ತದೆ.

೧೨) ವಿದ್ಯಾರ್ಥಿಗಳಿಗಾಗಿಯೇ ಒಂದು ಥೇಟರ್ ಕಟ್ಟಿಸಲು ಸಾಧ್ಯವಿಲ್ಲ.

೧೩) ಐದರಿಂದ ಹದಿನೈದುವರ್ಷದವರೆಗಿನ ಮಕ್ಕಳೆಲ್ಲರೂ ಒಂದೆಡೆ ಸೇರಿ ಚಲನಚಿತ್ರ ನೋಡುವುದಿಲ್ಲ. ದೊಡ್ಡವರು, ತಮಗಿಂತ ಕಿರಿಯರೊಡನೆ ಸೇರಲು ಇಚ್ಛಿಸುವುದಿಲ್ಲ.

೧೪) ಚಲನಚಿತ್ರಗಳನ್ನು ತೋರಿಸಲು ಎಲ್ಲ ಶಾಲೆಗಳಲ್ಲಿ ಯೋಗ್ಯ ವ್ಯವಸ್ಥೆಮಾಡಲು ಸಾಧ್ಯವಿಲ್ಲ. ಫಿಲ್ಮು ಮತ್ತು ಪ್ರೊಜೆಕ್ಟರಗಳನ್ನು ಕೊಳ್ಳುವುದಾಗಲಿ, ಬಾಡಿಗೆಗೆ ಪಡೆಯುವುದಾಗಲಿ ಸುಲಭ ಬೆಲೆಯಲ್ಲಿ ಸಾಧ್ಯವಿಲ್ಲ, ಅಧಿಕ ಆರ್ಥಿಕ ಭಾರಹೊರಲು ಶಿಕ್ಷಣ ಸಂಸ್ಥೆಗಳಿಗೆ ಆಗದು. ಇದಲ್ಲದೆ, ಯಾಂತ್ರಿಕ ತಜ್ಞನೊಬ್ಬನ ಪಗಾರ, ರಿಪೇರಿ ಮೊದಲಾದ ಖರ್ಚುಗಳೂ ಅಂಟಿಕೊಳ್ಳುತ್ತವೆ.

೧೫) ಫಿಲ್ಮುರೀಲುಗಳು ಅಗ್ನಿಯ ತೀವ್ರವಾಹಕಗಳಾದುದರಿಂದ ಬೆಂಕಿಯ ಭಯ ತಪ್ಪಿದ್ದಲ್ಲ; ಅಪಾಯಕಾರಿಯಾದುವು.

ಮೇಲಣ ಆಕ್ಷೇಪಣೆಗಳಲ್ಲಿ ಹುರುಳಿಲ್ಲದಿಲ್ಲ. ಆದರೆ, ಇವಕ್ಕೆಲ್ಲ ಸಮರ್ಪಕ ಸಮಾಧಾನಗಳೂ ಉಂಟು.

೧) ಶಿಕ್ಷಣ ಕ್ರಮದಲ್ಲಿ ಚಲನಚಿತ್ರಗಳ ಸಹಾಯ ಪಡೆಯುವುದರಿಂದ, ವಿದ್ಯಾರ್ಥಿಗಳ ಸರ್ವಾಂಗೀಣ ಪ್ರಗತಿಗೆ ತೀವ್ರತರ ಲಾಭವಾಗುವುದೆಂದು ಹಲವಾರು ಪ್ರಯೋಗ, ಪ್ರಾತ್ಯಕ್ಷಿಕೆ, ಸಂಶೋಧನೆಗಳಿಂದ ಸಿದ್ಧಮಾಡಿ ತೋರಿಸಲಾಗಿದೆ.

೨) ಇದು ವಿದ್ಯಾರ್ಥಿಗಳ ಬುದ್ಧಿಮತ್ತೆ, ಅನುಭವಗಳನ್ನು ಅವಲಂಬಿಸಿದೆ. ಶಿಕ್ಷಕನು ಕಲಿಸುವುದರಿಂದ ಎಲ್ಲ ವಿದ್ಯಾರ್ಥಿಗಳೂ ಒಂದೇ ಮಟ್ಟದ ಜಾಣರಾಗಲಾರರು; ವೈವಿಧ್ಯ ಇದ್ದೇ ಇದೆ. ಚಲನಚಿತ್ರಗಳಿಂದಲೂ ವಿವಿಧ ಬಗೆಯ ಪರಿಣಾಮ ಸಾಧ್ಯ.

೩) ಚಲನಚಿತ್ರಗಳ ಪ್ರದರ್ಶನದೊಂದಿಗೆ, ಶಿಕ್ಷಕನ ವಿವರಣೆಯೂ ಸೇರಿಕೊಳ್ಳುವುದರಿಂದ ತಪ್ಪು ಕಲ್ಪನೆಗೆ ಅವಕಾಶವಿಲ್ಲ. ಚಿತ್ರದ ಬಗೆಗೆ ಶಿಕ್ಷಕನಿಗೆ ತರಬೇತಿ ಕೊಡಲಾಗುವುದು.

೪) ಶಾಲೆಯ ವಾತಾವರಣದಲ್ಲಿ ಬೇಸತ್ತು ವಿದ್ಯಾರ್ಥಿಗಳಿಗೆ ಮನರಂಜನೆ ಮತ್ತು ಜ್ಞಾನಸಂಪಾದನೆಗಳನ್ನು ಏಕಕಾಲದಲ್ಲಿ ಒದಗಿಸುವ ಚಲನಚಿತ್ರಗಳು ಪ್ರಿಯವಾಗುತ್ತವೆ. ಪಾಠ ಮತ್ತು ಚಲನಚಿತ್ರಗಳ ಸಹಾಯದಿಂದ ವಿದ್ಯಾರ್ಥಿಗಳ ಅಭ್ಯಾಸ, ಅಭಿರುಚಿ ಹೆಚ್ಚುತ್ತದೆ. ಇಬ್ಬಗೆಯ ಅಧ್ಯಯನದಿಂದ ವಿಚಾರ ಶಕ್ತಿ ಬೆಳೆಯುವುದು.

೫) ಚಲನಚಿತ್ರದ ಪ್ರದರ್ಶನ ವೇಗವನ್ನು ನಮಗೆ ಬೇಕಾದಂತೆ ಮಾರ್ಪಡಿಸಿಕೊಳ್ಳಲು ಯಾಂತ್ರಿಕ ವ್ಯವಸ್ಥೆಯುಂಟು.

೬) ಚಲನಚಿತ್ರಗಳು ಮಾತ್ರ ಶಿಕ್ಷಣ ಮಾಧ್ಯಮವೆಂದು ಹೇಳಿಲ್ಲ. ಶಿಕ್ಷಕನ ಪಾಠಕ್ರಮ, ಮಾರ್ಗದರ್ಶನಗಳು ಇದ್ದೇ ಇವೆ. ಚಲನಚಿತ್ರಗಳು ಪೂರಕಗಳು.

೭) ಸ್ಥಿರ ಚಿತ್ರಗಳಲ್ಲಿ ಇದು ಸಾಧ್ಯ. ಚಲನಚಿತ್ರಗಳಲ್ಲಿಯೂ ಈ ಅವಕಾಶ ದೊರೆಯುವಂತೆ ಯಾಂತ್ರಿಕ ಪ್ರಗತಿ ನಡೆದಿದೆ. ಸಾಧ್ಯವೂ ಆಗಿದೆ.

೮) ದೊಡ ವರ್ಗಗಳಲ್ಲಿ ನೇರವಾದ ನಿಯಂತ್ರಣ ಅಸಾಧ್ಯ. ಪ್ರತಿಯೊಬ್ಬ ವಿದ್ಯಾರ್ಥಿಗೂ ಲಕ್ಷ್ಯಪೂರೈಸಲಾಗುವುದಿಲ್ಲ. ಇಂತಹ ಪ್ರಸಂಗದಲ್ಲಿ ಚಲನಚಿತ್ರಗಳೇ ಉತ್ತಮ ವಿಧಾನ. ಶಿಕ್ಷಕನ ಸಂಪರ್ಕವೂ ತಪ್ಪುವುದಿಲ್ಲ. ಶಿಕ್ಷಕನಿಗೆ ಪೂರ್ವಭಾವಿಯಾಗಿ ತರಬೇತಿ ಕೊಡುವುದರಿಂದ ಅವನ ಅನುಭವವೂ ವಿಶಾಲವಾಗುತ್ತದೆ. ಪುಸ್ತಕೀಯ ಜ್ಞಾನಕ್ಕಿಂತ ಪ್ರತ್ಯಕ್ಷ ನೋಟ ವಿಷಯದ ನಿಕಟ ಪರಿಚಯವನ್ನು ಒದಗಿಸುತ್ತದೆ.

೯) ಶಿಕ್ಷಕ ದಕ್ಷನಾಗಿದ್ದರೆ ಈ ದೋಷಾರೋಪಣೆ ತಗಲದು.

೧೦) ಈ ಮಾತು ಸಾಮಾನ್ಯ ಚಲನಚಿತ್ರಗಳಿಗೆ ಅನ್ವಯಿಸುತ್ತದೆ. ಶೈಕ್ಷಣಿಕ ಚಲನಚಿತ್ರಗಳ ತಯಾರಿಕೆಯಲ್ಲಿ ಸಾಕಷ್ಟು ಎಚ್ಚರ, ಜಾಗ್ರತೆಗಳನ್ನು ವಹಿಸುವುದರಿಂದ ಬೇಡಾದ ಅಂಶಗಳು ಸೇರಲು ಅವಕಾಶವಿರುವುದಿಲ್ಲ.

೧೧–೧೨) ಈ ಆರೋಪದಲ್ಲಿ ಸತ್ಯಾಂಶವಿದೆ. ಶೈಕ್ಷಣಿಕ ಸಂಸ್ಥೆಗಳು, ಸರಕಾರ ಈ ದಿಶೆಯಲ್ಲಿ ಆಸ್ಥೆವಹಿಸಿ, ಸಹಾಯ ನೀಡುವುದು ಅವಶ್ಯ.

೧೩) ವಿದ್ಯಾರ್ಥಿಗಳ ವಯಸ್ಸು, ಅನುಭವ, ಬುದ್ಧಿಮತ್ತೆಗಳಿಗನುಗುಣವಾಗಿಯೇ ಚಲನಚಿತ್ರಗಳನ್ನು ತಯಾರಿಸಲಾಗುವುದು. ಚಿತ್ರಣ ಚನ್ನಾಗಿದ್ದರೆ, ಎಲ್ಲ ವಿದ್ಯಾರ್ಥಿಗಳು ಉತ್ಸಾಹದಿಂದ ನೋಡುವರು.

೧೪) ಇದೂ ಗಮನಿಸಬೇಕಾದ ವಿಷಯ. ಇಲ್ಲಿ ವ್ಯಾಪಾರೀ ಮನೋಭಾವ ಸಲ್ಲದು. ನಾವು ತೊಡಗಿಸಿದ ಬಂಡವಾಳಕ್ಕೆ ಪ್ರತಿಯಾಗಿ ಹಣದ ಲಾಭವಾಗದಿದ್ದರೂ, ಶಿಕ್ಷಣದ ಯೋಗ್ಯ ಪ್ರಸಾರ, ವಿದ್ಯಾರ್ಥಿಗಳಿಗಾಗುವ ಪ್ರಯೋಜನಗಳನ್ನು ಲಕ್ಷಿಸುವುದು ವಿಹಿತ.

೧೫) ಫಿಲ್ಮುರೀಲುಗಳನ್ನು ಹಾಕಿ, ಸ್ಥಳಾಂತರಿಸುವ ಪೆಟ್ಟಿಗೆಗಳು ತುಂಬಾ ಭದ್ರವಾಗಿರುವುದರಿಂದ ಅಂಜಿಕೆಗೆ ಆಸ್ಪದವಿಲ್ಲ.




WISH YOU ALL HAPPY DEEPAWALI

KARNATAK AUTOMOBILES,

*10 Municipal Building*

HOSUR, HUBLI-21

Telephone. 418

*Dealers in :-*

ALL KINDS OF SPARE PARTS OF

★ Tata Marcedes Benz, Perkins Trucks

★ Jeep and Ambassodor Fiat Cars.

 ದೀಪಾವಳಿಯು ಸಕಲರಿಗೂ ಸುಖವಾಗಲಿ! 

# ಅಶೋಕ ಲಾಡ್ಜ

**ಅಶೋಕ ರೋಡ್, ದಾವಣಗೆರೆ-೧**

ಉತ್ತಮ ವಸತಿ ಮತ್ತು ನಮ್ರ ಸೇವೆಗೆ
ಒಮ್ಮೆ ಭೇಟಿ ಕೊಡಿರಿ.

ರೇಲ್ವೆ ಸ್ಟೇಶನ್, ಬಸ್ ನಿಲ್ದಾಣ, ಅಂಚೆ ಕಚೇರಿ, ಬ್ಯಾಂಕುಗಳು
ಪ್ರಮುಖ ವಾಣಿಜ್ಯ, ಕೈಗಾರಿಕಾ ಸಂಸ್ಥೆಗಳು ಹೀಗೆ
ಎಲ್ಲದಕ್ಕೂ ಸಮೀಪವಿರುವ ಏಕೈಕ

**ವಸತಿ ಸೌಕರ್ಯದ ಕೇಂದ್ರ**

ಪ್ರೊಪ್ರೈಟರ್ಸ್:
ಕೋಮಲ ಎಂಟರ್‌ಪ್ರೈಜಸ್,
ದಾವಣಗೆರೆ.

---

 ದೀಪಾವಳಿಯ ಶುಭಾಶಯಗಳು 

## ಜನತಾ ಫೈನಾನ್ಸಿಯಲ್ ಕಾರ್ಪೊರೇಶನ್ (ರಿ)

ರಮಾನಂದ ಬಿಲ್ಡಿಂಗ್, ದಾವಣಗೆರೆ

ದೀಪಾವಳಿ ಹಬ್ಬದ ವಿಶೇಷ ಉಡುಗರೆ

ತಾ. ೧೫-೧೦-೭೩ ರಿಂದ ೩೦-೧೧-೭೪ ರ
ವರೆಗೆ ಫಿಕ್ಸೆಡ್ ಡಿಪಾಜಿಟ್‌ಗಳಿಗೆ
ನೀಡುವ ಹೆಚ್ಚಿನ ಬಡ್ಡಿದರ
13%

ನಿಮ್ಮ ಹಣವು ನಿಮಗಾಗಿ ಅತಿ ಹೆಚ್ಚುಗಳಿಸಲಿ
ಪ್ರಮುಖ ವಾಣಿಜ್ಯೋದ್ಯಮಿಗಳು ಹಾಗೂ
ವ್ಯಾಪಾರೋದ್ಯಮದಲ್ಲಿ ಅನುಭವವುಳ್ಳವರಿಂದ
ನಡೆಸಲ್ಪಡುವ ಸಂಸ್ಥೆ.

ಮ್ಯಾನೇಜಿಂಗ್ ಪಾರ್ಟನರ್: A. ಕೊಟ್ರಪ್ಪ

ಮ್ಯಾನೇಜರ: B. M. ವಾಗೀಶ ಶಿವಾಚಾರ್ಯ, B. A. B. L.

---



ನಮ್ಮೆಲ್ಲ ಗ್ರಾಹಕರಿಗೆ
ದೀಪಾವಳಿಯ
ಅಭಿನಂದನೆಗಳು

# ಹೊಟೆಲ ಓಪಲ

ಪೂನಾ-ಬೆಂಗಳೂರ ರೋಡ,
ಕೊಲ್ಹಾಪೂರ

**Phone: 2006**

---

 ಸರ್ವರಿಗೂ ದೀಪಾವಳಿಯು
ಹರ್ಷದಾಯಕವಾಗಲಿ 

# ಡಾ|| ಬೂದಾಳು ಶಂಕರಪ್ಪ

R. M. P.

ಇಸ್ಲಾಂಪೇಟೆ ದಾವಣಗೆರೆ-1

ಲೇಖಕರು :-

**"ನನ್ನ ವೈದ್ಯಕೀಯ ಅನುಭವಗಳು"**

ಭಾಗ ನಂ. 1 (ಹೃದಯ ರೋಗಗಳು, ರಕ್ತ ಒತ್ತಡ, ಅಲರ್ಜಿ, ಕ್ಯಾನ್ಸರ್, ಪ್ರಾಣಿಗಳ ಕಡಿತದ ನಂಜು.)
ಭಾಗ ನಂ. 2 (ಬಿಳಿಯ ತೊನ್ನು ಮತ್ತು ಚರ್ಮರೋಗಗಳು)
ಭಾಗ ನಂ. 3 (ಶರೀರ, ಮನಸ್ಸು ಮತ್ತು ಯೋಗಾಸನ.)

(ಶೀಘ್ರದಲ್ಲಿಯೇ ಪ್ರಕಟವಾಗಲಿವೆ)

೧೬) ಮಕ್ಕಳೇ ಪಾತ್ರವಹಿಸಿದ ಚಲನಚಿತ್ರಗಳಂತೂ ಹೆಚ್ಚು ಪ್ರಿಯವಾದುವು.

೧೭). ಶಿಕ್ಷಕ ಒಂದೇ ಉಪಕರಣವನ್ನು ಒಂದು ಸಲ ತೋರಿಸಿ, ವಿವರಿಸಬಹುದಾದರೆ, ಚಲನಚಿತ್ರದಲ್ಲಿ ಒಂದೇ ಉಪಕರಣದ ಹಲವು ಪ್ರಯೋಜನಗಳನ್ನೂ, ಸಂಬಂಧಿಸಿದ ಇತರ ಉಪಕರಣಗಳನ್ನೂ ಏಕಕಾಲಕ್ಕೆ ತೋರಿಸಬಹುದು. ಇದರಿಂದ ವೇಳೆಯ ಉಳಿತಾಯ; ಪ್ರತ್ಯಕ್ಷ ಪರಿಚಯದ ಲಾಭ.

ಶಿಕ್ಷಣರಂಗದಲ್ಲಿ ಚಲನಚಿತ್ರಗಳ ಉಪಯೋಗದ ಬಗೆಗಿರುವ ಸಾಧಕ–ಬಾಧಕ ಅಭಿಪ್ರಾಯಗಳನ್ನು ನೋಡಿದ್ದಾಯಿತು. ಚಲನಚಿತ್ರಗಳ ಉಪಯೋಗವೇ ಬೇಡವೆನ್ನುವವರು ತೀರ ವಿರಳ. ಕೇವಲ ಚಲನಚಿತ್ರಗಳಷ್ಟೇ ಶಿಕ್ಷಣ ಮಾಧ್ಯಮವೆಂದರೆ ತೀವ್ರ ವಿರೋಧ ಎದುರು ನಿಲ್ಲುತ್ತದೆ. ವಿದೇಶಗಳಲ್ಲಿ ಪ್ರತಿವಾರವೂ ವಿದ್ಯಾರ್ಥಿಗಳಿಗಾಗಿ ಚಲನಚಿತ್ರಗಳನ್ನು ತೋರಿಸುವ ವ್ಯವಸ್ಥೆಯುಂಟು. ಅಲ್ಲಿನ ಶಿಕ್ಷಣ ಯೋಜನೆಯಲ್ಲಿ ಚಲನಚಿತ್ರಗಳ ಸ್ಥಾನ ಭದ್ರವಾಗಿದೆ. ನಮ್ಮ ದೇಶದಲ್ಲಿ ಈ ವಿಷಯವಾಗಿ ಏನು ನಡೆದಿದೆ ಎಂದು ನಿರುಕಿಸುವುದು ನಮ್ಮೆಲ್ಲರ ಕರ್ತವ್ಯ.

## ಸಫಲತೆಯ ದಾರಿಯಲ್ಲಿ

೧೯೪೪ರಲ್ಲಿ ಸೇರಿದ 'ಅಖಿಲ ಭಾರತ–ಶಿಕ್ಷಣ ಸಮ್ಮೇಲನ'ದಲ್ಲಿ ಚಲನಚಿತ್ರಗಳ ವಿಷಯವಾಗಿ ಮೊದಲ ಬಾರಿಗೆ ವಿಚಾರ ನಡೆಯಿತು. ಕೆಲವೇ ತಿಂಗಳುಗಳು ಉರುಳಿದವು. ಭಾರತ ಸರಕಾರ ನಂತರ, ಯಥಾ ಪ್ರಕಾರ ಒಂದು ಸಮಿತಿಯನ್ನು ನಿಯಮಿಸಿತು. ಆ ಸಮಿತಿಯು ವರದಿಯನ್ನು ಒಪ್ಪಿಸಿತು. ಈ ವರದಿಯ ಆಧಾರದ ಮೇಲೆ, ೧೯೪೯ರ ಏಪ್ರಿಲದಲ್ಲಿ ಚಲನಚಿತ್ರಗಳನ್ನು ಉತ್ಪಾದಿಸಬೇಕೆಂದು ಸರಕಾರದ ಪ್ರಕಟಣೆ ಹೊರಟಿತು. ಕೆಲವು ಖಾಸಗಿ ಸಂಸ್ಥೆಗಳು ಸ್ವಯಂಪ್ರೇರಿತವಾಗಿ ಮುಂದೆ ಬಂದು, ೧೯೫೦ರಲ್ಲಿ 'ಫಿಲ್ಮ ಸೊಸೈಟಿ' ಮತ್ತು 'ವ್ಹಿಜು ಅಲ್ ಎಜ್ಯುಕೇಶನ್' ಕೇಂದ್ರಗಳನ್ನು ಪ್ರಾರಂಭಿಸಿದವು. ಇದು ಭಾರತದಲ್ಲಿ ಚಲನಚಿತ್ರ ಪ್ರಾರಂಭವಾದ ಕತೆ.

ಸರ್. ಡಿ. ಎಂ. ಹ್ಯಾಮಿಲ್ಟನ್‌ರವರು, ಪಶ್ಚಿಮ ಬಂಗಾಲದಲ್ಲಿ 'ಗೋಸಾಬಾ' ಎಂಬಲ್ಲಿ ಒಕ್ಕಲುತನದ ಆದರ್ಶಕೇಂದ್ರವೊಂದನ್ನು ಸ್ಥಾಪಿಸಿದರು. ಕಾರ್ಯದಕ್ಷತೆ, ಮುಂದಾಲೋಚನೆ ಪ್ರಗತಿಪರ ವಿಚಾರಗಳಿಗಾಗಿ ಈ ಕೇಂದ್ರ ಹೆಸರಾದುದು. ಕೇವಲ ನಾಲ್ಕು ತಿಂಗಳ ಅವಧಿಯಲ್ಲಿ ಈ ಕೇಂದ್ರವು ೬೦,೦೦೦ ಫೂಟನಷ್ಟು ಚಲನಚಿತ್ರವನ್ನು ತಯಾರಿಸಿತು. 'ಫೆನ್‌ಲ್ಯಾಂಡ್ಸ' 'ಮನೆ ಮತ್ತು ಶಾಲೆ' 'ನಿಮ್ಮ ಮಕ್ಕಳು ಮತ್ತು ನೀವು' ಮೊದಲಾದ ವೈವಿಧ್ಯಪೂರ್ಣ ವಿಷಯಗಳನ್ನು ಆಯ್ದುಕೊಂಡಿದ್ದರು. ಭೂಗೋಲ, ಇತಿಹಾಸ, ವಿಜ್ಞಾನ, ಆರೋಗ್ಯಶಾಸ್ತ್ರ ಮೊದಲಾದ ವಿಷಯಗಳಿಗೆ ಸಂಬಂಧಿಸಿದ ಚಿತ್ರಗಳನ್ನು ತಯಾರಿಸುವ ಯೋಜನೆಯೂ ಉಂಟು. ಆ ದಿಶೆಯಲ್ಲಿ ತೀರ ಭರದಿಂದ ಪ್ರಯತ್ನ ನಡೆಯುತ್ತಿದೆ. ಪ್ರೌಢ ಶಿಕ್ಷಣ, ಮಹಿಳಾ ಶಿಕ್ಷಣಗಳಿಗೂ ಈ ಚಿತ್ರಗಳನ್ನು ಉಪಯೋಗಿಸುವರು. 'ಗೋಸಾಬಾ' ಕೇಂದ್ರ ತಯಾರಿಸಿದ ಚಲನಚಿತ್ರಗಳು ತುಂಬ ಪ್ರಯೋಜನಕಾರಿಯಾಗಿವೆ. ಚಲನಚಿತ್ರ ಪ್ರದರ್ಶನದ ಜೊತೆಗೆ ವಿದ್ಯಾರ್ಥಿಗಳಿಗೆ ಅನುಕೂಲವಾಗಲೆಂದು, ವಿವರಣೆಯನ್ನೂ ಹೇಳಲಾಗುತ್ತಿದೆ. ೧೯೫೦ರ ಸಪ್ಟಂಬರದಲ್ಲಿ 'ವ್ಹಿಜ್ಯುಅಲ್ ಎಜ್ಯುಕೇಶನ್' ಎಂಬ ಆಂಗ್ಲ ಪತ್ರಿಕೆಯು ಪಶ್ಚಿಮ ಬಂಗಾಲದ 'ಗೋಸಾಬಾ ವ್ಹಿಜ್ಯು ಅಲ್ ಎಜ್ಯುಕೇಶನ್ ಕೇಂದ್ರದ ವಿವಿಧ ಚಟುವಟಿಕೆಗಳನ್ನು ಪ್ರಶಂಸಿಸಿ ಪ್ರಚಾರಗೊಳಿಸಿತು. ಪ್ರೋತ್ಸಾಹ ನೀಡಿತು.

ಪ್ರೊ. ಟಿ. ಎಲ್. ಗ್ಲೀನ್ ಶೈಕ್ಷಣಿಕ ಚಲನಚಿತ್ರಗಳ ವಿಷಯದಲ್ಲಿ ಜಾಗತಿಕ ತಜ್ಞರು. ಇವರು ೧೯೫೧ರಲ್ಲಿ ಭಾರತಕ್ಕೆ ಭೆಟ್ಟಿಯಿತ್ತರು. ಅವರ ಭೆಟ್ಟಿಯ ನೆನಪಿಗಾಗಿ ೧೯೫೨ರಲ್ಲಿ 'ದಿ ನ್ಯಾಷನಲ್ ಬೋರ್ಡ ಆಫ್ ಆಡಿಯೋ–ವ್ಹಿಜ್ಯುಅಲ್ ಎಜ್ಯುಕೇಶನ್' ಎಂಬ ಸಂಸ್ಥೆ ನಮ್ಮ ದೇಶದಲ್ಲಿ ಜನ್ಮವೆತ್ತಿತು. ೧೯೫೩ರ ಮೇ ತಿಂಗಳಲ್ಲಿ ಈ ಸಂಸ್ಥೆಯ ಪ್ರಥಮ ಸಭೆ ಸೇರಿತು. ಆ ಸಭೆಯಲ್ಲಿ 'ಫಿಲ್ಮ ಡಿವಿಜನ್' ಸಂಸ್ಥೆಯು ಚಲನಚಿತ್ರಗಳನ್ನು ನಿರ್ಮಿಸಬೇಕು; ವಿವಿಧ ಪ್ರಾಂತ ಸರಕಾರಗಳು ಈ ಬಗ್ಗೆ ಉತ್ತೇಜನವಿತ್ತು, ಶಾಲೆಗಳಲ್ಲಿ ಚಲನಚಿತ್ರಗಳನ್ನು ತೋರಿಸುವ ಏರ್ಪಾಡು ಮಾಡಬೇಕು ಎಂದು ನಿರ್ಣಯಿಸಲಾಯಿತು.

ಪ್ರಥಮ ಪಂಚವಾರ್ಷಿಕ ಯೋಜನೆಯ ಕಾಲಾವಧಿಯಲ್ಲಿ ಕೇಂದ್ರ ಸರಕಾರವು ಲಖನೌದಲ್ಲಿ ಎರಡು ವಿಚಾರ ಸಂಕಿರಣಗಳನ್ನು ಏರ್ಪಡಿಸಿತು. ದ್ವಿತೀಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಕೇಂದ್ರ ಶಿಕ್ಷಣ ಶಾಖೆಯ ಕಾರ್ಯದರ್ಶಿಯಾಗಿದ್ದ ಶ್ರೀ ಕೆ. ಜಿ. ಸೈಯುದ್ದೀನರವರು, ೧೯೫೫ ಮೇ ತಿಂಗಳಲ್ಲಿ, ಚಲನಚಿತ್ರಗಳ ವಿಷಯವಾಗಿ ಚರ್ಚೆ ನಡೆಯಿಸಿ ಕೆಳಗಿನ ನಿರ್ಣಯಗಳನ್ನು ಕೈಕೊಂಡರು.

೧) ಪ್ರಾಂತಗಳಲ್ಲಿ ವ್ಹಿಜ್ಯುಅಲ್ ಎಜ್ಯುಕೇಶನ್ ಬೋರ್ಡ್‌ಗಳ ಸ್ಥಾಪನೆ.

೨) ಪ್ರಾಂತಗಳಲ್ಲಿ ಚಲನಚಿತ್ರಗಳ ಪುಸ್ತಕಾಲಯಗಳ ಸ್ಥಾಪನೆ.

೩) ಚಲನಚಿತ್ರಗಳ ಬಗೆಗೆ ಶಿಕ್ಷಕರಿಗೆ ತರಬೇತಿ.

೪) ಹೈಸ್ಕೂಲು ಹಾಗೂ ಸೆಕೆಂಡರಿ ಶಿಕ್ಷಣ ಸಂಸ್ಥೆಗಳಿಗೆ ರೇಡಿಯೋ ಪೂರೈಕೆ.

೫) ಎಲ್ಲ ಜಿಲ್ಲೆಗಳಲ್ಲಿ 'ಆಡಿಯೋ–ವ್ಹಿಜ್ಯುಅಲ್ ಪ್ರವಾಸಿ ವಾಹನ ಕೇಂದ್ರ'ಗಳ ಸ್ಥಾಪನೆ.

೬) ನಿಯತಕಾಲಿಕ ಪತ್ರಿಕೆ ಹೊರಡಿಸುವುದು.

೭) ೩೫ ಎಂ. ಎಂ. ಚಲನಚಿತ್ರಗಳ ನಿರ್ಮಾಣ.

೮) ಚಲನಚಿತ್ರಗಳ ವಿಷಯವಾಗಿ ಕೆಲವು ಖಾಸಗಿ ಸಂಸ್ಥೆಗಳ ಸಹಕಾರದಿಂದ ಸಂಶೋಧನೆ.

೯) ಖಾಸಗಿ ಉತ್ಪಾದಕರಿಗೆ ಪ್ರೋತ್ಸಾಹ ನೀಡುವುದು.

## ನಿಷ್ಪ್ರಯೋಜಕ ಕಾರ್ಯ

ನಮ್ಮ ಕೇಂದ್ರ ಸರಕಾರವು ಚಿಲ್ಡ್ರನ್ಸ್ ಫಿಲ್ಮ ಸೊಸೈಟಿ ಸ್ಥಾಪಿಸಿದೆ. ಅನೇಕ ವರ್ಷಗಳಿಂದ ಈ ಸಂಸ್ಥೆ ಕೆಲಸ ಮಾಡುತ್ತಿದ್ದರೂ ಹೇಳಿಕೊಳ್ಳುವಂತಹ ಸಾಧನೆಗಳಾಗಿಲ್ಲ. ಅಪೇಕ್ಷಿತ ಪ್ರಗತಿ ಸಾಧಿಸಿಲ್ಲ. ಈ ಸಂಸ್ಥೆ ಈಗಾಗಲೇ ಸಾಹಿತ್ಯ, ಇತಿಹಾಸ, ಭೂಗೋಲ, ಗಣಿತ, ಭೌತಶಾಸ್ತ್ರ, ರಸಾಯನ ಶಾಸ್ತ್ರ, ನಿಸರ್ಗದ ಅಭ್ಯಾಸ, ಪೌರನೀತಿ, ನೀತಿ ಕತೆಗಳು, ಸಾಹಸಗಳು, ಪ್ರಾಣಿಶಿಲ್ಪ, ಕೈಗಾರಿಕೆ, ಒಕ್ಕಲುತನ, ಮಹತ್ವದ ಘಟನೆಗಳು, ಆರೋಗ್ಯ ಶಾಸ್ತ್ರ, ವಿದೇಶಗಳ ಪರಿಚಯ ಮೊದಲಾದ ವಿಷಯಗಳನ್ನು ಕುರಿತು ಚಲನಚಿತ್ರಗಳನ್ನು ತಯಾರಿಸಿದೆ, ಹಂಚಿದೆ. ಆದರೂ ಈ ಸಂಸ್ಥೆಯ ಕಾರ್ಯಗತಿ ಮಂದ. ಹಣದ ವೆಚ್ಚ ವಿಪರೀತ. ಇತ್ತೀಚೆ ಕೇಂದ್ರ ಸರಕಾರವು ಈ ಸಂಸ್ಥೆಯನ್ನು ಮುಚ್ಚಬೇಕೆಂದೂ ಫಿಲ್ಮ ಡಿವಿಜನ್‌ದಲ್ಲಿ ವಿಲೀನೀಕರಣಗೊಳಿಸಬೇಕೆಂದೂ ವಿಚಾರಿಸುತ್ತಿದೆ. ಇದಕ್ಕೆ ಪ್ರಬಲ ಕಾರಣವೆಂದರೆ ಮಕ್ಕಳ ವಿಭಾಗದ ಚಲನಚಿತ್ರ ಸಂಸ್ಥೆಯ ನಿಯಂತ್ರಕರೆಲ್ಲ ಹಿರಿಯರೇ ಆಗಿರುವುದು. ಸರಕಾರದ ಯೋಚನೆ ಕಾರ್ಯರೂಪಕ್ಕಿಳಿದರೆ ಶೈಕ್ಷಣಿಕ ಚಲನಚಿತ್ರಗಳ ಸಮಾಧಿ ಕಟ್ಟಿದಂತೆ. ಕಿರಿಯ ಪೀಳಿಗೆಯ ಪ್ರಗತಿಯಲ್ಲಿ ಆಸಕ್ತಿಯುಳ್ಳ ಶಿಕ್ಷಣ ತಜ್ಞರು, ಸಮಾಜ ಸೇವಕರು, ಸಕಾಲದಲ್ಲಿ ಕಣ್ತೆರೆದು ಬಾಯಿಬಿಚ್ಚಿ ಕೂಗಿದರೆ ಈ ವಿಭಾಗ ಬದುಕೀತು! ಇಲ್ಲದಿದ್ದರೆ ಸಹಜ ಸಾವೇ ಗತಿ.!

೧೯೪೪ರಿಂದ ಈ ವರೆಗೆ ನಮ್ಮ ದೇಶದಲ್ಲಿ ಶಿಕ್ಷಣ ಕ್ರಮದಲ್ಲಿ ಚಲನಚಿತ್ರಗಳನ್ನು ಬಳಸಿಕೊಳ್ಳುವ ವಿಧಾನ ನಿಯಮವಾಗಿ ಬಾರದಿರುವುದು ಶೋಚನೀಯ. ಇದಕ್ಕೆ ಅನೇಕ ಕಾರಣಗಳೂ ಉಂಟು.

೧) ಕೇಂದ್ರ ಮತ್ತು ಪ್ರಾಂತ ಸರಕಾರಗಳ ಆರ್ಥಿಕ ಮುಗ್ಗಟ್ಟು.

೨) ಇದ್ದುದನ್ನು ಉಳಿಸಿಕೊಳ್ಳಬೇಕೆಂಬ ಎಚ್ಚರದ ಕಾರ್ಯಕ್ಷಮತೆಯ ಅಭಾವ.

೩) ಚಲನಚಿತ್ರಗಳ ಉತ್ಪಾದನೆ ಸಾಕಷ್ಟು ಪ್ರಮಾಣದಲ್ಲಿಲ್ಲ.

೪) ಪ್ರೊಜೆಕ್ಟರ್, ಚಲನಚಿತ್ರದ ಬಾಡಿಗೆ, ತಾಂತ್ರಿಕ ತಜ್ಞರ ನೇಮಕ ಮೊದಲಾದವುಗಳಿಗೆ ಬೇಕಾಗುವ ಆರ್ಥಿಕ ಶಕ್ತಿ ನಮ್ಮ ಶಿಕ್ಷಣ ಸಂಸ್ಥೆಗಳಲ್ಲಿ ಉಳಿಯದಿರುವುದು.

೫) ಆಡಳಿತ ಯಂತ್ರ ಒಡ್ಡುವ ತೊಡಕುಗಳು.

೬) ಪ್ರಚಾರದ ಅಭಾವ.

೭) ಸರಕಾರ, ಶಿಕ್ಷಣ ಖಾತೆಗಳ ಉದಾಸೀನ ಪ್ರವೃತ್ತಿ.

೮) ಖಾಸಗೀ ಚಿತ್ರ ನಿರ್ಮಾಪಕರು ಇಂತಹ ಚಲನಚಿತ್ರಗಳನ್ನು ನಿರ್ಮಿಸದಿರುವುದು. ವ್ಯಾಪಾರೀ ಮನೋಭಾವವೇ ದೊಡ್ಡ ಆತಂಕ.

೯) ಇವೆಲ್ಲಕ್ಕಿಂತ ಮಿಗಿಲಾಗಿ, ಶಿಕ್ಷಣ ತಜ್ಞರ, ಸಮಾಜ ಸೇವಕರ, ಮನಶ್ಶಾಸ್ತ್ರಜ್ಞರ ಸ್ಮಶಾನ ಮೌನ. ಸಾಮಾನ್ಯ ಪ್ರಜೆಗಳಿಗಂತೂ ಬದುಕುವುದೇ ಸಮಸ್ಯೆಯಾಗಿದೆ.

೧೦) ಚರ್ಚೆ, ವಿಚಾರ ಸಂಕಿರಣ, ಸಂಶೋಧನೆಗಳ ಘೋರ ಬರಗಾಲ ಇತ್ಯಾದಿ.

ಭಾರತದಲ್ಲಿಯೂ ಶೈಕ್ಷಣಿಕ ಚಲನಚಿತ್ರವು ಶಿಕ್ಷಣ ಕಾರ್ಯದ ಅವಿಭಾಜ್ಯ ಅಂಗವಾಗಿ ಉಳಿಯುವ, ಬೆಳೆಯುವ ಕಾಲ ಬಂದೀತೇ? ಮಕ್ಕಳ ಸರಿಯಾದ ಜ್ಞಾನ ಸಂಪಾದನೆ, ಮನೋವಿಕಾಸಗಳೇ ದೇಶದ ಏಳಿಗೆಯ ಸೋಪಾನವೆಂಬ ಎಚ್ಚರಮೂಡೀತೇ? ವಿಚಾರವಂತರು ತಲೆ ತುರಿಸಿಕೊಳ್ಳಲಿ. ಸದ್ಯದ ಪರಿಸ್ಥಿತಿಯಲ್ಲಿ ಉತ್ತರ ಕನಸಿನ ಗಂಟು; ಪ್ರಶ್ನೆಗಳ ಗಂಟೇ ನನಸು!



ರಜತಮಹೋತ್ಸವವನ್ನು ಆಚರಿಸಿದ
ಮಹೋನ್ನತ ಸಂಸ್ಥೆ

ನಲ್ಲಿ ಪ್ರಕಾಶ

# ಮನೋಹರ ಕೆಫೆ

ಪ್ರಥಮ ದರ್ಜೆಯ ಊಟ-
ಉಪಹಾರ ಮತ್ತು ವಸತಿಗೃಹ

ನೆಹರೂ ರಸ್ತೆ, .... ಶಿವಮೊಗ್ಗಾ

ನಮ್ಮ ಹಿತಚಿಂತಕರಿಗೆಲ್ಲ ದೀಪಾವಳಿಯ
ಶುಭಾಶಯುಗಳನ್ನು ಸಲ್ಲಿಸುತ್ತೇವೆ

– ಪಿ. ಕೆ. ಜನಾರ್ದನ

IDEAL

# IDEAL

**Photo Zinco Works**

S. K. Compound, Hubli–20
*Prop,* M. V Phatak



**wish their Patrons
a happy deepavali &
prosperous new year**

IDEAL

IDEAL IDEAL

ದೀಪಾವಳಿಯ ಶುಭಾಶಯಗಳು ಸಕಲರಿಗೂ ಸನ್ಮಂಗಳ ನೀಡಲಿ!

# ಸಿ. ಸಿ. ಸಿ. ಕಾಫಿ



ಸಂಮೋಹಕ ಘಮ ಘಮ ಕಾಫಿ
ಸಂತುಷ್ಟತೆಗೆ ರುಚಿ ರುಚಿ ಕಾಫಿ




ಕರ್ನಾಟಕ ಕಾಫಿ ಕಂಪನಿ

**CARNATIC COFFEE CO.**

SRINIVAS KRUPA

Phone: 136   Post Bag No. 210   Tel: Laxmipati

DAVANERE-2

# ಚಿತ್ರೋದ್ಯಮ ಮತ್ತು ಸರಕಾರಿ ನೀತಿ

ಸಿಂಧುವಳ್ಳಿ ಅನಂತಮೂರ್ತಿ

ಚಲನಚಿತ್ರೋದ್ಯಮಕ್ಕೂ ಸರ್ಕಾರಕ್ಕೂ ನೇರವಾಗಿ ಸಂಪರ್ಕವಿಲ್ಲದಿದ್ದರೂ ಪರೋಕ್ಷವಾಗಿ ಸಂಬಂಧವಿದ್ದೇ ಇದೆ. ದೇಶದ ಚಲನಚಿತ್ರೋದ್ಯಮವು ಸರ್ಕಾರದ ನೀತಿಯನ್ನು ಸಧ್ಯ ಬಹಳಮಟ್ಟಿಗೆ ಅವಲಂಬಿಸಿದೆ. ಸರ್ಕಾರದ ನೀತಿ ಎನ್ನುವಾಗ ಕೇಂದ್ರ ಸರ್ಕಾರ ಹಾಗು ರಾಜ್ಯ ಸರ್ಕಾರ ಬರುತ್ತವೆ. ಈ ಉದ್ಯಮದಲ್ಲಿ ಕೇಂದ್ರ ಸರ್ಕಾರದ ಪಾತ್ರವೇನು ರಾಜ್ಯ ಸರ್ಕಾರದ ಪಾತ್ರವೇನು ಎಂಬುದನ್ನು ನೋಡೋಣ. ಸೆನ್ಸಾರ್ ಹಾಗು ರಾಷ್ಟ್ರ ಪ್ರಶಸ್ತಿ ಕೇಂದ್ರ ಸರಕಾರದ ಅಧೀನಕ್ಕೆ ಒಳಪಟ್ಟಿದೆ. ಸಬ್ಸಿಡಿ, ರಾಜ್ಯಪ್ರಶಸ್ತಿ, ಸ್ಟುಡಿಯೋಗಳಿಗೆ ಸಹಾಯ, ಚಿತ್ರ ಮಂದಿರಗಳ ನಿರ್ಮಾಣ, ಚಿತ್ರತಯಾರಿಕೆಗೆ ಸಹಾಯ ಇವೇ ಮೊದಲಾದವುಗಳು ರಾಜ್ಯ ಸರ್ಕಾರದ ಕೈಯುಲ್ಲಿದೆ.

## ಕನ್ನಡ ಚಿತ್ರಗಳ ಸೆನ್ಸಾರ್

ದಕ್ಷಿಣ ದೇಶದ ಭಾಷೆಗಳ ಚಿತ್ರಗಳಿಗೆ ಮದರಾಸಿನಲ್ಲಿ ಸೆನ್ಸಾರ್ ಮಾಡಲು ಅವಕಾಶವಿದೆ. ಈ ಸಮಿತಿಯಲ್ಲಿ ಸೆನ್ಸಾರ್ ಕಛೇರಿಯ ಅಧಿಕಾರಿಗಳ ಜತೆಗೆ ತಿಳಿದವರು ಕೆಲವರು ಇರುತ್ತಾರೆ. ಇವರೆಲ್ಲರೂ ಸೇರಿ ಸರ್ಕಾರದಿಂದ ಸೂಚಿತವಾದ ನಿಯಮಗಳ ಆಧಾರದ ಮೇಲೆ ಒಂದು ಚಿತ್ರ ತೋರಿಸಿದ ರೀತಿಯಲ್ಲೇ ... ಬಿಡುಗಡೆಯಾಗಬೇಕೆ, ಸೂಚಿತ ಬದಲಾವಣೆಗಳೊಡನೆ ಬಿಡುಗಡೆಯಾಗಬೇಕೆ ಅಥವಾ ಬಿಡುಗಡೆ ಆಗಲೇಬಾರದೇ ಎನ್ನುವುದನ್ನು ತೀರ್ಮಾನಿಸುತ್ತಾರೆ. ಸಾಮಾನ್ಯವಾಗಿ ಈ ಸಮಿತಿಯ ತೀರ್ಮಾನದಂತೆ ಚಿತ್ರಗಳು ಬಿಡುಗಡೆಯಾಗುತ್ತವೆ. ಈ ಸಮಿತಿ ಬಿಡುಗಡೆ ಹೊಂದಲು ಅರ್ಹವಲ್ಲವೆಂದ ಚಿತ್ರಗಳಿಗೆ ಸಂಬಂಧಪಟ್ಟವರು ಸಮಿತಿಯ ಮೇಲೆ ಪ್ರಭಾವಬೀರಿ ಅಂತಹ ಚಿತ್ರಗಳಿಗೆ ಸೆನ್ಸಾರ್ ಮುದ್ರೆ ಒತ್ತಿಸುತ್ತಾರೆ. ಇಂತಹ ಕ್ರಮಗಳು ಹೋಗಿ ಕೊನೆಯ ತೀರ್ಮಾನ ಸೆನ್ಸಾರಸಮಿತಿಯದೇ ಆಗಬೇಕು.

ಮದರಾಸಿನಲ್ಲಿರುವಂತೆ ಬೊಂಬಾಯಿಯಲ್ಲಿ ಒಂದು ಕಲ್ಕತ್ತಾದಲ್ಲಿ ಒಂದು ಸೆನ್ಸಾರ್ ಸಮಿತಿ ಇವೆ. ಬೊಂಬಾಯಿಯಲ್ಲಿ ಕೆಲವು ಭಾಷೆಗಳ ಚಿತ್ರಗಳು, ಕಲ್ಕತ್ತಾದಲ್ಲಿ ಕೆಲವು ಭಾಷೆಗಳ ಚಿತ್ರಗಳು, ಸೆನ್ಸಾರ್ ಆಗುತ್ತವೆ. ಹೀಗೆ ಆಗುವುದರ ಬದಲು ಒಂದೊಂದು ಭಾಷೆಗೆ ಒಂದೊಂದು ಸೆನ್ಸಾರ್ ಸಮಿತಿ ಇದ್ದು, ಆಯಾ ದೇಶದ ಪ್ರಮುಖ ನಗರಗಳೊಂದರಲ್ಲಿ ಅದರ ಕಛೇರಿ ಇರಬೇಕು. ಕನ್ನಡ, ಕೊಂಕಣಿ, ತುಳು, ಕೊಡಗು ಇವೇ ಮೊದಲಾದ ಕನ್ನಡ ನಾಡಿನ ಭಾಷೆಗಳಿಗೆ ಮೈಸೂರು ಅಥವಾ ಬೆಂಗಳೂರಿನಲ್ಲಿ 'ಸೆನ್ಸಾರ್'ಗೆ ಅವಕಾಶವಿರಬೇಕು.

## ರಾಷ್ಟ್ರಪ್ರಶಸ್ತಿ

ಕೇಂದ್ರ ಸರ್ಕಾರದ ವ್ಯಾಪ್ತಿಯಲ್ಲಿರುವ ಇನ್ನೊಂದು ಕೆಲಸ ರಾಷ್ಟ್ರಪ್ರಶಸ್ತಿ. ಈ ಪ್ರಶಸ್ತಿಗಳಿಗಾಗಿ ಚಿತ್ರಗಳನ್ನು ಆಯ್ಕೆ ಮಾಡಲು ಪ್ರಾದೇಶಿಕ ಸಮಿತಿಗಳು ಹಾಗು ಒಂದು ಕೇಂದ್ರ ಸಮಿತಿ ಇವೆ. ಪ್ರಾದೇಶಿಕ ಸಮಿತಿಗಳು ಚಿತ್ರಗಳನ್ನು ನೋಡಿ ರಾಷ್ಟ್ರಪ್ರಶಸ್ತಿಗೆ ಅರ್ಹವೆಂದು ತಿಳಿಸಿದ ಎಲ್ಲ ಚಿತ್ರಗಳನ್ನು ಕೇಂದ್ರ ಸಮಿತಿ ನೋಡುವುದೇ ಅಲ್ಲದೆ, ಪ್ರಾದೇಶಿಕ ಸಮಿತಿಗಳು ಶಿಫಾರಸು ಮಾಡದ ಚಿತ್ರಗಳನ್ನೂ ನೋಡುವ ಅಧಿಕಾರ ಕೇಂದ್ರ ಸಮಿತಿಗೆ ಇದೆ. ಅಷ್ಟೇ ಅಲ್ಲದೆ ಪ್ರಾದೇಶಿಕ ಸಮಿತಿಗಳು ರಾಷ್ಟ್ರಪ್ರಶಸ್ತಿಗೇ ಶಿಫಾರಸು ಮಾಡದಂತಹ ಚಿತ್ರಗಳಿಗೂ ರಾಷ್ಟ್ರಪ್ರಶಸ್ತಿ ದೊರೆತ ನಿದರ್ಶನಗಳೂ ಇವೆ. ಈ ಒಂದು ಪದ್ಧತಿಯು ಅಷ್ಟು ಸಮರ್ಪಕವಾಗಿರುವುದಿಲ್ಲ. ಎರಡೂ ಸಮಿತಿಗಳನ್ನು ಕೇಂದ್ರ ಸರ್ಕಾರವೇ ಗೊತ್ತು ಮಾಡಿ, ಒಂದು ಸಮಿತಿ ಕೈಗೊಂಡ ತೀರ್ಮಾನವನ್ನು ಮತ್ತೊಂದು ಸಮಿತಿ ತೆಗದುಹಾಕುವುದರಲ್ಲಿ ಅರ್ಥವೇನು? ಪ್ರಾದೇಶಿಕ ಸಮಿತಿಯವರ ತೀರ್ಮಾನ ಸರಿಯಲ್ಲ ಎನ್ನುವುದಾದರೆ ಆ ಸಮಿತಿಗೆ ಸದಸ್ಯರುಗಳನ್ನು ಗೊತ್ತು ಮಾಡಿರುವವರು ಯಾರು? ಹೀಗೆ ಮಾಡುವುದರ ಬದಲು ಪ್ರಾದೇಶಿಕ ಸಮಿತಿಗಳು ಆಯ್ಕೆ ಮಾಡಿದ ಚಿತ್ರಗಳನ್ನು ಇಟ್ಟುಕೊಂಡು ಕೇಂದ್ರ ಸಮಿತಿ, ರಾಷ್ಟ್ರಪ್ರಶಸ್ತಿಗಳಿಗಾಗಿ ಆರಿಸಿಕೊಳ್ಳುವುದು ಉಚಿತ. ಹೀಗೆ ಮಾಡುವಲ್ಲಿ ಎರಡೂ ಸಮಿತಿಗಳ ನಿರ್ದಿಷ್ಟ ಕೆಲಸ ಏನು ಎನ್ನುವುದೂ ತೀರ್ಮಾನವಾಗುತ್ತದೆ.

## ಸಬ್ಸಿಡಿ

ಕನ್ನಡ ಚಲನಚಿತ್ರೋದ್ಯಮವನ್ನು ಕರ್ನಾಟಕದಲ್ಲಿ ರೂಪಿಸುವುದರಲ್ಲಿ ಸರ್ಕಾರದ ಪಾತ್ರ ಹಿರಿದು. ಇತ್ತೀಚೆಗೆ ಹೆಚ್ಚು ಹೆಚ್ಚು ಕನ್ನಡ ಚಿತ್ರಗಳೇನೋ ಬರುತ್ತಿರುವುದು ನಿಜ. ಅದಕ್ಕೆ ಸಬ್ಸಿಡಿಯೇ ಕಾರಣ ಎಂದು ಹೇಳಲಾಗುತ್ತಿದೆ. ಈ ಮಧ್ಯೆ ಸಬ್ಸಿಡಿ ಕೊಡುವುದೇ ಬೇಡ ಎಂದು ನಿಲ್ಲಿಸಿದ್ದು, ಮತ್ತೆ ಸಬ್ಸಿಡಿ ಕೊಡುವ ಕೆಲಸ ಮುಂದುವರಿದಿದೆ. ಈ ಅವಕಾಶ ರಾಜ್ಯದಲ್ಲಿ ತೆಗೆಯುವ ಎಲ್ಲ ಭಾಷೆಯ ಚಿತ್ರಗಳಿಗೂ ಅನ್ವಯಿಸುತ್ತದೆ. ಇದರಿಂದ ಕೆಟ್ಟ ಚಿತ್ರಗಳೂ ಬರುತ್ತಿವೆ. ಕೆಟ್ಟ ಚಿತ್ರಗಳನ್ನು ತಡೆಗಟ್ಟುವುದಕ್ಕೆ ಕ್ವಾಲಿಟಿ ಟ್ಯಾಗ್ ಹಾಕುವುದು ಉಚಿತವೇನೋ ಹೌದು. ಆದರೆ ಈ ಕೆಲಸ ಸಮರ್ಪಕವಾಗಿ ಆಗುವುದಿಲ್ಲ. ಒಂದು ಸಮಿತಿಯ ದೃಷ್ಟಿಯಲ್ಲಿ ಒಳ್ಳೆಯ ಚಿತ್ರವಾದದ್ದು ಇನ್ನೊಂದು ಸಮಿತಿಯ ದೃಷ್ಟಿಯಲ್ಲಿ ಕೆಟ್ಟ ಚಿತ್ರವಾಗಬಹುದು ಅಥವಾ ಅದಲು ಬದಲು. ಕ್ವಾಲಿಟಿಟ್ಯಾಗ್ ಹಾಕಿ ಸಬ್ಸಿಡಿ ಕೊಡುವುದರ ಬದಲು ಯಾವ ಚಿತ್ರಕ್ಕೂ ಸಬ್ಸಿಡಿ ಕೊಡುವುದು ಬೇಡವೆಂದರೆ

Phone: 238

**M/S MAYA ENGINEERING & MACHINERY CO.,**

**MACHINERY DEALERS**

Gandhi Circle, DAVANGERE-2 (*Karnataka*)

*Please Contact for Your Enquiry in :-*

**Machinery & Its Spares, New India Electric Motors, Dunlop Beltings & Hoses (DUNLOP) & Vee Beltings.**

 *Wish You Happy Deepavali Greetings* 

ಈಚೀಚೆಗೆ ಅಲ್ಲೊಂದು ಇಲ್ಲೊಂದು ಪ್ರಯೋಗಾತ್ಮಕ ಚಿತ್ರಗಳನ್ನು ತಯಾರಿಸುತ್ತಿರುವವರು ಹಿಂಜರಿಯುವ ಭಯವಿದೆ. ಅಲ್ಲದೆ ಈಗ ತಯಾರಾಗುತ್ತಿರುವಂತೆ ಚಿತ್ರಗಳು ತಯಾರಾಗದೆ ಸಂಖ್ಯೆಯಲ್ಲೂ ಕಡಮೆಯಾಗುವುದು. ಇದರ ಪರಿಣಾಮವಾಗಿ ಈ ಉದ್ಯಮವನ್ನು ಅವಲಂಬಿಸಿದವರಿಗೆ ಭಾರೀ ಪೆಟ್ಟು ಬೀಳಲು ಸಾಧ್ಯ. ಅಲ್ಲದೆ ದೇಶದ ಭವಿಷ್ಯದ ದೃಷ್ಟಿಯಿಂದಲೂ ಒಳ್ಳೆಯದಲ್ಲ. ಸಬ್ಸಿಡಿ ಕೊಡುತ್ತಿರುವುದರಿಂದ ದೇಶಕ್ಕೂ ಪರೋಕ್ಷವಾಗಿ ಲಾಭವಿದೆ. ಸಬ್ಸಿಡಿಯ ಆಸೆಗಾಗಿ ದೇಶದಲ್ಲಿ ಅನೇಕ ಚಿತ್ರಗಳು ತಯಾರಾಗುತ್ತಿವೆ. ಇದರಿಂದ ನಮ್ಮ ದೇಶದ ಹಣ ಹಾಗು ಅಕ್ಕ ಪಕ್ಕದ ದೇಶಗಳ ಹಣ ನಮ್ಮಲ್ಲೇ ಖರ್ಚಾಗುತ್ತಿದೆ. ಹೀಗಾಗಿ ದೇಶಕ್ಕೆ ಈ ಉದ್ಯಮದಲ್ಲಿ ತೊಡಗಿರುವ ಸ್ಟುಡಿಯೋಗಳು, ನಿರ್ಮಾಪಕರು ಪ್ರದರ್ಶನಕಾರರು, ಹಂಚಿಕೆದಾರರು, ನಟ–ನಟಿಯರು ತಾಂತ್ರಿಕ ಪರಿಣತರು ಇವರೇ ಮೊದಲಾದವರಿಗೆ ಲಾಭವಿದೆ. ಅಷ್ಟೇ ಅಲ್ಲದೆ ಈ ಉದ್ಯಮಕ್ಕೆ ಹೊಂದಿಕೊಂಡಂತೆ ಇರುವ ಉದ್ಯಮಗಳು ಬೆಳೆಯಲೂ ಅವಕಾಶವಿದೆ. ಈ ಮೇಲಿನ ವಿವರಣೆಗಳಿಂದ ಸಬ್ಸಿಡಿ ಕೊಡುವುದೇ ಒಳ್ಳೆಯದು ಎನ್ನುವುದು ವ್ಯಕ್ತವಾಗುತ್ತಿದೆ. ಅಂದರೆ ಈ ಪದ್ಧತಿಯು ಯಾವಾಗಲೂ ಇರಲಿ ಎಂಬುದು ನನ್ನ ಅಭಿಪ್ರಾಯವಲ್ಲ. ಈ ಉದ್ಯಮ ತನ್ನ ಕಾಲ ಮೇಲೆ ತಾನು ನಿಲ್ಲುವವರೆಗೆ, ಸುಮಾರು ಇನ್ನೂ ನಾಲ್ಕೈದು ವರ್ಷಗಳು ಕೊಟ್ಟು ನಂತರ ನಿಲ್ಲಬೇಕು. ಈ ಉದ್ಯಮ ಸ್ಥಿರವಾಗಿ ನಿಲ್ಲುವಲ್ಲಿ ದೇಶದ ಎಲ್ಲ ಚಿತ್ರಮಂದಿರಗಳೂ ಸಹಾಯಕ್ಕೆ ಬರಬೇಕು. ಕನ್ನಡ ಚಿತ್ರಗಳಿಗೆ ಆದ್ಯತೆ ಕೊಟ್ಟು ತಮ್ಮ ಮಂದಿರಗಳಲ್ಲಿ ಬಿಡುಗಡೆ ಮಾಡಬೇಕು. ಹೀಗೆ ಮಾಡುವಲ್ಲಿ ತಾರತಮ್ಯವಿರಬಾರದು.

## ರಾಜ್ಯ ಪ್ರಶಸ್ತಿ

ಸಬ್ಸಿಡಿ ಕೊಡುವುದರ ಜತೆಗೆ ರಾಜ್ಯ ಮಟ್ಟದಲ್ಲಿ ಕನ್ನಡ ಚಿತ್ರಗಳಿಗೆ ರಾಜ್ಯಪ್ರಶಸ್ತಿ ಕೊಡುವ ಪದ್ಧತಿಯೂ ಇದೆ. ಇದು ಉತ್ತಮ ಚಿತ್ರಗಳನ್ನು ಗುರುತಿಸುವ ಕೆಲಸ ಮಾಡುತ್ತದೆ. ಇದರಿಂದ ಚಿತ್ರ ತಯಾರಕರಿಗೆ ಪ್ರೋತ್ಸಾಹ ಸಿಕ್ಕಿ ಹೆಚ್ಚು ಹೆಚ್ಚು ಚಿತ್ರಗಳು ಬರಲು ಸಹಕಾರಿಯಾಗಿದೆ. ಈ ಪದ್ಧತಿ ಸ್ವಾಗತಾರ್ಹ. ಕೇಂದ್ರ ಸರ್ಕಾರ ಚಲನಚಿತ್ರಗಳಿಗೆ ರಾಷ್ಟ್ರಪ್ರಶಸ್ತಿಗಳನ್ನು ಕೊಡುವಲ್ಲಿ ಹೇಗೆ ಬೇರೆ ಬೇರೆ ಪ್ರಶಸ್ತಿಗಳನ್ನು ಕೊಡುತ್ತದೋ ಹಾಗೆಯೇ ಇಲ್ಲೂ ಬೇರೆ ಬೇರೆ ಪ್ರಶಸ್ತಿಗಳನ್ನು ಕೊಡಬೇಕು.

## ಗಣರಾಜ್ಯೋತ್ಸವ ಪ್ರಶಸ್ತಿ

ಗಣರಾಜ್ಯೋತ್ಸವದ ಸಂದರ್ಭದಲ್ಲಿ ಪ್ರತಿ ವರ್ಷವೂ ಕೇಂದ್ರ ಸರ್ಕಾರ, ವಿವಿಧ ರಂಗಗಳಲ್ಲಿ ಪ್ರತಿಭೆಯನ್ನು ತೋರಿದವರಿಗೆ ಪದ್ಮವಿಭೂಷಣ, ಪದ್ಮಭೂಷಣ ಇವೇ ಮೊದಲಾದ ಪ್ರಶಸ್ತಿಗಳನ್ನು ನೀಡುತ್ತಿದೆ. ಈ ಪ್ರಶಸ್ತಿ ಚಲಚ್ಚಿತ್ರರಂಗದಲ್ಲಿರುವವರಿಗೂ ದೊರಕುತ್ತಿದೆ. ಆದರೆ ಕನ್ನಡ ಚಿತ್ರರಂಗದಲ್ಲಿ ಈಗಾಗಲೇ ಪ್ರತಿಭೆಯನ್ನು ತೋರಿದ ಅನೇಕರಿಗೆ ಈ ಪ್ರಶಸ್ತಿಗಳು ಬಂದಿಲ್ಲ. ಇನ್ನಾದರೂ ಸಂಬಂಧಪಟ್ಟವರು ಈ ಪ್ರಶಸ್ತಿ ಅಂಥವರಿಗೆ ಬರುವಂತೆ ನೋಡಿಕೊಳ್ಳಬೇಕು.

## ಮೈಸೂರು ರಾಜ್ಯ ಚಲನಚಿತ್ರ ಅಭಿವೃದ್ಧಿ ಸಂಸ್ಥೆ

ಇತ್ತೀಚೆಗೆ ಚಲನಚಿತ್ರೋದ್ಯಮಕ್ಕೆ ನೆರವು ನೀಡಲು ಮೇಲಿನ ಸಂಸ್ಥೆ ಅಸ್ತಿತ್ವಕ್ಕೆ ಬಂದಿದೆ. ಸಾಮಾನ್ಯವಾಗಿ ಚಿತ್ರಮಂದಿರಗಳು ಎಲ್ಲಿ ಬರಲಾರವೋ ಅಂಥ ಕಡೆಗಳಲ್ಲಿ ಅವುಗಳ ನಿರ್ಮಾಣ, ಚಿತ್ರ ನಿರ್ಮಾಪಕರಿಗೆ ಸಾಲ ರೂಪದಲ್ಲಿ ಸಹಾಯ, ಸ್ಟುಡಿಯೋ, ನಿರ್ಮಾಣ, ಫಿಲ್ಮ್ ಇನ್‌ಸ್ಟಿಟ್ಯೂಟ್ ಇವೇ ಮೊದಲಾದವು ಈ ಸಂಸ್ಥೆಯ ಕೆಲಸ ಎಂದು ತಿಳಿದು ಬಂದಿದೆ. ಈ ಸಂಸ್ಥೆ ಕಾರ್ಯಕ್ರಮಗಳನ್ನು ಹಾಕಿಕೊಂಡಂತೆ ಅವುಗಳನ್ನು ನಿರ್ವಹಿಸುವುದು, ಈ ಸಂಸ್ಥೆಯಿಂದ ನೆರವು ಪಡೆದವರು ಶ್ರದ್ಧೆಯಿಂದ ತಮ್ಮ ಮೇಲಿನ ಹೊಣೆಯನ್ನು ನಿರ್ವಹಿಸುವುದು: ಇಷ್ಟರ ಜತೆಗೆ ಈ ಉದ್ಯಮದಲ್ಲಿ ನಿರತರಾದವರೆಲ್ಲರೂ ತಮ್ಮ ಪಾಲಿನ ಕೆಲಸವನ್ನು ನಿರ್ವಂಚನೆಯಿಂದ ಮಾಡಿದಲ್ಲಿ ಈ ಉದ್ಯಮ ಸ್ವಲ್ಪ ಕಾಲದಲ್ಲೇ ತನ್ನ ಕಾಲ ಮೇಲೆ ತಾನು ನಿಲ್ಲುವುದರಲ್ಲಿ ಸಂದೇಹವಿಲ್ಲ. ಚಲನಚಿತ್ರ ಹಾಗು ಅದರ ಉದ್ಯಮಕ್ಕೆ ಸಂಬಂಧಿಸಿದಂತೆ ಹಲವು ಕಾರ್ಯಕ್ರಮಗಳನ್ನು ಹಾಕಿಕೊಂಡಿರುವ ಸರ್ಕಾರ, ಅಷ್ಟೇ ಮುಖ್ಯವಾದ 'ರಂಗಭೂಮಿ'ಯ ಕಡೆಗೂ ತನ್ನ ಗಮನವನ್ನೀಯಲಿ. ●




ನಿಮ್ಮ ಟ್ರ್ಯಾಕ್ಟರ ಕೆಟ್ಟಿದೆಯೇ ಏಕೆ?
ಬಿಡಿ ಭಾಗಗಳ ಕೊರತೆಯೇ?

ನಿಮ್ಮ ಟ್ರ್ಯಾಕ್ಟರ್ ಯಾವುದಾದರೂ ಇರಲಿ; ನಿಮ್ಮ ಟ್ರ್ಯಾಕ್ಟರ್‌ಗಳಿಗೆ ಬೇಕಾಗುವ ಸರ್ವಿಸ್ ಹಾಗೂ ಬಿಡಿಭಾಗಗಳಿಗಾಗಿ ಅವಶ್ಯ ಸಂದರ್ಶಿಸಿರಿ . . . .

ಟ್ರ್ಯಾಕ್ಟರ ಸೆಂಟರ

ವಿಶಾಲ ಕರ್ನಾಟಕ ಬಿಲ್ಡಿಂಗ್, ಹುಬ್ಬಳ್ಳಿ -೨೦

ಫೋನ್ · ಆಫೀಸು : 2591 ● ಮನೆ : 3809


ನಮ್ಮೆಲ್ಲ ಗ್ರಾಹಕರಿಗೂ ಹಿತೈಷಿಗಳಿಗೂ ದೀಪಾವಳಿಯ ಶುಭಾಶಯಗಳು!


# ಚಿತ್ರಪ್ರತಿಭೆಗಳ ಛಾಪಖಾನೆ ಪುಣೆಯ ಚಿತ್ರಸಂಸ್ಥೆ



ಕೆ. ರಮೇಶ ಕಾಮತ



ಪ್ರಪಂಚದಲ್ಲಿ ಅತಿಹೆಚ್ಚಿನ ಚಲನಚಿತ್ರ ತಯಾರಾಗುವ ರಾಷ್ಟ್ರದಲ್ಲಿ ಭಾರತಕ್ಕೆ ಎರಡನೇ ಸ್ಥಾನ! ಭಾರತದಲ್ಲಿ ಚಿತ್ರೋದ್ಯಮ ಇಷ್ಟು ಮುಂದುವರೆದಿದ್ದರೂ, ಪುಣೆಯ 'ಫಿಲ್ಮ್ ಇನ್‌ಸ್ಟಿಟ್ಯೂಟ್'ನ ಆರಂಭಕ್ಕೆ ಮುನ್ನ ಚಿತ್ರ ತಯಾರಿಕೆಯ ಬೇರೆ ಬೇರೆ ವಿಭಾಗದಲ್ಲಿ ಶಿಕ್ಷಣ ನೀಡುವ ಯಾವ ಸಂಸ್ಥೆಯೂ ಉದಯವಾಗದೇ, ಹಿಂದಿನ ಪ್ರತಿಯೊಬ್ಬ ನಟ, ಅಥವಾ ತಾಂತ್ರಿಕಜ್ಞರೆಲ್ಲಾ ಚಿತ್ರರಂಗದಲ್ಲಿ ನುರಿತವರ ಬಳಿ ಹಲವಾರು ವರುಷ ದುಡಿದು ಅದರ ಬಗ್ಗೆ ಜ್ಞಾನ ಪಡೆಯಬೇಕಿತ್ತು. ಈ ಪರಿಸ್ಥಿತಿಯನ್ನು ಗಮನಿಸಿ ೧೯೫೧ರಲ್ಲಿ ಸರಕಾರ ನಿಯಮಿಸಿದ 'ಫಿಲಂ ಎನ್‌ಕ್ವೈಯರಿ ಕಮಿಟಿ'ಯವರು ಚಿತ್ರದ ವಿವಿಧ ರಂಗದಲ್ಲಿ ತರಬೇತಿ ನೀಡಲು ಸರಕಾರವೇ ಒಂದು ತರಬೇತಿ ಸಂಸ್ಥೆಯನ್ನು ಆರಂಭಿಸಬೇಕೆಂದು ಸಲಹೆ ನೀಡಿತು. ಆ ಸಲಹೆಯನ್ನು ಅನುಮೋದಿಸಿ ಮಿನಿಷ್ಟ್ರಿ ಆಫ್ ಇನ್‌ಫರ್ಮೇಷನ್ ಮತ್ತು ಬ್ರಾಡ್‌ಕಾಸ್ಟಿಂಗ್‌ನವರು ೧೯೬೦ರಲ್ಲಿ ಪುಣೆಯಲ್ಲಿ 'ಫಿಲಂ ಇನ್‌ಸ್ಟಿಟ್ಯೂಟನ್ನು ಆರಂಭಿಸಿದರು.

ಪುಣೆಯಲ್ಲಿ ಶಾಂತ ವಾತಾವರಣಕ್ಕೆ ಪ್ರಸಿದ್ಧಿಯಾದ ಪ್ರಭಾತ್ ನಗರದ ಗುಡ್ಡದ ತಟದಲ್ಲಿದ್ದ ಇಪ್ಪತ್ತೆರಡು ಎಕರೆಯ ವಿಶಾಲವಾದ ಪ್ರಭಾತ್ ಸ್ಟುಡಿಯೋ (ಸಂತ ತುಕಾರಾಂ, ರಾಮಶಾಸ್ತ್ರಿ ಆದ್ಮಿ, ಪಡೋಸಿ ಮುಂತಾದ ಖ್ಯಾತ ಚಿತ್ರ ತಯಾರಾದ ಸ್ಥಳ)ವನ್ನು ಸರಕಾರವು ಚಿತ್ರ ಪ್ರತಿಭೆಯನ್ನು ತಯಾರಿಸುವ ಛಾಪಖಾನೆಯನ್ನಾಗಿ ಪರಿವರ್ತಿಸಿತು. ಆರಂಭದ ಕೆಲವು ವರುಷ ಕೇವಲ ಸಂಕಲನ, ಛಾಯಾಗ್ರಹಣ ಮತ್ತು ಶಬ್ದಗ್ರಹಣದಲ್ಲಿ ತರಬೇತಿ ನೀಡುತ್ತಿದ್ದು, ೧೯೬೩ರ ನಂತರ ನಟನೆ ಮತ್ತು ನಿರ್ದೇಶನ ವಿಭಾಗವು ಆರಂಭವಾಯ್ತು.



ಕನ್ನಡ ನಟಿ ಜಯಲಕ್ಷ್ಮಿ, ವಿದ್ಯಾರ್ಥಿ ಚಿತ್ರವೊಂದರಲ್ಲಿ

ಫಿಲ್ಮ್ ಇನ್‌ಸ್ಟಿಟ್ಯೂಟ್‌ನ ಹೆಸರು ಎಲ್ಲರ ಬಾಯಲ್ಲಿ ನಲಿದಾಡುವಂತಾಗಲು ಫಿಲ್ಮ್ ಇನ್‌ಸ್ಟಿಟ್ಯೂಟ್‌ಗೆ ಹತ್ತು ವರುಷದ ಅವಧಿ ಬೇಕಾಯ್ತು. ಹತ್ತು ವರ್ಷದಲ್ಲಿ ಫಿಲ್ಮ್ ಇನ್‌ಸ್ಟಿಟ್ಯೂಟ್ ಸಾಧಿಸಿರುವ ಪ್ರಗತಿ ಮಹತ್ತರ. ಇಂದು ಫಿಲ್ಮ್ ಇನ್‌ಸ್ಟಿಟ್ಯೂಟ್‌ನ ಸುಂದರ ಆವರಣದ ಒಳಗೆ ಚಿತ್ರ ತಯಾರಿಕೆಗೆ ಬೇಕಾದ ಷೂಟಿಂಗ್ ಫ್ಲೋರ್ಸ್, ಲ್ಯಾಬರೇಟರಿ, ಪ್ರೊಸೆಸಿಂಗಲ್ಯಾಬ್, ಸೌಂಡ ರಿಕಾರ್ಡಿಂಗ, ರೀ-ರಿಕಾರ್ಡಿಂಗ ಸ್ಟುಡಿಯೋ ಸಂಕಲನದ ಕೋಣೆಗಳು, ಚಿತ್ರ ಪ್ರದರ್ಶನಕ್ಕೆ ಕ್ಲಾಸ್ ರೂಂ ಥಿಯೇಟರ್ ಹಾಗೂ ಜನರಲ್ ಥಿಯೇಟರ್ ಹೊರಾಂಗಣ ಚಿತ್ರೀಕರಣಕ್ಕಾಗಿ ಕಾಪಾಡಿಕೊಂಡು ಬಂದಿರುವ ಒಂದು ಕಾಡು, ಈಜುಕೊಳ, ಕೃತಕ ಸರೋವರ, ಪ್ರಾಪರ್ಟಿ ವಿಭಾಗ ಎಲ್ಲವೂ ಇದೆ. ಅತ್ಯಂತ ನವೀನ ಉಪಕರಣಗಳಾದ ಎರ್ರಿಫ್ಲೆಕ್ಸ ಕ್ಯಾಮರಾ, ಸಿನಿ-೬೦, ಸರ್ವೋ ಜೂಮ್, ನಾಗ್ರಾ ಟೇಪ್ ರಿಕಾರ್ಡರ್, ವೆಸ್ಟ್ರೆಕ್ಸ್ ರಿಕಾರ್ಡರ್ ಹಾಗೂ ರೀ-ರಿಕಾರ್ಡರ್, ಸ್ಟೀನ್‌ಬೆಕ್ ಮೂವಿಯೋಲ ಮುಂತಾದವುಗಳಿಂದ ಕೂಡಿದ ಸುಸಜ್ಜಿತ ತಾಂತ್ರಿಕ ವಿಭಾಗಗಳ ಕಾರಣದಿಂದಾಗಿ ಅಲ್ಲಿ ಕಲಿಯುವ ವಿದ್ಯಾರ್ಥಿಗಳಿಗೆ ಉನ್ನತ ಮಟ್ಟದ ತರಬೇತಿ ನೀಡಲು ಸಾಧ್ಯವಾಗಿದೆ. ಇನ್‌ಸ್ಟಿಟ್ಯೂಟ್‌ನ ಗ್ರಂಥಾಲಯದಲ್ಲಿ ೧೫,೦೦೦ಕ್ಕೂ ಮಿಕ್ಕ ಸಿನಿಮಾದ ವಿವಿಧ ವಿಷಯಗಳ ಬಗೆಗೆ ಪುಸ್ತಕಗಳಿವೆ. ಅಂತೆಯೇ ಫಿಲ್ಮ್ ಲೈಬ್ರರಿಯಲ್ಲಿ ಸಾವಿರಾರು ದೇಶೀಯ ಹಾಗೂ ವಿದೇಶದ ಖ್ಯಾತ ನಿರ್ದೇಶಕರು ನಿರ್ದೇಶಿಸಿದ ಪ್ರಶಸ್ತಿ ಗಳಿಸಿದ ಚಿತ್ರಗಳ ಸಹಾಯದಿಂದ ಅಲ್ಲಿನ ವಿದ್ಯಾರ್ಥಿಗಳಿಗೆ ಚಿತ್ರ ತಯಾರಿಕೆಯಲ್ಲಿ ಮಾರ್ಗದರ್ಶನ ನೀಡಲಾಗುತ್ತದೆ.

ಇಡಿಯ ಏಶಿಯದಲ್ಲಿಯೇ ಏಕೈಕವಾದ ಈ ಫಿಲಂ ಇನ್‌ಸ್ಟಿಟ್ಯೂಟ್‌ನಲ್ಲಿ ತರಬೇತಿ ಪಡೆಯಲು ನೇಪಾಳ, ಅಫ್‌ಗಾನಿಸ್ತಾನ್, ನೈಜೀರಿಯಾ, ಜೋರ್ಡಾನ್, ಸಿಂಗಾಪೂರ್, ಘಾನಾ, ಉಗಾಂಡಾ, ಬಲ್ಗೇರಿಯಾ ಮುಂತಾದ ವಿದೇಶಗಳಿಂದಲೂ ವಿದ್ಯಾರ್ಥಿಗಳು ಬರುತ್ತಲಿದ್ದಾರೆ. ಒಟ್ಟು ಆರು ವಿಭಾಗಗಳಲ್ಲಿ (ನಿರ್ದೇಶನ, ಸೌಂಡ್ ರಿಕಾರ್ಡಿಂಗ್ ಮತ್ತು ಸೌಂಡ್ ಇಂಜನೀಯರಿಂಗ್, ಛಾಯಾಗ್ರಹಣ, ಸಂಕಲನ, ಚಿತ್ರಕಥಾ ರಚನೆ ಮತ್ತು ನಟನೆ) ವರುಷಕ್ಕೆ ಕೇವಲ ಅರವತ್ತು ಮಂದಿಗೆ ತರಬೇತಿ ನೀಡಲಾಗುತ್ತದೆ. ಅಭ್ಯರ್ಥಿಗಳನ್ನು ಆಯ್ಕೆ ಮಾಡಲು, ಮದ್ರಾಸು, ಮುಂಬಯಿ, ಡೆಲ್ಲಿ, ಕಲಕತ್ತಾ ನಗರದಲ್ಲಿ ಪ್ರವೇಶ ಪರೀಕ್ಷೆ ನಡೆಸಿ, ಅಲ್ಲಿ ಉತ್ತೀರ್ಣರಾದ ಮಂದಿಗೆ ಪುಣೆಯಲ್ಲಿ ಅಂತಿಮ ಆಯ್ಕೆಯ ಪರೀಕ್ಷೆ ನಡೆಸಿ, ಇನ್‌ಸ್ಟಿಟ್ಯೂಟ್‌ಗೆ ಸೇರಿಸಿಕೊಳ್ಳಲಾಗುತ್ತದೆ. "ಐ. ಐ. ಟಿ. ಮೆಡಿಕಲ್ ಕಾಲೇಜು, ಇಂಜನೀಯರಿಂಗ್ ಕಾಲೇಜುಗಳಲ್ಲಾದರೂ ಸೀಟು ದೊರಕಿಸಿಕೊಳ್ಳಬಹುದು, ಆದರೆ ಫಿಲ್ಮ್ ಇನ್‌ಸ್ಟಿಟ್ಯೂಟ್‌ನಲ್ಲಿ ಸೀಟು ದೊರಕಿಸಿಕೊಳ್ಳುವುದು ದುಃಸಾಧ್ಯ." ಇದು ಇತ್ತೀಚೆಗೆ ಅರ್ಜಿ ಸಲ್ಲಿಸಿ ಆಯ್ಕೆಯಾಗದ ಕೆಲವು ಅಭ್ಯರ್ಥಿಗಳ ಅಂಬೋಣ!



ಕ್ಯಾಮರಾ ಪ್ರಾಕ್ಟಿಕಲ್ಸ್‌ನಲ್ಲಿ ನಿರತರಾಗಿರುವ ವಿದ್ಯಾರ್ಥಿಗಳು

ಚಿತ್ರರಂಗದ ಹೆಸರಾಂತ ವ್ಯಕ್ತಿಗಳನ್ನು ಆಹ್ವಾನಿಸಿ 'ಗೆಸ್ಟ್ ಲೆಕ್ಚರ್ಸ್' ಏರ್ಪಡಿಸುತ್ತಾರೆ.

ಈ ಫಿಲ್ಮ್ ಇನ್‌ಸ್ಟಿಟ್ಯೂಟ್, ಪ್ಯಾರಿಸ್ಸಿನ 'ಇಂಟರ್ ನ್ಯಾಷನಲ್ ಲೈಸೆನ್ಸ್ ಸೆಂಟರ್ ಆಫ್ ಸಿನಿಮಾ ಅಂಡ್ ಟೆಲಿವಿಷನ್' ಸಂಸ್ಥೆಯ ಸದಸ್ಯತ್ವ ಪಡೆದಿರುವುದರಿಂದ ಪ್ರಪಂಚದ ಇತರ ಫಿಲ್ಮ್ ಇನ್‌ಸ್ಟಿಟ್ಯೂಸೊಡನೆ ವ್ಯವಹರಿಸಿ ಇಲ್ಲಿನ ಶಿಕ್ಷಣ ಅಂತಾರಾಷ್ಟ್ರೀಯ ಮಟ್ಟದಲ್ಲಿರುವಂತೆ ಮಾಡಲು ಸಹಾಯಕವಾಗಿದೆ. ಇಲ್ಲಿಂದ ತೇರ್ಗಡೆ ಹೊಂದಿದ ವಿದ್ಯಾರ್ಥಿಗಳು ಕೆಲಸದ ಸಲುವಾಗಿ ಅಷ್ಟಾಗಿ–ಪರದಾಡಬೇಕಿಲ್ಲ. ಚಿತ್ರರಂಗ, ಇಲ್ಲಿನ ಉತ್ಸಾಹಿ ತರುಣರನ್ನು ಆದರದಿಂದ ಸ್ವಾಗತಿಸುತ್ತಿದೆ. ನಿರ್ದೇಶನ ವಿಭಾಗದಿಂದ ಪಾಸಾದ ಪದವೀಧರರಿಗೆ ಫಿಲ್ಮ್ ಫೈನಾನ್ಸ್ ಕಾರ್ಪೊರೇಷನ್‌ರವರು ಚಿತ್ರ ತಯಾರಿಸಲು ಹಣದ ನೆರವು ನೀಡುತ್ತಿದ್ದಾರೆ. ಫಿಲ್ಮ್ ಡಿವಿಜನ್, ಟೆಲಿವಿಷನ್, ಆಲ್ ಇಂಡಿಯಾ ರೇಡಿಯೋ ಮುಂತಾದ

ಎಲ್ಲಾ ವಿಭಾಗದಲ್ಲೂ ಶಿಕ್ಷಣವು ಥಿಯರಿ ಮತ್ತು ಪ್ರಾಕ್ಟಿಕಲ್‌ಗಳಿಂದ ಕೂಡಿಯೇ ಇರುತ್ತದೆ. ಪ್ರಥಮ ಹಂತದಲ್ಲಿ ಸಿನಿಮಾದ ಎಲ್ಲ ವಿಭಾಗದ ವಿಷಯಗಳನ್ನು ಸೂಕ್ಷ್ಮವಾಗಿ ಕಲಿಸಿ, ನಂತರ ಅವರವರ ವಿಭಾಗದಲ್ಲಿ ತಜ್ಞರಾಗುವಂತೆ ಶಿಕ್ಷಣ ನೀಡಲಾಗುತ್ತದೆ. ಆರಂಭದ ವರುಷದಲ್ಲಿ ಹೆಚ್ಚಿನ ಪ್ರಾಶಸ್ತ್ಯ ಥಿಯರಿ ಮತ್ತು ಸಣ್ಣ ಸಣ್ಣ ಚಿತ್ರಗಳ ತಯಾರಿಕೆಗೆ ನೀಡಿ ಅಂತಿಮ ವರುಷದಲ್ಲಿ ಪೂರ್ಣವಾಗಿ ಚಿತ್ರ ತಯಾರಿಕೆಯಲ್ಲಿಯೇ ತೊಡಗಿಸುತ್ತಾರೆ. ಆಗ ವಿದ್ಯಾರ್ಥಿಗಳಿಗೆ ಸಂಪೂರ್ಣ ಸ್ವಾತಂತ್ರ್ಯ. ಈ ಕಡೆಯ ವರುಷದಲ್ಲಿ ಒಬ್ಬೊಬ್ಬ ವಿದ್ಯಾರ್ಥಿಯು ಒಂದು ಡಾಕ್ಯೂಮೆಂಟರಿ ಚಿತ್ರ, ಒಂದು ಜಾಹೀರಾತಿನ ಚಿತ್ರ (ವರ್ಣದಲ್ಲಿ) ಮತ್ತು ಒಂದು ಡಿಪ್ಲೊಮಾ ಚಿತ್ರವನ್ನು ಮಾಡಿ ಮುಗಿಸಿದ ನಂತರವೇ ಆತ ಆಯಾ ವಿಭಾಗದಲ್ಲಿ ಪರಿಣತನೆಂಬ ಅರ್ಹತೆಯನ್ನು ಪಡೆಯಲು ಅರ್ಹನಾಗುವುದು. ನುರಿತ ತಜ್ಞರಿಂದ ಶಿಕ್ಷಣ ಮಾತ್ರ ನೀಡುವುದಲ್ಲದೇ ಆಗಾಗ ಸ್ವದೇಶ, ವಿದೇಶದಿಂದಲೂ



↑ ಸೌಂಡ ರಿಕಾರ್ಡಿಂಗ್‌ನಲ್ಲಿ ಉಪಯೋಗಿಸುತ್ತಿರುವ ಆಧುನಿಕ ಉಪಕರಣ "ಯುಹರ್"



ಪುಣೆಯ ಫಿಲ್ಮ್ ಇನಸ್ಟಿಟ್ಯೂಟಿನ ಪ್ರವೇಶದ್ವಾರ

ಸರಕಾರಿ ಸಂಸ್ಥೆಗಳು ಇಲ್ಲಿನ ಪದವೀಧರರಿಗೆ ಕೆಲಸವನ್ನು ಒದಗಿಸಿಕೊಡುತ್ತಿವೆ. ಈ ವರೆಗೂ ೩೮೨ ಮಂದಿ ಪದವೀಧರರಾಗಿ ಹೋಗಿದ್ದಾರೆ. ಅವರಲ್ಲಿ ಹಲವಾರು ಮಂದಿ ಅಂತಾರಾಷ್ಟ್ರೀಯ ಖ್ಯಾತಿಯನ್ನು ಕೂಡ ಪಡೆದಿದ್ದಾರೆ.

ಇಲ್ಲಿನ ವಿದ್ಯಾರ್ಥಿಗಳು ತಯಾರಿಸಿದ ಚಿತ್ರಗಳಲ್ಲಿ ಕೆಲವು ಅಂತಾರಾಷ್ಟ್ರೀಯ ಚಿತ್ರೋತ್ಸವಗಳಲ್ಲೆಲ್ಲಾ ಪಾಲ್ಗೊಂಡು ಪ್ರಶಸ್ತಿ ಗಳಿಸಿವೆ. 'ಒನ್ ಡೇ' 'ದಿ–ಟ್ರೈನ್' 'ಮ್ಯಾನ್ ಅಂಡ್ ಹಿಸ್ ಲೈಫ್' 'ಲವ್–ಟೇಲ್' 'ವಾಟರ್ ಇನ್ ದಿ ಟಾಪ್' 'ಚೇತನಾ' 'ವಿಲಾಪ್' ಇವೇ ಮುಂತಾದವು ಅಂತಾರಾಷ್ಟ್ರೀಯ ಚಿತ್ರೋತ್ಸವದಲ್ಲಿ ಪಾಲ್ಗೊಂಡ ಚಿತ್ರಗಳು.

ಭಾರತ ಸರಕಾರ ಪ್ರತಿ ವರ್ಷ ಇಲ್ಲಿನ ಒಬ್ಬ ವಿದ್ಯಾ




# ಸರ್ವೋತ್ಕೃಷ್ಟ

## ಬೇಡೆಕರರ ಉತ್ಪಾದನೆಗಳು ಸರ್ವೋತ್ಕೃಷ್ಟವಾಗಿವೆ

ಈಗ ನೀವು ಇವುಗಳನ್ನು ಸ್ವೀಕರಿಸಿದ್ದೀರಿ ಹಾಗೂ ಸರಕಾರವೂ ಅವುಗಳನ್ನು ಅಂಗೀಕರಿಸಿದೆ.

**ನಿಮ್ಮ ನೆಚ್ಚಿನ ಬೇಡೆಕರರ ಮಾವಿನಕಾಯಿ ಉಪ್ಪಿನಕಾಯಿ**
**ಈ ಸಲವೂ ಪ್ರಥಮ ಬಹುಮಾನ ಪಡೆದಿದೆ.**

ನೀವು ಬೇಡೆಕರರ ಉತ್ಪಾದನೆಗಳನ್ನು ಖರೀದಿಸುವಾಗ ಅವುಗಳ ಶ್ರೇಷ್ಠತೆಯ ಬಗ್ಗೆ ನಿಮಗೆ ಖಾತ್ರಿಯಾಗುತ್ತಿದೆ. ಈ ವಿಶ್ವಾಸದಿಂದಲೇ ನಾವು ಬೇರೆ ಬೇರೆ ಪ್ರಸಂಗಗಳಲ್ಲಿ ಅನೇಕ ಬಹುಮಾನಗಳನ್ನು ಪಡೆಯುತ್ತಲಿದ್ದೇವೆ.

## ವ್ಹಿ. ಪಿ. ಬೇಡೆಕರ ಆ್ಯಂಡ್ ಸನ್ಸ್ ಪ್ರೈ. ಲಿ.,

**ಮುಂಬಯಿ – ೪**

ಸಂಗ್ರಾಹಕರು : ವಿಶಾಲ ಟ್ರೇಡರ್ಸ್

೧ ನೇ ಮಹಡಿ ಶಫಿ ಬಿಲ್ಡಿಂಗ್, ಪೋಲೀಸ ಸ್ಟೇಶನ್ ಹತ್ತಿರ
ಕಲಾಶಿಪಾಳ್ಯಂ ಮೇನರಸ್ತೆ, ಬೆಂಗಳೂರು-೨



'ಪರೀಕ್ಷಾ' ಚಿತ್ರದಲ್ಲಿ ಕೇರಳ ಕನ್ಯೆ ಜಮಿಲಾ ಮಲ್ಲಿಕ್



ಪ್ರೊಸೆಸಿಂಗ್ ಲ್ಯಾಬ್‌ನ 'ಪ್ರಿಂಟರ್'

ಕನ್ನಡಿಗ ಎಂ. ಎಸ್. ಶಂಕರಪ್ಪ ವಿದ್ಯಾರ್ಥಿಯಾಗಿದ್ದಾಗ ನಿರ್ದೇಶಿಸಿದ "ಆಕ್ಸಿಡೆಂಟ್" ಚಿತ್ರದ ದೃಶ್ಯ



ರ್ಥಿಯ ಮೇಲೆ ಸರಾಸರಿ ೧೨ ಸಾವಿರ ರೂ. ವಿನಿಯೋಗಿಸುತ್ತಿದ್ದರೂ, ಅಲ್ಲಿಂದ ತೇರ್ಗಡೆ ಹೊಂದಿ ಚಿತ್ರರಂಗದಲ್ಲಿ ಹೊಸ ಕ್ರಾಂತಿ ನಡೆಸುತ್ತಿರುವ ಛಾಯಾಗ್ರಾಹಕ ಕೆ. ಕೆ. ಮಹಾಜನ್, ನಿರ್ದೇಶಕ ಮಣೀಕೌಲ್, ಕುಮಾರ್ ಸಹಾನಿ, ಸುರೇಂದ್ರ ಚೌಧುರಿ, ಟಿ. ಸಿ. ಜೋನ್, ಪಿ. ಕುಮಾರ್, ವಾಸುದೇವ್, ಸೌಂಡ್ ರಿಕಾರ್ಡಿಸ್ಟ್ ಕಥೂರಿಯಾ, ನರೇಂದ್ರಸಿಂಗ್, ಬಗ್ಗಾ, ಮದನ್, ನಟರಾದ ಶತ್ರುಘ್ನ ಸಿನ್ಹ, ರೆಹನಾ ಸುಲ್ತಾನ್, ಜಯಾ ಬಾಧುರಿ ಮುಂತಾದವರನ್ನು ಕಂಡಾಗ ಒಬ್ಬೊಬ್ಬ ವಿದ್ಯಾರ್ಥಿಯ ಮೇಲೂ ಖರ್ಚು ಮಾಡುತ್ತಿರುವ ಆ ಹನ್ನೆರಡು ಸಾವಿರ ನಿಜಕ್ಕೂ ವ್ಯರ್ಥವೆನಿಸುತ್ತಿಲ್ಲ.

ಈ ವರುಷ,ಅಂತಿಮ ವರುಷದಲ್ಲಿ ಅಲ್ಲಿ ಅಧ್ಯಯನ

ಶ ಡೆಸುತ್ತಿರುವ ಕನ್ನಡಿಗರೆಂದರೆ ಶ್ರೀ ಬಿ. ಜಿ. ಶ್ರೀನಿವಾಸ್, ಕೆ. ರಮೇಶ್ ಕಾಮತ್ ಮತ್ತು ಸುಬ್ರಮಣ್ಯಂ. ಮೂವರಿಗೂ ಪಾಸಾದ ನಂತರ ಕನ್ನಡ ಚಿತ್ರರಂಗದಲ್ಲಿಯೇ, ತಾವು ಅಲ್ಲಿ ಕಲಿತದ್ದನ್ನು ಸಾರ್ಥಕಪಡಿಸಿಕೊಳ್ಳುವ ಹಂಬಲ. ಕಟ್ಟಕಡೆಯದಾಗಿ ಇಲ್ಲಿ ಸೇರಬಯಸುವ ಕನ್ನಡಿಗರಿಗೊಂದು ಕಿವಿಮಾತು! ಫಿಲ್ಮ್ ಇನ್ಸ್ಟಿಟ್ಯೂಟ್‌ಗೆ ಸೇರುವುದೆಂದರೆ ದುಬಾರಿ ಎಂಬ ಭಾವನೆ ಹಲವರಲ್ಲಿ. ಊಟ, ತಿಂಡಿ, ಉಳಿದುಕೊಳ್ಳುವುದು, ಫೀಸ್ ಎಲ್ಲಾ ಸೇರಿ ತಿಂಗಳಿಗೆ ೧೫೦ ರೂ. ದಾಟದು. ಮೈಸೂರು ಸರಕಾರ, ಮೈಸೂರಿನ ವಿದ್ಯಾರ್ಥಿಗಳಿಗೆ ತಿಂಗಳಿಗೆ ೧೨೦ ರೂ.ನ ಸಹಾಯ ಧನ ನೀಡುತ್ತಲಿದೆ,

★★★



ಜನಪ್ರಿಯರಾಗುತ್ತಿರುವ ಮಹೇಂದ್ರ ಸಂಧು
ಹಾಗು ರೀಟಾ ಅಂಜನ್
ವಿದ್ಯಾರ್ಥಿ ಚಿತ್ರ 'ಸಪ್ನಾ'ದಲ್ಲಿ



ಫಿಲ್ಮ್ ಲೈಬ್ರರಿಯ ಒಂದು ಪಾರ್ಶ್ವ



ಖ್ಯಾತ ನಟ ಶತ್ರುಘ್ನ
ವಿದ್ಯಾರ್ಥಿ ದೆಸೆಯಲ್ಲಿ



# ವಿದ್ಯಾರ್ಥಿಗಳೇ, ಆಟಗಾರರೇ, ನೌಕರಸ್ಥರೇ

— ಆ ಬಗ್ಗೆ ಉಳಿಕೆ ಹಣ ನಿಮಗಾಗಿ

ಮೈಸೂರು ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ದರಗಳಲ್ಲಿ ವಿಶೇಷ ಡಿಸ್‌ಕೌಂಟ ಕೊಡುವ ಅನೇಕ ಪದ್ಧತಿಗಳಿವೆ--ಮಾಸಿಕ ಟಿಕೇಟ್‌ಗಳು, ಸೀಜನ್ ಟಿಕೆಟ್‌ಗಳು ಶಾಲಾ ಮಕ್ಕಳಿಗಾಗಿ ೨/೩ ವಿದ್ಯಾರ್ಥಿಗಳಿಗಾಗಿ, ಸ್ತ್ರೀ. ನೌಕರಸ್ಥರು, ಆಟಗಾರರು ಮತ್ತು ಹೋಮ್‌ಗಾರ್ಡ್ಸ್ ಇವರಿಗಾಗಿ ೨೦%- ಇದಲ್ಲದೆ ಪ್ರತಿಯೊಬ್ಬರಿಗೂ ವಾಡಿಕೆಯ ಉಚಿತ ಬ್ಯಾಗೇಜ ಸೌಕರ್ಯ.

ನೀವು ಪ್ರಯಾಣಿಸುವದು ಎಕ್ಸಪ್ರೆಸ್ ಬಸ್ ಇರಲಿ, ಆರ್ಡಿನರಿ ಬಸ್ ಇರಲಿ! ಎಲ್ಲವೂ ಸ್ವಚ್ಛ ಹಾಗೂ ಸೌಕರ್ಯಮಯವಾಗಿದ್ದು, ಕ್ಲಪ್ತ ಸಮಯಕ್ಕೆ ಓಡಾಡುವ ಖ್ಯಾತಿ ಹೊಂದಿವೆ. ಎಕ್ಸ್‌ಪ್ರೆಸ್ ಗಾಡಿಗಳಿಗಾಗಿ ಅಥವಾ ಸ್ಥಳಿಕ ಜಾತ್ರೆಗಳಿಗಾಗಿ ಅಥವಾ ಧಾರ್ಮಿಕ ಆಚರಣೆಗಳಿಗಾಗಿ ನಾವು ಓಡಿಸುವ ವಿಶೇಷ ಸಂದರ್ಭದ ಬಸ್ಸುಗಳಿಗೂ ಹೆಚ್ಚಿನ ಚಾರ್ಜು ಮಾಡಲಾಗುವದಿಲ್ಲ.

ಎಮ್.ಎಸ್.ಆರ್.ಟಿ.ಸಿ.-ವಿಶಾಲ ಬಸ್ಸು ನಿಲ್ದಾಣಗಳನ್ನು ಹೊಂದಿದೆ- ನಗರಗಳಲ್ಲಿ ಅತ್ಯಾಧುನಿಕ ಸುಖಸೌಲಭ್ಯಗಳಿವೆ-ಗ್ರಾಮೀಣ ಮಾರ್ಗಗಳಲ್ಲೆಲ್ಲ ನಾಲ್ಕುನೂರು, ಪ್ರಯಾಣಿಕರ ಹಾಗೂ ರಸ್ತೆ ಬದಿಯ ತಂಗುಮನೆಗಳಿವೆ.

ಕಳೆದ ವರ್ಷ ಮಾತ್ರವೇ-ನಿಮಗೆ ಹೆಚ್ಚಿನ ಸೇವೆ ಸಲ್ಲಿಸಲು ಎರಡು ಸಾವಿರ ಹೆಚ್ಚಿಗೆ ಜನರನ್ನು ನಿಯಮಿಸಿಕೊಂಡೆವು.

ನಮ್ಮ ಸಹ—ಪ್ರಯಾಣ—
ಬಸ್ ಮೂಲಕ ಪ್ರಯಾಣ.

## ಮೈಸೂರು ರಾಜ್ಯ ರಸ್ತೆ ಸಾರಿಗೆ ಸಂಸ್ಥೆ

ಕೇಂದ್ರ ಕಚೇರಿಗಳು, ಶಾಂತಿನಗರ, ಬೆಂಗಳೂರು-೨೭.

# ತೆರೆಮರೆಯ ಕಾರ್ಮಿಕರ ಕಾರುಣ್ಯ ಕಥೆ



ಫೆಡರೇಶನ್ನಿನ ಪ್ರಧಾನ ಕಾರ್ಯದರ್ಶಿ ವಸಂತ ಕುಲಕರ್ಣಿ

## ವಸಂತ ಕಲಕೋಟಿ

ಒಂದು ಚಲನಚಿತ್ರದ ಯಶಸ್ಸಿಗೆ ನಾಯಕ ನಾಯಕಿ, ದಿಗ್ದರ್ಶಕ, ಸಂಗೀತ ನಿರ್ದೇಶಕ, ಹಿನ್ನೆಲೆ ಗಾಯಕರೇ ಕಾರಣರು ಎಂಬ ಭಾವನೆ ಚಿತ್ರಪ್ರೇಮಿಗಳಲ್ಲುಂಟಾಗುತ್ತಿದೆ. ಅದಕ್ಕೆ ಕಾರಣವೂ ಇದೆ ಎನ್ನಿ! ಮೇಲ್ನೋಟಕ್ಕೆ ಅವರೇ ಕಾರಣರಾಗಿದ್ದಾರೆನಿಸಿದರೂ ಸತ್ಯಸಂಗತಿ ಮಾತ್ರ ಬೇರೆಯೇ ಆಗಿದೆ ಎಂಬುದು ಅನೇಕರಿಗೆ ತಿಳಿದಿಲ್ಲವೆನ್ನಬಹುದು! ಪ್ರಚಾರ ಸಾಧನಗಳಾದ ಪತ್ರಿಕೆಗಳಲ್ಲಿ, ಚಿತ್ರದ ಪ್ರಾರಂಭದ ರೀಲಿನಲ್ಲಿ ಈ ಮಹನೀಯರ ಹೆಸರುಗಳೇ ಎದ್ದು ಕಾಣುತ್ತವೆ. ಇತರ ತಾಂತ್ರಿಕ ವರ್ಗದ ಇಲ್ಲವೇ ಚಿಕ್ಕ ಪುಟ್ಟ ಪಾತ್ರಧಾರಿಗಳ ಹೆಸರು ಕಂಡು ಬರುವುದೇ ಇಲ್ಲ. ಯಾರೂ ಗುರುತಿಸದೆ, ಪ್ರೋತ್ಸಾಹಿಸದೆ ಇರುವ ಅಸಂಖ್ಯಾತ ಕಲಾವಿದರು ಕಾರ್ಮಿಕರು ಈ ರಂಗದಲ್ಲಿ ಪರಿಶ್ರಮಿಸುತ್ತಿದ್ದು, ಚಿತ್ರದ ಯಶಸ್ಸಿಗೆ ಅವರೇ ಬಹುಮಟ್ಟಿಗೆ ಕಾರಣವೆಂದು ಹೇಳಿದರೆ ಅತಿಶಯೋಕ್ತಿಯಾಗದು.

ಒಂದು ಚಿತ್ರ ಪೂರ್ಣವಾಗಿ ಅದು ಹೊರ ಬರಬೇಕಾದರೆ, ಸಂಕಲನಕಾರ, ಕಲಾನಿರ್ದೇಶಕ, ನೃತ್ಯ ನಿರ್ದೇಶಕ, ಚಿತ್ರಕಥಾಲೇಖಕ, ಧ್ವನಿ ಮುದ್ರಣಕಾರ, ಕ್ಯಾಮರಾಮನ್, ಮೇಕಪ್‌ಮನ್, ಮೊದಲಾದವರ ಕೈವಾಡವಿದ್ದೇ ಇರುತ್ತದೆ. ಈ ಜನರ ಸಹಕಾರವಿಲ್ಲದೆ ಚಿತ್ರವು ಪೂರ್ಣವಾಗುವುದು ಸಾಧ್ಯವೇ ಇಲ್ಲ. ಇವರೆಲ್ಲ ತೆರೆಯ ಮರೆಯ ಕಾಯಿಯಂತೆ ಚಿತ್ರೋದ್ಯಮದ ಯಶಸ್ಸಿಗಾಗಿ ಪರಿಶ್ರಮಿಸುತ್ತಿದ್ದಾರೆ. ಆದರೆ ಈ ಕಾರ್ಮಿಕರ ಸ್ಥಿತಿಗತಿಗಳು ಮಾತ್ರ ತೀರ ದಯನೀಯವಾಗಿವೆ. ಚಿತ್ರರಂಗದಲ್ಲಿ ನಡೆವ ಅನವರತ ಶೋಷಣೆಗೊಳಗಾಗಿರುವ ಇವರು ನಿಜವಾಗಿಯೂ ಸಂತ್ರಸ್ತರು, ನಿರಾಶ್ರಿತರೆಂದೇ ಹೇಳಬೇಕಾಗುತ್ತದೆ. ವಿವಿಧ ರಂಗಗಳಲ್ಲಿ ದುಡಿಯುತ್ತಿರುವ ಕಾರ್ಮಿಕರನ್ನು ಸೆರೆಯಾಳುಗಳಂತೆ ನಡೆಸಿಕೊಳ್ಳಲಾಗುತ್ತಿತ್ತು. ಸರಿಯಾಗಿ ಸಂಬಳ ಕೂಡ ದೊರೆಯುತ್ತಿದ್ದಿಲ್ಲ. ಸೇವೆಗೆ ಪ್ರತಿಫಲ ದೊರೆಯುವುದಂತೂ ದೂರದ ಮಾತೇ ಆಗಿತ್ತು. ಕೆಲವರಿಗಂತೂ ವರ್ಷಗಟ್ಟಲೇ ಸಂಬಳ ದೊರೆಯುತ್ತಿದ್ದಿಲ್ಲ. ಚಿತ್ರರಂಗದ ವಿಶೇಷವೆಂದರೆ ಇಲ್ಲಿ ದುಡಿಯುವ ಕಾರ್ಮಿಕರಿಗೆ ಸೇವಾ ಭದ್ರತೆ ಇಲ್ಲದಿರುವುದು, ಬಹುಸಂಖ್ಯ ಕಾರ್ಮಿಕರು ದಿನಗೂಲಿಯ ಮೇಲೆ ಇಲ್ಲವೆ ಗುತ್ತಿಗೆ ಪದ್ಧತಿಯ ಮೇಲೆ ದುಡಿಯಬೇಕಿತ್ತು. ಇವರ ಹಕ್ಕುಬಾಧ್ಯತೆಗಳನ್ನು ಮನ್ನಿಸಲು ಚಿತ್ರರಂಗದ ಪಟ್ಟಭದ್ರರು ಸಿದ್ಧರಿರಲಿಲ್ಲ. ೧೯೫೦ಕ್ಕಿಂತ ಮೊದಲು ಇವರ ಹಕ್ಕುಬಾಧ್ಯತೆಗಳಿಗಾಗಿ ಹೋರಾಡಬಲ್ಲ ಯಾವುದೇ ಪ್ರಾತಿನಿಧಿಕ ಸಂಸ್ಥೆ ಇರಲಿಲ್ಲವಾದರೂ 'ಜ್ಯೂನಿಯರ ಆರ್ಟಿಸ್ಟ್ಸ ಅಸೋಸಿಯೇಶನ್' ಎಂಬೊಂದು ಸಂಸ್ಥೆ ಮಾತ್ರ ಈ ಜನರ ಬೇಡಿಕೆಗಳಿಗಾಗಿ ಚಿತ್ರ ನಿರ್ಮಾಪಕರೊಂದಿಗೆ ಹೋರಾಟ ನಡೆಸುತ್ತಿತ್ತೆಂದು ಹೇಳಬಹುದು.



ಮಾಲಾಸಿಂಹಳಿಗೆ ಮೇಕಪ್ ಮಾಡುತ್ತಿರುವ ದೀಪಕ ಸಾವಂತ.

ಭಾರತೀಯ ಚಿತ್ರೋದ್ಯಮದಲ್ಲಿ ಸುಮಾರು ಎರಡು ಲಕ್ಷ ಕಾರ್ಮಿಕರು ದುಡಿಯುತ್ತಿದ್ದಾರೆ. ಅವರಿಗಾಗಿ ಪ್ರತ್ಯೇಕ ವೇತನಮಂಡಳವನ್ನು ಕೇಂದ್ರ ಸರಕಾರವಾಗಲಿ, ರಾಜ್ಯ ಸರಕಾರಗಳಾಗಲಿ ರಚಿಸಿಲ್ಲವೆಂಬುದು ತೀರ ವಿಷಾದದ ಸಂಗತಿ. ತಿಂಗಳಿನಲ್ಲಿ ಹತ್ತು, ಹನ್ನೆರಡು ದಿನ ಕೆಲಸ ದೊರೆತರೆ ಉಳಿದ ದಿನಗಳಲ್ಲಿ ನಿರುದ್ಯೋಗಿಯಾಗಿರಬೇಕಾಗುತ್ತದೆ. ಇದು ಅವರನ್ನು ಕಳವಳಕ್ಕೀಡು ಮಾಡುತ್ತಿದೆ.ಒಂದು ವೇಳೆ ಗುತ್ತಿಗೆ ಪದ್ಧತಿಯ ಮೇರೆಗೆ ಕೆಲಸ ದೊರೆತು ತುಸು ಹೆಚ್ಚು ಹಣ ಸಂಪಾದನೆಯಾದರೂ, ಮತ್ತೊಂದು ಗುತ್ತಿಗೆ ದೊರೆಯುವ ವೇಳೆಗೆ ಈ ಹಣ ಮುಗಿದು ಹೋಗಿರುತ್ತದೆ. ಚಿತ್ರರಂಗ ನೀರ ಮೇಲಿನ ಗುಳ್ಳೆಯಂತೆ ಅಸ್ಥಿರವಾಗಿದೆ.

ಚಿತ್ರರಂಗದಲ್ಲಿರುವ ವಿವಿಧ ಕಾರ್ಮಿಕರನ್ನು ಕಂಡು ಅವರ ಸಮಸ್ಯೆಗಳನ್ನು ಕುರಿತು ಚರ್ಚಿಸಲು ನಾನು ಹೋದಾಗ ದೊರೆತ ಮಾಹಿತಿ ಅಪೂರ್ವ.

ಕಳೆದ ಮೂವತ್ತೈದು ವರ್ಷಗಳಿಂದಲೂ ನೂರಾರು ಚಿತ್ರಗಳಲ್ಲಿ ಚಿಕ್ಕ ಪುಟ್ಟ ಪಾತ್ರಗಳನ್ನು ನಿರ್ವಹಿಸಿದ್ದರೂ ತನ್ನದೇ ಆದ ಚಿಕ್ಕ ಮನೆಯೊಂದಿಲ್ಲವೆನ್ನುತ್ತಾನೆ ರಾಮು ಸಹಾಯ. ಮಹಾಲಕ್ಷ್ಮಿಯ ಧೋಬಿಘಾಟದಲ್ಲಿ ಚಿಕ್ಕ ಗುಡಿಸಲಲ್ಲಿ ಈತ ವಾಸಿಸುತ್ತಿದ್ದಾನೆ. ಅದೇ ಆತನ ಅರಮನೆಯಾಗಿದೆ. ಚಿತ್ರಗಳಲ್ಲಿ, ರಾಜನಾಗಿ, ಸಾಹುಕಾರನಾಗಿ ಕಾಣಿಸಿಕೊಂಡಿದ್ದಾನೀತ. "ಸರಕಾರದ ಕಚೇರಿಯಲ್ಲಿ ಸಿಪಾಯಿಯಾಗಿದ್ದ ನೆರೆಮನೆಯವನ ಮಗ ಡಾಕ್ಟರ್ ನಾಗಿದ್ದಾನೆ. ಆದರೆ ಕಳೆದ ೩೦ ವರ್ಷಗಳಿಂದಲೂ ಹಗಲು ರಾತ್ರಿಯೆನ್ನದೆ ದುಡಿದರೂ ನನ್ನ ಮಗನಿಗೆ ನಾಲ್ಕು

## Deepavali Greetings 

# JALIHAL'S KNITTING WORKS

SHAHAPUR,
BELGAUM-3
(Karnatak)



MANUFACTURERS OF :

**Pure Woollen & Mercerised Cotton
Pullovers, Cardigans, Sweaters,
Casual Wear Shirts,
Bell Bottom Slacks, Skirts Etc.**




 ಸರ್ವರಿಗೂ ದೀಪಾವಳಿಯು ಹರ್ಷದಾಯಕವಾಗಲಿ 

P. B. No. 30 Phone 2348

# ವಿಜಯ ಟ್ರೇಡರ್ಸ್

ಮೋಟಾರು ಸಾ: ಾನುಗಳ ವ್ಯಾಪಾರಿಗಳು

ಬಿ. ಹೆಚ್. ರಸ್ತೆ, ಶಿವಮೊಗ್ಗ

[25] ವರ್ಷಗಳ ಸೇವಾನುಭವದಿಂದ
ಉತ್ತಮ ಗುಣಮಟ್ಟದ
ಬಿಡಿ ಭಾಗಗಳನ್ನು ಯೋಗ್ಯಬೆಲೆಗೆ
ಒದಗಿಸಬಲ್ಲೆವೆಂದು ತಿಳಿಸಲು ಹರ್ಷಿ ಎತ್ತೇವೆ.

ನಮ್ಮಲ್ಲಿ ಯಾವತ್ತೂ ಲಾರಿ, ಕಾರು, ಹಾಗೂ ಟ್ರಾಕ್ಟರು
ಗಳಿಗ ಬೇಕಾಗುವ ಬಿಡಿ ಭಾಗಗಳು, ಬಾ ಟರಿ,
ಟೈರು, ಟೂಬುಗಳು ದೊರೆಯುತ್ತವೆ.

ಶಾಖೆ :- Phone : 22894

18-19, ಜಯಚಾಮರಾಜೇಂದ್ರ ರಸ್ತೆ
ಬೆಂಗಳೂರು-2

ಸಹ ಸಂಸ್ಥೆ : Phone : 478

# ವಿಜಯ ಟ್ರೇಡರ್ಸ್

ವ್ಯಾಪಾರಿಗಳು :
ಮೋಟಾರು ಹಾಗೂ ಟ್ರಾಕ್ಟರು ಬಿಡಿಭಾಗಗಳು

ಪೂಣೆ-ಬೆಂಗಳೂರು ರಸ್ತೆ, ದಾವಣಗೆರೆ-2

ನೆಯ ಕ್ಲಾಸಿನ ವರೆಗೆ ಓದಿಸುವುದಾಗಲಿಲ್ಲ"ವೆಂದು ಚಿತ್ರಗಳಲ್ಲಿ ಬರುವ ಸಾಹಸಮಯ ದೃಶ್ಯಗಳಿಗಾಗಿ ಪ್ರತಿನಟನಾಗಿ ಅಭಿನಯಿಸುತ್ತಿರುವ ಸ್ಟಂಟಮ್ಯಾನ್ ದಾವೂದನ ಹೇಳಿಕೆ. ಸತತವಾಗಿ ಮೂರು ತಿಂಗಳವರೆಗೆ ಉದ್ಯೋಗ ದೊರೆಯದೆ ಒದ್ದಾಡುತ್ತಿರುವಾಗ ಕ್ಯಾನ್ಸರಿನಿಂದ ಮಡಿದ ತನ್ನ ಪುತ್ರಿಯನ್ನು ನೆನೆದು ದುಃಖಿಸುತ್ತ ಹೇಳಿದ ಸ್ಟುಡಿಯೋ ಕರ್ಮಚಾರಿ ರಾಜಸಿಂಗ್‌ನ ದಾರುಣ ಕಥೆ ಕೇಳಿ ಯಾರಿಗೆ ತಾನೆ ಮರುಕವುಂಟಾಗದು?

"ಜ್ಯೂನಿಯರ್ ಆರ್ಟಿಸ್ಟ್ಸ ಅಸೋಸಿಯೇಶನ್" ಇಂಥ ಕರ್ಮಚಾರಿಗಳ ಏಳ್ಗೆಗಾಗಿ ಶ್ರಮಿಸುತ್ತಿರುವ ಸಂಸ್ಥೆ. ಅದರ ಕಚೇರಿ ಮಹಾಲಕ್ಷ್ಮಿಯ ಧೋಬಿಘಾಟಿನ ಪಕ್ಕದಲ್ಲಿ ನೆಲೆಸಿದೆ. ಅದೂ ಎಂಥ ಸ್ಥಳ ಗೊತ್ತೆ? ದನಗಳನ್ನು ಕಟ್ಟಲು ಕೂಡ ಅಯೋಗ್ಯವಾದ ಸ್ಥಳವಿದು. ಚಿತ್ರರಂಗದ ವಿವಿಧ ಭಾಗಗಳಲ್ಲಿ ಸೇವೆ ಸಲ್ಲಿಸುತ್ತಿರುವ ಚಿಕ್ಕ ಪುಟ್ಟ ಕಲಾವಿದರಿಂದ (ಸುಮಾರು ೫೦೦ ಜನ) ಕೂಡಿದ ಸಂಸ್ಥೆಯಿದು. ಪ್ರತಿ ನಿತ್ಯ ಸಾಯಂಕಾಲ ಅವರೆಲ್ಲ ಅಲ್ಲಿ ಕೂಡಿರುತ್ತಾರೆ. ಚಿತ್ರ ನಿರ್ಮಾಪಕನ ಪ್ರತಿನಿಧಿ, ಇಲ್ಲಿಗೆ ಬಂದು ತನ್ನ ಚಿತ್ರಕ್ಕವಶ್ಯವಿರುವ ವ್ಯಕ್ತಿಗಳನ್ನು, ಅವರ ವಯಸ್ಸು. ರೂಪ ಇತ್ಯಾದಿಗಳನ್ನು ಗಮನಿಸಿ ಆಯ್ದುಕೊಂಡು ಹೋಗುತ್ತಾನೆ. ಅದೂ ದಿನಗೂಲಿಯ ಮೇಲೆ. ಚಿತ್ರದ ಕೆಲಸ ಮುಗಿಯಿತೆಂದರೆ ಮತ್ತೆ ಅವರು ನಿರುದ್ಯೋಗಿಗಳು! ನಿರ್ಮಾಪಕನಾಗಲಿ, ಬೇರೆ ಯಾರಾ



ಅವಕಾಶಕ್ಕಾಗಿ ಕಾದಿರುವ ಮಹಿಳಾ ಕಲಾವಿದರು ಅಸೋಶಿಯೇಶನ್ ಹಾಲಿನಲ್ಲಿ.

ತಮ್ಮ ಸರದಿ ಬಂದೀತೇನೋ? ಎಂದು ಚಿಂತೆಯಲ್ಲಿರುವ ಪುರುಷ ಕಲಾವಿದರು.

ಅಸೋಸಿಯೇಶನ್ನಿನ ಕಾರ್ಯಕಾರಿ ಮಂಡಳದ ಸದಸ್ಯರು.



ನಮ್ಮೆಲ್ಲ ಗ್ರಾಹಕರಿಗೂ ಹಿತೈಷಿಗಳಿಗೂ ದೀಪಾವಳಿಯ ಶುಭಾಶಯಗಳು !!



# ಸೋಮೇಶ್ವರ ಸ್ಟೀಲ ವರ್ಕ್ಸ
# ಸೋಮೇಶ್ವರ ರೋಲಿಂಗ್ ಶಟರ್ಸ

ಎಳೆಯುವದು ಮತ್ತು ತಳ್ಳುವದು ಅಥವಾ ಗೇಯರ ಚಲನೆಯುಳ್ಳದ್ದು. (ಸುರಳಿ ಬಾಗಿಲುಗಳು)




ಸೋಮೇಶ್ವರ ಅಂದರೆ ........................................................

★ ಶ್ರೇಷ್ಠತೆ ಮತ್ತು ನೈಪುಣ್ಯತೆಗೆ ಹೆಸರಾದುದು

★ ನಿಮ್ಮ ಹಣಕ್ಕೆ ನಿಸ್ಸಂದೇಹವಾಗಿ ದೊರೆಯುವಲ್ಲಿ ಸರ್ವೋತ್ತಮವಾದುದು.

★ ಸದಾ ಕಾಲವೂ ಸುರಕ್ಷಿತ ಮತ್ತು ಭದ್ರತೆಯುಳ್ಳದ್ದು.

★ ಕದದ (ಬಾಗಿಲು) ಸಮಸ್ಯೆಗೆ ಯುಕ್ತ ಉತ್ತರವೆಂದರೆ... ಇದೊಂದೇ ಮಾದರಿ

★ ಕದವನ್ನು (ಬಾಗಿಲು) ಸ್ವತಃ ಪರಿಶೀಲಿಸಿದರೆ ನೀವೆ ನಂಬುವಿರಿ.

ತಯಾರಕರು:

## ಸೋಮೇಶ್ವರ ರೋಲಿಂಗ್ ಷಟರ್ಸ್ & ಇಂಜನಿಯರಿಂಗ್ ವರ್ಕ್ಸ

ಹಳೇಹುಬ್ಬಳ್ಳಿ ಕಿಲ್ಲೆ, ಹುಬ್ಬಳ್ಳಿ-21 ಪ್ರೊ-ಪಿ. ವೀರಭದ್ರಪ್ಪ ಫೋನ್ : 3981





ದೀಪಾವಳಿಯು ಶುಭದಾಯಕವಾಗಲಿ !



ಸ್ಥಾಪನೆ: 1946

ನಿಮ್ಮ ಪ್ರೀತಿ




ವಿಶ್ವಾಸದ ಗುರುತು

400 ಕ್ಕೂ ಮಿಕ್ಕ ಆಯುರ್ವೇದ, ಶಾಸ್ತ್ರೋಕ್ತ ಔಷಧಗಳನ್ನು ತಯಾರಿಸುವ, ಕರ್ನಾಟಕದ ಈ ಕಾರಖಾನೆಯ ಔಷಧಗಳನ್ನೇ ಉಪಯೋಗಿಸಿರಿ.

ಇದೀಗ ಮೈಸೂರು ಸರಕಾರದ ಆಸ್ಪತ್ರೆ, ಇತ್ಯಾದಿಗಳಿಗೆ ಔಷಧ ಪೂರೈಕೆ ಬಗ್ಗೆ ಸರಕಾರೀ ಮಾನ್ಯತೆಯನ್ನೂ ಪಡೆದಿದೆ.

ನಿಮ್ಮ ನಾಡಿನ ಹೆಮ್ಮೆಯ ಸಂಸ್ಥೆ

## ತಾರಾನಾಥ ರಸೌಷಧಿ ವರ್ಕ್ಸ್ ಪ್ರೈ. ಲಿ.

ಪೋಸ್ಟ ಬಾಕ್ಸ ನಂಬರ್ 48,
ಚಿಕ್ಕ ಮಗಳೂರು





HAPPY DEEPAVALI



Grams "Durga-Lodge" Phone 334

For Space Accommodation VISIT

## SRI DURGA LODGE

B. H Road, SHIMOGA

Well furnished Rooms with bath attached, and car parking facilities

★ ★ ★

ಶಿವಮೊಗ್ಗದಲ್ಲಿ

ಗಾಳಿ, ಬೆಳಕು ಸ್ನಾನಗೃಹವನ್ನೊಳಗೊಂಡ ಸುಸಜ್ಜಿತವಾದ ರೂಮುಗಳು, ಕಾರ್ ಪಾರ್ಕಿಂಗ್ ಸೌಲಭ್ಯ ಹೊಂದಿರುವ ಅತ್ಯಾಧುನಿಕ ರೀತಿಯ ವಸತಿಗೃಹ, ಇಂದೇ ಭೇಟಿಕೊಡಿ.

ತಂತಿ: ದುರ್ಗಾಲಾಡ್ಜ ಫೋನ್: ೩೩೪

## ಶ್ರೀ ದುರ್ಗಾ ಲಾಡ್ಜ

ಬಿ. ಹೆಚ್. ರಸ್ತೆ, ಶಿವಮೊಗ್ಗ

ವ್ಯವಸ್ಥಾಪಕರು.

ದರಾಗಲಿ, ಅಲ್ಲಿಗೆ ಹೋದರೆ ಅಲ್ಲಿರುವ ಹೆಣ್ಣು-ಗಂಡುಗಳು ಆಸೆಗಣ್ಣಿನಿಂದ ನೋಡುತ್ತಿರುವ ದೃಶ್ಯ ಬಹು ದಾರುಣವಾಗಿದೆ. ೧೬ ವರ್ಷ ವಯಸ್ಸಿನವರಿಂದ ೭೦ರ ವರೆಗಿನ ಸ್ತ್ರೀ-ಪುರುಷರು ಈ ಸಂಸ್ಥೆಯ ಸದಸ್ಯರಾಗಿದ್ದಾರೆ. ೧೯೪೬ ರಿಂದಲೇ ಸಂಸ್ಥೆ ಕಾರ್ಯನಿರತವಾಗಿದ್ದು ಅನೇಕ ಸಲ ಮುರಿದುಹೋದರೂ ಮತ್ತೆ ಮತ್ತೆ ಚೇತರಿಸಿಕೊಂಡು ಹೇಗಾದರೂ ಬದುಕುಳಿದಿದೆ. ಸಂಸ್ಥೆಯ ಸದಸ್ಯರಿಗೆ ದೊರೆವ ದಿನಗೂಲಿ ಎಷ್ಟು ಗೊತ್ತೆ? ಸುಮಾರು ರೂ. ೧೩ರಿಂದ ೩೫ರ ವರೆಗೆ ಮಾತ್ರ. ಅದೂ ಚಿತ್ರೀಕರಣ ನಡೆದಾಗ. ೩೦ ವರ್ಷದಷ್ಟು ಹಳೆಯ ಸಂಸ್ಥೆ ಯಾವರೂ ತನ್ನ ಸದಸ್ಯರ ಜೀವನಮಟ್ಟವನ್ನು ವಿಸ್ತರಿಸಲು ಅದಕ್ಕೆ ಸಾಧ್ಯವಾಗಿಲ್ಲ. ಪ್ರತಿ ಕ್ಷಣಕ್ಕೂ ನಿರ್ಮಾಪಕರೊಂದಿಗೆ ಸೆಣಸಬೇಕಾಗುತ್ತದೆ. ಎನ್ನುತ್ತಾರೆ ಸಂಸ್ಥೆಯ ಖಜಾಂಚಿ ಹಾಫೀಜ್ ಕರದಾರ. ಎರಡು ಹೊತ್ತು ಊಟ ಕೂಡ ಸರಿಯಾಗಿ ದೊರೆಯದ ಈ ಬಡಪಾಯಿಗಳನ್ನು ಚಿತ್ರದಲ್ಲಿ ಒಳ್ಳೆಯ ವೇಷ ತೊಡಿಸಿ ಪ್ರದರ್ಶಿಸುತ್ತಾರೆ. ಇದು ವಿಧಿಯ ಅಟ್ಟಹಾಸವಲ್ಲವೆ?

ಇತ್ತೀಚೆಗೆ 'ಟೆಲಿವಿಜನ್'ದಲ್ಲಿ ಚಿತ್ರರಂಗದ ಕಿರಿ ಕಲಾವಿದರ ಜೀವನ ಕುರಿತು 'ಯೇ ಅಂಜಾನೇ' ಎಂಬ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಆ ಕಾರ್ಯಕ್ರಮದಲ್ಲಿ ಕಲಾವಿದರ ಬಗೆಗೆ ಅವಾಸ್ತವ ಮಹತ್ವವನ್ನಿತ್ತಿದೆಯೆಂಬ ಕಾರಣ ತೋರಿ ಚಿತ್ರ ನಿರ್ಮಾಪಕ ಸಂಘ ಈ



ಕ್ಯಾಮರಾಮನ್ ಧರಮ್ ಚೋಪ್ರಾ ಸಹಾಯಕನೊಂದಿಗೆ.

ಸೆಟಿಂಗ್ಸ್ ನಿರ್ಮಾಣದಲ್ಲಿ ನಿರತರಾದ ಲಾಯಿಟ್‌ಮನ್ ಪ್ರಶಾಂತ ಹಾಗೂ ಕಾರ್ಪೆಂಟರ್ ಕೃಷ್ಣಾ ಧೋಂಡು.

ಸಂಸ್ಥೆಗೆ ಬಹಿಷ್ಕಾರ ಹಾಕಿತು. ಆದರೆ ಮತ್ತೆ ಸಂಧಾನ ನಡೆದು, ಈ ಸಂಸ್ಥೆಯ ಸದಸ್ಯರಿಗೆ ಕೆಲಸ ದೊರೆಯ ಹತ್ತಿದೆ. ಆದರೆ ಮೊದಲಿನ ಸೌಹಾರ್ದ ಉಳಿದಿಲ್ಲ. ನಿರ್ಮಾಪಕರ ಅಸೂಯೆ ಹೆಚ್ಚಿದೆ. ಈ ಸಂಸ್ಥೆಯ ಪ್ರಭಾವವನ್ನು ಕುಂಠಿತಗೊಳಿಸಲು "ಕಾಸ್ಟಿಂಗ್ ಬ್ಯುರೋ" ಎಂಬ ಬೇರೊಂದು ಸಂಸ್ಥೆಯನ್ನು ಕಟ್ಟಲು ಹಲವರು ಮುಂದಾಗಿದ್ದಾರೆ. ಇದು ನಿಜವಾಗಿಯೂ ಖಂಡನೀಯ.

"ಈ ಚಿತ್ರ ರಜತೋತ್ಸವ ಆಚರಿಸಿತು. ಮತ್ತೊಂದು ಸುವರ್ಣ ಮಹೋತ್ಸವದತ್ತ ಭರದಿಂದ ಸಾಗಿದೆ. ಮುಂಬೈಯಲ್ಲಿ ಈ ಚಿತ್ರ ಗಲ್ಲಾಪೆಟ್ಟಿಗೆಯನ್ನೇ ಸೂರೆ ಮಾಡಿತು. ಬೆಂಗಳೂರಿನಲ್ಲಿ ಹೊಸ ದಾಖಲೆ ಸ್ಥಾಪಿಸಿತು. ಎಂದು ನಾವೆಲ್ಲ ಪತ್ರಿಕೆಯಲ್ಲಿ ಓದುತ್ತೇವೆ. ಆದರೆ ಅದರಿಂದ ನಿಜವಾಗಿಯೂ ಲಾಭ ಪಡೆಯುವವರಾರು? ಚಿತ್ರದ ಯಶಸ್ಸಿಗಾಗಿ ಶ್ರಮಿಸಿದ ಕಾರ್ಮಿಕರಿಗೆ ಸಿಕ್ಕುವುದಾದರೂ ಏನು? "ನಿರ್ಮಾಪಕರು ತಮ್ಮ ಕಚೇರಿಯ ಸಿಬ್ಬಂದಿಗೆ ಮೂರು ತಿಂಗಳ ಬೋನಸ್ಸು ಕೊಡುವುದಾಗಿ ಘೋಷಿಸಿ, ಕೇವಲ ಒಂದುತಿಂಗಳ ಸಂಬಳದಷ್ಟನ್ನು ಕೊಟ್ಟು, ಮೂರು ತಿಂಗಳ ಬೋನಸ್ಸು ಮುಟ್ಟಿದೆಯೆಂದು ಕೆಲಸಗಾರರಿಂದ ರುಜು ಪಡೆಯುತ್ತಾರೆ" ಎನ್ನುತ್ತಾರೆ ಶ್ರೀ ಜಾಫರ ಅಹ್ಮದ. ನಿರ್ಮಾಪಕ ಹಾಗೂ ಸ್ಟುಡಿಯೊ ಮಾಲಿಕರಿಗೆ ಲಕ್ಷಾವಧಿ ರೂ.ಗಳ ಲಾಭ ಬಂದರೂ ಕಾರ್ಮಿಕರಿಗೆ ಪಾಲಿಗೆ ಮಾತ್ರ ಏನೂ ದೊರೆಯದಿರುವುದು ತೀರ ವಿಷಾದನೀಯ ಸಂಗತಿಯಲ್ಲವೆ?

ಈ ಉದ್ದಿಮೆಯ ವಿವಿಧ ರಂಗಗಳಲ್ಲಿ ಕೆಲಸ ಮಾಡುವ ಕಾರ್ಮಿಕರು ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ತಮ್ಮದೇ ಆದ ಸಂಸ್ಥೆಗಳನ್ನು ಕಟ್ಟಿಕೊಂಡಿದ್ದು ಅವುಗಳಲ್ಲಿ ವೆಸ್ಟರ್ನ್ ಇಂಡಿಯ ಸಿನೆಮಾಟೋಗ್ರಾಫ ಅಸೋಸಿಯೇಶನ್, ಸೌಂಡ ಇಂಜನೀಯರ್ಸ್ ಅಸೋಸಿಯೇಶನ್, ಅಸೋಸಿಯೇಶನ್ ಆಫ್ ಫಿಲ್ಮ ಎಡಿಟರ್ಸ್, ಇಂಡಿಯನ್ ಫಿಲ್ಮ ಡಾನ್ಸರ್ಸ್ ಅಸೋಸಿಯೇಶನ್, ಅಸೋಸಿಯೇಶನ್ ಆಫ್ ಸಿನೆ ಆರ್ಟ್ ಡಾಯರೆಕ್ಟರ್ಸ್ ಮತ್ತು ಸಿನೆ ಆರ್ಟಿಸ್ಟ್ಸ ಅಸೋಸಿಯೇಶನ್ ಮುಂತಾದವು ಪ್ರಮುಖವಾಗಿವೆ. ಈ ಸಂಸ್ಥೆಗಳ ಸದಸ್ಯರ ಸ್ಥಿತಿಗತಿಗಳು ಅಷ್ಟೇನೂ ನಿರಾಶಾದಾಯಕವಾಗಿಲ್ಲ. ಇವರೆಲ್ಲ ಮಧ್ಯಮ ವರ್ಗಕ್ಕೆ ಸೇರಿದವರಾಗಿದ್ದಾರೆ. ಗುತ್ತಿಗೆ ಪದ್ಧತಿಯ ಮೇಲೆ ಇವರು ಕಾರ್ಯ ನಿರ್ವಹಿಸುವುದರಿಂದ ಆದಾಯ ಚೆನ್ನಾಗಿದೆಯಲ್ಲದೆ ಅವರ ನಡುವೆ ಸ್ಪರ್ಧೆಯೂ ಇಲ್ಲ. ಸಿನೆ ಆರ್ಟಿಸ್ಟ್ಸ ಅಸೋಸಿಯೇಶನ್ ಪ್ರಧಾನ ಕಾರ್ಯದರ್ಶಿ ಶ್ರೀ ಕರಣ ದಿವಾನ ಹಾಗೂ ಅಸೋಸಿಯೇಶನ್ ಆಫ್ ಫಿಲ್ಮ ಎಡಿಟರ್ಸ್‌ನ ಉಪಾಧ್ಯಕ್ಷರಾದ ಶ್ರೀ ಖಂಡಿಯವರನ್ನು ಕಂಡು ಚರ್ಚಿಸಿದಾಗ ತಮ್ಮ ಸಂಸ್ಥೆಯ ಸದಸ್ಯರ ಸ್ಥಿತಿಗತಿಗಳು ಸಮಾಧಾನಕರವಾಗಿವೆಯೆಂದು ತಿಳಿಸಿದರು.

ಇತ್ತೀಚೆಗೆ ಈ ಉದ್ದಿಮೆಯ ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಕಾರ್ಮಿಕರಲ್ಲಿ ಒಮ್ಮತ, ಸಹಕಾರ ಭಾವನೆಗಳು ಬೆಳೆಯುತ್ತಿವೆ. ಚಿತ್ರರಂಗದ ಆರೋಗ್ಯದ ದೃಷ್ಟಿಯಿಂದ ಇದೊಂದು ಸಂತಸದ ಸಂಗತಿಯೆನ್ನಬಹುದು. ಒಕ್ಕಟ್ಟಿನಲ್ಲಿ ಬಲವಿದೆಯೆಂಬುದನ್ನರಿತ ಕಾರ್ಮಿಕರು ೧೯೫೮ರಲ್ಲಿ ಫೆಡರೇಶನ್ ಆಫ್ ವೆಸ್ಟರ್ನ್ ಇಂಡಿಯ ಸಿನೆ ಎಂಪ್ಲಾಯೀಜ್ ಎಂಬ ಮಹಾಮಂಡಳವನ್ನು ರಚಿಸಿಕೊಂಡಿದ್ದು ಆ ಸಂಸ್ಥೆಯ ಮುಖಾಂತರ ತಮ್ಮ ಪ್ರಗತಿಗಾಗಿ ಒಕ್ಕಟ್ಟಿನಿಂದ ಹೋರಾಡುತ್ತಿದ್ದಾರೆ. ಪ್ರತಿ ಸಂಘವೂ ತನ್ನ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಮಹಾಮಂಡಳದ ಮೂಲಕವೇ ಪ್ರಯತ್ನಿಸುತ್ತಿವೆಯೇ ವಿನಾ ಸ್ವತಂತ್ರವಾಗಿ ಹೋರಾಟಕ್ಕಿಳಿಯಲಾರವು. ಹದಿನೈದು ವರ್ಷಗಳ ಅವಧಿಯಲ್ಲಿ ಈ ಮಂಡಳ ತನ್ನ ಸದಸ್ಯರ ಪ್ರಗತಿಗಾಗಿ ವಿಶೇಷ ಆಸ್ಥೆಯಿಂದ ಕಾರ್ಯ ನಿರ್ವಹಿಸುತ್ತಿದೆ. ಸಂಘದ ಪ್ರತಿ ಸದಸ್ಯನೂ ನಿರ್ದಿಷ್ಟಪಡಿಸಿದ ವೇತನ ಪಡೆಯುತ್ತಾನೆ. ಕೆಲಸದ ಅವಧಿ ಹೆಚ್ಚಿನ ಅವಧಿಯ ದುಡಿತಕ್ಕೆ ಯೋಗ್ಯ ಪ್ರತಿಫಲ, ವೇತನದ ಶೀಘ್ರ ಬಟವಡೆ ಮಾಡುವದು, ಮುಂತಾದ ಆವಶ್ಯಕ ಸೌಲಭ್ಯಗಳನ್ನು ಸದಸ್ಯರುಗಳಿಗೆ ದೊರಕಿಸಿಕೊಡುವಲ್ಲಿ ಅದು ಯಶಸ್ವಿಯಾಗಿದೆ. ವಿವಿಧ ವಿಭಾಗಗಳಲ್ಲಿ ದುಡಿಯುವ ಕಾರ್ಮಿಕರು ಒಂದೇ ಸಂಘವನ್ನು ಕಟ್ಟಿಕೊಳ್ಳಬೇಕೆಂಬ ತತ್ವವನ್ನು ಅಕ್ಷರಶಃ ಪಾಲಿಸುತ್ತಿದ್ದಾರೆ. ಹಾಗು ಪ್ರತಿಯೊಬ್ಬನೂ ಸಂಘದ ಸದಸ್ಯನಿರಬೇಕೆಂಬ ನಿಯಮವಿದೆ. ಅದರಿಂದಾಗಿಯೇ ತಮ್ಮ ಬೇಡಿಕೆಗಳನ್ನು ಪೂರೈಸಿಕೊಳ್ಳಲು ಅವರಿಗೆ ಸಾಧ್ಯವಾಗಿದೆಯೆನ್ನಬಹುದು. ಚಿತ್ರರಂಗದ ಖ್ಯಾತನಟ ಶ್ರೀ ಮನಮೋಹನಕೃಷ್ಣ ಅವರು ಫೆಡರೇಷನ್ನಿನ ಅಧ್ಯಕ್ಷರಾಗಿದ್ದು ಕಳೆದ ಮೂರು ವರ್ಷಗಳಿಂದ ಸೇವೆ ಸಲ್ಲಿಸುತ್ತಿದ್ದಾರೆ. ಶ್ರೀ ವಸಂತ ಕುಲಕರ್ಣಿ ಕಾರ್ಯದರ್ಶಿಗಳಾಗಿದ್ದಾರೆ.



ಡಾಕ್ಟ್ರು ಏನಂದರು ಅಂತ ಕೇಳಿದೆಯಾ?
ನಾಡಿನೋಡಿ ಬಿಲ್ ಐವತ್ತಾಗುತ್ತೆ ಅಂದ್ರು
ಅಷ್ಟೇ....

ಪ್ರೆಸ್ ಕೌನ್ಸಿಲ್ ರಚಿಸಿದಂತೆ ರಾಷ್ಟ್ರೀಯ ಚಲನಚಿತ್ರ ಮಂಡಳವನ್ನು ರಚಿಸಿ, ಕಾರ್ಮಿಕರ ಹಿತರಕ್ಷಣೆ ಮಾಡಬೇಕು. ಚಿತ್ರರಂಗದಲ್ಲಿ ನಡೆಯುವ ಅನ್ಯಾಯಗಳನ್ನು ತಡೆಗಟ್ಟಲು ಕ್ರಮ ಯೋಜಿಸಬೇಕು. ಫ್ಯಾಕ್ಟರಿ ಆ್ಯಕ್ಟ್, ಶಾಪ್ ಆ್ಯಕ್ಟ ಮೊದಲಾದ ಕಾಯ್ದೆಗಳು ಚಲಚಿತ್ರರಂಗದ ನೌಕರರಿಗೂ ಅನ್ವಯಿಸಬೇಕು, ಸೇವಾ ಭದ್ರತೆ, ವಸತಿ ಸೌಕರ್ಯ, ಕನಿಷ್ಠ ವೇತನ ಮುಂತಾದ ಕಾರ್ಮಿಕ ಸಮಸ್ಯೆಗಳ ಬಗೆಗೆ ಸರಕಾರ ತೀವ್ರ ಕ್ರಮ ಕೈಕೊಳ್ಳಬೇಕೆಂದು ಆಗ್ರಹಪಡಿಸಿದೆಯಲ್ಲದೆ ಕಚ್ಚಾ ಫಿಲ್ಮ ಮೇಲಿನ ಕರಭಾರವನ್ನು ಕಡಿಮೆ ಮಾಡಿ ಹೆಚ್ಚು ಚಲನಚಿತ್ರಗಳ ತಯಾರಿಕೆಗೆ ನೆರವಾಗಬೇಕೆಂದು ಸರಕಾರವನ್ನು ಒತ್ತಾಯಪಡಿಸಿದೆ.

ಚಿತ್ರರಂಗದ ಏಳ್ಗೆಗಾಗಿ ಸರಕಾರ ಹಲವಾರು ಕಾಯ್ದೆಗಳನ್ನು ರಚಿಸಿದೆಯಾದರೂ ಅವುಗಳ ಕಾರ್ಯಾಚರಣೆ ಮಾತ್ರ ಸರಿಯಾಗಿ ಸಾಗುತ್ತಿಲ್ಲವೆಂಬುದು ವಿಷಾದದ ಸಂಗತಿ. ಸರಕಾರ ಈ ದಿಸೆಯಲ್ಲಿ ಹೆಚ್ಚು ಕಟ್ಟುನಿಟ್ಟಿನ ಕ್ರಮಗಳನ್ನು ಕೈಕೊಂಡು, ಚಿತ್ರರಂಗದ ಕಾರ್ಮಿಕರ ಜೀವನಮಟ್ಟ ಸುಧಾರಿಸುವಂತೆ ನೋಡಿಕೊಳ್ಳುವುದು ತುಂಬ ಅಗತ್ಯವಾಗಿದೆ.

***


ನೂತನ ವರ್ಷವು ಸರ್ವರಿಗೂ ಶುಭಪ್ರದವಾಗಲಿ !

VINA TILES

ನ್ಯೂ ಸಿಮೆಂಟ್ ಕಾಂಕ್ರೀಟ್ ವರ್ಕ್ಸ್

ಆಫೀಸ್ :— ಕೊಪ್ಪೀಕರ ರೋಡ್,
ಸಂಯುಕ್ತ ಕರ್ನಾಟಕ ಕಂಪೌಂಡ, ಹುಬ್ಬಳ್ಳಿ-೨೦ ಫೋನ್:— 4008
ಫ್ಯಾಕ್ಟರಿ:— ಜಯಚಾಮರಾಜ ನಗರ, ಹುಬ್ಬಳ್ಳಿ
ಫೋನ್ — 4580

● ಮಾರ್ಬಲ್ ಮೊಜ್ಯಾಕ್ ಟಾಯಿಲ್ಸ ● ಚಕರ್ಡ ಟಾಯಿಲ್ಸ್
ಮತ್ತು ಇತರ ● R. C. C. ವಸ್ತುಗಳ ತಯಾರಕರು

★★ PVS ★★★ PVS ★★★ PVS ★ ★ ★ PVS ★★★ PVS ★★★ PVS ★★★

"ಮಹಂತೋ ಜಾಯಂತೇ ಕ್ವಚನಶತ ಶ್ಯರತ್ಯರದಾಂ
ಅಗಣ್ಯಃ ಪೂರ್ವೇಷಾಂ ಅಜನಿ ಸುಕೃತೈಸ್ತೇ ಶುಭಜನಿ;
ಚಿರಂ ಹಿಂದುತ್ವಾತ್ಮಾ ನಭಸಿ ಕಿಲ ಬಭ್ರಾಮ ಸತತಂ
ಪರಂ ಲಬ್ಧ್ವಾಧಾರಂ ತ್ವಯಿ ಸ ಖಲು ವಿಶ್ರಾಂತಿ ಮುಗಮತ್"

—'ಶ್ರೀಮದ್ಭಗವದ್ಗೀತಾ'

ಈ ಭೂಮಿಯಲ್ಲಿ ಶತಮಾನಗಳಿಗನೇಕರು ಮಹಾತ್ಮರು ಹುಟ್ಟುತ್ತಾರೆ
ಹಿಂದೆಯೂ ಈ ಮಾತೆಯ ಸುಕೃತದಿಂದಾದ ಮಹಾತ್ಮರು ಅಗಣಿತ
ಆದರೂ ಹಿಂದುತ್ವದ ಆತ್ಮವು ಆಶ್ರಯಕ್ಕಾಗಿ ಆಕಾಶದಲ್ಲೆಲ್ಲಾ
ಅಲೆದು ಕೊನೆಗೆ ನಿನ್ನಲ್ಲಿ ಆಧಾರ ಪಡೆದು ಈಗ ಸಮಾಧಾನದಿಂದಿದೆ,



# P.V.S.

## Hall Mark of Quality BEEDIES since 1906

# MANGALORE P.V.S. BEEDIES

First to Celebrate Diamond Jubilee in Beedi Industry

SERVICE AND ENCOURAGEMENT THROUGH INDUSTRY

*Manufacturers :*

**P. V. S. BEEDIES PRIVATE LIMITED**

Regd. Office : KODIYALBAIL

Post Box No. 707,

MANGALORE-575003 (S. K.)

★★★ PVS ★★★ PVS ★★★ PVS ★ ★ ★ PVS ★★★ PVS ★★★ PVS ★★★

# ಪ್ರೇಕ್ಷಕನ ನಾಡಿ ಬದಲಾಗುತ್ತಿದೆ?

"ಕಾಲಾಯ ತಸ್ಮೈ ನಮಃ" ಇದಕ್ಕೆ ನಮ್ಮ ಭಾರತೀಯ ಚಿತ್ರರಂಗ ಹೊರತಾಗಿಲ್ಲ. ಕಾಲಕ್ಕೆ ತಕ್ಕಂತೆ ಪ್ರೇಕ್ಷಕರ ಅಭಿರುಚಿಗಳಲ್ಲೂ ವೈವಿಧ್ಯತೆ ಮೂಡಿ ನಿಲ್ಲುತ್ತದೆ. ಇದರಿಂದಾಗಿ ಪ್ರೇಕ್ಷಕ, ಚಿತ್ರನಿರ್ಮಾಪಕನಿಗೆ ಒಗಟಾಗಿ ನಿಲ್ಲುತ್ತಾನೆ. ಎರಡು ದಶಕದ ಹಿಂದೆ ಪೌರಾಣಿಕ ಚಿತ್ರಗಳೇ ಪ್ರೇಕ್ಷಕರ ಸಹಾನುಭೂತಿಯ ಕಕ್ಷೆಯಲ್ಲಿದ್ದವು. ಹರಹರ ಮಹಾದೇವ, ಶ್ರೀ ಕೃಷ್ಣಾರ್ಜುನ ಯುದ್ಧ, ಶಿವಶಕ್ತಿ, ವೀರ ಅರ್ಜುನ ಮುಂತಾದ ಪೌರಾಣಿಕ ಹಿಂದೀ ಚಿತ್ರಗಳು ಪ್ರೇಕ್ಷಕ ವರ್ಗವನ್ನು ಸಂಪೂರ್ಣವಾಗಿ ತಮ್ಮ ಹಿಡಿತದಲ್ಲಿಟ್ಟುಕೊಂಡು ಹಣ–ಕೀರ್ತಿ ಗಳಿಸಿದವು. ಹಾಗೆಯೇ ಈ ಚಿತ್ರಗಳಲ್ಲಿ ದೇವ–ದೇವತೆಯರಾಗಿ ಮೆರೆದ ನಟವರ್ಗವನ್ನು ಜನತೆ ಪೂಜಿಸಿದರು. ತ್ರಿಲೋಕ ಕಪೂರ, ನಿರೂಪಾ ರಾಯರಂತಹ ನಟನಟಿಯರನ್ನು ಪ್ರೇಕ್ಷಕ ವರ್ಗ ಕೀರ್ತಿಶಿಖರಕ್ಕೇರಿಸಿತು.

ಆದರೆ ಪೌರಾಣಿಕ ಚಿತ್ರಗಳು ಕಾಲ ಬದಲಾದಂತೆ ಪ್ರೇಕ್ಷಕರಿಂದ ಸೋಲಿಸಲ್ಪಟ್ಟವು. ಆದಾಗಲೇ ಮೆಲ್ಲನೆ ಮೇಲೆದ್ದು ಜನ ಮನರಂಜಿಸುವ ಐತಿಹಾಸಿಕ ಹಿನ್ನೆಲೆ ಹೊಂದಿದ ಚಿತ್ರಗಳು ಪ್ರೇಕ್ಷಕರ ಕೃಪಾದೃಷ್ಟಿಯನ್ನುಗಳಿಸಿ ನಿಲ್ಲಲು ಸಮರ್ಥವಾದವು. ವೀರ ಪೃಥ್ವಿರಾಜ, ಚವ್ಹಾಣ, ಆನಂದಮಠ, ದುರ್ಗೇಶ ನಂದಿನಿ, ಅನಾರಕಲಿ ಮುಂತಾದವುಗಳು ವಿಶೇಷತಃ ತರುಣರನ್ನಾಕರ್ಷಿಸಿ ಅವರಿಗೆ ಮನೋರಂಜನೆಯ ಜತೆಗೆ ಐತಿಹಾಸಿಕ ಜ್ಞಾನವನ್ನೂ ನೀಡಿ ಸೈ ಎನಿಸಿಕೊಂಡವು. ಆದರೆ ಕೊನೆಗೊಮ್ಮೆ ಸಿನೆಮಾ ಪ್ರಿಯರು ಐತಿಹಾಸಿಕ ಚಿತ್ರಗಳಿಗೂ ವಿದಾಯ ಹೇಳಿ ಸಾಮಾಜಿಕಕ್ಕೆ ಒಲಿದುಬಂದರು. ಕೌಟುಂಬಿಕ ಜೀವನವನ್ನು ಪ್ರತಿನಿಧಿಸುವ ಚಿತ್ರಗಳು ಅವರ ಮನಸ್ಸನ್ನು ಸೆರೆಹಿಡಿದು ನಿಂತವು. ನಿರ್ಮಾಪಕ ನಿರ್ದೇಶಕರ ಕಣ್ಣು ಸಹಜವಾಗಿ ಆ ಕಡೆ ತಿರುಗಿದವು. ಸಾಮಾಜಿಕ ಚಿತ್ರಗಳ ಸರಮಾಲೆ ಪ್ರಾರಂಭವಾಯಿತು. ಘರಾನಾ, ಘುಂಘಟ್, ಜಿಂದಗಿ, ಮೈ ಚುಪ್ ರಹೂಂಗಿ, ಮೈ ಭೀ ಲಡಕೀ ಹೂಂ, ಏಕಹೀ ರಾಸ್ತಾ ಮುಂತಾದವುಗಳು ಹೆಸರು ಮಾಡಿ ಭಾಗ್ಯಲಕ್ಷ್ಮಿಯನ್ನೊಲಿಸಿಕೊಂಡ ಚಿತ್ರಗಳು. ಪೌರಾಣಿಕ, ಐತಿಹಾಸಿಕ ಚಿತ್ರಗಳ ಸಮಾಧಿ ಕಟ್ಟಿ ಹುಟ್ಟಿಕೊಂಡ ಈ ಚಿತ್ರಗಳಿಗೆ ಸ್ಪರ್ಧಿಗಳಿರದಿದ್ದರೂ, ಆಗ ಹುಟ್ಟಿ ಬರುತ್ತಿದ್ದ ಸಾಮಾಜಿಕ ನಾಟಕಗಳನ್ನು ಇವು ಸ್ವಲ್ಪ ಮಟ್ಟಿಗೆ ಎದುರಿಸಬೇಕಾಗಿ ಬಂತು. ಕೌಟುಂಬಿಕ ಜೀವನವನ್ನು ಕಥಾವಸ್ತುವನ್ನಾಗಿರಿಸಿಕೊಂಡ ನಾಟಕಗಳು ಪ್ರೇಕ್ಷಕರನ್ನು ತೃಪ್ತಿಪಡಿಸುತ್ತಿದ್ದವಾದರೂ ಕೊನೆ ಬೆಂಚಿನ ಜನ ಸಾಮಾನ್ಯರನ್ನು ಹಿಡಿದಿಟ್ಟುಕೊಳ್ಳುವಂತಹ ಆಕರ್ಷಣೆ ನಾಟಕಗಳಲ್ಲಿರಲಿಲ್ಲ. ಮುಂದಿನ ಕುರ್ಚಿಯವರಿಗೆ ನಾಟಕ–ಕಥಾವಸ್ತು ಕಲೆ ಎಲ್ಲ ಅರ್ಥವಾಗಿ ಶಹಭಾಸ್ ಎಂದರೂ ಗಲ್ಲಾ ಪೆಟ್ಟಿಗೆಯು ನಾಟಕ ಕಂಪನಿಗಳಿಗೆ ಪ್ರೋತ್ಸಾಹದಾಯಕವಾಗಿರಲಿಲ್ಲ. ಇನು



"ನಾನಿನ್ನೂ ಯುವಕನೇ" ಎನ್ನುವ ದೇವ್



ರೇಖಾಳ ಎದೆಯ ಮೇಲೊರಗಿರುವ ಧರ್ಮೇಂದ್ರ ಈ ದೃಶ್ಯ ಕಂಡು ಚಿತ್ರರಸಿಕರು ಕುಣಿಯಲಾರರೇ?

ಹಳ್ಳಿಗರಿಗಾಗಿಯೇ ಹುಟ್ಟಿಕೊಂಡ ನಾಟಕಗಳನ್ನಾಡಲು ಗ್ರಾಮೀಣ ಕಲಾವಿದರಿಗೆ ಭರಿಸಲಸಾಧ್ಯವಾದ ವೆಚ್ಚ ಬರುತ್ತಿತ್ತು. ಇದರಿಂದಾಗಿ ಸಿನೇಮಾರಂಗ ತಾನೇ ತಾನಾಗಿ ಮೆರೆಯಬೇಕಾಯಿತು. ಸಾಧಾರಣವಾಗಿ ಎಲ್ಲ ವರ್ಗಗಳಿಗೂ ಮನೋರಂಜನೆಯನ್ನು ನೀಡುವಂತಹ ಚಿತ್ರಗಳತ್ತ ನಿರ್ಮಾಪಕರು ಕಣ್ಣು ಹರಿಸಿದರು. ಅಲಿಬಾಬಾ ಚಾಲಿಸ್ ಚೋರ್, ಅಲ್ಲಾವುದ್ದೀನ್ ಆ್ಯಂಡ್ ವಂಡರ್‌ಫುಲ್ ಲ್ಯಾಂಪ್, ಚಿರಾಗ–ಎ–ಚಿನ್ ಮುಂತಾದ ಚಿತ್ರಗಳು ಎಲ್ಲ ವರ್ಗವನ್ನು ತಣಿಸಬಲ್ಲೆವೆಂಬ ವಿಶ್ವಾಸದಿಂದ ಮುಂದೆ ಬಂದವಾದರೂ ಅವುಗಳಿಗೆ ಮೇಲ್ವರ್ಗದ ಜನರ ಸಹಾನುಭೂತಿ ಸಿಗಲಿಲ್ಲ. ಮಧ್ಯಮ ವರ್ಗಗಳು ಕೊಟ್ಟ ಪ್ರೋತ್ಸಾಹದಿಂದಲೇ ಈ ಚಿತ್ರಗಳು ಅಪಾರ ಹಣ ಗಳಿಸಿದುದರಿಂದ ನಿರ್ಮಾಪಕರಿಗೆ ಹಾನಿಯ ಭಯವೇನೂ ಇರಲಿಲ್ಲ.

ಈ ಅವಧಿಯಲ್ಲಿ ಪ್ರೇಕ್ಷಕರ ಅಭಿರುಚಿಯ ಹಿಡಿತ ಚಿತ್ರನಿರ್ಮಾಪಕರಿಗೆ ಸಿಕ್ಕಿರಬೇಕು. ಅದ್ದೂರಿ ಸೆಟ್ಟು, ಸಂಗೀತ, ಬಣ್ಣದ ಬೆಳಕು ಪ್ರೇಕ್ಷಕರಿಗೆ ಇವೇ ಸಾಕು ಎನಿಸಿರಬೇಕು. ಕೌಟುಂಬಿಕ ಚಿತ್ರಗಳಿಂದ ಜನರನ್ನೆಳೆದು ವೈವಿಧ್ಯ ತೋರಿಸಿ ಹಣ ಗಳಿಸಬೇಕೆಂದು ನಿರ್ಮಾಪಕರ ತಂತ್ರಗಳು ಫಲಕಾರಿಯಾದವು. ಈ ದೃಷ್ಟಿಯಿಂದ "ಫರ್ಜ" ಸಾಫಲ್ಯತೆಯ ಶಿಖರ ಮುಟ್ಟಿತು. ಜೊತೆಗೆ ಜಿತೇಂದ್ರನನ್ನು ಅತೀ ಎತ್ತರಕ್ಕೇರಿಸಿ ನಿಲ್ಲಿಸಿತು. ಇದಕ್ಕಾಗಿ ಹಾಕಿದ ಅಪಾರ ಹಣ ಮೋಸ ಮಾಡಲಿಲ್ಲ. ಪ್ರೇಕ್ಷಕರ ಮನಸ್ಸಿನಿಂದ 'ಫರ್ಜ' ಚಿತ್ರವನ್ನು ಮರೆಮಾಡಿ ಮೆರೆದ "ಜಾನಿ ಮೇರಾ ನಾಮ್" ಮೊದಲಿನಕ್ಕಿಂತಲೂ ಹೆಚ್ಚು ವಿಕ್ರಮ ಸ್ಥಾಪಿಸಿ ನಿಂತಿತು. ಪ್ರೇಕ್ಷಕ ವರ್ಗ, ಕಥೆಗಿಂತಲೂ ಮಟನೆಗೆ ಪ್ರಾಧಾನ್ಯ ಕೊಟ್ಟಿತು,

ಈ ಚಿತ್ರಗಳಿಂದಾಗಿ ಪ್ರೇಕ್ಷಕ ವರ್ಗ ಕಪ್ಪು–ಬಿಳುಪು ಚಿತ್ರಗಳಿಗೆ ಶರಣು ಹೊಡೆದು ಬಣ್ಣದ ಬೆಳಕಿನತ್ತ ಧಾವಿಸಿ ಬಂತು. ಅರ್ಥವಿಲ್ಲದ ಕಥೆ ಇದ್ದರೂ ಪರದೇಶದ ಎರವಲು ದೃಶ್ಯಕ್ಕೆ ಬಾಯಿ ಬಿಟ್ಟಿತು. ಸುಂದರ ನಿಸರ್ಗ ದೃಶ್ಯ ಬಯಸಿ ಕುಳಿತಿತು. ಸಾಂಕೇತಿಕ ಪ್ರೇಮದೃಶ್ಯಗಳಿಗಿಂತಲೂ ಅಪ್ಪಿ ಮುದ್ದಾಡುವ ಅಶ್ಲೀಲಕ್ಕೆ ಮಾರು ಹೋಯಿತು. ಎಲ್ಲವೂ ಒಂದೇ ಚಿತ್ರದಲ್ಲಡಕವಾಗಿರದಿದ್ದರೂ, ಈ ಮೇಲಿನದನ್ನೇ ಪ್ರಾಧಾನ್ಯವಾಗಿಟ್ಟುಕೊಂಡ ವಿವಿಧ ಬಗೆಯ ಚಿತ್ರಗಳು ಬೆಳ್ಳಿಪರದೆಗೆ ಬಂದುವು. ಅಪರಾಧ, ಬೇ ಇಮಾನ್, ದೋ ಯಾರ್, ರಾಮಪುರಕಾ ಲಕ್ಷ್ಮಣ್, ಸಚ್ಚಾ ಝೂಟಾ, ಮೇರಾ ಗಾಂವ ಮೇರಾ ದೇಶ್, ವಿಕ್ಟೋರಿಯಾ ನಂ ೨೦೩, ಸಮಾಧಿ, ಜಂಜೀರೆ, ಜುಗ್ನು, ಮುಂತಾದವುಗಳು ಇಲ್ಲಿ ಎತ್ತಿ ತೋರಿಸಬಲ್ಲಂತಹ ಹಣ ಗಳಿಕೆಯ ಚಿತ್ರಗಳು.

ಈ ಎಲ್ಲ ಚಿತ್ರಗಳಲ್ಲಿಯೂ ಲೋಪ ದೋಷಗಳಿಲ್ಲದಿಲ್ಲ. ನಮ್ಮ ಸಿನೆಮಾ ಪ್ರೇಮಿಗಳಿಗೆ ಮನೋರಂಜನೆಯೇ ಮೂಲವಾಗಿರುವುದರಿಂದ ಅವು ಗಮನಾರ್ಹವಲ್ಲ. ಹಲವು ಚಿತ್ರಗಳು ನಾಯಕ ನಾಯಕಿಯ ಮೇಲೆ ನಿಂತು



ಚಿತ್ರರಂಗದ ದೇವಿ ನಿರುಪಾರಾಯ್ ಚಿತ್ರಪ್ರೇಮಿಗಳನ್ನು ಆಕರ್ಷಿಸುವ ನೃತ್ಯಭಂಗಿಯಲ್ಲಿ



ಅರೆತೆರೆದ ದೇಹ ತೋರಿ ರಸಿಕರನ್ನು
ಮರುಳುಗೊಳಿಸುತ್ತಿರುವ ಯೋಗಿತಾ

ಹಣ ತಂದರೆ ಇನ್ನು ಹಲವು ಸಂಗೀತ–ದೃಶ್ಯಗಳಿಂದ ಶ್ರೀಮಂತವಾದವು. ಒಳ್ಳೆಯ ಕಥಾವಸ್ತುವಿನ ಚಿತ್ರಗಳು ಇನ್ನು ಸಾಧ್ಯವಿಲ್ಲವೆಂದು ಕೆಲ ಪ್ರೇಕ್ಷಕವರ್ಗ ಭಾವಿಸಿದಾಗ "ಆನಂದ" ಮೂಡಿ ಬಂತು. ಎಲ್ಲ ವರ್ಗಕ್ಕೂ ಆದರ್ಶವಾದ ಈ ಚಿತ್ರ ರಾಜೇಶ್ ಖನ್ನಾನ ಇನ್ನೊಂದು ಮುಖ ತೋರಿಸಿ, ಅಮಿತಾಭನಿಗೆ ಹೆಸರು ಕೊಟ್ಟು, ದುಡ್ಡನ್ನು ಗಿಟ್ಟಿಸಿಕೊಂಡಿತಲ್ಲದೇ ಅನುಭವ, ಫಿರ್ ಭಿ, ದಸ್ತಕ್, ಸ್ವೀಕಾರ್, ಮತ್ತು ಅಭಿಮಾನದಂತಹ ಚಿತ್ರಗಳ ಉಗಮಕ್ಕೆ ಕಾರಣವಾಯಿತು ಇಲ್ಲಿ ಸಿನಿಮಾ ಪ್ರಿಯರ ಅಭಿರುಚಿಯಲ್ಲಿ ಸ್ವಲ್ಪ ಮಾರ್ಪಾಡಾಯಿತು. ಆವರೆಗೆ ಲೈಂಗಿಕ ದೃಶ್ಯಗಳು ಬೇಕಾದುದನ್ನು ನಿರ್ಮಾಪಕ ವರ್ಗ ಗಮನಿಸಿರಬೇಕು. ಅಂತೆಯೇ ಬಿ. ಆರ್. ಇಶಾರಾರು ತಮ್ಮ ಪ್ರಾಯೋಗಿಕ ಚಿತ್ರ "ಚೇತನಾ"ವನ್ನು ಅಂಜಂಜುತ್ತಲೇ ತೆರೆಗೆ ತಂದರು. ಅಂಜಿಕೆ ಬಹು ದಿನಗಳುಳಿಯಲಿಲ್ಲ. ವಯಸ್ಕರಿಗಾಗಿ ಎಂದು ಮಾನ್ಯತೆ ಪಡೆದ ಚಿತ್ರವೆಂದೇ ಪ್ರೇಕ್ಷಕರು ಸಿನೆಮಾ ಗೃಹದ ಜೊತೆಗೆ ಬುಕ್ಕಿಂಗ ಆಫೀಸಿನ ಬೊಕ್ಕಸವನ್ನೂ ತುಂಬಿದರು. ಇದರಲ್ಲಿ ನಟಿಸಿದ ರೆಹನಾ ಸುಲ್ತಾನ ಸಿನೆಮಾ ಪ್ರಿಯರ ಕನಸಿನಕನ್ನೆಯಾದಳು. ಎದ್ದು ಕಾಣುವ ಅವಳ ಅಂಗಸೌಷ್ಠವ ಆ ಚಿತ್ರಕ್ಕಾಗಿಯೇ ನಿರ್ಮಾಣಗೊಂಡಂತಿದ್ದರಿಂದ 'ಚೇತನಾ' ಮೇಲೇರಿತು. ಇನ್ನುಳಿದ ನಿರ್ಮಾಪಕರ ಕಣ್ಣು ಕುಕ್ಕಿತು. ಪ್ರೇಕ್ಷಕ ವರ್ಗದ ಲೈಂಗಿಕ ಚಿತ್ರಗಳ ಬಯಕೆಗೆ 'ತಥಾಸ್ತು' ಎಂದ ನಿರ್ಮಾಪಕರು ಹೊಸ ಹೊಸ ಚಿತ್ರಗಳನ್ನು ಕೈಗೆತ್ತಿಕೊಂಡರು. ಪರಿಣಾಮ ರಾಮ ದಯಾಳರ "ದೋ

## ರಮೇಶ ಕೆರೂರ

ರಾಹ್" ಪ್ರೇಕ್ಷಕರ ಪಾಲಿಗೆ. "ಲಾಖೊಮೆ ಏಕ"ದ ಹೆಣ್ಣು ರಾಧಾ ಸಲೂಜಾ 'ದೋರಾಹ' ಚಿತ್ರದ ನಗ್ನ ತಾರೆ. ನಾಯಕಮಣಿ. ಸಿನೇಮಾ ಪ್ರಿಯರು ಇವಳ ಚಿತ್ರಕ್ಕೂ ಸೀಟಿ ಹಾಕಿದರು. ಒಂದೆಡೆ ಈ ಚಿತ್ರ "ಸಮರ್–೪೨" ಎಂಬ ಹಾಲಿವುಡ್ ಚಿತ್ರವನ್ನೂ ಮೀರಿಸಿತು. ಭಾರತೀಯ ಚಿತ್ರರಂಗ ಲೈಂಗಿಕದಲ್ಲಿಯೂ ಹಿಂದೆ ಇಲ್ಲ ಎಂಬುದನ್ನು 'ದೋರಾಹ' ಸಾರಿತು. ಮದ್ರಾಸ್‌ನಂತಹ ಹಿಂದೀ ಭಾಷಾ ವಿರೋಧಿ ಪ್ರದೇಶದಲ್ಲೂ ೧೦೦ ದಿನಗಳ ಮಹೋತ್ಸವವನ್ನಾಚರಿಸಿತು. ಇನ್ನು ನಿರ್ಮಾಪಕರಿಗೆ "ಎ" ಸರ್ಟಿಫಿಕೇಟು ದೊರೆಯಲಿಲ್ಲ ಚಿತ್ರಗಳನ್ನು ತೆರಗೆ ಸರಿಸಬೇಕೆಂಬುದೇ ಚಿಂತೆ. ಚಿಂತೆ ಕಾರ್ಯ



ಕುಂಡುಚಡ್ಡಿಯ ಯುವತಿ ತೋಳತೆಕ್ಕೆಯಲ್ಲಿ



ರೂಪದಲ್ಲಿ ಪರಿವರ್ತನೆಗೊಂಡು, ಜರೂರತ್, ಯೌವನ ಪರಿವರ್ತನ ಮುಂತಾದವು ಮೂಡಿ ಧಿಡೀರನೆ ತೆರೆಗೆ ಬಂದವು. ವಯಸ್ಸಿಗೆ ಬಂದ ಹೆಂಗಳೆಯ ಅಂಗಾಂಗ ಪ್ರದರ್ಶನವನ್ನೇ ತನ್ನ ಮೂಲೋದ್ದೇಶವಾಗಿಟ್ಟು ಕೊಂಡ ಈ ಲೈಂಗಿಕ ಚಿತ್ರಗಳು ಹಣದ ಹೊಂತಾಗಿ ಮತ್ತೇನನ್ನೂ ಗಳಿಸುವುದಿಲ್ಲ. ಸೆನ್ಸಾರದ ಕಣ್ಣಿಗೆ ಮಣ್ಣಾಗಿ ಹೇಗೋ ಪಾರಾಗಿ ಬಂದ ಈ ಚಿತ್ರಗಳು ವೈಚಾರಿಕರಿಗೆ ಮಾಡಿದ ಬೇಸರ ಅಷ್ಟಿಷ್ಟಲ್ಲ. ತರುಣರನ್ನು ದುರ್ಬಲತೆಯ ಹಾದಿ ಹಿಡಿಸುವ ಇಂತಹ ಚಿತ್ರಗಳನ್ನು ವಿರೋಧಿಸಿದ ಹಿಂದಿನ ವಾರ್ತಾ ಹಾಗೂ ಪ್ರಸಾರ ಶಾಖೆಯ ಮಂತ್ರಿ, ನಂದಿನಿ ಸತ್ಪತಿಯವರು ಇವುಗಳ ಮೇಲೆ ಆಗಲೇ ಗದೆ ಎತ್ತಿ ಸುಮ್ಮನಿರಿಸಿದ್ದರು. ಅದೇ ಶಾಖೆಯ ಈಗಿನ ಮಂತ್ರಿ ಶ್ರೀ ಗುಜರಾಲರೂ ಕೂಡ ಕಟು ಧೋರಣೆ ಅನುಸರಿಸಿದ್ದಾರೆ. ಮೇಲ್ಕಾಣಿಸಿದ ಈ ಲೈಂಗಿಕ ಚಿತ್ರಗಳು ತೆರೆಗೆ ಬಂದ ನಂತರ ಎಚ್ಚೆತ್ತ ಸೆನ್ಸಾರ ಮಂಡಳಿಯು ಈಗೀಗ ತನ್ನ ಕತ್ತರಿಯನ್ನು ಹರಿತಗೊಳಿಸಿ ಕುಳಿತಿದೆ. ಮೊದಲ ಚಿತ್ರಗಳು ಮಾಡಿದ ತಪ್ಪಿಗೆ ಕೀಮತ್, ಪ್ರಭಾತ್, ಮುಂತಾದ ಚಿತ್ರಗಳು ಶಿಕ್ಷೆ ಅನುಭವಿಸಿದವು. ಸೆನ್ಸಾರ್ ಮಂಡಳಿಯ ಕೈಯಲ್ಲಿ ವಿದ್ರೂಪಗೊಂಡು ಹೊರಬಂದಾಗ ಈ ಚಿತ್ರಗಳ ನಿರ್ಮಾಪಕರು ಹೌಹಾರಿ ಎದೆಯೊಡೆದುಕೊಂಡಿದ್ದರು. ಆದರೆ ಸಿನೇಮಾ ನೋಡುವುದನ್ನೇ ತಮ್ಮ ಮೂಲ ಉದ್ದೇಶವಾಗಿಟ್ಟುಕೊಂಡ ಸಿನಿಪ್ರಿಯರು ಈ ಚಿತ್ರಗಳನ್ನೂ ಗೆದಿಸಿಕೊಟ್ಟರು. ಅಂದ ಮೇಲೆ ನಮ್ಮವರಿಗೆ ಬೇಕಾದದ್ದು ಕೇವಲ ಮನೋರಂಜನೆ, ಕಥೆ ಬೇಡ, ಉತ್ತಮಾಂಶ ಬೇಡ. ಅಂದ ಮಾತ್ರಕ್ಕೆ ಉತ್ತಮ ಚಿತ್ರಗಳು ಇವರಿಗೆ ಬೇಡವೆಂದಲ್ಲ. ಕೋಶಿಶ್, ಅಭಿಮಾನ, ಅನುರಾಗದಂತಹ ಚಿತ್ರಗಳಿಗೆ ಯಥಾಪ್ರಕಾರ ಪ್ರೋತ್ಸಾಹ ಕೊಟ್ಟು ಸಲುಹಿದರು.

ಒಂದು ರೀತಿಯಿಂದ ಸೆನ್ಸಾರದವರು ಲೈಂಗಿಕ ಇನ್ನಿತರ ಚಿತ್ರಗಳಿಗ ಕೈಯಾಡಿಸದ ಕತ್ತರಿ ಕೆಲಸ ಸ್ಟರ ಒಳಿತು. ಆದರೆ ಕತ್ತರಿ ಹಿಡಿದಿದ್ದಕ್ಕೆ ಕೂಡುವ ಕಾರಣ ಅಷ್ಟು ಸಮಂಜಸವೇ ಎಂಬ ಅನುಮಾನ ಬರುವುದು. "ಕೆಲ ಕೆಳ ವರ್ಗದ ಚಿತ್ರಗಳೇ ಜನರನ್ನು ಕಳ್ಳಕಾಕತನ ಸುಳ್ಳು-ಮೋಸತನಕ್ಕೆ ಹಚ್ಚುತ್ತದೆ" ಎಂಬುದು ಸೆನ್ಸಾರದವರ ವಾದವಾದರೂ ಈ ವಾದ ಸತ್ಯದ ಸಮೀಪಕ್ಕಿದೆ ಎಂಬುದು ನಂಬಲು ಕಷ್ಟ. ಆದರೂ ಕೆಲ ನಿರ್ಮಾಪಕರಿಗೆ ಸೆನ್ಸಾರದವರು ಭಯವಿಲ್ಲದೆ ಚಿತ್ರವನ್ನು ಮಾಡಿ ಕೂಡಿಸುತ್ತಾರೆ. ಈ ಹಿಂದೀ ಚಿತ್ರಗಳು ಇಂಗ್ಲೀಷ್ ಚಿತ್ರಗಳಿಂದ ಸ್ಫೂರ್ತಿಗೊಂಡಿವೆ ಎಂದು ನಿಶ್ಚಯವಾಗಿ ಹೇಳುತ್ತೇವೆ. ನಿಜ. ಆದರೆ ಇಂಗ್ಲೀಷ್ ಮತ್ತು ಸ್ವಂತ ಚಿತ್ರಪ್ರೇಮಿಗಳನ್ನು ಸೆಳೆದುಕೊಳ್ಳಲು ಅವರು ಮಾಡಿದ ಈ ತಂತ್ರಕ್ಕೆ ನಾವು ಮೆಚ್ಚಿಗೆ ಸೂಚಿಸಬೇಕಾಗಿದೆ. ಹಾಗೆ ನೋಡಿದರೆ ಹಿಂದೀ ಚಿತ್ರರಂಗ ಹೊಸ ಹೊಸ ಯುಕ್ತಿ ಕುಯುಕ್ತಿಗಳನ್ನು ಮಾಡುತ್ತಿರುವುದಕ್ಕಾಗಿಯೇ ಪ್ರೇಕ್ಷಕರ ಬೆಂಬಲವನ್ನು ಪಡೆಯುತ್ತವೆ. ಭಾರತೀಯ ಯಾ ಇನ್ನಿತರ ಯಾವುದೇ ಭಾಷೆಯ ಉತ್ತಮ ಚಿತ್ರಗಳನ್ನೂ ಹಿಂದೀ ಚಿತ್ರರಂಗ ತಾನು ಅನುವಾದಿಸಿ ಜಯ ಪಡೆಯುತ್ತದೆ. ಈಗೀಗ ಅದು ಕನ್ನಡ ಚಿತ್ರಗಳನ್ನು ಕೈಗೆತ್ತಿಕೊಂಡು ಅನುವಾದಿಸಿಕೊಳ್ಳುತ್ತಿದೆ. ಈ ಹಿಂದೆ ಕನ್ನಡ "ಎಮ್ಮೆ ತಮ್ಮಣ್ಣ" ಚಿತ್ರವನ್ನು 'ಜಿಗ್ರಿದೋಸ್ತ್' ಮಾಡಿ ಭಾರತದಾದ್ಯಂತ ಪ್ರದರ್ಶಿಸಿ ಪ್ರಸಿದ್ಧಪಡಿಸಿತು. ಹಾಗೆಯೇ ಇನ್ನೂ ಹಲವು ಕನ್ನಡ ಚಿತ್ರಗಳನ್ನದು ಅನುವಾದಿಸಿ ಗೆಲಿಸಿದ್ದುದೂ ಪ್ರೇಕ್ಷಕರು ಮರೆತಿಲ್ಲ. ಈಗ ಕನ್ನಡದ ಯಶಸ್ವೀ "ನಾಗರ ಹಾವು" ಹಿಂದಿಯಲ್ಲಿ "ಜಹ್ರೀಲಾ ಇನ್ಸಾನ್" ಎಂದು ಚಿತ್ರಿಸಿಕೊಳ್ಳುತ್ತಿದೆ. ಈ ಬಗ್ಗೆ ಅದರ ನಿರ್ಮಾಪಕ ವೀರೇಂದ್ರ ಸಿನ್ಹರನ್ನು ನಾನು ಭೇಟಿಯಾಗಿ ಮಾತನಾಡಿದಾಗ "ಈ ಜಹ್ರಿಲಾ ಇನ್ಸಾನ್" ನನಗೆ ಹಣ-ಕೀರ್ತಿ ತಂದು ಕೊಡುವುದೆಂದು ನಿರ್ಧಾರದಿಂದ ನುಡಿದರು. ಅದೇ ರೀತಿಯಾಗಿ ಹಿಂದೀ ಚಿತ್ರದ ದೋರಾಹ, ರಿಕ್ಷಾವಾಲಾ, ಪ್ರೇಂನಗರ, ಇನ್ನಿತರ ಭಾಷೆಗಳಿಗೆ ಅನುವಾದಗೊಳ್ಳುತ್ತಲಿವೆ. ಹಿಂದೀ ಚಿತ್ರರಂಗದ ಮತ್ತೊಂದು ತಂತ್ರ 'ಡಬ್ಬಿಂಗ್' ಮಾಡುವುದು. ಹಾಗೆ ಇತರ ಭಾಷಾ ಚಿತ್ರಗಳನ್ನು ಡಬ್ಬಿಂಗ್ ಮಾಡಿದಾಗ ಸೋಲುಂಟಾದುದು ಕಡಮೆ. ಸಂಪೂರ್ಣ ರಾಮಾಯಣ, ಏಜಂಟ್ ೯೯೯, ಆಪರೇಷನ್ ಜಾಕಪಾಟ್, ರಿವಾಲ್ವರ್ ರಾಣಿ, ಜಾನಿ ಉಸ್ಕಾ ನಾಮ್, ಇವು ಉದಾಹರಣೆಗಾಗಿ ನಿಲ್ಲಬಲ್ಲ ಚಿತ್ರಗಳು.

ಇಂಗ್ಲೀಷಿನಿಂದ ಪ್ರಭಾವಿತವಾದ ಹಿಂದೀ ಚಿತ್ರರಂಗ ತನ್ನದೇ ಕೆಲವು ಪತ್ತೇದಾರಿ ಚಿತ್ರಗಳನ್ನು ತೆಗೆದು ಸೈ ಎನ್ನಿಸಿಕೊಂಡಿತು. ಈ ದಿಸೆಯಲ್ಲಿ 'ಹಮ್‌ರಾಜ್' ಮತ್ತು 'ಕಾನೂನ' ಚಿತ್ರಗಳು ಮಾಡಿದ ಹಣದ ವಿಕ್ರಮವನ್ನು ಮುರಿಯಲು ಕೆಲ ಉತ್ತಮ ಚಿತ್ರಗಳಿಗೂ ಸಾಧ್ಯವಾಗಲಿಲ್ಲ. ಇತ್ತೀಚಿನ "ಧುಂದ್" ಕೂಡ ನಿರೀಕ್ಷಣೆ ಮಟ್ಟಕ್ಕಿಂತ ಹುಚ್ಚು ದುಡ್ಡು ಗಿಟ್ಟಿಸಿಕೊಂಡಿತು. ಕೆಲವು ಚಿತ್ರಗಳಿಗೆ ಹಲವು ಪ್ರದೇಶಗಳ ಪ್ರೇಕ್ಷಕರ ಬೆಂಬಲ ಮಾತ್ರ ಉಂಟು. ಅದಕ್ಕಾಗಿಯೇ ಅನುಭವ, ದಸ್ತಕದಂತಹ ಚಿತ್ರಗಳು ಕೆಲವೆಡೆ ತುಂಬಿದ ಗೃಹದಲ್ಲಿ ಪ್ರದರ್ಶಿತಗೊಂಡರೆ ಇನ್ನೂ ಹಲವೆಡೆ ಒಂದೆರಡು ವಾರದಲ್ಲೇ ಥಿಯೇಟರಿನಿಂದ ಹೊರಗೆ ಬಂದು ಕುಳಿತವು.

'ಬಾಂಬೆ ಟು ಗೋವಾ' ಚಿತ್ರವು ಮುಂಬಯಿ, ಬಂಗಾಲದಲ್ಲಿ ನಡೆದಷ್ಟು ದಿನ ಉಳಿದ ಪ್ರದೇಶಗಳಲ್ಲಿ ನಡೆಯಲಿಲ್ಲ.


ನಿಮ್ಮ ನೆಮ್ಮದಿಗೆ ಹೇನು ಆತಂಕ ತಾರದಿರಲಿ!



ಹೇನು ಸ್ತ್ರೀಯರಿಗೂ ಮಕ್ಕಳಿಗೂ ಒಂದು ಪೀಡೆಯೇ ಸರಿ. ಹೇನನ್ನು ಕೆಟ್ಟದೆಂದು ಪರಿಗಣಿಸಿದರೆ, ಅದನ್ನು ನಿವಾರಿಸಲು ವಿಷಕಾರಿ ಪೌಡರನ್ನು ಉಪಯೋಗಿಸುವುದು ಇನ್ನೂ ಕೆಟ್ಟದು!

ಕೇವಲ ನೈರ್ಮಲ್ಯದಿಂದ ಮಾತ್ರ ಹೇನನ್ನು ನಿವಾರಿಸಲಾಗುವುದಿಲ್ಲ. ಶಾಲೆಯಲ್ಲಿ ಇತರ ಮಕ್ಕಳ ಒಡನಾಟದಿಂದ ನಿಮ್ಮ ಮಕ್ಕಳು ಹೇನನ್ನು ಮನೆಗೆ ತರುತ್ತಾರೆ. ಸ್ತ್ರೀಯರಿಗೂ ಅದರ ಸಂಪರ್ಕ ಕೂಡಲೇ ಆಗುತ್ತದೆ. ಆದರೆ ವಿಷಕಾರಿ ಪೌಡರನ್ನು ಉಪಯೋಗಿಸುವುದರಿಂದ ನಿಮ್ಮ ಕೂದಲು, ನೆತ್ತಿ ಮತ್ತು ಕೋಮಲ ಚರ್ಮಗಳಿಗೆ ಅಪಾಯವಿದೆ. ಅತ್ಯಾಧುನಿಕ, ಸುಗಂಧಿತ ಹೇನುನಾಶಕ ಎಣ್ಣೆಯಾದ ಲಾಯಿಸಿಲ್‌ನ್ನು ತಿಂಗಳಿಗೊಮ್ಮೆ ಉಪಯೋಗಿಸಿ ಹೇನು ಮತ್ತು ಸೀರುಗಳ ಪೀಡೆಯಿಂದ ರಕ್ಷೆಪಡೆಯಿರಿ. ಇದು ತಲೆಯ ಚರ್ಮ ಒಣಗಿ ಎದ್ದುಬರುವುದನ್ನು ತಡೆಯುತ್ತದೆ.

ಲಾಯಿಸಿಲ್®
ಸುಗಂಧಿತ ಹೇನುನಾಶಕ






EXPRESSO/70

ಸುಜನಿಲ್ ಕೆಮಿ ಇಂಡಸ್ಟ್ರೀಸ್, ಪೂನಾ-19.

ಎರಡು ದಶಕದ ಹಿಂದೆ ಸಿನೆಮಾಪ್ರಿಯರು ಕೆಲ ವಿಶಿಷ್ಟ ನಿರ್ಮಾಣ ಸಂಸ್ಥೆಗಳನ್ನವಲಂಬಿಸಿ ಕುಳಿತಿದ್ದರು. ಅವರ ಚಿತ್ರಗಳಿಗೆ ಮಾತ್ರ ಪ್ರೋತ್ಸಾಹ ಕೊಡುತ್ತೇವೆನ್ನುವುದು ಅವರ ವಾದವಾಗಿತ್ತು. ಆದರಂತೆ ಮೆಹಬೂಬಖಾನ್ ಪ್ರೊಡಕ್ಷನ್ಸ್, ಬಿಮಲ್ ರಾಯ್ ಪ್ರೊಡಕ್ಷನ್ಸ್, ಪ್ರಭಾತ ಪಿಕ್ಚರ್ಸ್, ರಾಜಕಮಲ್ ಮತ್ತು ವಿ. ಶಾಂತಾರಾವ್ ಮೂವ್ಹಿಸ್ ಈ ಸಂಸ್ಥೆಗಳ ಚಿತ್ರಗಳಿಗೆ ಮಾತ್ರ ಬೆಂಬಲವಿತ್ತು. ಆದರೆ ಬದಲಾದ ಈ ಕಾಲದಲ್ಲಿ ಚಿತ್ರಪ್ರೇಮಿಗಳು ಬಯಸುವುದು ಕೇವಲ ನಟ ನಟಿಯರನ್ನು ಮಾತ್ರ. ಪ್ರೇಕ್ಷಕರ ಮನದಲ್ಲಿ ಸ್ಥಾನ ಪಡೆದಿರುವ ನಾಯಕಮಣಿಯ ಮುಖ ತೆರೆಗೆ ತೋರಿಸಿದರೆ ಸಾಕು, ನಿರ್ಮಾಪಕನಿಗೆ ಹಣದ ಸುರಿಮಳೆಯಾಗುತ್ತದೆ. ಈ ಮಾತಿಗೆ ಉದಾಹರಣೆ ರಾಜೇಶ ಖನ್ನ. ಭಾರತದ ಮೂಲೆ ಮೂಲೆಯ ಪ್ರೇಕ್ಷಕರ ಪ್ರೇಮವನ್ನು ಗೆದ್ದುಕೊಂಡ ಅವನ ಎಷ್ಟೋ ಚಿತ್ರಗಳು ಹೇರಳ ಹಣವನ್ನು ಗಳಿಸಿದವು. ಹಾಥಿ ಮೇರ ಸಾಥಿ, ಅಪ್ನಾ ದೇಶ್, ಸಚಾ ಝೂಟಾ, ದುಷ್ಮನ್, ಆರಾಧನಾ, ಕಟಿಪತಂಗ್, ಇವು ಭಾರತದಾದ್ಯಂತ ಸಂಚರಿಸಿ ಜಯಭೇರಿ ಬಾರಿಸಿದ ರಾಜೇಶನ ಚಿತ್ರಗಳು. ಆದರೆ ರಾಜೇಶನ ಇನ್ನಿತರ ಚಿತ್ರಗಳಾದ ದಿಲ್ ದೌಲತ್ ದುನಿಯಾ, ಮಾಲಿಕ್, ಶಹಜಾದಾ, ಮೇರೆ ಜೀವನ ಸಾಥಿ ಬಾವರ್ಚಿ ಮುಂತಾದುವು ಅವನ ಇನ್ನಿತರ ಪ್ರತಿಭೆಯ ಮುಖವನ್ನು ತೋರಿಸಿದವಾದರೂ ಬಾಕ್ಸ ಆಫೀಸಿಗೆ ಮಾತ್ರ ಹೊಡೆತ ಕೊಟ್ಟವು. ಆದರೆ ಇತ್ತೀಚೆಗೆ ರಾಜೇಶ ಖನ್ನಾನ ದಾಗ್ ಪುನಃ ಜುಬ್ಲಿ ಚಿತ್ರವಾಯಿತು. ಕೆಲವು ವರ್ಷದ ಹಿಂದೆ ರಾಜೇಂದ್ರಕುಮಾರ್‌ನೂ ಇದೇ ರೀತಿ ಹೆಸರು ಗಳಿಸಿದ್ದ. ಪ್ರೇಕ್ಷಕರು ಅವನನ್ನು "ಜುಬ್ಲಿ ಕುಮಾರ್" ಎಂಬ ಪ್ರಿಯನಾಮದಿಂದಲೇ ಗುರುತಿಸಿಕೊಂಡಿದ್ದರು. ಈ ವರೆಗಿನ ವಚನದಿಂದ ಸಾಥಿ ಚಿತ್ರದ ವರೆಗೂ ಅವನು ಅಭಿನಯಿಸಿದ್ದಾನೆ. ಈ ದೃಷ್ಟಿಯಿಂದ ಈ ಕುಮಾರ ರಾಜೇಶ ಖನ್ನಾನನ್ನು ಹೋಲುತ್ತಾನೆ. ಇವನ ಧರತಿ, ಶತರಂಜ, ಪಾಲ್ಕಿ, ಆಪ ಆಯೆ ಬಹಾರ ಆಯೀ, ಗಾಂವ ಹಮಾರಾ ಶಹರ ತುಮಾರಾ, ಹಣ ಗಳಿಸದೆ ಮುಗಿದು ಬಿದ್ದ ಚಿತ್ರಗಳಾದರೆ ಅವನ "ಗೋರಾ ಔರ ಕಾಲಾ"ಕ್ಕೆ ಹಣದ ಸುರಿಮಳೆಯಾಯಿತು. ಈಗ ಪ್ರೇಕ್ಷಕರು ಬಯಸುವ ಮುಖಗಳು ಮಾತ್ರ ಪುನಃ ಪುನಃ ತೆರೆಗೆ ಬರಲಿವೆ. ಪ್ರೇಕ್ಷಕರ ಇಂಗಿತವನ್ನರಿಯದ ಕೆಲ ನಿರ್ಮಾಪಕರು ಚಿತ್ರ ತೆಗೆದು ಕೈ ಸುಟ್ಟುಕೊಂಡ ಉದಾಹರಣೆಗಳೂ ಇವೆ. ಈಗೀಗ ನವೀನ್ ನಿಶ್ಚಲ್ ಶತ್ರುಘ್ನಸಿನ್ಹಾ, ವಿನೋದ ಮೆಹ್ರಾ ಅನಿಲಧವನ ಮುಂತಾದವರು ಪ್ರೇಕ್ಷಕರ ಕೃಪೆಗೆ ಪಾತ್ರರಾಗುಳಿದಿದ್ದಾರೆ. ಇದೇ ರೀತಿಯಾಗಿ ನಟಿಯರಾದ ಜಯಾ ಬಾಧುರಿ, ರೆಹನಾ, ರಾಧಾ ಸಲೂಜಾ,ಮೌಸಮಿ ಚಟರ್ಜಿ ಮುಂತಾದ ಹಾಲುಗಲ್ಲದ ಹುಡುಗಿಯರಿಗೆ ಸಿನೇಮಾ ಪ್ರಿಯರು ಪ್ರೋತ್ಸಾಹ ಕೊಟ್ಟಿದ್ದಾರೆ. ಆದರೆ ಇಲ್ಲಿ ಸಿನಿಪ್ರಿಯರ ಇನ್ನೊಂದು ವೈಚಿತ್ರ್ಯ ಎಂದರೆ ಯಾವುದೇ ಒಬ್ಬ ನಟನನ್ನು ಕೇವಲ ಇಪ್ಪತ್ತನಾಲ್ಕು ಗಂಟೆಗಳಲ್ಲಿಯೇ ಪ್ರಸಿದ್ಧಿಯ ತುದಿಗೇರಿಸಿ ಬಿಡುತ್ತಾರೆ. ಈ ಹಿಂದೆ ದಿಲೀಪಕುಮಾರ–ದೇವಾನಂದರಂತಹ ನಟರು ಬೆಳಕಿಗೆ ಬರಬೇಕಾದರೆ ಪಟ್ಟ ಶ್ರಮವನ್ನು ಗಮನಿಸಿದರೆ, ಈ ಹೊಸ ಜನಪ್ರಿಯ ನಟರದು ದೈವೀಯೋಗವೆನ್ನಬಹುದು.

ಇನ್ನು ಸಿನಿಹೋಕರು ಚಿತ್ರದಲ್ಲಿ ಬಯಸುವ ಮತ್ತೊಂದು ಅಂಶವೆಂದರೆ ಅದ್ದೂರಿ ಸಂಗೀತ. ಜೊತೆಗೆ ಮುಗ್ಧಗೊಳಿಸುವ ಮಧುರ ಹಾಡುಗಳು (ಅಂದರೆ ಯಾವುದೇ




ಪತ್ರಿಕೆಗಳು ಹೆಚ್ಚು ಚಾರ್ಜ್ ಆಗೋದರ ಬಗ್ಗೆ ಒಂದು ಸಂಶೋಧನಾ ಲೇಖನ ಬರೀತಾರಂತೆ - ಅದಕ್ಕೋಸ್ಕರನೇ ಒಂದು ವರ್ಷದಿಂದ ಈ ವಾಚನಾಲಯಕ್ಕೆ ಬರ್ತಿದ್ದಾರೆ...

ರೀತಿಯಲ್ಲಿರಲಿ) 'ಹರೇ ರಾಮ ಹರೇ ಕೃಷ್ಣ'ದ ದಮ್ಮಾರೊ ದಮ್ ಹಾಡು ನೆನಪಿಗೆ ಬರುತ್ತದ. ಆ ಚಿತ್ರ ಈ ಹಾಡುಗಳ ಮೇಲೆ ಬದುಕಿದೆ ಎಂಬುದನ್ನು ಎಲ್ಲ ಸಿನೆಮಾ ಪ್ರಿಯರೂ ಬಲ್ಲರು. ಈ ಹಾಡೇ ಝೀನತಳ ಭವಿಷ್ಯದ ಬಾಗಿಲನ್ನು ತೆರೆಯಿತೆನ್ನಬೇಕು. ಕಾರವಾನ್, ಜವಾನಿ ದಿವಾನಿ, ಮೇರಾ ಗಾಂವ್ ಮೇರಾ ದೇಶ್, ರಾಜಾರಾಣಿ, ರಾಜಾಜಾನಿ ಹಾಡು ಕೇಳುವ ಹಂಬಲಕ್ಕಾಗಿ ಪ್ರೇಕ್ಷಕರನ್ನಾಕರ್ಷಿಸಿದ ಚಿತ್ರಗಳು.

ಸಂಗೀತ ಸಂಯೋಜನೆಯೂ ಚಿತ್ರದ ಮುಖ್ಯ ಅಂಶವೆಂದೇ ಪ್ರೇಕ್ಷಕರು ಬಗೆದಿದ್ದಾರೆ. ನಯಾದೌರ, ತುಮ್ಸಾ ನಹೀ ದೇಖಾ, ಹೌರಾ ಬ್ರಿಜ್, ಕಭೀ ಅಂಧೇರಾ ಕಭೀ ಉಜಾಲಾ, ಉಸ್ತಾದ್, ಫಾಗೂನ್ ಮುಂತಾದ ಚಿತ್ರಗಳು ಓ. ಪಿ. ನಯ್ಯರರ ಸಂಗೀತದಿಂದ ಬದುಕಿಬಾಳಿವೆ. ನಮ್ಮ ಜನ ಮೆಚ್ಚುವ ಇನ್ನಿತರ ಸಂಗೀತ ಸಂಯೋಜಕರಿವರು ಶಂಕರ ಜೈಕಿಶನ್ ಲಕ್ಷ್ಮಿಕಾಂತ ಪ್ಯಾರೆಲಾಲ್, ಆರ್. ಡಿ. ಬರ್ಮನ್, ಎಸ್. ಡಿ. ಬರ್ಮನ್, ಕಲ್ಯಾಣಜಿ ಆನಂದಜಿ ಮುಂತಾದವರು.ಒಮ್ಮೊಮ್ಮೆ ಜನಪ್ರಿಯ ತಾರಾ ಜೋಡಿ –ಭರ್ಜರಿ ಸಂಗೀತ–ಕರ್ಣಮಧುರ ಹಾಡು–ಬಣ್ಣ–ಬೆಳಕು–ದೃಶ್ಯ–ನೃತ್ಯ–ಏನೆಲ್ಲ ಇದ್ದರೂ ಸಿನೆಮಾ ಪ್ರಿಯರು ಅದನ್ನು ಮಣ್ಣು ಮುಕ್ಕಿಸಿ ಬಿಡುತ್ತಾರೆಂಬುದಕ್ಕೆ 'ದಾಸ್ತಾನ್' ಚಿತ್ರ ಸಾಕ್ಷಿ. ಇದರಲ್ಲಿ ನೆಚ್ಚಿನ ನಟ ದಿಲೀಪನಿದ್ದಾನೆ. ಗುಳಿಗಲ್ಲದ ಸುಂದರಿ ಶರ್ಮಿಳಾ ಇದ್ದಾಳೆ. ಕ್ರೂರ ಮುಖದ ಸುಪ್ರಸಿದ್ಧ ಖಳನಾಯಕ ಪ್ರೇಂ ಚೋಪ್ರಾ ಕಾಣಿಸಿಕೊಂಡಿದ್ದಾನೆ. ಜನಪ್ರಿಯ ಸಂಗೀತಗಾರ ಲಕ್ಷ್ಮೀಕಾಂತ ಪ್ಯಾರೇಲಾಲರು ಉತ್ತಮ ಸಂಗೀತ ನೀಡಿದ್ದಾರೆ. ಆದರೂ ಕೂಡ ಪ್ರೇಕ್ಷಕರನ್ನು ಕಳೆದು ಈ ಚಿತ್ರನಂಬಿ ಹಣ ಹಾಕಿದವರಿಗೆ ಕಣ್ಣೀರು ಸುರುವಿ ಬಿಟ್ಟಿತು. ಇದಕ್ಕಾಗಿ ವೆಚ್ಚವಾದ ೧೪ ಲಕ್ಷ ರೂಪಾಯಿಗಳು ಕೆರೆಗೆ ಬಿದ್ದವು. ಪ್ರೇಕ್ಷಕರು ಇದನ್ನು ತುಳಿದ ಕಾರಣವೆಂದರೆ ಒಂದೇ ಒಂದು. ಕಥಾ ವಸ್ತು ಸಂಪೂರ್ಣ ಹಳೆಯದು. ಇದೂ ಕೂಡ ಒಪ್ಪತಕ್ಕ ಅಂಶವೇ. ಇದರಿಂದಾದರೂ ನಿರ್ಮಾಪಕರು ಎಚ್ಚರಗೊಳ್ಳುವಂತೆ ಮಾಡಿದುದು ಕ್ಷೇಮಕರ.

ಪ್ರೇಕ್ಷಕರನ್ನಾಕರ್ಷಿಸಲು ಹಿಂದೀ ಚಿತ್ರಗಳು ಉಪಯೋಗಿಸುವ ಮತ್ತೊಂದು ತಂತ್ರ ಅದ್ದೂರಿ ಪ್ರಚಾರ. ಇದಕ್ಕಾಗಿ ಸಿಂಹಪಾಲು ಹಣವನ್ನು ಹಾಕಿ ಚಿತ್ರದಿಂದ ಅದನ್ನು ತೆಗೆಯಲು ಎಷ್ಟೋ ನಿರ್ಮಾಪಕರು ಸಫಲರಾಗಿದ್ದಾರೆ. ಪತ್ರಿಕೆಗಳು–ವಿವಿಧಭಾರತಿ ವಾಣಿಜ್ಯ ವಿಭಾಗ–ರೇಡಿಯೊ ಸಿಲೋನ್–ಪೋಸ್ಟರ್ ಈ ಎಲ್ಲವು ಪ್ರಚಾರದ ಮಾಧ್ಯಮಗಳು. ಉತ್ತಮವಾಗಿ ಪ್ರಚುರಪಡಿಸಿ ಸಿನೆಮಾಪ್ರಿಯರನ್ನು ಸಿನೇಮಾ ನೋಡಲು ಹಚ್ಚುವ ಕಲೆ ಈ ಮಾಧ್ಯಮಕ್ಕೆ ಸಾಧಿಸಿದೆ. "ಶಿಕಾರ್" ಹಾಗೆಯೇ ಪ್ರಸಿದ್ಧಿ ಪಡೆದ ಕಳಪೆ ಚಿತ್ರ. ಆದರೆ ಪ್ರಚಾರದ ಬಲದಿಂದ ಬದುಕಿದುದಲ್ಲದೆ ಶ್ರೀಮಂತಿಕೆಯನ್ನೂ ಗಳಿಸಿತು. ಹಾಗೆಯೇ ಜಾನಿ ಮೇರಾ ನಾಮ್, ಸೀತಾ ಔರ್ ಗೀತಾ, ಛುಪಾ ರುಸ್ತುಂ, ಶರೀಫ್ ಬದಮಾಷ್, ಏ ಗುಲಿಸ್ತಾನ್ ಹಮಾರಾ, ಮುಂತಾದ ಎಲ್ಲ ಚಿತ್ರಗಳು ಹುರುಳಿಲ್ಲದ ಕಥೆಯನ್ನು ಒಳಗೊಂಡರೂ ಪ್ರಚಾರವನ್ನು ಮುಂದೆ ಮಾಡಿಕೊಂಡು ದುಡು ದುಡು ಉರುಳಿ ಜಯ ಗಳಿಸಿದ ಚಿತ್ರಗಳು.

ಪ್ರೇಕ್ಷಕ ಮಹಾಶಯರು ಇನ್ನೂ ಹಲ ಚಿತ್ರಗಳಿಗೆ ಬೆಂಬಲವೀಯುತ್ತಿರುವುದು ಗಮನಾರ್ಹ ಅಂಶ. ಜನಪ್ರಿಯ ನಟರು ಆಕಸ್ಮಾತ್ ಮರಣ ಹೊಂದಿದರೆ ಆ ಚಿತ್ರಗಳಿಗೆ ಎಲ್ಲಿಲ್ಲದ ಬೇಡಿಕೆ ಬಂದು ಗಲ್ಲಾ ಪೆಟ್ಟಿಗೆ ಮೇಲೇರುತ್ತದೆ. ಒಂದು ವೇಳೆ ಮೀನಾಕುಮಾರಿ ಸಾಯದೇ ಇದ್ದರೆ ಅವಳ "ಪಾಕೀಝಾ" ಮುಂಬಯಿಯ 'ಮರಾಠಾ ಮಂದಿರ' ಟಾಕೀಸಿನಲ್ಲಿ ಸುವರ್ಣ ಮಹೋತ್ಸವವನ್ನು ಆಚರಿಸುತ್ತಿರಲಿಲ್ಲವೇನೊ. ಹಾಗೆಯೇ ಮುಂಬಯಿಯ ಅಪ್ಸರಾ ಟಾಕೀಜಿನಲ್ಲಿ "ಹಸ್ತೆ ಜಖಂ" ಚಿತ್ರ ಬೆಳ್ಳಿ ಹಬ್ಬ ಆಚರಿಸಿದುದಕ್ಕೆ ಕಾರಣ ಬಲರಾಜ ಸಹಾನಿಯವರ ಮರಣ. ಕೆ. ಅಸೀಫ್ ಮತ್ತು ಮಧುಬಾಲಾರ ಸಾವು "ಮೊಘಲ್–ಎ–ಆಝಮ್" ಚಿತ್ರವನ್ನು ಯಶಸ್ಸಿನತ್ತ ಒಯ್ದಿತು.

ಈ ಎಲ್ಲ ಸಂಗತಿಯನ್ನು ಗಮನಿಸಿದಾಗ ನಮ್ಮ ಸಿನೇಮಾಪ್ರಿಯರ ಸ್ವಭಾವ ವೈವಿಧ್ಯಮಯ ಎಂಬುದು ತಿಳಿಯುತ್ತದೆ. ಅವರಿಗೆ ಮನೋರಂಜನೆಯೇ ಮುಖ್ಯ. ಜಾನಿ ಮೇರಾ ನಾಮ್, ಜಂಜೀರ, ಜುಗ್ನುದಂತಹ ಉತ್ತಮ ನಟವರ್ಗದಿಂದೊಡಗೂಡಿದ ಚಿತ್ರಗಳಾದರೂ ಇರಲಿ, ಚೇತನಾ, ಬಸ್ತಿ ಔರ್ ಬಾಜಾರ್‌ದಂತಹ ಅಲ್ಪ ಬಂಡವಾಳದಿಂದ ತಯಾರಿಸಿದ ಚಿತ್ರಗಳೇ ಇರಲಿ, ಅವರಿಗೆ ನೋಡುವುದು ಮುಖ್ಯ. ನೋಡಿ ಗೆದಿಸುತ್ತಾರೆ. ಆದರೆ ಇದೇ ಮಾತು ಎಲ್ಲ ಚಿತ್ರಗಳಿಗೂ ಅನ್ವಯಿಸದು.

ಪ್ರೇಕ್ಷಕರಲ್ಲಿಯೂ ಭಿನ್ನ ಭಿನ್ನ ವರ್ಗಗಳಿವೆ. ಮುಂದಿನ ಬೆಂಚಿನ ಜನಕ್ಕೆ ಲೈಂಗಿಕ ದೃಶ್ಯಗಳು ಬೇಕು. ಕುಡಿತ ಕುಣಿತ ಇರಬೇಕು. ಒಂದು ಬಗೆಯ ಉನ್ಮಾದ ಹುಟ್ಟಿಸುವ ಹಾಡು–ಸಂಗೀತ ಬೇಕೇ ಬೇಕು. ಆದರೆ ಮತ್ತೆ ಹಲ ಪ್ರೇಕ್ಷಕರಿಗೆ ಉತ್ತಮ ಕಥೆ, ಉನ್ನತ ಮಟ್ಟದ ಸಂಭಾಷಣೆ ಬೇಕು. ಆದರೆ ಇದೇ ಮನೋಭಾವ ಮುಂಬರುವ ಕಾಲಕ್ಕೆ ಉಳಿಯುವುದಿಲ್ಲವೇನೋ!



*In Mangalore it's*

# MOTI MAHAL

## FOR LUXURY & COMFORTS.

- ★ Attractive Tariff.
- ★ Modern Amenities & Large family suits
- ★ Centrally Air - Conditioned.
- ★ Banquet & Conference facilities.
- ★ Superb Indian-Chinese-Mughlai-Tandoori Cuisine.
- ★ Daily Dinner-Dance-Cabaret Shows.
- ★ Under-Ground Car park.
- ★ Indian Airlines Office & Travel Agents on the Premises.

**It's hospitality at your command & within your reach**

*Grams :* **MOTIMAHAL**
*Telex :* **238** *Phone :* **5611-5**



*WISH YOU A HAPPY DEEPAVALI*



ಸರ್ವೆಲ್ಲ ಗ್ರಾಹಕರಿಗೂ ಹಿತೈಷಿಗಳಿಗೂ
ದೀಪಾವಳಿಯ ಹಾರ್ದಿಕ ಶುಭಾಶಯಗಳು !!

# ಬಿ. ಸಿ. ಹರ್ಲಾಪೂರ

ಶುದ್ಧ ಕುಸುಬೆ ಎಂಣೆ ತಯಾರಕರು
ಮತ್ತು ಫ್ಲೋರ್ ಮಿಲ್ಸ್,,

ಶಿಂಪಿಗಲ್ಲಿ, ಹುಬ್ಬಳ್ಳಿ-20 ಫೋನ್ : **2918**

ನಮ್ಮ ಸ್ವಂತ ಗಾಣದಲ್ಲಿ ತಯಾರು ಮಾಡಿದ, ಸುವಾಸಿಕ, ರುಚಿಕರವಾದ, ಕುಸುಬಿ ಎಣ್ಣೆ ಸಿಗುತ್ತದೆ. ಹಾಗೂ ಎಲ್ಲತರದ, ಕಾಳುಗಳನ್ನು ಮತ್ತು ಅರಿಷಿಣ, ಅಡಕೆ ಬೀಸಿ ಕೊಡುತ್ತೇವೆ. ದನ-ಕರು-ಗಳಿಗೆ ಬೇಕಾಗುವ ಕೊಗರಿ, ಹುರುಳಿ ಮತ್ತು ಚಿನ್ನಿ ತಯಾರಮಾಡಿ ಕೊಡುತ್ತೇವೆ.

 WISH YOU HAPPY DEEPAVALI! 

*Do not bother about your Kitchen ; clean commodities available with us at Reasonable price.* Phone; 4763

# M/s. G. S. HIREMATH

**Kirani & General merchant; Super Bazaar, Stall No. 25, HUBLI-20**

# ಮೆ। ಜಿ. ಎಸ್. ಹಿರೇಮಠ

ಕಿರಾಣಿ ಹಾಗೂ ಜನರಲ್ ಮರ್ಚಂಟ್, ಸ್ಟಾಲ ನಂ. ೨೫
ಸುಪರ ಬಜಾರ ಹುಬ್ಬಳ್ಳಿ-೨೦ ಫೋನ್: **4763**

ನಮ್ಮಲ್ಲಿ ಉತ್ತಮ ದರ್ಜೆಯ ಜೀನಸುಗಳು ಯಾವಾಗಲೂ ಯೋಗ್ಯ ಬೆಲೆಗೆ ಸಿಗುತ್ತವೆ.

**Visit & get confirmed**

BRANCHES AT HUBLI

| S. P. Hiremath | G. S. Hiremath |
| --- | --- |
| Grain merchant | Oil merchant |
| Akkihonda | Deshpandenagar |

# ಭಾರತದಲ್ಲಿ ವ್ಯಂಗ್ಯ ಚಲಚ್ಚಿತ್ರಗಳು



**ಎಚ್. ಎನ್. ರಂಗರಾವ್**

ವಾರ್ತಾ ಮತ್ತು ಪ್ರಸಾರ ಮಂತ್ರಾಲಯದ ಒಂದು ವಿಭಾಗವಾದ ವ್ಯಂಗ್ಯ ಚಲಚ್ಚಿತ್ರ ಶಾಖೆ ಈಗ್ಗೆ ಹನ್ನೆರಡು ವರ್ಷಗಳ ಹಿಂದೆ ಸಜ್ಜುಗೊಂಡು ನಂತರ ಅಭ್ಯುದಯದ ದಾರಿ ತುಳಿಯಿತು. ಇದು ಪ್ರಾರಂಭವಾದಾಗ ದೇಶದಲ್ಲೇ ಪ್ರಪ್ರಥಮ ಮತ್ತು ಏಕೈಕ ಘಟಕವಾಗಿದ್ದು ತನ್ನ ಪ್ರಯೋಗ ಪರಿಮಿತಿಯಲ್ಲಿ ಅನೇಕ ಚಿತ್ರಗಳನ್ನು ಸೃಷ್ಟಿಸಿ ಪ್ರಶಸ್ತಿಗಳನ್ನು ಪಡೆದುದಲ್ಲದೆ, ಚಿತ್ರಗಳು ವಿದೇಶದಲ್ಲೂ ಪ್ರದರ್ಶಿತವಾಗಿ ಪ್ರಶಂಸನೀಯವೆನಿಸಿದವು. ಈ ಚಿತ್ರಗಳನ್ನು ವೀಕ್ಷಿಸಿದ ಪಾಶ್ಚಾತ್ಯ ಚಲಚ್ಚಿತ್ರತಜ್ಞ ಜೇಮ್ಸ್ ಎ. ಬೆವರಿಡ್ಜ್ ಎಂಬವರು ತಮ್ಮ ಅಭಿಪ್ರಾಯ ಕೊಡುತ್ತಾ "ಈಗ ಭಾರತೀಯ ಸ್ಪಷ್ಟ ಅಕ್ಷಣಗಳನ್ನು ನಿರೂಪಿಸುವ ಚೈತನ್ಯಪೂರ್ಣ ಭಾರತೀಯ ವ್ಯಂಗ್ಯ ಚಲನಚಿತ್ರಗಳಲ್ಲಿ ಸುಭಗ ವಿನ್ಯಾಸ, ಕಲಾಸಂಪದ, ನಯವಾದ ಚಲನೆ ಮತ್ತು ನಿಪುಣತೆಯ ವೈವಿಧ್ಯ ವ್ಯಕ್ತವಾಗುತ್ತದೆ" ಎನ್ನುತ್ತಾರೆ.

ಮೊದಲಿಗೆ ಕೆಲವೇ ವ್ಯಂಗ್ಯ ಚಿತ್ರಗಳನ್ನು ನಿರ್ಮಾಣ ಮಾಡಲು ಯತ್ನ ನಡೆಸಲಾಯಿತು. ಈಗ್ಗೆ ನಲವತ್ತು ವರ್ಷಗಳ ಹಿಂದೆ ಅಂದರೆ ೧೯೩೦ರ ಸುಮಾರಿನಲ್ಲಿ ನ್ಯೂ ಥಿಯೇಟರ್ಸ್‌ನ ಆರ್. ಸಿ. ಬೋರಲ್ ಎಂಬುವರು ಆನ್ ಎ ಮೂನ್ ಲಿಟ್‌ನೈಟ್ ಎಂಬ ಭಾರತೀಯವಾದ ವ್ಯಂಗ್ಯಚಲಚ್ಚಿತ್ರವನ್ನು ಪ್ರಥಮವಾಗಿ ನಿರ್ಮಿಸಿದರು. ನಂತರ ಪ್ರಭಾತ ಚಿತ್ರ ಸಂಸ್ಥೆ 'ಜಂಬೂಕಾಕ' ಮತ್ತು 'ಅಮೃತ ಮಂಥನ' ಈ ಎರಡು ಚಿತ್ರಗಳನ್ನು ಒಟ್ಟಿಗೇ ನಿರ್ಮಿಸಿತು. ಎಂ. ಭಾವನಾನಿ ನಿರ್ಮಿಸಿದ 'ಲಫಂಗಾಲಂಗೂರ್' ಭಾರತದ ಮಕ್ಕಳಿಗೆ ಬಹುಪ್ರಿಯವಾದ ವ್ಯಂಗ್ಯಚಿತ್ರವಾಗಿತ್ತು. ಜರ್ಮನ್ ಪ್ರೋತ್ಸಾಹದ ನೆರವಿನಿಂದ ತಯಾರಾದ ಚಿತ್ರವಿದು. ೧೯೪೦ರ ನಂತರದಲ್ಲಿ ಮದರಾಸಿನ ಖ್ಯಾತ ಚಿತ್ರೋದ್ಯಮ ಸಂಸ್ಥೆ, ಜೆಮಿನಿ 'ಸಿನೆಮಾ ಕದಂಬಮ್' ಚಿತ್ರವನ್ನು ಬಿಡುಗಡೆ ಮಾಡಿತು. ಅದರ ನಂತರ ಬಿಡುಗಡೆಯಾದ ಚಿತ್ರವೆಂದರೆ 'ಸೂಪರ್ ಮ್ಯಾನ್ ಮಿಥ್' ಎಂಬುದು. ಜಿ. ಎಸ್. ಪೋಹಕರ್‌ರವರ ಇಂಡಿಯನ್ ಕಾರ್ಟೂನ್ ಪಿಕ್ಚರ್ ಸಂಸ್ಥೆಯಿಂದ ತಯಾರಾದ ಈ ಚಿತ್ರದ ಸೃಷ್ಟಿಕರ್ತರು ಜಿ. ಕೆ. ಗೋಖಲೆ ಮತ್ತು ಕೆ. ಎಸ್. ಗುಪ್ತೆಯವರು. ಜಾಗತಿಕ ಮಹಾಯುದ್ಧ ಸಮಯದಲ್ಲಿ ಭಾರತದ ವಾರ್ತಾ ಪ್ರಸಾರಣಾ ಮಂತ್ರಾಲಯ ನಿರ್ಮಾಣ ಮಾಡಿದ 'ದಿ ವಾರ್ ದಟ್ ನೆವರ್ ಎಂಡ್ಸ್' ವ್ಯಂಗ್ಯ ಚಲಚ್ಚಿತ್ರ. ಹೃದಯ ಕಲಕುವಂಥ ರೀತಿಯಲ್ಲಿ ಯುದ್ಧದ ಬಗ್ಗೆ ನಿರ್ಮಾಣವಾಗಿತ್ತು. ಇವುಗಳಲ್ಲದೆ, ಕೆಲವು ವಾಣಿಜ್ಯ ದೃಷ್ಟಿಯಲ್ಲಿ ನಿರ್ಮಾಣವಾದ ಕಾರ್ಟೂನ್ ಕ್ವಿಕ್ಕೀಸ್ ಜನಪ್ರಿಯತೆ ಗಳಿಸಿದವು. ಗೋಖಲೆ, ಗುಪ್ತೆ ಮತ್ತು ಇನ್ನೂ ಕೆಲವರಿಂದ ಇವುಗಳ ನಿರ್ಮಾಣ.

೧೯೫೦ರ ನಡುವಿನಲ್ಲಿ ಆಗ ಫಿಲ್ಮ್ ಡಿವಿಜನ್ನಿನ ಮುಖ್ಯ ನಿರ್ಮಾತೃರಾಗಿದ್ದ ಶ್ರೀ ಭಾವನಾನಿಯವರು ವ್ಯಂಗ್ಯಚಲಚ್ಚಿತ್ರ ಘಟಕವನ್ನು ಸಜ್ಜುಗೊಳಿಸಲು ವಿಶೇಷವಾದ ಆಸ್ಥೆ ತೋರಿದ್ದರು. ಇಂಡೋ ಅಮೇರಿಕನ್ ಟೆಕ್ನಿಕಲ್ ಕೋ ಆಪರೇಷನ್ ಪ್ರೋಗ್ರಾಮ್‌ನ ಕಾರ್ಯವಿಧಿಯಂತೆ ಸಂಯುಕ್ತಸಂಸ್ಥಾನದಿಂದ ತಾಂತ್ರಿಕ ಸಲಕರಣೆಗಳ ಸಹಾಯವನ್ನು ಸದುಪಯೋಗಪಡಿಸಿಕೊಂಡ ಈ ವ್ಯಂಗ್ಯಚಲಚಿತ್ರ ಘಟಕವು ಆ ಮೂಲಕ ಚಿತ್ರೀಕರಣಕ್ಕೆ ಮೊದಲಿದ್ದಿತು. ಹಾಲಿವುಡ್‌ನಲ್ಲಿರುವ ಡಿಸ್ನಿಲ್ಯಾಂಡ್‌ನ ಪರಿಣಿತ ಕಾರ್ಯಕರ್ತ ಕ್ಲೇರ್ ಎಚ್. ವೀಕ್ಸ್‌ರವರು ಈ ಕಾರ್ಯಕ್ರಮದಲ್ಲಿ ನೆರವಾದರು.

ಜಾತಕ ಕಥೆಯ ಆಧಾರದ ಮೇಲೆ ಮಕ್ಕಳಿಗಾಗಿ ನಿರ್ಮಾಣವಾದ 'ಬನ್ಯಾನ್ ಡೀರ್' ವ್ಯಂಗ್ಯ ಚಲಚಿತ್ರ ದೇಶ ವಿದೇಶಗಳಲ್ಲಿ ಒಳ್ಳೆಯ ಹೆಸರು ತಂದಿತು. ರಾಜ್ಯ ಪ್ರಶಸ್ತಿ ಗಳಿಸಿದ ಈ ಚಿತ್ರ ಅಂತಾರಾಷ್ಟ್ರೀಯ ಆಕರ್ಷಣೆಯೆನಿಸಿತು. ಇದರಿಂದ ಎಲ್ಲ ರೀತಿಯಲ್ಲೂ ಉತ್ತೇಜಿತಗೊಂಡು ಭಾರತದ ವ್ಯಂಗ್ಯ ಚಲಚ್ಚಿತ್ರೋದ್ಯಮವು ಚಿತ್ರಗಳ ಸತತ ತಯಾರಿಕೆಗೆ ಹುಮ್ಮಸ್ಸು ತಾಳಿತು. ಹಾಗೆ ತಯಾರಾದ ಚಿತ್ರಗಳಲ್ಲಿ ಒಂದಾದ ದಶಮಾಂಶ ಪದ್ಧತಿಯ Metric System 'ವೆನ್ ಡ್ರೀಮ್ಸ್ ಕಮ್ ಟ್ರೂ' ಮತ್ತೆರಡು, ಕುಟುಂಬ ಯೋಜನೆ ಮೇಲೆ ರಚಿತವಾದ ' ಎ ಗ್ರೇಟ್ ಪ್ರಾಬ್ಲಮ್' ಮತ್ತು 'ವೈಸ್ ಡ್ಯಾಡಿ'ಗಳನ್ನು ನಿರ್ಮಾಣ ಮಾಡಲಾಯಿತು. ಕಾಮನ್‌ವೆಲ್ತ್ ಫಿಲ್ಮ್ ಫೆಸ್ಟಿವಲ್‌ನಲ್ಲಿ 'ಎ ಗ್ರೇಟ್ ಪ್ರಾಬ್ಲಮ್' ವ್ಯಂಗ್ಯಚಿತ್ರವು ಪ್ರಥಮ ಬಹುಮಾನ ಗಳಿಸಿತು. 'ವೈವ್ಸ್ ಅಂಡ್ ವೈವ್ಸ್' 'ದಿಸ್ ಅವರ್ ಇಂಡಿಯಾ' ಮತ್ತು 'ಇಂಡಸ್ಟ್ರಿಯಲ್ ವರ್ಕರ್'ಗಳು ತದನಂತರ ಚಿತ್ರೀಕರಿಸಿದ ವ್ಯಂಗ್ಯ ಚಲಚ್ಚಿತ್ರಗಳಿವು.

ಭಾರತದ ಕಾರ್ಟೂನ್ ಫಿಲ್ಮ್ ಯುನಿಟ್ ಇತ್ತೀಚೆಗೆ ಆಕ್ಸ್ ಬೆರ್ರಿ ಕ್ಯಾಮರಾ ಹೊಂದಿರುವುದು ಗಮನಾರ್ಹ ಸಂಗತಿ. ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಉತ್ತಮ ವ್ಯಂಗ್ಯಚಿತ್ರಗಳ ನಿರ್ಮಾಣ ಈಗ ಸಾಧ್ಯವಿದೆ. ನೌಕರರ ಬಳಗದಲ್ಲಿ ಹೆಚ್ಚಳ ಉಂಟು ಮಾಡಲಾಗಿದೆ. ವ್ಯಂಗ್ಯ ಚಲಚ್ಚಿತ್ರ ನಿರ್ಮಾಣ ಕಾರ್ಯದಲ್ಲಿಯ ವಿವಿಧ ಪ್ರಾಕಾರಗಳಿಗೆ ಸಂಬಂಧಪಟ್ಟ ಕೆಲಸ ಮಾಡುವ ನೌಕರರ ಸಂಖ್ಯೆ ಎಂಭತ್ತು ಜನ ಕಲಾವಿದರು. ತಂತ್ರಜ್ಞರು ಇಲ್ಲಿದ್ದಾರೆ.

ಈ ಕಾರ್ಟೂನ್, ಫಿಲ್ಮ್ ಯೂನಿಟ್ ವರ್ಷಕ್ಕೆ ಕನಿಷ್ಠವೆಂದರೆ ನಾಲ್ಕು ವ್ಯಂಗ್ಯ ಚಿತ್ರಗಳು ಜೊತೆಗೆ ನೂರಾರು ಅಡಿಗಳ ಶೈಕ್ಷಣಿಕ ನಿಮಿತ್ತ ಚಿತ್ರಗಳನ್ನು ತಯಾರಿಸಲು ಸಮರ್ಥವಾಗಿದೆ, ಚೈತನ್ಯಪೂರ್ಣ ತಯಾರಿಕೆಯಲ್ಲಿ, ಪೇಪರ್‌ಕಟ್ ಔಟ್, ಕಾರ್ಯ, ಸೂತ್ರ ಗೊಂಬೆಗೆ ಸಂಬಂಧಿಸಿದ ಪರಿಕರಗಳ ವಿನ್ಯಾಸ, ಮೊದಲಾದವುಗಳು ಇಲ್ಲಿ ಸಜ್ಜುಗೊಂಡಿವೆ. "ಹೋಮೋ ಸಾಪ್ಸ್" 'ಶಾಡೋ ಅಂಡ್ ಸಬಸ್ಟನ್ಸ್' 'ರಾಧಾ ಮತ್ತು ಕೃಷ್ಣ' ಹಾಗು 'ಆಕ್ಬರ್' ಇವುಗಳು ಪ್ರಾಯೋಗಿಕ ಮತ್ತು ನಿರ್ಮಾಣದ ಸೃಷ್ಟಿಯಿಂದ ಉತ್ಕೃಷ್ಟವೆಂದು ಹೆಸರು ಪಡೆದಿವೆ. ಇಲ್ಲಿ ನಿರ್ಮಾಣಗೊಂಡ ಇನ್ನೆರಡು ವ್ಯಂಗ್ಯ ಚಲಚ್ಚಿತ್ರಗಳಾದ 'ಸ್ವಯಂವರ' ಮತ್ತು 'ಸಂದೇಶ್' ಚಿತ್ರಗಳು ಆರ್. ಕೆ. ಮಾಲವಂಕರ್‌ರವರ ಉಗುರು ಚಿತ್ರಕಲೆಯಿಂದ ರಚನೆಗಳನ್ನು ಬಳಸಿಕೊಂಡಿವೆ. 'ಸಂದೇಶವು' ರಾಷ್ಟ್ರಪ್ರಶಸ್ತಿ ಗಳಿಸಿದ ಚಿತ್ರ.




ದೀಪಾವಳಿಯು ಸರ್ವರಿಗೂ ಶುಭದಾಯಕವಾಗಲಿ !!

1917 ರಿಂದ ಮೆಚ್ಚುಗೆಯನ್ನು ಪಡೆದ ಅತ್ಯುತ್ತಮ ಸಾಬೂನು

ಹೊಸ ಸಾಬೂನು

555

555 SOAP 555

No 555 BAR SOAP

ಫೋನ್ 5555

ಮೇಲ್ಕಾ ಸೋಪ್ ವರ್ಕ್ಸ್

ಮಂಗಳೂರು 3.

SHEVGOOR



WITH BEST WISHES & GREETINGS
TO ALL OUR CUSTOMERS



FROM,

## PAI TRANSPORT CO.,

**TRANSPORT CONTRACTORS**
**Dharwar Road, BELGAUM**

Phone Nos:- Office: *1227, 1267* Resi: *672*
Tele: "PAITRUCK"

*Bombay Office:*

**PAI TRANSPORT CO.,**
7/9, Issaji Street, Vadagadi,
BOMBAY 3
**Phone Nos: 327853, 323565**
**Tele: 'PAITRUCK' Bombay 3**
Branch office at Bangalore will be
OPENED VERY SHORTLY

ನಮ್ಮೆಲ್ಲ ಗ್ರಾಹಕರಿಗೂ ಹಿತೈಷಿಗಳಿಗೂ
ದೀಪಾವಳಿಯ ಶುಭಾಶಯಗಳು!

ನಿಮಗೆ ಬೇಕಾಗುವ

★ ಸುಧಾರಿಸಿದ ಕಾಯಿಪಲ್ಲೆ ಬೀಜಗಳು.
★ ಹಾಯ ಬ್ರಿಡ್ ಸೀಡ್ಸ್
★ **D.L.N.** ಪಿಕೇಚರ್ಸ್
★ ಬೆಲ್ಲಕ್ಕೆ ಬಣ್ಣ ಬರುವ ಕೆಮಿಕಲ್ಸ್

ಮುಂತಾದವುಗಳಿಗಾಗಿ ವಿಚಾರಿಸಿರಿ:-

## ಡಿ. ಎಲ್. ಹಂದ್ರಾಳ

ಬೀಜಗಳ ವ್ಯಾಪಾರಿಗಳು
ಬಾಗಲಕೋಟೆ ( S.C. Rly )
(ಜಿಲ್ಲಾ : ವಿಜಾಪೂರ)

ಗ್ರಾಮ "ಸೀತಾ ಸೀಡ್ಸ್"
ದೂರವಾಣಿ **244**

ದೀಪಾವಳಿಯ ಹಾರ್ದಿಕ ಅಭಿನಂದನೆಗಳು!



ಪ್ರವಾಸಿಗರ ಆದರಣೀಯ ಸ್ಥಾನ



ಹೊಟೆಲ್

## ಬೃಂದಾವನ

ಊಟ, ವಸತಿ, ಉಪಹಾರ ಗೃಹ
ಮಾರುತಿಗಲ್ಲಿ, ಬೆಳಗಾವಿ

ಗ್ರಾಮ : "ಬೃಂದಾವನ"
ಫೋನ್ಸ್ 2032, 2145, 2146, 2147

★ ಆಧುನಿಕ ಸುಖಸೋಯಿಗಳಿಂದ ಸುಸಜ್ಜಿತವಾದ ಅಲಿಶಾನ ಹೊಟೆಲ್ ★



# ಸ್ವಾರಸ್ಯದ ಸಿನಿಮಾ ರಂಗ

✻ ಸಂತೋಷಕುಮಾರ ಗುಲ್ವಾಡಿ

ಚಿತ್ರರಂಗಕ್ಕೂ ನನಗೂ ಸಂಬಂಧ ಪತ್ರಿಕೋದ್ಯಮಿಯಾಗಿ. ಈ ಸಂಬಂಧದಿಂದಾಗಿ ನಾನು ಮುಂಬಯಿ ಚಿತ್ರರಂಗದ ಹಲವು ತಾರೆಯರು, ದಿಗ್ದರ್ಶಕರು, ನಿರ್ಮಾಪಕರು, ಛಾಯಾಗ್ರಾಹಕರು, ಹಾಡುಗಾರರು, ಸಂಗೀತ ದಿಗ್ದರ್ಶಕರು, ಎಕ್ಸಟ್ರಾ ನಟ–ನಟಿಯರು, ಮೇಕಪ್ ಮಂದಿ, ಲೈಟ್‌ಬ್ವಾಗಳು, ಸ್ಟುಡಿಯೋ ಕೆಲಸಗಾರರು, ಸಂಕಲನಕಾರರು, ಸೆನ್ಸಾರ್ ಸದಸ್ಯರು, ಪ್ರಚಾರಕರ್ತರು, ಹಂಚಿಕೆದಾರರು, ಸಿನಿಮಾ ಮಂದಿರದ ಒಡೆಯರು–ಹೀಗೆ ಅನೇಕ ಜನಗಳನ್ನು ಭೇಟಿಯಾಗಿ, ಮಾತನಾಡಿದ್ದೇನೆ. ಅವರ ಅನೇಕ ಪಾರ್ಟಿಗಳನ್ನು ವಿವಾಹಗಳನ್ನು ಕಂಡು ಇಂದ್ರನಗರಿಯ ವೈಭವದ ಕತೆಗಳನ್ನು ನೆನಪಿಸಿಕೊಂಡಿದ್ದೇನೆ. ಅನೇಕರನ್ನು ಅತಿ ಹತ್ತಿರದಿಂದ ಕಾಣುವ ಅವಕಾಶವಾದುದೂ ಇದೆ. ಕೆಲವರು ತಮ್ಮ ರಹಸ್ಯಗಳನ್ನು ನನ್ನೊಡನೆ ಚರ್ಚಿಸಿದ್ದಾರೆ. ಆಗೆಲ್ಲ ನನಗೆ ಕಾಣುತ್ತಿದ್ದುದು ಒಂದೇ ವಿಚಾರ–ಸಿನಿಮಾ ಪ್ರಿಯರು ತಿಳಿದುಕೊಂಡಂತೆ ಈ ಜಗತ್ತು ಇಲ್ಲ.

* * * *

ಸಿನಿಮಾರಂಗ ಪದೇ ಪದೇ ನನಗೆ ಹೊಸ ಆಕರ್ಷಣೆ ಆಸಕ್ತಿಗಳನ್ನು ಕೊಟ್ಟಿದೆ; ಚಿತ್ರ ವಿಚಿತ್ರ ಜನಗಳನ್ನು ಕಾಣುವ ಅವಕಾಶ ಕೊಟ್ಟಿದೆ. ಕಲಾವಿದರನ್ನು, ಕಲಾವಿದರೆಂಬ ಹೆಸರಿನ ವ್ಯಾಪಾರಿಗಳನ್ನು ಈ ರಂಗದಲ್ಲಿ ಹೇರಳವಾಗಿ ಕಂಡಿದ್ದೇನೆ. ಸ್ಪರ್ಧೆ, ಮತ್ಸರ, ಘರ್ಷಣೆಗಳು ಸಿನಿಮಾರಂಗದಲ್ಲಿರುವಂತೆಯೇ ಪ್ರೀತಿ, ಕರುಣೆ, ದುಃಖಗಳೂ ಇವೆ. ಆದರೆ ಚಿತ್ರಜಗತ್ತಿನ ಮೂರು ಆಧಾರಸ್ತಂಭಗಳು ವಾಸ್ತವಿಕವಾಗಿಯೂ ಧನ ಲಾಭ, ಹೆಸರು ಗಳಿಸುವಿಕೆ, ಹಾಗು ಪ್ರಚಾರ ಎಂಬುದು ಸ್ಪಷ್ಟ. ಸಿನಿಮಾರಂಗದಲ್ಲಿ ಏನೇ ಆದರೂ ಅದಕ್ಕೆ ಮೂಲ ಕಾರಣ ಈ ಮೂರರಲ್ಲಿ ಒಂದಾಗಿರುತ್ತದೆ. ಬಹುಶಃ ಇದನ್ನು ವಿವರಿಸಲು ಕೆಲವು ಸ್ವಾರಸ್ಯಕರ ಅನುಭವಗಳನ್ನು ಹೇಳಿದರೆ ಈ ಚಿತ್ರಣ ಸ್ಪಷ್ಟವಾಗಬಹುದೇನೊ. ಕೆಲವೊಮ್ಮೆ ತಾರೆಯರೂ ಎಲ್ಲ ಮಾನವರಂತೆ ಎಷ್ಟು ಆತ್ಮೀಯತೆ ತೋರಿಸಬಲ್ಲರು ಎಂಬ ಅನುಭವವೂ ಇದ್ದದೆ.

* * * *

ಆಗ ನನಗೆ ಸಿನಿಮಾರಂಗದ ಪರಿಚಯ ತೀರಾ ಕಡಿಮೆ. ಹಿರಿಯ ತಾರೆಯೊಬ್ಬಳನ್ನು ಕಂಡು ಸಂದರ್ಶಿಸುವ ಸಂದರ್ಭ ಬಂದಿತ್ತು. ನನ್ನೊಡನೆ ಆಗ ಕ್ಯಾಮರಾ ಕೂಡ ಇರಲಿಲ್ಲ. ಎರಡು ಮೂರು ಬಾರಿ ಕಣ್ಣು ಮುಚ್ಚಾಲೆಯಾಡಿ ತಪ್ಪಿಸಿಕೊಂಡರೂ ಆ ತಾರೆಯನ್ನು ನಾನು ಬಿಡಲಿಲ್ಲ. ಕೊನೆಗೂ ನನಗೆ ಅಪಾಯಿಂಟ್‌ಮೆಂಟ್ ಕೊಟ್ಟಳು. ವೇಳೆಗೆ ಸರಿಯಾಗಿ, ಬೆಳಗ್ಗೆ ೯ ಗಂಟೆಗೆ ಆಕೆಯ ಮನೆಗೆ ಹೋದರೆ ತಾರೆಯ ಸವಾರಿ ಇನ್ನೂ ಎದ್ದಿರಲಿಲ್ಲ. ಷೂಟಿಂಗ್ ಮುಗಿಸಿ ಬೆಳಗ್ಗೆ ನಾಲ್ಕು ಗಂಟೆಗೆ ಹಿಂದಿರುಗಿದ್ದಳಂತೆ. ಒಂದು ಗಂಟೆಯ ಬಳಿಕ ಆಕೆ ಹೊರಬಂದಳು.

ಅಪಾಯಿಂಟ್‌ಮೆಂಟ್‌ಗಳನ್ನು ಸರಿಯಾದ ವೇಳೆಗೆ ಇಟ್ಟುಕೊಳ್ಳುವ ಶಿಸ್ತು ಶೇಕಡ ೯೯ ತಾರೆಯರಲ್ಲಿ ಇಲ್ಲ ಎಂಬುದು ನನ್ನ ಅನುಭವ. ಎಲ್ಲೋ ಮೀನಾ ಕುಮಾರಿಯಂಥ ಒಬ್ಬಿಬ್ಬರು ಚಿತ್ರರಂಗದಲ್ಲಿ ಇದ್ದರು.

ತಡವಾಗಿ ಬಂದ ತಾರೆಯೊಡನೆ ಪರಿಚಯ ಹೇಳಿಕೊಂಡ ಬಳಿಕ, ಬಂದ ಉದ್ದೇಶವನ್ನು ಮತ್ತೆ ಹೇಳಿದೆ. ಆಕೆ ತೆಗೆದ ಬಾಯಿಗೆ,

"ಈ ಸಂದರ್ಶನ ಪ್ರಕಟಿಸಲು ನಿಮ್ಮ ಪತ್ರಿಕೆ ಎಷ್ಟು ಛಾರ್ಜು ವಸೂಲು ಮಾಡುತ್ತದೆ?" ಎಂದು ಕೇಳಿದಳು.

ಆಕೆಯ ಪ್ರಶ್ನೆ ಅರ್ಥವಾಗದೆ ನಾನು ತೊದಲಿದೆ. "ಈ ಸಂದರ್ಶನವನ್ನು ಪ್ರಕಟಿಸಲು ನೀವು ಏನೂ ಹಣ ಖರ್ಚು ಮಾಡಬೇಕೆಂದಿಲ್ಲ"

ನನ್ನ ಉತ್ತರದಿಂದ ಆಕೆಗೆ ಬಹಳ ಆಶ್ಚರ್ಯವಾಯಿತು. ಆ ಬಳಿಕ ಆಕೆ ಹೇಳಿದ ಮಾತಿನಿಂದ ನಾನು ದಿಗ್ಭ್ರಾಂತನಾದೆ– "ಹೆಚ್ಚಾಗಿ ನಮ್ಮ ಬಗ್ಗೆ ಲೇಖ ಪ್ರಕಟಿಸಲು ನಾವು ಪತ್ರಿಕಾಕರ್ತರಿಗೆ, ಪಬ್ಲಿಸಿಸ್ಟ ಅವರಿಗೆ ಹಣ ಕೊಡಬೇಕಾಗುತ್ತದೆ. ಇಂಗ್ಲೀಷ್ ಸಿನಿಮಾ ಪತ್ರಿಕೆಗಳ ಸಂಪಾದಕರಿಗೆ ಕೂಡ ಕೆಲವೊಮ್ಮೆ ಲಂಚ ತಿನ್ನಿಸುವ ಪ್ರಸಂಗವೂ ಬರುತ್ತದೆ. ಪ್ರಚಾರದ ಆಹಾರವಿಲ್ಲದೆ ತಾರೆ ಆಗಲಾರರು. ಸಿನಿಮಾದಲ್ಲಿ ಬದುಕಲೂ ಸಾಧ್ಯವಿಲ್ಲ. ನಿಮ್ಮಂಥ ಪತ್ರಿಕೋದ್ಯಮಿಯನ್ನು ನಾನು ಇದೇ ಮೊದಲು ಭೇಟಿಯಾಗುವುದು!"

* * * *

ರಾಜೇಶ್ ಖನ್ನನನ್ನು ಒಮ್ಮೆ ಕಾರ್ಟರ್ ರೋಡ್‌ನಲ್ಲಿರುವ ಅವನ ಬಂಗಲೆ "ಆಶೀರ್ವಾದ"ದಲ್ಲಿ ಕಾಣುವ ಸಂದರ್ಭ ಬಂದಿತ್ತು. ಮುಂದಾಗಿಯೇ ಅಪಾಯಿಂಟ್‌ಮೆಂಟ್ ನಿಶ್ಚಯಿಸಿಯಾಗಿತ್ತು. ಗೇಟಿನಲ್ಲಿ ನಿಂತ ಗೂರ್ಖನ ಬಳಿ ಹೇಳಿ ಒಳಗೆ ಹೋದೆ. ರಾಜೇಶ್ ಗಡ್ಡ ತೆಗೆಯುತ್ತಿದ್ದವನೇ ಓಡಿ ಬಂದ. ಹಸ್ತಲಾಘವ ಕೊಟ್ಟು ಆತ್ಮೀಯತೆಯಿಂದ ಕುಳ್ಳಿರಿಸಿದ. "ಕ್ಷಮಿಸಿ, ಒಂದು ಕ್ಷಣದಲ್ಲಿ ಬಂದೆ" ಎಂದು ಹೇಳಿ ಗಡ್ಡ ಮುಗಿಸಿ, ಹೊರ ಬಂದು ರೆಡಿಯಾಗಿ ಕೂತ. ಚಹಾ ಬಂತು. ಒಂದು ಗಂಟೆ ಕಾಲ ರಾಜೇಶ್ ಪೂರಾ ಈ ಸಂದರ್ಶನದಲ್ಲಿ ತನ್ಮಯನಾದ.

ಕಳೆದ ಮೂರು ವರ್ಷಗಳಿಂದ ಹಿಂದಿ ಚಿತ್ರರಂಗದಲ್ಲಿ ರಾಜೇಶ್ ಖನ್ನ ಗಾಳಿಯೇ ಬೀಸತೊಡಗಿತ್ತು. ಆತ ನೋಡಲು ವಿಶೇಷ ಸುಂದರಾಂಗನಲ್ಲ; ನಟನೆಯಲ್ಲಿ ಭಾರಿ ಹೇಳಿಕೊಳ್ಳುವಂಥದ್ದೇನಿಲ್ಲ. ಆದರೂ ರಾಜೇಶ್ ಅಷ್ಟು ಪ್ರಸಿದ್ಧನಾದುದು ಅದೃಷ್ಟದಿಂದ ಎಂದು ಅನೇಕರು ಹೇಳುತ್ತಾರೆ. ಆದರೆ ರಾಜೇಶನ ಶಿಸ್ತು, ಆತ್ಮೀಯತೆ, ದಕ್ಷತೆಗಳಿಂದ ಆತನಿಗೆ ದೊರೆತ ಪ್ರಸಿದ್ಧಿ ಸರಿಯಾದುದೇ ಎನ್ನಬೇಕು.

ರಾಜೇಶ್ ಪ್ರಚಾರಕ್ಕೆ ತುಂಬ ಮಹತ್ವ ಕೊಡುತ್ತಾನೆ. ಪತ್ರಿಕೋದ್ಯಮಿಗಳನ್ನು ಆತ್ಮೀಯತೆಯಿಂದ ಕಾಣುತ್ತಾನೆ. ನಿರ್ಮಾಪಕರೊಂದಿಗೆ, ಸಹ ನಟ–ನಟಿಯರೊಂದಿಗೆ ತುಂಬ ಉತ್ಸಾಹದಿಂದ ಇರುತ್ತಾನೆ. ಅವನ ಈ ರೀತಿಯ "ಪಬ್ಲಿಕ್ ರಿಲೇಶನ್ಸ್"ನಿಂದಲೇ ಆತ ಜನಪ್ರಿಯ ಆದ ಎನ್ನುವುದಲ್ಲ; ಆದರೆ ಅವೆಲ್ಲ ಚಿತ್ರ ಜಗತ್ತಿನಲ್ಲಿ ಆತನನ್ನು ಪ್ರಗತಿಪಥದಲ್ಲಿ ಕೊಂಡೊಯ್ಯಲು ಸಹಕಾರಿಯಾಗುವವು ಎಂಬುದು ನಿಜ.

* * * *

ರೆಹನಾ ಸುಲ್ತಾನ್ ಜುಹೂವಿನಲ್ಲಿ ಒಂದು ಬಂಗಲೆ ಕಟ್ಟಿಸಿದ್ದಾಳೆ. ಬಂಗಲೆ ಅಂದರೆ ಏನನ್ನುತ್ತೀರಿ? ಮಂಗಳೂರು ಹಂಚಿನ ಮಾಡು, ಇಟ್ಟಿಗೆಯ ಸಾದಾ ಗೋಡೆಗಳು, ಕೂತುಕೊಳ್ಳಲು ಚಾಪೆಗಳು, ಕುಡಿಯಲು ಮಣ್ಣಿನ ವಾಸನೆಯ ಹೂಜಿ ನೀರು. ಇದು ಸಿನಿಮಾ ತಾರೆಯ ಮನೆಯೋ ಸನ್ಯಾಸಿ ಆಶ್ರಮವೋ ಅಂದುಕೊಂಡು ನಾನು ಒಳ ಹೊಕ್ಕೆ.

ಮನೆಯ ಸುತ್ತಲೂ ಸುಂದರ ತೋಟ. ಹಸಿರು ಹುಲ್ಲು ಹಾಸಿನ ಮೇಲೆ ಕೂತು ರೆಹನಾ ತನ್ನ ಅನುಭವ ಹೇಳಿದಳು. ಸಿನಿಮಾ ಮಂದಿಯಲ್ಲಿ ಹೆಚ್ಚಾಗಿ ಇರುವಂಥ ಕೃತಕ ಭಾವ, ಜಂಭ, ಹಗ್ಗಳಿಕೆಗಳು ಆಕೆಯಲ್ಲಿ ಒಂದಿಷ್ಟೂ ಇಲ್ಲ. ಇಷ್ಟಾಗಿ ರೆಹನಾ ಶ್ರೀಮಂತ ಮನೆತನದಿಂದಲೇ ಬಂದವಳು.

ಅಂದು ಸಂದರ್ಶನಕ್ಕಾಗಿ ನಾನು ಕೇವಲ ಒಂದು ಗಂಟೆ ಕಾಲ ಕೇಳಿದ್ದೆ. ಆದರೆ ಆಕೆ ನಿರಾತಂಕವಾಗಿ ಮಾತನಾಡುತ್ತ, ತನ್ನ ಅನುಭವಗಳನ್ನು ಹೇಳುತ್ತಿದ್ದಳು. ಹಲವು ಫೋಟೋಗಳನ್ನೂ ಹಿಡಿದುದಾಯಿತು. ಅಂದು ಅಲ್ಲೇ ಊಟಕ್ಕೆ ನಿಲ್ಲುವಂತೆ ರೆಹನಾ ಒತ್ತಾಯಿಸಿದಳು. ಉಪಾಯವಿಲ್ಲದೆ ಒಪ್ಪಬೇಕಾಯಿತು. ಆದರೆ ಊಟದ ಹೊತ್ತಿಗೆ ಬಂದುದು ಮಾಂಸಾಹಾರ. ನಾನು ಶುದ್ಧ ಸಸ್ಯಾಹಾರಿ. ಎಂದಬಳಿಕ ರೆಹನಾ ಚಡಪಡಿಸಿದಳು. ಮತ್ತೆ ಚಪಾತಿ ಅನ್ನ, ಬೇಳೆಗಳನ್ನು ತಯಾರಿಸಿ, ಅದನ್ನೇ ಊಟ ಮಾಡಿದೆವು. ಬಹಳ ಹೆಸರಾದ ತಾರೆ ಇಷ್ಟು ಸರಳವಾಗಿರಬಹುದು ಎಂಬ ಕಲ್ಪನೆಯೂ ನನಗಿರಲಿಲ್ಲ.

* * * *

ರಾಧಾ ಸಲೂಜಾ ಒಮ್ಮೆ ಸೆಟ್ ಮೇಲೆ ಭೇಟಿ

ಟಯಾಗಿದ್ದಳು. ಮಾತುಕತೆಯಾಡುತ್ತಿರುವಂತೆ ತಾನು ಎಲ್ಲ ಭಾರತೀಯ ಭಾಷೆಗಳ ಚಿತ್ರಗಳಲ್ಲಿ ನಟಿಸುತ್ತೇನೆ ಎಂದು ಬಾಯಿ ಬಡಾಯಿ ಕೊಚ್ಚಿಕೊಂಡಳು.

"ಕನ್ನಡದಲ್ಲೂ ನಟಿಸುವಿರಾ?" ಎಂದು ಕೇಳಿದೆ.

"ಹೌದು" ಎಂದು ಕನ್ನಡದಲ್ಲೇ ಉತ್ತರಿಸಿದಳು. ಆ ಮೇಲೆ ಹಿಂದಿಯಲ್ಲಿ ಹೀಗೆ ಹೇಳಿದಳು—"ನಾನೂ ಕನ್ನಡ ಕಲಿತಿದ್ದೇನೆ ಗೊತ್ತೇ?"

"ಮಾತನಾಡಿ ನೋಡೋಣ" ಎಂದೆ.

"ನಾವೆಲ್ಲ ಹಂದಿಗಳು!" ಎಂದಳು.

ಈ ಶಬ್ದಗಳನ್ನು ಪಾಪ ರಾಧಾ ಸಲೂಜಾಗೆ ಪೂನಾದಲ್ಲಿ ಕಲಿಯುವಾಗ ಕನ್ನಡ ಸಹಪಾಠಿಗಳಾರೋ ಹೇಳಿಕೊಟ್ಟಿದ್ದರಂತೆ. "ಅದರ ಅರ್ಥ ನಿಮಗೆ ಗೊತ್ತೇ?" ಎಂದಾಗ ಆಕೆ ತಟಕ್ಕನೆ ಹೇಳಿದಳು. "ನಾವು ತಾರೆಯರು ಎಂದಲ್ಲವೆ?"

* * * *

ಪತ್ರಿಕೆಗಳಲ್ಲಿ ಪ್ರಕಟವಾಗುವ ತಮ್ಮ ಫೋಟೋಗಳ ಬಗ್ಗೆ ತಾರೆಯರು ಎಲ್ಲರಂತೆಯೇ ತುಂಬ ಆತುರರಾಗಿರುತ್ತಾರೆ. ಫೋಟೋ ಚೆನ್ನಾಗಿ ಮುದ್ರಣವಾಗದಿದ್ದರೆ ಅವರಿಗೆ ನಿರಾಸೆಯಾಗುತ್ತದೆ. ಕೆಲವೊಮ್ಮೆ ಕೋಪ ಬರುವುದೂ ಇದೆ.

"ಆರಾಧನಾ" ಚಿತ್ರದ ಯಶಸ್ಸಿನ ಬಳಿಕ ಶರ್ಮಿಳಾ ಠಾಗೋರ್ ಪ್ರಸಿದ್ಧಿ ಗಗನಕ್ಕೇರಿತ್ತು. ಆಕೆಯನ್ನು ಮಾತನಾಡಿಸುವುದೇ ದೊಡ್ಡ ಕೆಲಸವಾಗಿತ್ತು. ಆಕೆಯ ಜಂಭ ಇನ್ನೂ ಹೆಚ್ಚಾಗಿತ್ತು. ಆದರೂ ಆಕೆಯನ್ನು ಬಹಳ ಕಷ್ಟದಿಂದಲೇ ಭೇಟಿಯಾಗಿ ಸಂದರ್ಶನ ಮಾಡಿದೆ. ಅನೇಕ ಫೋಟೋಗಳನ್ನು ತೆಗೆದೆ. ಫೋಟೋಗಳನ್ನು ಪ್ರಕಟಿಸುವ ಮುನ್ನ ತನಗೆ ತೋರಿಸಬೇಕು ಎಂದು ಶರ್ಮಿಳಾ ಕರಾರು ಹಾಕಿದ್ದಳು.

ಕೆಲವು ದಿನಗಳ ಬಳಿಕ ಮತ್ತೆ ಫೋಟೋಗಳೊಂದಿಗೆ ಶರ್ಮಿಳಾಳನ್ನು ಕಂಡೆ. ಒಂದೊಂದೇ ಫೋಟೋ ನೋಡಿ ಶರ್ಮಿಳಾ ಅವುಗಳಲ್ಲಿನ ಎರಡು ಫೋಟೋಗಳನ್ನು ಮಾತ್ರ ಪ್ರಕಟಿಸುವುದು ಬೇಡ, ಎಂದು ಬಿಟ್ಟಳು. ನಿಜವಾಗಿಯೂ ಆ ಎರಡು ಫೋಟೋಗಳು ತುಂಬ ಚೆನ್ನಾಗಿಯೇ ಬಂದಿದ್ದುವು.

"ಈ ಎರಡು ಫೋಟೋಗಳು ಮುದ್ರಣಕ್ಕೆ ತುಂಬ ಚೆನ್ನಾಗಿವೆ" ಎಂದು ನಾನು ಹೇಳಿದೆ. ಅದಕ್ಕೆ ಶರ್ಮಿಳಾ ಕೊಟ್ಟ ಉತ್ತರ ವಿಚಿತ್ರವಾಗಿತ್ತು.

"ಚೆನ್ನಾಗಿವೆ ನಿಜ, ಆದರೆ ನನ್ನ ಗಲ್ಲದ ಗುಳಿಗಳು ಅದರಲ್ಲಿ ಮೂಡಿಯೇ ಇಲ್ಲ!"

ಶರ್ಮಿಳಾಗೆ ತನ್ನ ಗುಳಿಗಳ ಮೇಲೆ ಆ ಬಗೆಯ ಮೋಹವಿದೆ ಎಂದು ನನಗೆ ಅಂದೇ ತಿಳಿಯಿತು.

* * * *

ಸತ್ಯಜಿತ್ ರೇ ಅವರನ್ನು ಒಮ್ಮೆ ಕಾಣುವ ಪ್ರಸಂಗ ಬಂದಿತ್ತು. ಅವರ ಚಿತ್ರಗಳಲ್ಲಿ ಅಭಿವ್ಯಕ್ತವಾಗಿರುವ ಸಮಕಾಲೀನ ಭಾರತದ ವಾಸ್ತವಿಕ ಚಿತ್ರ —ಬಡತನದ ಚಿತ್ರ—ಪಾಶ್ಚಾತ್ಯರ ದೃಷ್ಟಿಯಲ್ಲಿ ಯಾವ ರೀತಿಯ ಪ್ರತಿಕ್ರಿಯೆ ಉಂಟು ಮಾಡಿದೆ ಎಂದು ಅವರಿಂದಲೇ ನನಗೆ ಕೇಳಿ ತಿಳಿಯುವ ಕುತೂಹಲವಿತ್ತು. ರೇ ಹೇಳಿದರು—

"ಪಾಶ್ಚಾತ್ಯರು ನನ್ನ ಚಿತ್ರಗಳನ್ನು ಏಕೆ ಮೆಚ್ಚಿಕೊಂಡರು ಎಂಬ ಬಗ್ಗೆ ನನ್ನದೇ ಆದ ಶೋಧವನ್ನು ನಾನು ಮಾಡಿದ್ದೇನೆ. ಜೀವನದಂತೆಯೇ ಇಲ್ಲಿ ಘಟನೆಗಳು ಸಹಜವಾಗಿ ನಡೆಯುತ್ತವೆ. ಅವನ್ನು ಕಲಾತ್ಮಕವಾಗಿ ತೋರಿಸುವ ದೃಷ್ಟಿ—ಇತರ ಚಿತ್ರಗಳಿಗಿಂತ ಭಿನ್ನ. ಅದು ಶುದ್ಧ ಭಾರತೀಯ. ನಾವು ಪ್ರತಿಯೊಂದರಲ್ಲೂ ಈ ಭಾರತೀಯತ್ವವನ್ನು ಬೆಳೆಸಿಕೊಂಡರೆ ನಾವು ಕೃತಕೃತ್ಯರಾಗುತ್ತೇವೆ. ಇತರರು ನಮ್ಮನ್ನು ಮೆಚ್ಚಿಕೊಳ್ಳುವುದು ಇದೇ ವಿಚಾರದಲ್ಲಿ."





ದೀಪಾವಳಿಯು ಸರ್ವರಿಗೂ ಶುಭದಾಯಕವಾಗಲಿ!!


ಹೊಟೆಲ್ ಗೋಕುಲ
ಉಪಹಾರ, ಊಟ ಮತ್ತು ವಸತಿ
ಸ್ಟೇಶನ್ ರೋಡ,
ಕೊಲ್ಹಾಪುರ
ಫೋನ್ : ಲಾಜಿಂಗ್ : ೨೪೫೫
ರಿಫ್ರೆಶಮೆಂಟ್ : [illegible]



HOTEL GOKUL
Restaurant Boarding &
Lodging, Station Road,
KOLHAPUR
Phone :
Lodging : 2455
Refreshment : 2455

ಕೊಲ್ಹಾಪುರದ ಕೇಂದ್ರ ಸ್ಥಳದಲ್ಲಿದ್ದು ಉಳಿದುಕೊಳ್ಳಲು ಎಲ್ಲ ಬಗೆಯ
ಅತ್ಯಾಧುನಿಕ ಸಲಕರಣೆಗಳಿಂದ ಸುಸಜ್ಜಿತ ಏಕಮೇವ ಹೊಟೆಲ್

- ಶುಚಿ, ರುಚಿಯುಳ್ಳ, ವೈಶಿಷ್ಟ್ಯಪೂರ್ಣ ಊಟ ಮತ್ತು ಉಪಹಾರ,
- ಉತ್ಕೃಷ್ಟ ಕಾಫಿ, ಟೀ ಮತ್ತು ಇದರ ಮಧುರ ಪಾನೀಯಗಳು
- ಆದರ್ಶನೀಯ ಸೇವೆ.

# ಭಾರತೀಯ ಚಿತ್ರರಂಗ ನಡೆದು ಬಂದ ದಾರಿ



ತೆರೆಯ ಮೇಲೆ ಕಾಣಿಸಿಕೊಂಡ →
ಪ್ರಥಮ ನಟಿ ಗೋಹರ್

ಎಂ. ಎಸ್. ಎಂ. ದೇಸಾಯಿ

ದಾದಾ ಸಾಹೇಬ ಫಾಲಕೆ, ಭಾರತದ ಪ್ರಥಮ ಚಲಚಿತ್ರ ನಿರ್ಮಾಪಕರು ಎಂದು ಈವರವಿಗೂ ತಿಳಿಯಲಾಗಿತ್ತು. ಆದರೆ ಈಚೆಗೆ ದೊರೆತ ಆಧಾರದ ಮೇರೆಗೆ ಮರಾಠಿ ಭಾಷಿಕ ಶ್ರೀ ಆರ್. ಸಿ. ತೋರಣೆ ಯವರು ಮೊದಲಿಗರೆಂದು ಹೇಳಬಹುದು.

ಅವರು ತಯಾರಿಸಿದ "ಪುಂಡಲೀಕ" ಚಿತ್ರವನ್ನು ಮುಂಬಯಿಯ 'ಕೊರೊನೇಶನ್' ಚಿತ್ರಮಂದಿರದಲ್ಲಿ ಎನ್. ಜಿ. ಚಿತ್ರೆಯವರೊಂದಿಗೆ ಸೇರಿ ಮೇ ೧೮, ೧೯೧೨ ರಲ್ಲಿ ಬಿಡುಗಡೆ ಮಾಡಿದರೆಂಬ ಸಂಗತಿ "ಟಾಯಿಮ್ಸ್ ಆಫ್ ಇಂಡಿಯ" ಪತ್ರಿಕೆಯ ಜಾಹೀರಾತೊಂದರ ಮೂಲಕ ತಿಳಿಯುತ್ತದೆ. ಮುಂದೆ ಸರಿಯಾಗಿ ಒಂದು ವರ್ಷದ ನಂತರ ಅಂದರೆ ಮೇ, ೩, ೧೯೧೩ರಲ್ಲಿ ಫಾಲಕೆ ನಿರ್ಮಿಸಿದ 'ರಾಜಾ ಹರಿಶ್ಚಂದ್ರ' ಚಿತ್ರವು ಕೂಡ ಅದೇ ಚಿತ್ರಗೃಹದಲ್ಲಿ ಪ್ರದರ್ಶನಗೊಂಡಿತು.

'ವಿದೇಶೀ' ಚಿತ್ರದೊಂದಿಗೆ 'ಪುಂಡಲೀಕ' ದ್ವಿವಿಧ ಕಾರ್ಯಕ್ರಮದಲ್ಲಿ ಕಾಣಿಸಿಕೊಂಡಿತಾದರೂ ಅದು ಫಾಲಕೆಯವರ ಹರಿಶ್ಚಂದ್ರ ಚಿತ್ರದಷ್ಟು ಯಶಸ್ಸು ಗಳಿಸಲಿಲ್ಲ.

ಹರಿಶ್ಚಂದ್ರ ಚಿತ್ರ ಅಪಾರ ಜನಪ್ರಿಯತೆ ಪಡೆದುದರ ಪರಿಣಾಮವಾಗಿ 'ಪುಂಡಲೀಕ' ಚಿತ್ರದ ಅಸ್ತಿತ್ವವೇ ನಶಿಸಿತೆಂದು ಹೇಳಬಹುದು. ಹರಿಶ್ಚಂದ್ರ ಚಿತ್ರವೇ ಮೊದಲಚಿತ್ರ ಎನ್ನುವಷ್ಟರ ಮಟ್ಟಿಗೆ ಅದು ಜನ ಮನದಲ್ಲಿ ಅಚ್ಚೊತ್ತಿ ನಿಂತಿತು. ಹರಿಶ್ಚಂದ್ರದ ಅದ್ಭುತ ಯಶಸ್ಸಿನಿಂದ ಪ್ರೋತ್ಸಾಹಿತರಾದ ಶ್ರೀ ಫಾಲ್ಕೆ ಮುಂದೆ ಮೋಹಿನಿ ಭಸ್ಮಾಸುರ, ಸತ್ಯವಾನ ಸಾವಿತ್ರಿ, ಲಂಕಾದಹನಗಳಂತಹ ಜನಪ್ರಿಯ ಚಿತ್ರಗಳನ್ನು ನಿರ್ಮಿಸಿದರು. ಅದರಿಂದಾಗಿ ದಾದಾ ಫಾಲ್ಕೆಯವರೇ ಭಾರತದ ಮೊದಲ ಚಿತ್ರ ನಿರ್ಮಾಪಕರು ಎಂಬ ಕೀರ್ತಿ ಸ್ಥಿರವಾಯಿತಲ್ಲದೆ ತೋರಣೆಯವರ ಹೆಸರು ಅಳಿಸಿ ಹೋಯಿತು.

೧೯೧೨ರಿಂದ ೧೯೩೦ರ ವರೆಗಿನ ಅವಧಿಯು ಚಲನಚಿತ್ರರಂಗದ ಅತಿ ಮಹತ್ವದ ಹಾಗು ಹೆಮ್ಮೆಯ ವರ್ಷಗಳು ಎನ್ನಬೇಕು. ಈ ಅವಧಿಯಲ್ಲಿ ಚಿತ್ರರಂಗದಲ್ಲಿ ಅನೇಕ ಬದಲಾವಣೆಗಳಾಗಿ ಕಲೆ ಹಾಗು ತಾಂತ್ರಿಕ ಮಟ್ಟದಲ್ಲಿ ವಿಶೇಷ ಸುಧಾರಣೆಗಳಾದವು. ಇದೇ ಅವಧಿಯಲ್ಲಿ ಭಾರತ ತನ್ನ ಸಾಧನೆಗಾಗಿ ಅಂತಾರಾಷ್ಟ್ರೀಯ ಮನ್ನಣೆಯನ್ನು ಪಡೆಯಿತು. ಈ ವರುಷಗಳಲ್ಲಿ ನಿರ್ಮಿಸಲಾದ ಚಿತ್ರಗಳೆಲ್ಲವೂ ಪೌರಾಣಿಕ, ಐತಿಹಾಸಿಕ ಕಥೆಗಳಿಗೆ ಸಂಬಂಧಿಸಿದವಾಗಿದ್ದವು. ಸಾಮಾಜಿಕ ಚಿತ್ರಗಳು ತೀರ ವಿರಳವೆಂದೇ ಹೇಳಬೇಕು. ರಾಜ ನೀತಿಕ ಚಿತ್ರಗಳನ್ನು ತಯಾರಿಸುವುದು ದುಸ್ತರವೇ ಆಗಿತ್ತು. ಅದಕ್ಕೆ ಕಾರಣವೆಂದರೆ ಬ್ರಿಟಿಷ್ ಸರಕಾರದ ಕಠಿಣತಮ ಸೆನ್ಸಾರ್ ನೀತಿ.

೧೯೧೪ರಲ್ಲಿ ಫಾಲ್ಕೆಯವರು ತಯಾರಿಸಿದ "ಸತ್ಯ



ಭಾರತದಲ್ಲಿ ಪ್ರಥಮವಾಗಿ →
ಚಿತ್ರಪ್ರದರ್ಶನವಾದ ವಾಟ್ಸನ ಹೋಟೆಲ್
"ಎಸ್ಪ್ಲೇನೇಡ ಮ್ಯಾನಶನ್"



ಮಾಸ್ಟರ ವಿಠ್ಠಲ್

ದಾನ ಸಾವಿತ್ರಿ" ಚಿತ್ರ ಲಂಡನ್ನಿನಲ್ಲೂ ಪ್ರದರ್ಶನಗೊಂಡು ಜನಪ್ರಿಯತೆ ಪಡೆಯಿತು. ಹಾಗೆಯೇ ೧೯೧೮ರಲ್ಲಿ ಬಿಡುಗಡೆಯಾದ ಕೃಷ್ಣಜನ್ಮ, ೧೯೧೯ರಲ್ಲಿ ಬಂದ ಕಾಲಿಯಾ ಮರ್ದನ ಚಿತ್ರಗಳು ಭಾರತೀಯ ಚಿತ್ರರಂಗದ ಮಹಾನ್ ಕೃತಿಗಳೆಂದು ಹೇಳಬಹುದು. ೧೯೧೭ರಲ್ಲಿ ಬಂಗಾಲದವರು ನಿರ್ಮಿಸಿದ ಮೊದಲ ಚಿತ್ರ 'ಸತ್ಯವಾದಿ ಹರಿಶ್ಚಂದ್ರ' ತೆರೆ ಕಂಡರೆ ೧೯೧೮ರಲ್ಲಿ ದಕ್ಷಿಣದವರು ನಿರ್ಮಿಸಿದ "ಕೀಚಕ ವಧಮ್" ತೆರೆ ಕಂಡಿತು. ಎರಡನೆಯ ದಶಕದ ಚಿತ್ರರಂಗದ ಒಂದು ಮಹತ್ಸಾಧನೆಯೆಂದರೆ ೧೯೧೮ರಲ್ಲಿ ಭಾರತೀಯ ಚಲನ ಚಿತ್ರ ಸೆನ್ಸಾರ್ ಮಂಡಳಿಯ ರಚನೆಯಾದುದು. ಚಲನ ಚಿತ್ರರಂಗದ ಇಂದಿನ ಪ್ರಮುಖ ವ್ಯಕ್ತಿಯಾದ ಶ್ರೀ ವ್ಹಿ. ಶಾಂತಾರಾಮರವರು ೧೯೨೧ರಲ್ಲಿ ನಿರ್ಮಿಸಲಾದ "ಸುರೇಖಾ ಹರಣ" ಚಿತ್ರದಲ್ಲಿ ಕೃಷ್ಣನಾಗಿ ಮೊದಲ ಬಾರಿಗೆ ಅಭಿನಯಿಸಿದರು. ಮುಂದೆ ಮೂರು ವರ್ಷಗಳ ನಂತರ ೧೯೨೪ರಲ್ಲಿ ಮದನ ಥೇಟರ್ಸ್‌ನವರು ಇಟಲಿಯ ವಿದೇಶಿ ಚಿತ್ರಸಂಸ್ಥೆಯ ಸಹಯೋಗದೊಂದಿಗೆ "ಸಾವಿತ್ರಿ" ಎಂಬ ಚಿತ್ರವನ್ನು ನಿರ್ಮಿಸಿದರು. ಅದಕ್ಕೂ ಮುಂಚೆ ಸುಚೇತಸಿಂಗರೆಂಬೊಬ್ಬರು ದೊರೋತಿ ಕಿಂಗ್ಡಮ್ ಎಂಬ ಅಮೇರಿಕೆಯ ನಟಿಯನ್ನು ಕರೆತಂದು "ಶಕುಂತಲಾ" ಚಿತ್ರವನ್ನು ನಿರ್ಮಿಸಿದ್ದರು. (೧೯೨೦ ರಲ್ಲಿ) ೧೯೨೫ರಲ್ಲಿ ಬಾಬುರಾವ ಪೇಂಟರರು "ಸಾವಕಾರೀ ಪಾಶ" ಎಂಬ ಹೊಸ ಸಾಮಾಜಿಕ ಚಿತ್ರವನ್ನು ತಯಾರಿಸಿ ಅದ್ಭುತ ಯಶಸ್ಸನ್ನು ಪಡೆದರು. ಬಡವರನ್ನು ಸುಲಿಯುತ್ತಿದ್ದ ಶ್ರೀಮಂತ ಜಮೀನುದಾರರ ಮೇಲೆ ಗದಾಪ್ರಹಾರಗೈದ ಪ್ರಥಮ ಸಾಮಾಜಿಕ ಚಿತ್ರವೆನ್ನಿಸಿಕೊಂಡಿತು.

ಅದೇ ವರ್ಷ ಭಾರತದ ಚಲನಚಿತ್ರರಂಗದ ಮೇಲೆ ಗೋಹರ (ಫಾರ್ಚ್ಯೂನ್ ಆ್ಯಂಡ್ ಫೂಲ್ಸ) ಹಾಗೂ ಸುಲೋಚನಾ (ವೀರಬಾಲಾ) ಎಂಬಿಬ್ಬರು ಜನಪ್ರಿಯ ನಟಿಯರು ಕಾಣಿಸಿಕೊಂಡರು. ಅದುವರೆಗೆ ತಾರಾ ಪದ್ಧತಿ ಭಾರತದಲ್ಲಿ ಪ್ರಚಲಿತವಿರಲಿಲ್ಲ. ತೆರೆಯ ಮೇಲೆ ಕಾಣಿಸಿಕೊಂಡ ಪ್ರಥಮ ಮಹಿಳೆ ಎಂಬ ಕೀರ್ತಿಗೆ ಪಾತ್ರಳಾದ ಗೋಹರ್‌ಬಾಯಿ ಅಪಾರ ಜನಪ್ರಿಯತೆಯನ್ನೂ ಪಡೆದಳು. ಮುಂದೆ ತೆರೆಯ ಮೇಲೆ ಕಾಣಿಸಿಕೊಂಡು ಜನಪ್ರಿಯತೆಯನ್ನು ಪಡೆದವರಲ್ಲಿ ಜಹನ್ ಆರಾ ಕಜ್ಜನ್. ದೇವಿಕಾರಾಣಿ, ಝುಬೇದಾ, ಮೆಹ್ತಾಬ್ ಹಾಗು ಇತರರು ಪ್ರಮುಖ ತಾರಾಮಣಿಗಳು.



'ಜಲತಿ ನಿಶಾನಿ'ಯಲ್ಲಿ ಮಾಸ್ಟರ್ ವಿನಾಯಕ

೧೯೨೬ರಲ್ಲಿ ತೆರೆ ಕಂಡ ಹಿಮಾಂಶು ರಾಯ್ ಅವರ "ಲಾಯಿಟ್ ಆಫ್ ಏಶಿಯಾ" ಚಿರಸ್ಮರಣೀಯ ಚಿತ್ರವೆನಿಸಿತಲ್ಲದೆ ವಿದೇಶದಲ್ಲೂ ಪ್ರದರ್ಶನಗೊಂಡಿತು. ವ್ಯಾಪಾರೀ ದೃಷ್ಟಿಯಿಂದ ಉತ್ತಮ ಚಿತ್ರವೆಂದು ಪರಿಗಣಿಸಲ್ಪಟ್ಟಿತು. ಭಾರತೀಯ ಚಿತ್ರರಂಗಕ್ಕೆ ಕೀರ್ತಿ ತಂದುಕೊಟ್ಟ ಪ್ರಥಮ ಚಿತ್ರವೆನಿಸಿಕೊಂಡಿತಲ್ಲದೆ ಹಿಮಾಂಶು ರಾಯ್ ಅವರನ್ನು ಉತ್ತಮ ನಿರ್ದೇಶಕನೆಂಬ ಖ್ಯಾತಿಯ ಶಿಖರಕ್ಕೇರಿಸಿತು. ಮರುವರ್ಷ ವ್ಹಿ. ಶಾಂತಾರಾಮ ಕೂಡ "ನೇತಾಜಿ ಪಾಲಕರ" ಎಂಬ ತಮ್ಮ ಪ್ರಥಮ ಚಿತ್ರವನ್ನು ನಿರ್ದೇಶಿಸಿ ದಿಗ್ದರ್ಶಕರ ಸಾಲಿಗೆ ಸೇರಿದರು. (೧೯೨೭). ಆದರೆ ೧೯೩೦ ರಲ್ಲಿ ಅವರೇ ನಿರ್ದೇಶಿಸಿ ತಯಾರಿಸಿದ "ಉದಯ ಕಾಲ" ಚಿತ್ರವು ಸೆನ್ಸಾರ್ ಮಂಡಳಿಯವರ ಹಿಡಿತಕ್ಕೆ ಸಿಕ್ಕು ತೊಂದರೆಗೊಳಗಾಯಿತು. ಹಾಗಾಗಲು ಬಹುಶಃ ರಾಜಕೀಯವೇ ಮೂಲ ಕಾರಣವೆನ್ನಬಹುದು.

## ವಾಕ್ಚಿತ್ರದ ಆಗಮನ

೧೯೩೧ರ ಮಾರ್ಚ್ ೧೪, ಭಾರತೀಯ ಚಲಚಿತ್ರರಂಗದಲ್ಲಿ ಹೊಸಯುಗ ಪ್ರಾರಂಭವಾದ ಸುವರ್ಣ ದಿನ. ಪ್ರಥಮ ವಾಕ್‌ಚಿತ್ರ ತೆರೆ ಕಂಡ ಮಹಾನ್ ದಿನ. ಅರ್ದೇಶಿರ ಇರಾಣಿಯವರ "ಆಲಂ ಆರಾ" ವಾಕ್ಚಿತ್ರ ತೆರೆ ಕಂಡಿತು. ಈ ಚಿತ್ರ ಭಾರತದ ಚಿತ್ರ ರಂಗದಲ್ಲಿ ಹೊಸ ಕ್ರಾಂತಿಯ ಕಹಳೆಯನ್ನೂದಿತು. ಅವರೆಗೂ ಭಾರತದಲ್ಲಿ ಮೂಕಿ ಚಿತ್ರಗಳೇ ತಯಾರಾಗುತ್ತಿದ್ದವು, ಧ್ವನಿಮುದ್ರಣವೇ ಇರಲಿಲ್ಲ. ಸಂಭಾಷಣೆ ಹಾಗೂ ಸ್ವ



ಫಾಳ್ಕೆಯವರು ಹಿಂದೂಸ್ಥಾನ ಫಿಲ್ಮ್ ಕಂಪನಿಯಿಂದ ನಿರ್ಮಿಸಿದ 'ಕೀಚಕ ವಧೆ' ಚಿತ್ರದ ಒಂದು ದೃಶ್ಯ

ಗೀತೆಗಳ ಪ್ರಭಾವ ಹೆಚ್ಚಿಸಿತು. ಆಲಂ ಆರಾದಲ್ಲಿ ಝುಬೇದಾ ಹಾಗೂ ಮಾಸ್ಟರ್ ವಿಠಲ್ ಪ್ರಮುಖ ಪಾತ್ರಧಾರಿಗಳಾಗಿದ್ದರು. ಈ ಚಿತ್ರದ ನಿರ್ಮಾಪಕ ನಿರ್ದೇಶಕ ಇರಾಣಿ ಚಿತ್ರರಂಗಕ್ಕೆ ಹೊಸಬರೇನೂ ಆಗಿರದೆ ಹಿಂದೆ ಹಲವಾರು ಮೂಕಿ ಚಿತ್ರಗಳನ್ನುವರು ತಮ್ಮದೇ ಆದ ಚಿತ್ರ ಸಂಸ್ಥೆಯ ಅಡಿಯಲ್ಲಿ ಹಿಂದಿ, ಇಂಗ್ಲಿಷ್, ಪರ್ಷಿಯನ್ ಹಾಗು ತಮಿಳು ಭಾಷೆಗಳಲ್ಲಿ ತಯಾರಿಸಿದ್ದರು.

"ಆಲಂಆರಾ"ದ ನಂತರ ಲೈಲಾ ಮಜ್ನು 'ಸಿರೀನ್ ಫರಹಾದ' ಜಮಾಲ್ ಸಾಸ್ಥಿ (ಬಂಗಾಲಿ) ಹಾಗು ನೂರ್ ಜಹಾನ್ (ಹಿಂದಿ ಹಾಗು ಇಂಗ್ಲಿಷ್ ಭಾಷೆಗಳಲ್ಲಿ) ತಯಾರಾಗಿ ತೆರೆಕಂಡ ಇತರ ಚಿತ್ರಗಳು. ಇದೇ ಅವಧಿಯಲ್ಲಿ ತೆರೆ ಕಂಡ "ಬಿಲ್ವ ಮಂಗಲ್" (ಮೊದಲ ವರ್ಣ ಚಿತ್ರ) ಅಯೋಧ್ಯೆ ಚಾ ರಾಜಾ, (ಪ್ರಥಮ ಮರಾಠಿ ಚಿತ್ರ) ಕರ್ಮ (ಹಿಮಾಂಶು ರಾಯರಿಂದ ಹಿಂದಿ ಹಾಗು ಇಂಗ್ಲಿಷ್ ಭಾಷೆಗಳಲ್ಲಿ ನಿರ್ಮಿತ) ಚಿತ್ರಗಳು ಪ್ರಮುಖವಾದವುಗಳು. ಅದೂ ಅಲ್ಲದೆ, ಪೂರ್ಣ ಭಗತ್, ಅಮೃತ ಮಂಥನ, ದೇವದಾಸ, ಅಛೂತ ಕನ್ಯಾ, ಸಂತ ತುಕಾರಾಮ, ದುನಿಯಾ ನ ಮಾನೆ; ವಿದ್ಯಾಪತಿ, ಪುಕಾರ, ಸಿಕಂದರ, ಆದ್ಮಿ, ಔರತ, ಕೋರ್ಟ ಡ್ಯಾನ್ಸರ್, ಕಂಗನ, ಬಂಧನ, ಝೂಲಾ, ಕಿಸ್ಮತ್ (ಕಲ್ಕತ್ತೆಯಲ್ಲಿ ೨೦೦ ವಾರಗಳ ವರೆಗೆ ನಡೆದು ದಾಖಲೆ ಸ್ಥಾಪಿಸಿದ ಚಿತ್ರ) ಭರತ ಮಿಲಾಪ, ರಾಮರಾಜ್ಯ, ಹಮರಾಹಿ, ರಾಮ ಶಾಸ್ತ್ರಿ, ಪಡೋಶಿ, ಧರತಿಕೆ ಬಾಲ ಹಾಗು ಡಾ. ಕೋಟ್ನೀಸ್ ಕಿ ಅಮರ ಕಹಾನಿ ಮೊದಲಾದವುಗಳು ಸಂಭಾಷಣೆ ಹಾಗೂ ಸಂಗೀತ ಪ್ರಧಾನ ಚಿತ್ರಗಳಾಗಿದ್ದವು. ಆದರಲ್ಲಿ ಕೆಲ ಅಪವಾದಾತ್ಮಕ ಚಿತ್ರಗಳೂ ಇದ್ದವು. ೧೯೩೭ರಲ್ಲಿ ವಾಡಿಯಾ ಮೂವ್ಹಿಟೋನ್ ಸಂಸ್ಥೆಯವರು ನವಜೀವನ ಎಂಬ ಹಾಡುಗಳೇ ಇರದ ಪ್ರಥಮ ಚಿತ್ರವನ್ನು ತಯಾರಿಸಿದರಾದರೆ ಅದೇ ವರುಷ ವ್ಹಿ. ಶಾಂತಾರಾಮರು ಹಿನ್ನೆಲೆಯ "ಸಂಗೀತವಿರದ ದುನಿಯಾ ನ ಮಾನೆ" ಚಿತ್ರವನ್ನು ನಿರ್ಮಿಸಿದರು. (ಆಗ ಚಿತ್ರದಲ್ಲಿ ಸಂಗೀತ ಹೊಸ ವೈವಿಧ ವೆನಿಸಿತ್ತು.)



ಪ್ರಥಮ ವಾಕ್ಚಿತ್ರ "ಆಲಂ ಆರಾ"ದಲ್ಲಿನ ಒಂದು ದೃಶ್ಯ



'ಬಹಾದುರ ಎ ಸುಲೆಮಾನಿ'ಯಲ್ಲಿ ಝುಬೇದಾ

## ಸುವರ್ಣ ಕಾಲ

೧೯೩೧ ರಿಂದ ೧೯೫೬ ರ ಅವಧಿ ಭಾರತೀಯ ಚಿತ್ರರಂಗದ "ಸುವರ್ಣ ಕಾಲ"ವೆನ್ನಬೇಕು. ರಜತ ಪರದೆಯ ಮೇಲೆ ಚಿತ್ರಗಳನ್ನು ಕಂಡು ಪ್ರೇಕ್ಷಕರು ಪ್ರಭಾವಿತರಾದರೆನ್ನಬಹುದು. ಚಿತ್ರರಂಗ ಕ್ರಮೇಣ ಪೌರಾಣಿಕ ಹಾಗು ಜಾನಪದ ಕಥೆಗಳಿಂದ ಜಿಡುಗಡೆ ಹೊಂದಿ ಸಾಮಾಜಿಕದತ್ತ ವಾಲಿತು. ಉದ್ದೇಶ ಪೂರಿತ ಹಾಗು ಗಂಭೀರ ಪ್ರವೃತ್ತಿಯ ಚಿತ್ರಗಳ ಸಂಖ್ಯೆ ಬೆಳೆಯ ತೊಡಗಿತು. ಸುಶಿಕ್ಷಿತ ಕಲಾವಿದರು. ತಂತ್ರಜ್ಞರು ಚಿತ್ರರಂಗದತ್ತ ಆಕರ್ಷಿತರಾದರು. ಬಿ. ಎನ್. ಸರಕಾರ, ಹಿಮಾಂಶು ರಾಯ್, ವ್ಹಿ. ಶಾಂತಾರಾಮ, ಫತೇಲಾಲ ದಾಮಲೆ, ದೇವಕಿ ಬೋಸ್, ಪಿ. ಸಿ. ಬಾರುವಾ ಮೊದಲಾದವರು ಕಲಕತ್ತೆಯ ನ್ಯೂ ಥೇಟರ್ಸ್ ಮುಂಬಯಿಯ ಬಾಂಬೆ ಟಾಕೀಜ್; ಕೊಲ್ಲಾಪುರದ ಪ್ರಭಾತ ಸ್ಟುಡಿಯೊಗಳಿಂದ ತರಬೇತಿ ಪಡೆದ ಶ್ರೇಷ್ಠ ನಿರ್ಮಾಪಕರೆನಿಸಿದರು. ಸೊಹ್ರಾಬ್ ಮೋದಿ, ಮೆಹಬೂಬ, ಚಂದೂಲಾಲ ಶಹಾ, ಜೆ. ಬಿ. ಎಚ್. ವಾಡಿಯಾ ಮಾಸ್ಟರ ವಿನಾಯಕ, ಕಿದಾರ ಶರ್ಮಾ, ಬಿಮಲ ರಾಯ್ ವಿಜಯ ಭಟ್ಟ, ಕಿಶೋರ ಶಾಹು ಮೊದಲಾದವರು ಚಿತ್ರಗಳಲ್ಲಿ ವೈವಿಧ್ಯತೆಯನ್ನೂ ಹೊಸ ದೃಷ್ಟಿಕೋನವನ್ನೂ ತೋರಿದ ಪ್ರಮುಖ ನಿರ್ಮಾಪಕರಾದರೆ ಪೃಥ್ವಿ ರಾಜಕಪೂರ, ಬಾರುವಾ, ಕೆ. ಎಲ್. ಸೈಗಲ, ಅಶೋಕ



ಹಿಮಾಂಶು ರಾಯ

ಕುಮಾರಿ, ದೇವಿಕಾರಾಣಿ, ಕಾನನ ದೇವಿ, ಲೀಲಾ ಚಿಟ್ನೀಸ ಅಂದಿನ ಶ್ರೇಷ್ಠ ಕಲಾವಿದರೆನ್ನಬಹುದು.

೧೯೪೭, ಭಾರತಕ್ಕೆ ಸ್ವಾತಂತ್ರ್ಯದೊರೆಕಿದ ಕಾಲ. ರಾಷ್ಟ್ರದ ಆರ್ಥಿಕ, ರಾಜಕೀಯ, ಸಾಮಾಜಿಕ ಪರಿಸ್ಥಿತಿಗಳು ಇನ್ನೂ ಭದ್ರಗೊಂಡಿಲ್ಲ. ಅದರ ಪರಿಣಾಮ ಚಿತ್ರರಂಗದ ಮೇಲೂ ಆಗಿತ್ತು. ಚಿತ್ರ ನಿರ್ಮಾಣ ಭಾರೀ ವೆಚ್ಚದ್ದಾಯಿತು. ನ್ಯೂಥೀಟರ್ಸ್, ಬಾಂಬೆ ಟಾಕೀಜ, ಪ್ರಭಾತಗಳಂತಹ ಚಿತ್ರಸಂಸ್ಥೆಗಳು ಅಪಾರ ನಷ್ಟಕ್ಕೀಡಾದವು. ಬೃಹತ್ ಪ್ರಮಾಣದ ಸಿಬ್ಬಂದಿ, ತಂತ್ರಜ್ಞರು ಹಾಗು ನಟನಟಿಯರನ್ನು ಸಲಹುವುದು ಸ್ಟುಡಿಯೋಗಳಿಗೆ ಸಾಧ್ಯವಾಗದಾಯಿತು.ಕಲಾವಿದ ಹಾಗು ತಾಂತ್ರಿಕ ಸಿಬ್ಬಂದಿಯವರು ನೌಕರಿ ಬಿಟ್ಟು ಸ್ವತಂತ್ರ ರೀತಿಯಲ್ಲಿ ಕಾರ್ಯಮಾಡಹತ್ತಿದರು. ಕಲಾವಿದರ ಜನಪ್ರಿಯತೆ ಕಡಿಮೆಯಾಗಿ ತಾರಾಪದ್ಧತಿಗೆಡೆಮಾಡಿಕೊಟ್ಟಿತು. ಇದುವರೆಗೆ ಕಲಾವಿದ, ಹಾಗು ತಂತ್ರಜ್ಞರ ಕೈಯಲ್ಲಿದ್ದ ಚಲನಚಿತ್ರರಂಗ ದ್ವಿತೀಯ ಮಹಾಯುದ್ಧದಿಂದಾಗಿ ನಿರ್ಮಾಣಗೊಂಡ ಹೊಸದೊಂದು ಶ್ರೀಮಂತ ವರ್ಗದವರ ಕೈಗೆ ಬಂತು. ಕಲಾವಿದರು ಈ ಶ್ರೀಮಂತ ವರ್ಗದವರ ಕೃಪಾಛತ್ರದಲ್ಲಿರಬೇಕಾಯಿತು. ಕ್ರಮೇಣ ಕಲೆಯ ಮೌಲ್ಯ ಇಳಿಮುಖವಾಗತೊಡಗಿತು. ಹಳೆಯ ಹುಲಿಗಳು ಚಿತ್ರರಂಗದಿಂದ ನಿರ್ಗಮಿಸಿ, ಹೊಸ ಆಶೆಬುರುಕ ನಿರ್ಮಾಪಕರು ನಾಯಿಕೊಡೆಗಳಂತೆ ಮೇಲೇಳತೊಡಗಿದರು. ಆದಾಗ್ಯೂ ಕೂಡ ವ್ಹಿ. ಶಾಂತಾರಾಮ, ಬಿಮಲ್‌ರಾಯ್, ಕೆ.ಎ. ಅಬ್ಬಾಸ ಹಾಗು ಚೇತನ ಆನಂದರಂತಹ ಪ್ರಮುಖ ಚಿತ್ರ ನಿರ್ಮಾಪಕರು ೨೦ ವರ್ಷಗಳಿಗಿಂತಲೂ ಹೆಚ್ಚುಕಾಲದವರೆಗೆ ತಮ್ಮದೇ ಆದ ಕಲಾ ನೈಪುಣ್ಯತೆಯನ್ನು ತೋರಿ ಚಿತ್ರರಂಗದ ಏಳ್ಗೆಗಾಗಿ ಅಮೋಘ ಸೇವೆ ಸಲ್ಲಿಸಿದರು. ೧೯೫೦ರಲ್ಲಿ ಮುಂಬಯಿಯು ಬಿಮಲ್‌ರಾಯ್, ಗುರುದತ್ತ, ರಾಜ ಕಪೂರ ಈ ಮೂವರು ಬುದ್ಧಿವಂತ ನಿರ್ಮಾಪಕರನ್ನು ಚಿತ್ರರಂಗಕ್ಕೆ ನೀಡಿದೆ. ಸ್ವಾತಂತ್ರ್ಯಾನಂತರದ ಚಿತ್ರರಂಗದ ಪ್ರಮುಖ ಸಂಗತಿ ಎಂದರೆ ಅಪಾರ ವೆಚ್ಚದ ಭವ್ಯ ಹಿಂದೀ ಚಿತ್ರಗಳನ್ನು ದಾಕ್ಷಿಣಾತ್ಯರು ನೀಡಿದ್ದು, ಒಂದು ವೈಶಿಷ್ಟ್ಯವಾದರೆ ಬಂಗಾಲವು ರಿಟ್‌ವಿಕ್ ಘಾಟಕ, ಸತ್ಯಜಿತ್ ರೇ; ತಪನ ಸಿನ್ಹಾ, ಮೃಣಾಲ ಸೇನ್, ತರುಣ ಮುಜುಮುದಾರ, ರಾಜೇಂದ್ರ ತರಫ್‌ದಾರರಂತಹ ಅಂತಾರಾಷ್ಟ್ರೀಯ ಖ್ಯಾತಿಯ ನಿರ್ಮಾಪಕರನ್ನು ನೀಡಿದ್ದು ಮತ್ತೊಂದು ವೈಶಿಷ್ಟ್ಯ.

೧೯೭೦ರ ನಂತರ ಹಿಂದಿ ಚಿತ್ರರಂಗದಲ್ಲಿ ಹೊಸಗಾಳಿ ಬೀಸಿ ಕಲುಷಿತಗೊಂಡಿತು. ಚಿತ್ರರಂಗದ ಮುಂದಾಳುಗಳು ಹಾಗು ಪಟ್ಟಭದ್ರ ಹಿತಾಸಕ್ತಿಗಳ ವಿರುದ್ಧ ಸ್ವತಂತ್ರವಾಗಿ ಚಿತ್ರಗಳನ್ನು ನಿರ್ಮಿಸುತ್ತಿದ್ದ ನಿರ್ಮಾಪಕರು ಕೂಗೆಬ್ಬಿಸಿದರು. ಭಾರತೀಯ ಚಿತ್ರರಂಗ ಅದರಲ್ಲೂ ಹಿಂದಿ ಚಿತ್ರರಂಗ ಇಂದು ಅತೀವ ಕೆಳಮಟ್ಟಕ್ಕಿಳಿದಿದೆ. ಏರುತ್ತಿರುವ ನಿರ್ಮಾಣ ವೆಚ್ಚ, ತಾರೆಯರ ವಿಪರೀತ ಹಣಬೇಡಿಕೆ, ಚಿತ್ರ ನಿರ್ಮಾಣಕ್ಕೆ ಬಂಡವಲು ನೀಡುವ ಸಿರಿವಂತರ ಹೆಚ್ಚಿನ ಬಡ್ಡಿದರಗಳಿಂದಾಗಿ ಚಿತ್ರರಂಗದಲ್ಲಿ ಕಪ್ಪು ಹಣದ ಚಲಾವಣೆ ಹೆಚ್ಚಿದೆ. ವ್ಯಾಪಾರಿ ದೃಷ್ಟಿಯನ್ನಿರಿಸಿಕೊಂಡು ತಯಾರಾಗುತ್ತಿರುವ ಚಿತ್ರಗಳು ತೀರ ಕೆಳಮಟ್ಟಕ್ಕಿಳಿದಿವೆಯಲ್ಲದೆ ತಾತ್ವಿಕ ಮೌಲ್ಯವನ್ನೂ ಕಳೆದುಕೊಂಡಿವೆ. ಬಹಳಷ್ಟು ಜನ ಚಿತ್ರನಿರ್ಮಾಪಕರು, ದಿಗ್ದರ್ಶಕರು, ಕಥಾ ಲೇಖಕರು ಹಾಗು ಇತರ ವರ್ಗದವರು ಆ ಬಗೆಗೆ ವಿಚಾರಿಸುವುದನ್ನೇ ನಿಲ್ಲಿಸಿದ್ದಾರೆ. ಪ್ರತಿಯೊಬ್ಬ ನಿರ್ಮಾಪಕನೂ ಯಾಂತ್ರಿಕ ರೀತಿಯಲ್ಲಿ ಚಿತ್ರಗಳನ್ನು ನಿರ್ಮಿಸುತ್ತಿದ್ದಾನೇನೋ ಎಂದೆನಿಸುತ್ತಿದೆ. ಆತನ ಗುರಿ ಹಣದ ಸಂಪಾದನೆಯೊಂದೇ ಆಗಿದೆ. ಅಂತೆಯೆ ನಿರ್ಮಾಪಕ ಜನಪ್ರಿಯ ತಾರಾಜೋಡಿ, ಕಣ್ಣಿಗೆ ಹಬ್ಬವನ್ನುಂಟುಮಾಡುವ ವರ್ಣಸಂಯೋಜನೆ ಹಾಗು ಅಸಂಬದ್ಧ ಸಂಗೀತ ದೃಶ್ಯಗಳನ್ನೂ ಸೇರಿಸಿ ಚಿತ್ರವನ್ನು ನಿರ್ಮಿಸುತ್ತಿದ್ದಾನೆ. ಹೀಗಾಗಿ ಹಿಂದಿ ಚಿತ್ರಗಳು ತೀರ ಕೆಳದರ್ಜೆಗಿಳಿದಿವೆ ಎಂಬ ಭಾವನೆ ಬೇರೂರಿದೆ ಕೇವಲ ಹಣದ ಗಳಿಕೆಯ ದೃಷ್ಟಿಯಿಂದ ಹೊಸ ಹೊಸ ನಿರ್ಮಾಪಕರು ತಲೆ ಎತ್ತತೊಡಗಿದ್ದಾರೆ. ಚಿತ್ರರಂಗದ ಗೊಂಡಾರಣ್ಯದಲ್ಲಿ ತಾತ್ವಿಕ ಮನರಂಜನೆಯನ್ನೇ ಮೂಲೋದ್ದೇಶವಾಗಿಟ್ಟುಕೊಂಡು ಚಿತ್ರ ತಯಾರಿಸಲು ಮುಂಬರುವ ನಿರ್ಮಾಪಕನಿಗೆ ದೊರೆಯುವುದು ಬರಿ ನಿರಾಶೆ ಮಾತ್ರ. ಆದರೂ ಒಂದೋ ಎರಡೋ ಉತ್ತಮ ಮಟ್ಟದ ಚಿತ್ರಗಳು ಬರುವದುಂಟು. ಉತ್ತಮ ಮಟ್ಟದ ಚಿತ್ರವನ್ನು ತಯಾರಿಸಲು ಮುಂದಾಗುವ ನಿರ್ಮಾಪಕ ಮೊದಲು ತನ್ನ ಚಿತ್ರ ಪ್ರದರ್ಶನಕ್ಕಾಗಿ ಚಿತ್ರಮಂದಿರವನ್ನು ಬಾಡಿಗೆ ತೆಗೆದುಕೊಳ್ಳಬೇಕು. ಚಿತ್ರದ ಹಂಚಿಕೆಗಾಗಿ ಹಂಚಿಕೆದಾರನ ಕಾಲು ಬೀಳಬೇಕು. ಇಷ್ಟೆಲ್ಲ ಶ್ರಮವನ್ನಾತ ವಹಿಸಿದರೂ ತಾನು ತಯಾರಿಸಿದ ಚಿತ್ರ ಪ್ರೇಕ್ಷಕರನ್ನು ಆಕರ್ಷಿಸಬಹುದೇ ಎಂಬ ಭರವಸೆ ಆತಗಿರುವದಿಲ್ಲ. ಪ್ರೇಕ್ಷಕರಿಲ್ಲದೆ ಖಾಲಿಗೃಹಗಳಲ್ಲಿ ಪ್ರದರ್ಶನಗೊಂಡ ಹಲವಾರು ನಿದರ್ಶನಗಳಿವೆಯೆಂದ ಮೇಲೆ ಅದಾವ ನಿರ್ಮಾಪಕ ತಾನೆ ತಾತ್ವಿಕ ಮೌಲ್ಯದ ಚಿತ್ರವನ್ನು ತಯಾರಿಸಲು ಮುಂದಾದಾನು?

## ಭಾರತೀಯ ಚಿತ್ರೋದ್ಯಮದ ಪಕ್ಷಿನೋಟ

ಚಿತ್ರಗಳಲ್ಲಿ ತೊಡಗಿಸಲಾದ ಅಂದಾಜು ಬಂಡವಲು ರೂ. ೧೫೦ ಕೋಟಿ

ಉದ್ಯೋಗಾವಕಾಶ ೧,೭೦,೦೦೦

ಗಲ್ಲಾಪೆಟ್ಟಿಗೆಯಲ್ಲಿ ಸಂಗ್ರಹಿಸಲಾದ ಒಟ್ಟು ಮೊತ್ತ. ರೂ. ೧೫೦ ಕೋಟಿ.

ಕಚ್ಚಾ ಫಿಲ್ಮಿನ ಆಯಾತ ರೂ. ೬ ಕೋಟಿ.

ಸಾಧನ ಸಲಕರಣೆಗಳು ಕಾರ್ಬನ್, ಮುಂ. ರೂ.೧ ಕೋಟಿ

### ಉತ್ಪಾದನೆ

೧೯೭೧ರಲ್ಲಿ ೪೩೩ ಚಿತ್ರಗಳು (೧೩೨ ವರ್ಣದಲ್ಲಿ)

೧೯೭೨ರಲ್ಲಿ ೪೧೯ " (೧೭೮ " –)

### ನಿರ್ಯಾತದಿಂದಾದ ಗಳಿಕೆ

೧೯೭೧ರಲ್ಲಿ...೪.೭೯ ಕೋಟಿ ರೂ.

೧೯೭೨........೫.೩೨ " "

### ಚಿತ್ರಮಂದಿರಗಳು

೧೯೭೧ರಲ್ಲಿ ......೭,೫೮೮

೧೯೭೨ರಲ್ಲಿ ......೭,೭೯೮

ಆದರೆ ಇತ್ತೀಚಿನ ೪ ವರ್ಷಗಳಲ್ಲಿ ಅಂದರೆ ೧೯೭೦ರ ನಂತರ ಚಿತ್ರರಂಗದಲ್ಲಿ ತುಸು ಬದಲಾವಣೆ ಕಂಡುಬರುತ್ತಿದೆ. ಈ ಅವಧಿಯಲ್ಲಿ ಹೊಸ ಹೊಸ ವಿಚಾರದ ನಿರ್ಮಾಪಕರು, ನಿರ್ದೇಶಕರು, ನಟವರ್ಗದವರು ಮೇಲೆದ್ದಿದ್ದಾರೆ. ಸುಮಾರು ೩೦ರಷ್ಟು ವಿಭಿನ್ನ ರೀತಿಯ ಚಿತ್ರಗಳು ತೆರೆಕಂಡಿವೆ. ಇನ್ನೂ ಹಲ ಚಿತ್ರಗಳು ತಯಾರಿಕೆಯ ಹಂತದಲ್ಲಿವೆ. ಉತ್ತಮ ಮಟ್ಟದ ಚಿತ್ರಗಳನ್ನು ಗುರುತಿಸುವ ಪ್ರೇಕ್ಷಕ ವೃಂದವೂ ಸಾವಕಾಶವಾಗಿ ನಿರ್ಮಾಣಗೊಳ್ಳುತ್ತಿದೆಯೆನ್ನಬಹುದು. ಅದರ ಜೊತೆಗೇ ಕೆಳದರ್ಜೆಯ ಮನರಂಜನೆಯನ್ನೇ ಬಯಸುವ ಪ್ರೇಕ್ಷಕ ವರ್ಗವೂ ಹೆಚುತ್ತಲಿದೆ.

ಇಂದು ಅತ್ಯುತ್ತಮ ಚಿತ್ರಗಳನ್ನು ನಿರ್ಮಿಸುವ ಏಕೈಕ ವೀರರೆಂದು ಸತ್ಯಜಿತ ರೇ ಖ್ಯಾತರಾಗಿದ್ದಾರಾದರೂ ಹೊಸ ಹೊಸ ನಿರ್ಮಾಪಕರ ಒಂದು ಗುಂಪೇ ನಿರ್ಮಾಣಗೊಂಡಿದೆಯಲ್ಲದೆ, ಅವರು ಕೂಡ ವಿನೂತನ ಶೈಲಿಯ ಚಿತ್ರಗಳನ್ನು ನಿರ್ಮಿಸಲು ಮುಂದಾಗುತ್ತಿದ್ದಾರೆ. ಈ ಸಂಗತಿ ಚಿತ್ರರಂಗದ ಆರೋಗ್ಯ ದೃಷ್ಟಿಯಿಂದ ಒಳ್ಳೆಯದೆನ್ನಬೇಕು. ಹಿಂದಿ ಚಿತ್ರರಂಗದಲ್ಲಿ ಈಚೆಗೆ ತೆರೆಕಂಡ ರಾಜೇಂದ್ರಸಿಂಗ್ ಬೇಡಿಯವರ 'ದಸ್ತಕ್', ಬಸು ಚಟರ್ಜಿಯವರ 'ಸಾರಾ ಆಕಾಶ', ಮೃಣಾಲಸೇನರ 'ಏಕ ಅಧೂರಿ ಕಹಾನಿ', ಬಸು ಭಟ್ಟಾಚಾರ್ಯರ 'ಅನುಭವ', ಗುಲಝಾರರ 'ಕೋಶಿಶ್', ಚಿತ್ರಗಳು ಉತ್ತಮ ಮಟ್ಟದವಾಗಿದ್ದು ದೇಶದಾದ್ಯಂತ ಜಯಭೇರಿ ಹೊಡೆದು, ವಿಶೇಷವಾಗಿ ಮೇಲ್ವರ್ಗದ ಜನರ ಮೆಚ್ಚುಗೆಯನ್ನು ಪಡೆದುದು ಒಂದು ವೈಶಿಷ್ಟ್ಯವೆನ್ನಬೇಕು. ಹಾಗೆಯೇ ಭಾರತದ ಇತರ ಭಾಷೆಗಳಲ್ಲೂ ಹೊಸ ಬಗೆಯ ಪ್ರಾಯೋಗಿಕ ಚಿತ್ರಗಳು ತಯಾರಾಗುತ್ತಿರುವುದೂ ಒಂದು ಗಮನಾರ್ಹ ಸಂಗತಿಯೆ! ಮೃಣಾಲಸೇನರ (ಇಂಟರವ್ಯೂ ಕಲಕತ್ತಾ ೭೧), ಚಿದಾನಂದ ದಾಸಗುಪ್ತಾರ (Bilat Pherat) ರಿಟವಿಕ್‌ಘಾಟಕ್ ಅವರ (Meghe Dhaka Tarand Suvarna Rekha) ತಪನ್ ಸಿನ್ಹಾರವರ (ಬಾಳಿಕಾಬಧು), ಕಾಂತಿಲಾಲ್ ರಾಠೋಡರ (ಕಂಕು ಡಾಕ್ಯುಮೆಂಟರಿ ಚಿತ್ರ), ಸತ್ಯದೇವ ದುಬೇರ (ಶಾಂತತಾ ಕೋರ್ಟ ಚಾಲೂ ಆಹೆ), ಗಿರೀಶ ಕಾರ್ನಾಡರ (ಸಂಸ್ಕಾರ, ಕನ್ನಡ ಚಿತ್ರ), ಆಡೂರ ಗೋಪಾಲ ಕೃಷ್ಣರ (ಸ್ವಯಂವರಂ) ಹಾಗು ಎಸ್. ಬಾಲಕೃಷ್ಣನ್‌ರವರ (ಮಲ್ದಿಮಾನ ಮಲಯಾಳಿ) ಇವು ಭಾರತೀಯ ಇನ್ನಿತರ ಭಾಷೆಗಳಲ್ಲಿ ತಯಾರಿಸಲಾದ ಪ್ರಾಯೋಗಿಕ ಚಿತ್ರಗಳು.

ಚಿತ್ರರಂಗದಲ್ಲೀಗ ಪ್ರಾಯೋಗಿಕ ಹಾಗು ವ್ಯಾಪಾರೀ ದೃಷ್ಟಿಯ ಚಿತ್ರಗಳ ನಡುವೆ ದ್ವಂದ್ವವೇ ನಡೆದಿದೆ. ಪ್ರಾಯೋಗಿಕ ಚಿತ್ರಗಳತ್ತ ಪ್ರೇಕ್ಷಕರ ಒಲವು ಹೆಚ್ಚಾದರೆ ಮಾತ್ರ ಉತ್ತಮ ಚಿತ್ರಗಳು ಬಹು ಸಂಖ್ಯೆಯಲ್ಲಿ ಹೊರಬಹುದು. ಇಲ್ಲವಾದರೆ ವ್ಯಾಪಾರೀ ಚಿತ್ರಗಳ ಪ್ರಭಾವವೇ ಹೆಚ್ಚಬಲ್ಲದ್ದು.



ದೀಪಾವಳಿಯು ಸರ್ವರಿಗೂ ಹರ್ಷದಾಯಕವಾಗಲಿ!!

# ನಿಯೋಜನ ಮತ್ತು ನಿರ್ಮಾಣ

## PLANNING & PERFORMANCE

ಉತ್ತಮ ತರಹದ ರಾಸಾಯನಿಕಗಳು, ತಿನ್ನುವ ಉಪ್ಪು ಮತ್ತು ಖನಿಜಗಳು ಉತ್ಪಾದನೆ ಮತ್ತು ನಿರ್ಯಾತಗಳಲ್ಲಿ ನಾವು ಅತ್ಯಂತ ಪರಿಶ್ರಮಪೂರ್ವಕ ಮಾಡಿದ ಪ್ರಯತ್ನಗಳಿಗೆ ತುಂಬಾ ಲಾಭ ದೊರೆತಿದೆ. ಈ ಆತ್ಮವಿಶ್ವಾಸದ ಬಲದಿಂದ ಹಾಗೂ ಸಾರ್ವಜನಿಕರ ಸದಿಚ್ಛೆಯ ಬಲದಿಂದ ಕಳೆದ ವರ್ಷ ದೀಪಾವಳಿ ವೇಳೆಗೆ ಎರಡು ಹೊಸ ಯೋಜನೆಗಳನ್ನು ಪ್ರಾರಂಭಿಸುವ ಆಶ್ವಾಸನೆ ಕೊಟ್ಟಿದ್ದೆವು. ಅದರಂತೆ ಈ ಮುಂದಿನ ಎರಡು ಉದ್ಯಮಗಳನ್ನು ಪ್ರಾರಂಭಿಸುವ ಯೋಜನೆಯನ್ನು ಅತ್ಯಂತ ಹರ್ಷಪೂರ್ವಕ ತಮ್ಮ ಮುಂದೆ ಇಡಬಯಸುತ್ತೇವೆ.

| ಉದ್ಯೋಗ | ಸ್ಥಳ | ನಿಯೋಜನ | ನಿರ್ಮಾಣ | ಅಂದಾಜು ಬಂಡವಲು |
|---|---|---|---|---|
| ೧. ಮಿಶ್ರ ಕಬ್ಬಿಣದ ಕಾರ್ಖಾನೆ (Alloy Steel) | ಕಾರಾಪೂರ | ೧೯೬೨ | ೧೯೬೪ | ರೂ. ೪ ಕೋಟಿ |
| ೨. ಕಾಗದದ ಕಾರಖಾನೆ | | | | |
| (ಅ) ಮೊದಲನೆ ಹಂತ (Duplex & Triplex boards) | ಚಂದ್ರಪೂರ | ೧೯೬೩ | ೧೯೬೬ | ರೂ. ೧೬ ಕೋಟಿ |
| (ಬ) ಎರಡನೆ ಹಂತ ಕಾಗದ (Paper) | ಚಂದ್ರಪೂರ ಜಿಲಾ | ಯೋಗ್ಯ ವೇಳೆಗೆ ಜಾಹೀರ ಪಡಿಸಲಾಗುವದು | | |

ಕಂಪನಿಯ ಹೆಸರು, ಇತರೇ ವಿವರಗಳು ಮತ್ತು ಶೇರ ಮಾರಾಟದ ತಾರೀಖಿಂಗಳನ್ನು ಶೀಘ್ರದಲ್ಲಿಯೇ ಪ್ರಕಟಿಸಲಾಗುವದು.

ಈ ಶೇರಂಗಳು ಪ್ರತಿಯೊಂದು ಮನೆಯ ಅಭಿಮಾನದ್ಯೋತಕ ಠೇವು ಹಾಗೂ ಉತ್ತಮ ಬಂಡವಲು ಹೂಡಿಕೆಯಾಗುವವೆಂದು ನಮಗೆ ಖಾತ್ರಿ ಇದೆ.

ಸ್ಥಿರವಾದ ಪರವಾಗಿ ಮಹಾರಾಷ್ಟ್ರ ಸರಕಾರದಿಂದ ಭಾರೀ ಪ್ರೋತ್ಸಾಹನೆ ದೊರೆತಿದೆ.



## ಗೋಗಟೆ ಮಿನರಲ್ಸ

೧೪೬. ಟಿಳಕವಾಡಿ,

ಬೆಳಗಾವಿ

# ನಿರಾಶೆಯ ನೆರಳಿನಲ್ಲಿ ಮರಾಠಿ ಚಿತ್ರರಂಗ



೧೯೬೩. ಈ ವರ್ಷಕ್ಕೆ ಭಾರತೀಯ ಚಿತ್ರರಂಗದಲ್ಲಿ ಎರಡು ರೀತಿಯ ಮಹತ್ವವುಂಟು. ಚಿತ್ರರಂಗದ ಸುವರ್ಣ ಸಂಧಿ ಎನಿಸಿದ ಟಾಕೀಯುಗವು ಇದೇ ವರ್ಷ ಕಾಲಿರಿಸಿತಲ್ಲದೆ ಮರಾಠಿ ಚಿತ್ರರಂಗವೂ ಯಶಸ್ಸಿನ ಮೆಟ್ಟಲೇರಿದುದು ಆಗಲೇ. ಕೀರ್ತಿ ಪತಾಕೆಯನ್ನು ಎತ್ತುತ್ತ ಮುನ್ನಡೆದ ಮರಾಠೀ ಚಿತ್ರರಂಗ ಪ್ರತಿವರ್ಷ ಹದಿನೈದರಿಂದ ಹದಿನಾರು ಚಿತ್ರಗಳನ್ನು ತೆರೆಗೆ ತಂದಿತಷ್ಟೆ ಅಲ್ಲ ೧೯೫೯ ಮತ್ತು ೧೯೬೧ರಲ್ಲಿ ತನ್ನ ಸೀಮಿತ ಅಂಕೆಗಳನ್ನು ದಾಟಿ ೨೧ ಹಾಗು ೨೩ ಚಿತ್ರಗಳನ್ನು ಬಿಡುಗಡೆ ಮಾಡಿತು. ಆದರೆ ತಮಿಳು ಮತ್ತು ಬಂಗಾಲೀ ಚಿತ್ರಗಳು ಸಂಖ್ಯೆಯಲ್ಲಿ ಮರಾಠಿಗಿಂತ ಮುಂದುವರೆದು ಹೋದವಾದರೂ, ಮರಾಠೀ ಚಿತ್ರರಂಗ ಭಾರತದಲ್ಲಿ ತನ್ನದೇ ವೈಶಿಷ್ಟ್ಯವನ್ನು ಕಾಯ್ದುಕೊಂಡು ಬಂದಿತ್ತು. ಈ ವೈಶಿಷ್ಟ್ಯ ಬಹುದಿನಗಳುಳಿಯಲಿಲ್ಲ. ಹೋದ ವರ್ಷ ಮರಾಠೀ ಚಿತ್ರರಂಗ ಬಹುವಾಗಿ ಕ್ಷೀಣಿಸಿತೆನ್ನುವುದಕ್ಕೆ ಅದು ತೆರೆ ಕಾಣಿಸಿದ ಚಿತ್ರಗಳ ಸಂಖ್ಯೆಯೇ ಸಾಕ್ಷಿ. ೧೯೫೮ರಿಂದಲೂ ಬಹು ಚಿತ್ರಗಳನ್ನು ತೆರೆಗೆ ತರಬಲ್ಲೆನೆಂಬ ವಿಶ್ವಾಸ ಹೊಂದಿದ್ದ ಈ ಚಿತ್ರರಂಗ ಹೋದ ವರ್ಷ ಕೇವಲ ಹನ್ನೆರಡು ಚಿತ್ರಗಳನ್ನು ತೆರೆಗೆ ನೀಡಿತು. ಈ ವರ್ಷವೂ ಕೂಡ ತೆರೆಗೆ ಬರಲಿರುವ ಚಿತ್ರಗಳ ಸಂಖ್ಯೆ ಗುಣಮುಖವಾಗಿಲ್ಲ.

೧೯೬೨ರಲ್ಲಿ ಬೆಳ್ಳಿ ಪರದೆಗೆ ಬಂದ ಹನ್ನೆರಡು ಚಿತ್ರಗಳೆಂದರೆ (೧) ಆಯಿ ಮಿ ಕುಠೇ ಜಾವು (೨) ಎಕ್ಟಾ ಜೀವ ಸದಾಶಿವ (೩) ಹರ್ಯಾ ನರ್ಯಾ ಜಿಂದಾಬಾದ್ (೪) ಜನ್ಮ ತುಜಾ ಸಾಥಿ (೫) ಕಸಾ ಕಾಯ್ ಪಾಟೀಲ ಬರ್ ಹೈಕಾ (೬) ಕೌಲ್ ದೆ ಖಂಡೇರಾಯಾ (೭) ಕುಂಕು ಮಾಝೆ ಭಾಗ್ಯಾಚೆ (೮) ಪಾಂಚ ನಾಜೂಕ ಬೋಟ್ (೯) ಪಾಥರ್ಕಿನ್ (೧೦) ಪಿಂಜರಾ (೧೧) ಸೂನ ಲಾಡಕಿ ಯಾ ಬಾರಾಚಿ ಮತ್ತು (೧೨) ಪುಢಾರಿ.

ತೆರೆಕಂಡ ಈ ಹನ್ನೆರಡು ಚಿತ್ರಗಳು ಹೆಚ್ಚಾಗಿ ಗ್ರಾಮೀಣ ಜೀವನವನ್ನು ಪ್ರತಿನಿಧಿಸುವ ಚಿತ್ರಗಳಾಗಿವೆ. ಹಳ್ಳಿಯ ಜೀವನವನ್ನು ಹಿನ್ನೆಲೆಯಾಗಿಟ್ಟುಕೊಂಡರೆ ಚಿತ್ರಗಳು ಪ್ರಗತಿ ಸಾಧಿಸಬಹುದೆಂಬ ಭಾವನೆ ಹುಸಿಯಾಯಿತು. ತಮ್ಮ ಜೀವನಚಿತ್ರಣ, ತಮ್ಮ ಜಾನಪದ ನೃತ್ಯ ಪ್ರತಿನಿಧಿಸಿದೆ ಎಂಬ ಅಭಿಮಾನದಿಂದ ಗ್ರಾಮವಾಸಿಗಳು ಈ ಚಿತ್ರಗಳಿಗೆ ಪ್ರೋತ್ಸಾಹವಿತ್ತರಾದರೂ, ಗಲ್ಲಾಪೆಟ್ಟಿಗೆ ಮಾತ್ರ ನಿರೀಕ್ಷಿಸಿದ ಮಟ್ಟಕ್ಕೇರಿ ಬರಲಿಲ್ಲ. ಇನ್ನು ನಗರವಾಸಿಗಳು ಈ ಮರಾಠೀ ಚಿತ್ರಗಳಿಗೆ ಪ್ರೋತ್ಸಾಹ ಕೊಡಲಿಲ್ಲ. ಸೀಮಿತ ಬಂಡವಾಳ ಹಾಕಿ ತಯಾರಿಸಿದ ಇಂತಹ ಬಡ ಚಿತ್ರಗಳನ್ನು ನೋಡಲು ನಗರವಾಸಿಗಳು ಮುಂದೆ ಬರಲಿಲ್ಲ. ಮೇಲಾಗಿ ಚಿತ್ರಕ್ಕಿಂತ ಮರಾಠಿ ನಾಟಕಗಳನ್ನು ನೋಡುವುದರಲ್ಲಿ ಅವರು ಹೆಚ್ಚು ಆಸಕ್ತಿ ವಹಿಸಿದರು. ಇನ್ನು ಮರಾಠೀ ಚಿತ್ರಗಳು ಕುಸಿದು ಬೀಳಲು ಮತ್ತೊಂದು ದೊಡ್ಡ ಕಾರಣವೆಂದರೆ ಸ್ಪರ್ಧೆಗೆ ನಿಂತ ಹಿಂದೀ ಚಿತ್ರಗಳು. ಕಣ್ಣು ಕುಕ್ಕಿಸುವ ಭವ್ಯ ಸೆಟ್ಟು, ಬಣ್ಣ, ಅದ್ದೂರಿ ಸಂಗೀತ ಈ ಎಲ್ಲವೂ ಒಗ್ಗೂಡಿ ಪ್ರೇಕ್ಷಕರನ್ನು ಎಳೆದುಕೊಂಡಿತಲ್ಲದೇ ಮರಾಠೀ ಚಿತ್ರಗಳನ್ನು ಮೂಲೆಗೊತ್ತಿತು. ಹಿಂದೀ ಚಿತ್ರಗಳೊಡನೆ



'ಪಿಂಜರಾ'ದಲ್ಲಿ ಸಂಧ್ಯಾ ಹಾಗು ಶ್ರೀರಾಮ ಲಾಗು

ಸೆಣಸಿ ಸೋತು ಸಾಯುವುದು ಮರಾಠೀ ಚಿತ್ರಗಳಿಗಷ್ಟೇ ಸೀಮಿತವಲ್ಲ. ಭಾರತೀಯ ಇನ್ನಿತರ ಭಾಷೆಗಳ ಚಿತ್ರಗಳಿಗೂ ಇದೇ ದುರ್ಗತಿ ಪ್ರಾಪ್ತವಾಗಿದೆ. ಆದರೆ ಬಂಗಾಲಿ ಚಿತ್ರಗಳಿಗೆ ಈ ಮಾತು ಅನ್ವಯಿಸದು. ಮರಾಠೀ ಚಿತ್ರಗಳಲ್ಲಿ ಹುರುಳಿಲ್ಲ. ಉತ್ತಮ ತಂತ್ರಗಳನ್ನು ಬಳಸಿಲ್ಲ ಎಂದು ಮರಾಠೀ ಚಿತ್ರಪ್ರೇಮಿಗಳು ಆಕ್ಷೇಪಿಸುತ್ತಾರಾದರೂ ಆದರ ನಿರ್ಮಾಪಕರು ಮಾತ್ರ ಈ ದೂರಗಳನ್ನು ಹೊರಲು ತಯಾರಿಲ್ಲ. ಶ್ರೇಷ್ಠ ನಿರ್ಮಾಪಕರೆಂದು ಖ್ಯಾತಿವೆತ್ತ ವ್ಹಿ. ಶಾಂತಾರಾಂ ಮತ್ತು ದಾದಾ ಕೊಂಡಕೆಯವರು ಮರಾಠೀ ಚಿತ್ರರಂಗದಲ್ಲಿ ಏನೆಲ್ಲ ಇದೆ. ಇವು ಉತ್ತಮ ಚಿತ್ರಗಳೆಂದು ಹೇಳಿಕೊಂಡಿದ್ದಾರೆ. ಆದರೆ ನಗರಗಳಲ್ಲಿ ಮಾತ್ರ ಪ್ರೇಕ್ಷಕರ ಕೊರತೆಯಿಂದಾಗಿ ಕುಸಿಯುತ್ತವೆ ಎಂಬುದು ಮಾತ್ರ ಒಪ್ಪತಕ್ಕ ಅಂಶ.

ವ್ಹಿ. ಶಾಂತಾರಾಮರು ಭಾರತೀಯ ಚಿತ್ರರಂಗದಲ್ಲೇ ಎದ್ದು ಕಾಣುವ ವ್ಯಕ್ತಿ. ಅವರಿಗೆ ಚಿತ್ರ ನಿರ್ಮಾಣದಲ್ಲಿ ೫೦ ವರ್ಷಗಳ ಆಳವಾದ ಅನುಭವವಿದೆ. ಇತ್ತೀಚೆಗೆ ಅವರು ನಿರ್ಮಿಸಿದ "ಪಿಂಜರಾ" ಕೀರ್ತಿಯೊಂದಿಗೆ ಹಣವನ್ನೂ ಗಳಿಸಿತಲ್ಲದೇ ನಗರ–ಗ್ರಾಮ ಎರಡೂ ಪ್ರದೇಶಗಳಲ್ಲಿ ಜಯಭೇರಿ ಬಾರಿಸಿತು. ಎಲ್ಲ ವರ್ಗದ ಜನರಿಗೂ ಹಿಡಿಸುವಂತಹ ಈ ಚಿತ್ರ ಹಿಂದೀ ಚಿತ್ರಗಳಿಗೆ ಆಹ್ವಾನ ನಿಂತಿತಷ್ಟೇ ಅಲ್ಲ ನಾಲ್ಕೈದು ಹಿಂದಿ ಚಿತ್ರಗಳು ಇದರ ಮುಂದೆ ತಲೆ ತಗ್ಗಿಸಿ ನಿಂತವು. ಮರಾಠಿಯ ಪ್ರಪ್ರಥಮ ವರ್ಣಚಿತ್ರವೆಂಬ ಇನ್ನೊಂದು ಕೀರ್ತಿಪಟ್ಟ ಇದರ ತಲೆಗೆ ಬಂದು, ಆ ವರ್ಷದ ಶ್ರೇಷ್ಠ ಮರಾಠಿ ಚಿತ್ರವೆನಿಸಿತು. ಮರಾಠೀ ಚಿತ್ರರಂಗಕ್ಕೆ ಚೇತರಿಕೆಯ ಚುಚ್ಚುಮದ್ದನ್ನು ಕೊಟ್ಟ ಚಿತ್ರ ಇದು. ಇದರ ದೆಸೆಯಿಂದಾಗಿ ಮರಾಠಿ ಚಿತ್ರರಂಗದಲ್ಲೀಗ ಮೂರು ನಾಲ್ಕು ವರ್ಣ ಚಿತ್ರಗಳು ಎದ್ದಿದ್ದು ಅದರಲ್ಲಿ ಶಾಂತಾರಾಮರದೇ ಆದ "ಯೇ ಮರಾಠೀಚಿ ಯಾ ನಗರಿ" ಚಿತ್ರವೂ ಒಂದು. ಆದರೆ ಈ ವರ್ಣ ಚಿತ್ರವೂ ನಿರೀಕ್ಷೆಯ ಯಶಸ್ಸು ಕಲುಪಲಿಲ್ಲ. "ಪಿಂಜರಾ"ವು ಗ್ರಾಮೀಣ ಹಿನ್ನೆಲೆಯ ಹಳ್ಳಿಯ ಬದುಕನ್ನೇ ಬೆಂಬಲಿಸಿ ಬಂದ ಚಿತ್ರವಾದರೂ ತಾತ್ವಿಕ ಮೌಲ್ಯವನ್ನದು ಹೊಂದಿತ್ತು. ಹಳ್ಳಿಗರ ಆದರ್ಶವಾದಿ ಎಂದು ಹೆಸರಾದ ಶಿಕ್ಷಕನೊಬ್ಬ ತಮಾಷಾ ಹುಡುಗಿಯನ್ನು ಬೆನ್ನು ಹತ್ತಿ ತನ್ನ ಆದರ್ಶವನ್ನು ನೀರಲ್ಲಿ ಚೆಲ್ಲುತ್ತಾನಾದರೂ, ಇದು ಗೊತ್ತಿರದ ಮುಗ್ಧ ಹಳ್ಳಿಗರು ಅವನನ್ನೇ ತಮ್ಮ ಆದರ್ಶವಾಗಿಟ್ಟುಕೊಂಡಿರುತ್ತಾರೆ. ಚಿತ್ರದ ಕೊನೆಯಲ್ಲಿ ಬದುಕಿದ್ದೂ ಸತ್ತಂತಿರುವ ಸತ್ತಿದ್ದೂ ಬದುಕಿದಂತಿರುವ ಮಾಸ್ತರನ ಜೀವನದ ಎರಡು ಮುಖಗಳು ಎಲ್ಲ ವರ್ಗದ ಜನರಲ್ಲೂ ತೀವ್ರವಾದ ಭಾವನೆಯನ್ನು ಹುಟ್ಟಿಸುವಂತೆ ಚಿತ್ರಿಸಲಾಗಿದೆ. ರಂಗಭೂಮಿಯಲ್ಲಿ ಆಗಲೇ ಹೆಸರು ಗಳಿಸಿದ್ದ ಡಾ. ಶ್ರೀರಾಮ ಲಾಗು ಅವರು ಈ ಚಿತ್ರದಲ್ಲಿ ನಾಯಕನ ಪಾತ್ರ ವಹಿಸುವುದರ ಮೂಲಕ ಹೆಸರು ಗಳಿಸಿದುದು ಈ ಚಿತ್ರದ ಇನ್ನೊಂದು ಕೊಡುಗೆ. ರಂಗಭೂಮಿಯಿಂದ ಚಿತ್ರರಂಗಕ್ಕೆ ಕಾಲಿರಿಸಿ ಕೀರ್ತಿ ಗಳಿಸಿದ ಮತ್ತೊಬ್ಬ ಪ್ರಮುಖ ವ್ಯಕ್ತಿ, ಶ್ರೀ ದಾದಾ ಸಾಹೇಬ ಕೊಂಡಕೆ. ಎರಡು ವರ್ಷದ ಹಿಂದೆ ಅವರ "ಇಚ್ಛಾ ಮಾಝಿ ಪೂರಿ ಕರಾ" ನಾಟಕವು ಅವರ ಹೆಸರನ್ನು ನಾಟ್ಯರಂಗದಲ್ಲಿ ಸ್ಥಿರಗೊಳಿಸಿತು. ೧೯೭೧ರಲ್ಲಿ ಅವರೇ ಪಾತ್ರ ವಹಿಸಿ ತೆರೆಗೆ ತಂದ "ಸೋಂಗಾಡ್ಯಾ" ಚಿತ್ರವು ದಾದಾ ಕೊಂಡಕೆಯವರನ್ನು ಪ್ರಮುಖ ನಿರ್ಮಾಪಕರ ಸಾಲಿಗೆ ಸೇರಿಸಿತು. ಹಾಸ್ಯಪ್ರಧಾನ ಚಿತ್ರವಾದ ಸೋಂಗಾಡ್ಯಾ ಪಟ್ಟಣ ಮತ್ತು ಹಳ್ಳಿಗಳ ಚಿತ್ರಪ್ರೇಮಿಗಳಿಗೆ ರಂಜನೆ ನೀಡಿ ಸೈ ಎನಿಸಿಕೊಂಡಿತು. ಈ ಪ್ರೋತ್ಸಾಹ ಕೊಂಡಕೆಯವರನ್ನು "ಎಕ್ಟಾ ಜೀವ, ಸದಾಶಿವ" ಚಿತ್ರವನ್ನು ತೆರೆಗೆ ತರಲು ಹಚ್ಚಿತು. ಈ ಚಿತ್ರವೂ ಪಿಂಜರಾ ಚಿತ್ರದೊಂದಿಗೆ ಬಿಡುಗಡೆ ಹೊಂದಿತ್ತಾದರೂ ಸ್ಪರ್ಧೆಗೆ ನಿಲ್ಲಬಲ್ಲ ಶಕ್ತಿಯನ್ನದು ಪಡೆಯಲಿಲ್ಲ. ಏನೇ ಆಗಲಿ, "ಎಕ್ಟಾ ಜೀವ, ಸದಾಶಿವ" ಚಿತ್ರವು ದಾದಾ ಕೊಂಡಕೆಯವರನ್ನು ಜನಪ್ರಿಯಗೊಳಿಸುವುದರ ಜತೆಗೆ ಅವರನ್ನು ನಿರ್ಮಾಪಕ–ನಿರ್ದೇಶಕ–ಕವಿ–ನಟ ಎನ್ನುವ ಬಹುಮುಖ ವ್ಯಕ್ತಿತ್ವನ್ನು ಮರಾಠಿಗರಿಗೆ ತೋರಿಸಿ ಕೊಟ್ಟಿತು.

ಈಗ ಮರಾಠಿ ಚಿತ್ರಪ್ರೇಮಿಗಳು ಅವರ ಮುಂದಿನ ಚಿತ್ರ "ಅಂಧಾ ಮಾರ್ತೂ ಡೋಳಾ"ಕ್ಕಾಗಿ ಇದಿರು ನೋಡುತ್ತಿದೆ.

೧೯೭೩ರ ಯಶಸ್ವೀ ಚಿತ್ರವೆಂದು ಹೇಳಬಹುದಾದ ಗುಣ ಮೌಲ್ಯ, ದತ್ತಾತ್ರಾಂ ಗಾಯಕವಾಡರ "ಥಾಪಾಡ್ಯಾ" ಚಿತ್ರಕ್ಕಿದೆ. ನೀಲೂ ಫುಲೆ ಈ ಚಿತ್ರದ ನಟ ಎಂಬುದು ಈ ಚಿತ್ರದ ವೈಶಿಷ್ಟ್ಯಕ್ಕೆ ಇನ್ನೊಂದು ಕಾರಣ. ಶ್ರೀಫುಲೆ ಕೂಡ ಇತರರಂತೆ ನಾಟಕದಿಂದ ಚಿತ್ರರಂಗಕ್ಕಿಳಿದವರು. ಅವರು "ಸಖಾರಾಂ ಬಾಯಿಂಡರ" ನಾಟಕದ ಜನಪ್ರಿಯ ನಟನೆಂದು ಹೆಸರು ಮಾಡಿದ್ದರು. ಪಿಂಜರಾ ಚಿತ್ರದಲ್ಲೂ ಕೂಡ ಇವರದೊಂದು ಪಾತ್ರವಿತ್ತು. ಈ ನಟನನ್ನು ಚಿತ್ರರಂಗಕ್ಕೆ ಕರೆ ತಂದವರು ಶ್ರೀ ಅನಂತ ಮಾನೆ. ದುರ್ದೈವವಶಾತ್ ಈ ಚಿತ್ರ (ಮಿಡುರ್ಷಾ ಪತಿ ನಾಹಿ) ಬಿದ್ದುಹೋಯಿತು. ಇದೇ ಸಮಯದಲ್ಲಿ "ಸೋನಾರಾನೆ ಟೋಚಲೆ ಕಾನ್" ಚಿತ್ರವು ಅನಂತ ಮರಾಠೆಯರು ಶ್ರೇಷ್ಠ ನಿರ್ದೇಶಕರಾಗಬಹುದೆಂಬ ಭರವಸೆ ಮೂಡಿಸಿತು. ಈ ವರ್ಷದಲ್ಲಿ (೧೯೭೩). ರಾಜದತ್‌ರೂ ಎರಡು ಚಿತ್ರಗಳನ್ನು ತೆರೆಗೆ ತಂದು ಕೈ ಸುಟ್ಟುಕೊಂಡರು. ಅವರ ಮೊದಲ ಚಿತ್ರ "ಭೋಲಿ ಭಾಬ್ದಿ"ಯು ಉತ್ತಮಾಂಶಗಳನ್ನೊಳಗೊಂಡಿರದೆ ಮೂಲೆಗುಂಪಾದರೆ ಇನ್ನೊಂದು ಚಿತ್ರ ವರದಿ ಆಣಿ ವಾಜಂತ್ರಿ" ಚಿತ್ರವು ಸೆನ್ಸಾರ್ ಮಂಡಳಿಯ ಅವಕೃಪೆಗೊಳಗಾಗಿ ತನ್ನ ಮೂಲರೂಪವನ್ನು ಅಂದಗೆಡಿಸಿಕೊಂಡು ತೆರೆಗೆ ಬಂದಿತು. ಸೆನ್ಸಾರ ಮಂಡಳಿಯು ಆಕ್ಷೇಪವೆತ್ತಿದುದು ಒಂದು ರೀತಿಯಿಂದ ಸಮಂಜಸವೇ. ಈ ಚಿತ್ರದಲ್ಲಿ ಓರ್ವ ಕೊಂಕಣಿ ಯುವಕ, ಧಾರವಾಡದಿಂದ ಬಂದ ಕನ್ನಡ ಹುಡುಗಿಯನ್ನು ಪ್ರೀತಿಸುತ್ತಾನೆ. ಮರಾಠೀ ಭಾಷೆಯನ್ನು ಕನ್ನಡೀಕರಣ ಮಾಡಿ ಉಚ್ಚರಿಸುತ್ತಿರುವುದು ಹಾಸ್ಯ ಪ್ರಧಾನವಾಗಿಟ್ಟುಕೊಂಡಿದ್ದರೂ, ಕನ್ನಡಿಗರಿಗೆ ಇದರಿಂದಾಗಿ ಮನನೋಯಬಾರದೆಂಬುದು ಸೆನ್ಸಾರಿನವರ ಅಭಿಪ್ರಾಯ. ಮುಂದೆ ಹುಡುಗ ಹುಡುಗಿಯರ ಮದುವೆ ಕಾಲಕ್ಕೆ ಇಬ್ಬಣಗಳಲ್ಲೂ ವಾಗ್ಯುದ್ಧ ನಡೆವಾಗ ತಮ್ಮ ತಮ್ಮ ಸಂಸ್ಕೃತಿಯೇ ಮಿಗಿಲು ಎನ್ನುವ ಸಂಭಾಷಣೆಗಳನ್ನು ಸೆನ್ಸಾರ ಮಂಡಳಿಯು ನಿರ್ದಯದಿಂದ ಕತ್ತರಿ ಆಡಿಸಿತು. ಫಲವಾಗಿ ಈ ಚಿತ್ರ ಒಂದು ಚಿಕ್ಕ ನಾಟಕವಾಗಿ ಕಾಣಹತ್ತಿತು.


'ವರದಿ ಆಣಿ ವಾಜಂತ್ರಿ'ಯಲ್ಲಿ ಸುಲೋಚನಾ

ಈ ವೆಲ್ಲ ಚಿತ್ರಗಳ ಯಶ–ಅಪ ಯಶಸ್ಸನ್ನು ನೋಡಿದಾಗ ಮರಾಠೀ ಚಿತ್ರರಂಗ ದಿನದಿಂದ ದಿನಕ್ಕೆ ಕ್ಷೀಣಿಸುತ್ತಿರುವುದು ಗಮನಕ್ಕೆ ಬರುತ್ತದೆ. ಸೋಂಗಾಡ್ಯಾ,ಪಿಂಜರಾ ಎಕ್ಕಾ ಜೀವ, ಸದಾಶಿವ ಚಿತ್ರಗಳು ತಮ್ಮ ವಿಜಯ ಪತಾಕೆಯನ್ನು ಹಾರಿಸಿದವಾದರೂ, ಈ ಚಿತ್ರಗಳಿಂದ ಇತರ ನಿರ್ಮಾತೃಗಳು ಸ್ಫೂರ್ತಿಗೊಂಡು ಮುಂದೆ ಬರಲಿಲ್ಲ. ಬಂದರೂ ಯಶಸ್ವೀ ಚಿತ್ರ ತೆಗೆಯುತ್ತಿದ್ದರೋ ಇಲ್ಲವೋ ದೇವರೇ ಬಲ್ಲ. ಇನ್ನು ವರ್ಣ ಚಿತ್ರಗಳು ತಯಾರಾಗುವುದಂತೂ ದೂರ ಉಳಿಯಿತು. ಪ್ರೇಕ್ಷಕರ ಅವಕೃಪೆಗೆ ಗುರಿಯಾದ ಮರಾಠೀ ಚಿತ್ರಗಳಿಗೆ ಯಾರ ಪ್ರೋತ್ಸಾಹವೂ ಸಿಕ್ಕದೆ ಎಲ್ಲ ಕಡೆಗೂ ಆಕರ್ಷಕ ಶಕ್ತಿಯನ್ನು ಕಳೆದುಕೊಂಡು ನಿಶ್ಚಲವಾಗಿ ನಿರಾಶೆಯ ಪರಿಧಿಯಲ್ಲಿಯೇ ತಿರುಗುತ್ತಿದೆ. ದುರ್ದೈವವಶಾತ್ ಮಹಾರಾಷ್ಟ್ರ ಸರಕಾರವೂ ಈ ಚಿತ್ರರಂಗಕ್ಕೆ ಕಣ್ಣು ಹಾಯಿಸಿ ಕರುಣೆ ತೋರಿಸಿಲ್ಲ. ಒಂದೊಂದು ಟಾಕೀಜಿನಲ್ಲಿ ಪ್ರತಿವರ್ಷಕ್ಕೆ ನಾಲ್ಕು ಮರಾಠಿ ಸಿನೇಮಗಳನ್ನುಕಡ್ಡಾಯವಾಗಿ ನಡೆಸಲೇಬೇಕೆಂಬ ಸರಕಾರದ ಆಜ್ಞೆ ಕಾರ್ಯರೂಪಕ್ಕೆ ಬಂದಿಲ್ಲ. ಎಂತಹ ಉತ್ತಮ ಚಿತ್ರಗಳು ಬಂದರೂ ಮನೋರಂಜನಾ ತೆರಿಗೆಯನ್ನು ತೆಗೆದು ಹಾಕಲು ಈ ಸರಕಾರ ಸಿದ್ಧವಿಲ್ಲ. ಅದೂ ಅಲ್ಲದೆ ಈ ವರ್ಷ ಶ್ರೇಷ್ಠ ಚಿತ್ರವೆಂದು ಸಾರಿದ ಚಿತ್ರಗಳಿಗೆ ಈ ವರೆಗೂ ಬಹುಮಾನ ಸಂದಾಯವಾಗಿಲ್ಲ. ಸರಕಾರದ ಅಭಯಹಸ್ತ ಸಿಗುವವರೆಗೆ ಈ ಚಿತ್ರರಂಗ ಪ್ರಗತಿ ಸಾಧಿಸುವುದಿಲ್ಲ ಎಂದು ಚಿತ್ರರಂಗದ ಸಿಬ್ಬಂದಿ ವರ್ಗದ ಅಭಿಪ್ರಾಯ,

ವಿ. ಪಿ. ಸಾಠೆ




'ವರದಿ ಆಣಿ ವಾಜಂತ್ರಿ'ಯಲ್ಲಿ ಇಂದುಮತಿ ಪೈಗನಕರ ಹಾಗು ವಿ. ಗೋಖಲೆ

## ಒಲುವೆ ನಮ್ಮ ಬದುಕು

ಬದುಕಿನಲ್ಲಿ ಒಲವನ್ನು ಕಾಣಲು ಮನ ಬಯಸುತ್ತಿದೆಯಲ್ಲವೆ? ನಿಮ್ಮ ಹೃದಯವನ್ನು ದ್ವೇಷ-ಮತ್ಸರದಿಂದ ದೂರವೆಳೆದು ತನ್ನಿ. ಚಿಂತೆ-ಯೋಜನೆಯನ್ನು ಮೆದುಳಿನಿಂದ ತೆಗೆದುಹಾಕಿ. ಆಶೆಯನ್ನು ಸೀಮಿತದ ಪರಿಧಿಯಲ್ಲಿಡಿ. ಕೊಡುವ ಕೈ ಮುಂದಿರಲಿ. ನಿಮ್ಮ ಹೃದಯಕ್ಕೆ ಪ್ರೀತಿಯ ಬೆಂಬಲ ಕೊಡಿ. ಸ್ವಾರ್ಥ ಮರೆಯಿರಿ. ಪರರ ಬಗ್ಗೆ ಆಸಕ್ತಿಯಿರಲಿ. ನಿಮ್ಮ ಮನದಿಚ್ಛೆಯ ಕರ್ತವ್ಯದಲ್ಲಿ ಮಗ್ನರಾಗಿರಿ. ಈ ಎಲ್ಲವೂ ಕಾರ್ಯ ರೂಪದಲ್ಲಿ ಬಂದರೆ ನಿಮ್ಮ ಬದುಕು ಹಸನ. ಬಾಳಿಗೊಂದು ಅರ್ಥ!

ಬೆಳಗಾವಿಗೆ ಬಂದಾಗ

Phone ; 1994

# ಮೀನಾಕ್ಷಿ ಲಾಜ್

ಸುಸಜ್ಜಿತ ವ್ಯವಸೆಯಿಂದೊಡಗೂಡಿದ

ಲಾಜಿಂಗ್ ಹಾಗೂ ಬೋರ್ಡಿಂಗ್

ಸ್ಟೇಶನ್ ರೋಡ, ಬೆಳಗಾವಿ

---

Phone ; 321

ಸುವ್ಯವಸ್ಥಿತ ಲಾಜಿಂಗ್ ಮತ್ತು ರೆಸ್ಟಾರೆಂಟ್

# ಮೀನಾಕ್ಷಿ ಭುವನ

ಸ್ಟೇಶನ್ ರಸ್ತೆ, ಬೆಳಗಾವಿ.

ಮಾಲಕರು : ಎನ್. ಡಿ. ನಾಯ್ಕ

---

ದೀಪಾವಳಿಯು ಸರ್ವರಿಗೂ ಶುಭದಾಯಕವಾಗಲಿ!

ನಮ್ಮ ಗ್ರಾಹಕರಿಗೆ ಹಾಗೂ ಹಿತಚಿಂತಕರಿಗೆ ದೀಪಾವಳಿ ಮತ್ತು ಹೊಸ ವರ್ಷದ ಶುಭಾಶಯಗಳು!



ಯಾವಾಗಲೂ

# ಭೀಕುಸಾ ಯಮಾಸಾ ಕ್ಷತ್ರಿಯ ಪ್ರಾ. ಲಿ.

ಸಿನ್ನರ ರ. ನಂ. ೨೪

ಇವರ ಬೀಡಿಯನ್ನು ಕೇಳಿರಿ. ಇದಲ್ಲದೆ ನಮ್ಮ ಇತರ ಉತ್ಪಾದನೆಗಳಾದ 'ರಾಕೇಟ್' ಬೀಡಿ ಭೀಕುಸಾ ಸ್ಪೇಶಲ್ ಬೀಡಿ, ಸಣ್ಣ ಲವಂಗಿ ಸಿನ್ನರ ಬೀಡಿ ನಡರಾಸಿ ಚಪ್ಪಟ ಸಿನ್ನರ ಬೀಡಿ ಇವುಗಳನ್ನು ಯಾವಾಗಲೂ ಉಪಯೋಗಿಸಿರಿ.

ತಯಾರಕರು :

# ಭೀಕುಸಾ ಯಮಾಸಾ ಕ್ಷತ್ರಿಯ ಪ್ರಾ. ಲಿ.,

ಸಿನ್ನರ, ಜಿಲ್ಹಾ : ನಾಸಿಕ

ಡಿಪೋ : 1577 ಮಾರುತಿಗಲ್ಲಿ ಬೆಳಗಾವಿ Phone No 335 ಮತ್ತು ಅಂಕಲಗಿ

---

ಸರ್ವರಿಗೂ ದೀಪಾವಳಿಯು ಶುಭದಾಯಕವಾಗಲಿ!

ಮೈಸೂರು ಮತ್ತು ಮಹಾರಾಷ್ಟ್ರ ರಾಜ್ಯದಲ್ಲಿ ಪ್ರಸಿದ್ಧಿಯನ್ನು ಪಡೆದ ಇದಲ್ಲದೆ ಮಿಠಾಯಿಯ ಉತ್ತಮ ಕೇಂದ್ರವೆಂದು ಹೆಸರನ್ನು ಗಳಿಸಿದ ಬೆಳಗಾವಿ-ಶಹಾಪೂರದಲ್ಲಿಯೇ

• ಸರ್ವೋತ್ಕೃಷ್ಟ ಮಿಠಾಯಿಯ ಕೇಂದ್ರ. •

# ಗಜಾನನ ಮಿಠಾಯಿವಾಲಾ

೬೨೨, ವಿಠ್ಠಲದೇವಗಲ್ಲಿ, ಶಹಾಪೂರ-ಬೆಳಗಾವಿ ಫೋನ: 1788

★ ನಮ್ಮ ವೈಶಿಷ್ಟ್ಯಗಳು ★

"ಸ್ಪೇಶಲ್ ಕುಂದಾ" A1 ಕಾಜು ಬರ್ಫಿ, ಮಾವಾ ಪೇಢೆಗಳು ಸಿಹಿ ಮತ್ತು ಖಾರ ಜಿನಸುಗಳು-ಶುದ್ಧ ತುಪ್ಪದಲ್ಲಿ ಸಿಗುವ ಏಕಮೇವ ಕೇಂದ್ರ

ವಿ. ಸೂ:- ಪರಊರಿನವರಿಗೆ ಪಾರ್ಸಲ್ಲಿನಿಂದ ಕಳಿಸಿಕೊಡುತ್ತೇವೆ.

ಮಾಲಿಕರು :- ಜಯಕಿಸನ ಜೋಶಿ

# ಬಂಗಾಲಿ ಚಿತ್ರರಂಗ



## ಗೋಪಾಲ ವಾಜಪೇಯಿ

ಬಂಗಾಲ ಪ್ರಾಂತವೀರರಿಗೆ, ಶೂರರಿಗೆ, ಕಲಿಗಳಿಗೆ, ಕವಿಗಳಿಗೆ ಹೆಸರಾದಂತೆಯೇ ಚಿತ್ರರಂಗಕ್ಕೂ ಹೆಸರಾಗಿದೆ. ಭಾರತೀಯ ಚಿತ್ರರಂಗದಲ್ಲಿ ಬಂಗಾಲಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ಭಾರತದಲ್ಲಿ ಚಲನ ಚಿತ್ರೋದ್ಯಮ ಕಾಲಿರಿಸಿದ ಕೆಲವೇ ದಿನಗಳಲ್ಲಿ ಅದರಲ್ಲಿ ತೊಡಗಿ ಪ್ರಗತಿಪಥದಲ್ಲಿ ನಡೆದು ಇಂದು ಅಂತಾರಾಷ್ಟ್ರೀಯ ಮಟ್ಟದಲ್ಲಿ ಬಂಗಾಲಿ ಚಿತ್ರಗಳು ಸ್ಪರ್ಧಿಸುತ್ತಿರುವುದು ಹಾಗೂ ಪ್ರಶಸ್ತಿಗಳನ್ನು ಪಡೆಯುತ್ತಿರುವುದು ನಿಜಕ್ಕೂ ಹೆಮ್ಮೆಯ ವಿಷಯ. ಬಂಗಾಲಿ ಚಿತ್ರರಂಗದ ಇತಿಹಾಸ ಬಹು ರಮ್ಯ–ಬಹು ಗಮ್ಯ.

ಚಲನಚಿತ್ರ ಒಂದು ಕಲೆಯೂ ಅಹುದು; ಉದ್ದಿಮೆಯೂ ಅಹುದು. ಹೀಗೆ ಕಲೆಯೊಡನೆ ಮಿಳಿತವಾದ ಚಲನಚಿತ್ರೋದ್ಯಮ ಭರದಿಂದ ಬೆಳೆವುದರಲ್ಲಿ ಸಂಶಯವೇ ಇಲ್ಲ. ಭಾರತೀಯ ಚಲನಚಿತ್ರೋದ್ಯಮದ ಬೆಳವಣಿಗೆಯೂ ಇದನ್ನೇ ತೋರಿಸಿ ಕೊಡುತ್ತದೆ. ಭಾರತದಲ್ಲಿ ಪ್ರಾರಂಭವಾದ ಈ ಉದ್ದಿಮೆಯತ್ತ ಹೆಚ್ಚಾಗಿ ಆಕರ್ಷಿತರಾದವರು ಬಂಗಾಲಿಗಳು. ಆಗಾಗ ಇವರಲ್ಲಿ ನಡೆಯುತ್ತಿದ್ದ 'ಯಾತ್ರಾ' ಎಂದು ಕರೆಯಲ್ಪಡುತ್ತಿದ್ದ ನಾಟಕಗಳಿಗೇ ಇನ್ನೂ ಹೆಚ್ಚಿನ ಆಕರ್ಷಣೆ ನೀಡಲು ಬಂಗಾಲಿ ಕಲಾತಜ್ಞರು ಯೋಚಿಸುತ್ತಿರುವಾಗಲೇ ಆಗ ತಾನೇ ಪ್ರಚಾರಕ್ಕೆ ಬಂದ ಕೌತುಕಮಯ "ಬಯಾಸ್ಕೋಪ್" ಅವರನ್ನು ಆಕರ್ಷಿಸಿತು. ಆಗಲೇ 'ಯಾತ್ರಾಗಳಲ್ಲಿನ ನೃತ್ಯ, ದೃಶ್ಯ, ಪ್ರಣಯ ಸನ್ನಿವೇಶಗಳನ್ನು ಬಯಾಸ್ಕೋಪ್ ಮೂಲಕ ಸೆರೆಹಿಡಿದು ಪರದೆಯ ಮೇಲೆ ಪ್ರದರ್ಶಿಸುವುದಕ್ಕೂ ಆರಂಭವಾಯಿತು. ಈಗ ಜನರ ಲಕ್ಷ್ಯ ಅದರತ್ತ ಬಹಳವಾಗಿ ಹರಿಯಿತು. ಹೀಗೆ ಜನಪ್ರಿಯತೆ ಹೆಚ್ಚಾದಾಗ ಕೆಲ ಮಹನೀಯರ ಮನಸ್ಸು ಬೇರೆಡೆ ವಾಲಿತು. ಯಾತ್ರಾಗಳನ್ನೇ ಚಿತ್ರೀಕರಿಸುವುದಕ್ಕಿಂತ ಸಾಹಸಗಳನ್ನು, ಹೋರಾಟಗಳನ್ನು ಚಿತ್ರೀಕರಿಸಲು ಅವರು ಮುಂದಾದರು. ಇಂಥವರಲ್ಲಿ ದಿ. ಹೀರಾಲಾಲ ಸೇನರ ಹೆಸರನ್ನು ನಾವು ಮೊದಲಿಗೆ ಹೇಳುವದವಶ್ಯ.

ಹೀರಾಲಾಲ ಸೇನ್ ಕ್ರಿ. ಶ. ೧೮೯೬ರಲ್ಲಿ ಸ್ಟಿಫನ್ ಎಂಬೊಬ್ಬರು ಪ್ರದರ್ಶಿಸಿದ ಬಯಾಸ್ಕೋಪ್ ಚಿತ್ರವನ್ನು ವೀಕ್ಷಿಸಿದರು. ಇದರಿಂದಾಗಿ ಹೀರಾಲಾಲ ಸೇನ್ ಈ ಉದ್ಯಮದಲ್ಲಿ ತೊಡಗುವಂತಾಯ್ತು. ಅಂತೆಯೇ ಅವರು ಮುಂದೆರಡೇ ವರುಷಗಳಲ್ಲಿ "ದಿ ರಾಯಲ್ ಬಯಾಸ್ಕೋಪ್ ಕಂಪೆನಿ"ಯನ್ನು ತೆರೆದರು. (೧೮೯೮). ಪರದೇಶಗಳಿಂದ ಫಿಲ್ಮನ್ನು ತರಿಸಿಕೊಂಡು ಜಮೀನ್ದಾರರು ಹಾಗೂ ರಾಜರುಗಳಿಗಾಗಿ(ಪೂ.ಭಾರತ)ಪ್ರದರ್ಶಿಸ ತೊಡಗಿದರು. ಇದರಿಂದ ಉತ್ತೇಜಿತರಾದ ಇನ್ನೂ ಕೆಲವರು ಈ ಉದ್ದಿಮೆಯಲ್ಲಿ ತೊಡಗಿದರು. ಹೀಗೆ ಉತ್ಸುಕರಾಗಿ –ಆತ್ಮವಿಶ್ವಾಸದಿಂದ ಈ ಉದ್ದಿಮೆಯಲ್ಲಿ ಕಾಲಿರಿಸಿ ವಿಜಯ ಸಾಧಿಸಿದವರಲ್ಲಿ ಆನಂದಿ ಬೋಸ್ ಒಬ್ಬರು. ಅವರು ಸಹ "ಅರೋರಾ ಸಿನೇಮಾ ಕಂಪೆನಿ"ಯನ್ನು ಪ್ರಾರಂಭಿಸಿದರು.

"ದಿ. ರಾಯಲ್ ಬಯಾಸ್ಕೋಪ್ ಕಂಪೆನಿ"ಯ ಹೀರಾಲಾಲ ಸೇನ್‌ರು ರಚನಾತ್ಮಕ ಬುದ್ಧಿಯವರು. ಕೇವಲ ಪ್ರದರ್ಶನದ, ಉದ್ದಿಮೆಯ ಕಾರ್ಯದಿಂದಾಗಿ, ಬರಿ ಲಾಭಕ್ಕಾಗಿ ಅವರು ಚಿತ್ರ ನಿರ್ಮಿಸಲು ಇಚ್ಛಿಸಲಿಲ್ಲ. ಇದು ಅವರಿಗೆ ಸಮಾಧಾನವನ್ನು ಉಂಟುಮಾಡಲಿಲ್ಲ. ಅಂತೆಯೇ ಅವರು ಚಲನಚಿತ್ರಗಳನ್ನು ತಯಾರಿಸಲೆಂದು ಫ್ರಾನ್ಸಿನ ಪಾಥೆ ಕಂಪೆನಿಯೊಂದಿಗೆ (ಕ್ರಿ. ಶ. ೧೯೦೦ರಲ್ಲಿ) ವಿಚಾರ ವಿನಿಮಯ ನಡೆಸಿದರು. ಪಾಥೆ ಕಂಪೆನಿಯವರು ತಮ್ಮ ಕಡೆಯ ಒಬ್ಬ ಕ್ಯಾಮರಾಮನ್ನನ್ನು ಭಾರತಕ್ಕೆ ಕಳುಹಿಸಿದರು. ಆತನೊಂದಿಗೆ ಹೀರಾಲಾಲ ಸೇನ್‌ರು ಕ್ಯಾಮರಾ ಚಾಲನೆ ಹಾಗೂ ಚಿತ್ರಗ್ರಹಣವನ್ನೂ ಕಲಿತುಕೊಂಡಿದ್ದರು. ಮುಂದೆ ತಾವೇ ಸ್ವತಃ ಕ್ಯಾಮರಾ ಚಲಿಸಲು ಶಕ್ತರು ಎಂಬುದನ್ನು ದೃಢಪಡಿಸಿಕೊಂಡು, ಹೀರಾಲಾಲ್ ಸೇನ್, ತಾವೇ ಕ್ಯಾಮರಾ ಚಾಲನೆಗೆ ನಿಂತರು. ಅನೇಕ ಚಿಕ್ಕ ಪುಟ್ಟ ದೃಶ್ಯಗಳನ್ನು ಸೆರೆ ಹಿಡಿದರು. ರಂಗಭೂಮಿಯ ಕೆಲವು ದೃಶ್ಯಗಳನ್ನೂ ಚಿತ್ರೀಕರಿಸಿಕೊಂಡರು. ಹೀಗೆ ಇವರು ಚಿತ್ರೀಕರಿಸಿಕೊಂಡ ಹಾಗೂ ಬಹು ಜನಪ್ರಿಯವಾದಂತಹುದೆಂದರೆ 'ಆಲಿಬಾಬಾ' ನಾಟಕದಲ್ಲಿನ ಒಂದು ನೃತ್ಯದೃಶ್ಯ. ಈ ಅವಧಿ ಕ್ರಿ. ಶ. ೧೯೦೦ರಿಂದ ೧೯೦೪ರ ವರೆಗೆ.

ಶ್ರೀ ಜ್ಯೋತಿಶ್‌ಚಂದ್ರ ಸರಕಾರರು ಹೀರಾಲಾಲ್ ಸೇನ್‌ರು ಸಮಕಾಲೀನರು. ಅವರಿಗೆ ಛಾಯಾಗ್ರಹಣದಲ್ಲಿ ಸಿದ್ಧಿ ದೊರೆತಿತ್ತಾದ್ದರಿಂದಲೇ ಅವರು ಭಾರತದ ಪ್ರಪ್ರಥಮ ಛಾಯಾಗ್ರಾಹಕರೆನಿಸಿಕೊಂಡರು. ೧೯೦೫ರಲ್ಲಿ ಶ್ರೀ ಸುರೇಂದ್ರನಾಥ ಬ್ಯಾನರ್ಜಿಯವರ ನೇತೃತ್ವದಲ್ಲಿ ನಡೆದಂಥ "ವಿಭಜನಾ ವಿರೋಧೀ ಮೆರವಣಿಗೆ"ಯನ್ನು ಚಿತ್ರೀಕರಿಸಿಕೊಂಡು ಪ್ರದರ್ಶಿಸಿದರು. ೧೯೦೭ ಹಾಗೂ ೧೯೦೮ರಲ್ಲಿ ಕಾರಿಂಥಿಯನ್ ಥೇಟರಿನಲ್ಲಿದು ಪ್ರದರ್ಶಿಸಲ್ಪಟ್ಟಿತು. ಮುಂದೆ ೧೯೧೧ರಲ್ಲಿ ಹೀರಾಲಾಲ್ ಸೇನ್‌ರು "ದೆಹಲಿ ದರ್ಬಾರ"ನ್ನು ಚಿತ್ರೀಕರಿಸಿಕೊಂಡರು. ಇದು ಅತ್ಯಂತ ಪ್ರಭಾವೀ ಚಿತ್ರವಾಯಿತು. ಆದರೆ ಇದಕ್ಕೆ ರಾಜಕೀಯ ಕಾರಣಗಳಿಂದಾಗಿ ಸಾರ್ವಜನಿಕವಾಗಿ ಪ್ರದರ್ಶಿಸಲು ಅಪ್ಪಣೆ ದೊರೆಯಲಿಲ್ಲ.

ಬಂಗಾಲಿ ಚಿತ್ರರಂಗದಲ್ಲಿ ಇನ್ನೊಂದು ಚಿರಸ್ಮರಣೀಯ ಹೆಸರೆಂದರೆ ದೇಬಿ ಘೋಷ್ ಅವರದು. ಜ್ಯೋತಿಶ್ ಸರಕಾರ ಹಾಗೂ ಆನಂದೀ ಬೋಸರೊಂದಿಗೆ ಕೆಲಸ ಮಾಡಿದ ಇವರು ಮುಂದೆ ಸ್ವತಂತ್ರವಾಗಿ "ಬಿಷಬೃಕ್ಷ" (ವಿಷವೃಕ್ಷ)ವೆಂಬ ನಾಟಕವನ್ನು ಚಿತ್ರೀಕರಿಸಿಕೊಂಡರು. (೧೯೧೫) ಇದು ಮುಂ



ನ್ಯೂ ಥೇಟರ್ಸ್‌ರವರ 'ಅಭಾಗಿನ'ದಲ್ಲಿ ಪೃಥ್ವಿರಾಜ ಹಾಗು ಮೋಲಿನಾ

ದೀಪಾವಳಿಯು ಸರ್ವರಿಗೂ  ಹರ್ಷದಾಯಕವಾಗಲಿ!!

ಬೆಳಗಾವಿಯ ನಗರದ ಕಣ್ಮಣಿ

ಫೋನ್ : 2018

ಹೋಟೆಲ್ **ರಾಜಮಹಲ**

ರಾಮಲಿಂಗ ಖಿಂಡಗಲ್ಲಿ ಬೆಳಗಾವಿ

ಅತ್ಯುತ್ತಮ ಬಾರ ಮತ್ತು ರುಚಿಕರ
ಮಾಂಸಾಹಾರಿ ಊಟದ ಉತ್ತಮ ವ್ಯವಸ್ಥೆ



ಬಾಗಲಕೋಟೆಯ ಶೋಭೆ

ಫೋನ್ : 166

ಮಾಂಸಾಹಾರಿ ಊಟದ ಉತ್ತಮ
ವ್ಯವಸ್ಥೆಗೆ ಮಿಗಿಲಾದದ್ದು.

ಹೋಟೆಲ್ **ಸರ್ದಾರ**

ಸ್ಟೇಶನ್ ರೋಡ ಬಾಗಲಕೋಟ

ಸಂಚಾಲಕರು: ಬಾಬುರಾವ ಕೊಕಾಟೆ

---



ದೀಪಾವಳಿಯು ಸರ್ವರಿಗೂ ಸುಖ-ಸಮೃದ್ಧಿ ಬೀರಲಿ ! 

ಮೈಸೂರು ಅಗ್ರೋ ಇಂಡಸ್ಟ್ರೀಜ
ಕಾರ್ಪೊರೇಶನ್ ಇವರಿಂದ ಮನ್ನಣೆಪಡೆದಿವೆ.

**ಲಕ್ಷ್ಮೀ** ಡಿಜೆಲ್ ಎಂಜಿನ್
ಮತ್ತು
ಪಂಪ ಸೆಟ್ಟುಗಳು



೫ ಹಾ. ಪಾ., ೬.೫ ಹಾ. ಪಾ., ೭.೫ ಹಾ. ಪಾವರಿನ ಶ್ರೇಣಿಯಲ್ಲಿ
ರೈತರಿಗೆ ಸುಖ-ಸಂಪದಭಿವೃದ್ಧಿ ನೀಡುತ್ತವೆ

ಮೆ। ಲಕ್ಷ್ಮೀ ಎಂಜಿನಿಯರಿಂಗ್ ವರ್ಕ್ಸ್
ಮುರಾರಜಿ ಪೇಟ, ಸೊಲ್ಲಾಪೂರ

ಫೋನ ನಂ. 2259



ನ್ಯೂಥೇಟರ್ಸ್‌ರವರ 'ಪ್ರೆಸಿಡೆಂಟ್' ಚಿತ್ರದಲ್ಲಿ ಕಮಲೇಶಕುಮಾರಿಯೊಂದಿಗೆ ಗಾಯಕ ನಟ ಸೈಗಲ

ಮೋಹನ ಥೇಟರಿನಲ್ಲಿ ಪ್ರದರ್ಶಿಸಲ್ಪಟ್ಟಿತು. ಜತೆಗೇ ಮೂಲನಾಟಕವನ್ನೂ ಪ್ರಯೋಗಿಸಲಾಯಿತು.

ಮದನ್‌ರು ಚಿತ್ರೋದ್ಯಮದಲ್ಲಿ ತೊಡಗುವ ಪೂರ್ವದಲ್ಲಿ ಬರೀ ಬೀದಿ ಜಾದುಗಳು, ಕೋಳಿ ಕಾಳಗಗಳು, ಸಹಜ ಸೌಂದರ್ಯ ಹಾಗೂ ನಾಟಕಗಳನ್ನೇ ಚಿತ್ರೀಕರಿಸಲಾಗುತ್ತಿತ್ತು. ಮದನರು ೧೯೦೮ರಲ್ಲೇ ಚಿತ್ರೋದ್ಯಮದಲ್ಲಿ ಕಾಲಿರಿಸಿದ್ದರೂ ಸಹ ಬರೀ ಪ್ರದರ್ಶನಗಳನ್ನು ಮಾತ್ರ ನೋಡುತ್ತಿದ್ದರು. ಭಾರತದ ಪ್ರಮುಖ ನಗರಗಳಲ್ಲೆಲ್ಲ ಇವರು ಸಿನೇಮಾ ಮಂದಿರಗಳನ್ನು ನಿರ್ಮಿಸಿದರು. ಇದರಿಂದ ಉತ್ತೇಜಿತರಾದ ಅವರು ಚಿತ್ರ ನಿರ್ಮಾಣದಲ್ಲೂ ತೊಡಗಲು ಮನಸ್ಸಾಯಿತು. ಫಾಲ್ಕೆಯವರ ಚಿತ್ರ ನಿರ್ಮಾಣದ ಯಶಸ್ಸಿನಿಂದ ಉತ್ತೇಜಿತರಾದ ಮದನ್‌ರು ತಾವೂ ಚಿತ್ರ ನಿರ್ಮಾಣದತ್ತ ಮನ ಹರಿಸಿದರು. ಅಂತೇ ವಿದೇಶೀ ತಂತ್ರಜ್ಞರೊಂದಿಗೆ ಸಹಕರಿಸಿ ಚಿತ್ರಗಳನ್ನು ತಯಾರಿಸುವಲ್ಲಿ ಮುಂದಾದರು.

ಹೀಗೆ ಬಂಗಾಲದ ಪ್ರಪ್ರಥಮ ಪೂರ್ಣಚಿತ್ರವೆನಿಸಿದ್ದು "ಬಿಲ್ವಮಂಗಲ" ಎಂಬುದು. ೧೯೧೮ರಲ್ಲಿ ಚಿತ್ರೀಕರಣ ಪ್ರಾರಂಭವಾಗಿ ೧೯೧೯ರಲ್ಲಿ ಪೂರ್ತಿಗೊಂಡಿತು. ಶ್ರೀ ಸಿನೇಮಾ ಎಂಬ ಲಾಂಛನದಡಿ ಈ ಚಿತ್ರ ಕಾರ್ನವಾಲಿಸ್ ಥೇಟರಿನಲ್ಲಿ ತೆರೆಗೆ ಬಂತು. ಈ ಚಿತ್ರವನ್ನು ರುಸ್ತೋಮ್‌ಜೀ ದೋತಿವಾಲಾರು ನಿರ್ದೇಶಿಸಿದರು. ಮದನ್‌ರು ಬರೀ ಚಿತ್ರ ನಿರ್ಮಾಣದಲ್ಲೇ ಮುಂದುವರಿದರು. ವಾಕಿಯುಗಕ್ಕಿಂತ ಮುನ್ನ ಇವರ 'ರಾಜಾ ಹರಿಶ್ಚಂದ್ರ' 'ನಳ ದಮಯಂತಿ' 'ಧ್ರುವ ಚರಿತ್ರಾ' ಹಾಗೂ 'ಮಹಾಭಾರತ' ಚಿತ್ರಗಳು ಜನಮನ ಸೂರೆಗೊಂಡವು. ಕಿಕ್ಕಿರಿದ ಜನಸಂದಣಿಯಲ್ಲಿ ಪ್ರದರ್ಶನಗೊಂಡವು.

ಮುಂದೆ ಹೀಗೆ ಪೂರ್ಣ ಚಿತ್ರವನ್ನು ತಯಾರಿಸುವಲ್ಲಿ ಮುಂದಾದವರು ಅನಂದಿ ಬೋಸ್‌ರು. ಆರೋರಾ ಸಿನೇಮಾ ಕಂಪನಿಯಲ್ಲವರು ಚಿತ್ರ ನಿರ್ಮಿಸಿದರು. ಈ ಚಿತ್ರದ ಹೆಸರು 'ರತ್ನಾಕರ' ಎಂದು. ಇದನ್ನು ಬರೆದು ನಿರ್ದೇಶಿಸಿದವರು ಶ್ರೀ ಸುರೇಂದ್ರ ನಾರಾಯಣ ರಾಯ್ ಅವರು. ಈ ಚಿತ್ರವನ್ನು ಛಾಯಾಗ್ರಹಿಸಿದವರು ದೇಬಿ ಘೋಷ್ ಅವರು. ಈ ಚಿತ್ರದಲ್ಲಿ ನಾಯಕನಾಗಿ ಚುನಿಲಾಲ್ ದೇಬ್ ಅಭಿನಯಿಸಿದರು. ಅಂಥ ಕಾಲದಲ್ಲೂ ನಾಯಕಿಯಾಗಿ ಇಬ್ಬರು ಮಹಿಳೆಯರು ಅಭಿನಯಿಸಿದರು. ಅವರ ಹೆಸರು ಶಶಿಮುಖಿ ಹಾಗೂ ಸುಶೀಲಾ ಬಾಲಾ. ಚಿತ್ರ ಪೂರ್ತಿಗೊಂಡು ನಿಂತು ಬಹಳ ದಿನಗಳಾದರೂ ತೆರೆಗಾಣಲಿಲ್ಲ. ೧೯೨೧ ರಲ್ಲಿ ತೆರೆಗೆ ಬಂತದು. ಏತನ್ಮಧ್ಯೆ ಶ್ರೀ ಧೀರೇನ್ ಗಂಗೂಲಿಯವರು ಎಂ. ಜಿ. ಎಂ.ದ ವ್ಯವಸ್ಥಾಪಕ ಶ್ರೀ ನಿತೀಶ್ ಲೆಹರಿಯವರೊಡಗೂಡಿ "ಇಂಡೋ–ಬ್ರಿಟಿಶ್ ಫಿಲಂ ಕಂಪೆನಿ"ಯನ್ನು ಸ್ಥಾಪಿಸಿ ಅನಂದಿ ಬೋಸ್‌ರಿಗಿಂತ ಪ್ರಚಂಡ ಯಶಸ್ಸು ಪಡೆದರು. ಅವರು ತಯಾರಿಸಿ ತೆರೆಗೆ ತಂದ ಪ್ರಥಮ ಚಿತ್ರ "ಬಿಲಾತ್ ಫೆರತ್" ಎಂಬುದು. (೧೯೨೧ರ ಫೆಬ್ರುವರಿ ೨೬ರಂದು ಬಿಡುಗಡೆ) ಅಲ್ಲದೇ ಮದನ್‌ರಿಂದ ಜ್ಯೋತಿಶ್‌ಚಂದ್ರ ಸರಕಾರರನ್ನು ತಮ್ಮೆಡೆ ಬರುವಂತೆ ಮಾಡಿದರು. ಈ ಚಿತ್ರದಲ್ಲಿ ಸ್ವತಃ ಧೀರೇನ್ ಗಂಗೂಲಿಯವರೇ ನಾಯಕರಾಗಿ ಅಭಿನಯಿಸಿದರು ಮುಂದೆ ಈ "ಇಂಡೋ ಬ್ರಿಟಿಶ್ ಫಿಲ್ಮ್ ಕಂಪೆನಿ"ಯವರ ಮತ್ತೆರಡು ಚಿತ್ರಗಳು ನಿರ್ಮಿಸಲ್ಪಟ್ಟವು. (ಯಶೋದಾ ನಂದನ್ ಹಾಗೂ ಸಾಧು ಕಿ ಸೈತಾನ್) ಇವೆರಡೂ ೧೯೨೨ರಲ್ಲಿ ರುಸ್ಸಾ ಥೇಟರಿನಲ್ಲಿ ಬಿಡುಗಡೆಯಾದವು. ಈ ವೇಳೆಗೆ "ಇಂಡೋ ಬ್ರಿಟಿಶ್ ಫಿಲ್ಮ್ ಕಂಪೆನಿ"ಯು ಅವಸಾನಗೊಳ್ಳತೊಡಗಿತ್ತು. ಹೀಗಾಗಿ ಧೀರೇನ್ ಗಂಗೂಲಿಯವರು ಹೈದ್ರಾಬಾದಿಗೆ ಬಂದು, "ಲೋಟಸ್ ಫಿಲ್ಮ್ ಕಂಪೆನಿ"ಯನ್ನು ಪ್ರಾರಂಭಿಸಿದರಾದರೂ ಅದು ಕೂಡ ಬಹು ದಿನ ಉಳಿಯಲಿಲ್ಲ. ಆದರೂ ಅವರು ಧೈರ್ಯಗೆಡಲಿಲ್ಲ. ಹೈದ್ರಾಬಾದ್‌ನಿಂದ ಮತ್ತೆ ಕಲಕತ್ತೆಗೆ ಪಯಣಿಸಿ ೧೯೨೮ರಲ್ಲಿ "ಬ್ರಿಟಿಶ್ ಡೊಮಿನಿಯನ್ ಫಿಲ್ಮ್ ಕಂಪೆನಿ"ಯನ್ನು ಡಮ್ ಡಮ್ ರಸ್ತೆಯಲ್ಲಿ ಪ್ರಾರಂಭಿಸಿದರು. ಇಲ್ಲಿ ಅವರು ಅನೇಕ ತಂತ್ರಜ್ಞರು, ಕಲಾವಿದರೊಂದಿಗೆ ಸೇರಿ ಕೆಲಸ ಮಾಡತೊಡಗಿದರು. ಮುಂದೆ ಇವರು ಭಾರತೀಯ ಚಿತ್ರರಂಗಕ್ಕೆ ಅವಿಸ್ಮರಣೀಯ ಸೇವೆ ಸಲ್ಲಿಸತೊಡಗಿದರು. ಇವರೊಂದಿಗೆ ಸೇರಿಸಲೇಬೇಕಾದ ಹೆಸರುಗಳೆಂದರೆ– ದೇವಕಿ ಬೋಸ್, ದಿ. ಪ್ರಮಥೇಶ್ ಬರುವಾ ಹಾಗೂ ಕೃಷ್ಣಗೋಪಾಲ್. ಇವರು ತಯಾರಿಸಿದ ಪ್ರಥಮ ಚಿತ್ರ–"ಪದ್ಮಿನಿ ದಿ ಬ್ಯೂಟಿಫುಲ್" ಎಂಬುದು. ಇದರಲ್ಲಿ ದೇವಕಿ ಬೋಸ್ ಹಾಗೂ ಸಬೀತಾ ಬೋಸ್ ನಟಿಸಿದರು. ಮುಂದೆ ಇದೇ ಕಂಪೆನಿಯಿಂದ "ಪಂಚಸರ" "ಚರಿತ್ರ ಹೀನ್" ಹಾಗೂ "ತಕಾಯ್ ಕಿ ನಾ ಹೋಯ್" ಮುಂತಾದ ಚಿತ್ರಗಳು ನಿರ್ಮಾಣಗೊಂಡವು.

"ರತ್ನಾಕರ" ಚಿತ್ರ ತಯಾರಿಸಿದ ಅನಂದಿ ಬೋಸ್ ಮುಂದೆ ಅನೇಕ ಚಿತ್ರಗಳನ್ನು ತಯಾರಿಸಿ ೧೯೨೯ರಲ್ಲಿ "ಆರೋರಾ ಫಿಲ್ಮ್ ಕಾರ್ಪೊರೇಷನ್" ಸ್ಥಾಪಿಸಿದರು



ನ್ಯೂಥೇಟರ್ಸ್‌ರವರ 'ಪಿಗಂಧ' ಚಿತ್ರದಲ್ಲಿ ಪಹಾರಿ ಸನ್ಯಾಲ್, ಸುಪರ್ಣಾ ಮುಕರ್ಜಿ ಹಾಗು ಭಾರತಿದೇವಿ.



ದೀಪಾವಳಿಯು ಸರ್ವರಿಗೂ
ಶುಭವನ್ನೀಯಲಿ !!

ಪಾಟಣಕರ
ಇವರ
ಎಲ್ಲ ತರದ

Patankar F.P.O
MANGO
PICKLE
PATANKAR-MARKE

ಉಪ್ಪಿನಕಾಯಿ

ಮಸಾಲೆ

ಹಪ್ಪಳ

ಚಟ್ನಿ

ಕೆ. ಸಿ. ಪಾಟಣಕರ.
ಮಾರ್ಕೆಟ - ಬೆಳಗಾಂವ.




(ಈ ಸಂಸ್ಥೆ ಇಂದಿಗೂ ಚಿತ್ರಗಳನ್ನು ನಿರ್ಮಿಸುತ್ತಲೇ ಇದೆ. ಈಗ ಆನಂದೀ ಬೋಸ್‌ರ ಮಕ್ಕಳಾದ ಶ್ರೀ ಅಜಿತ್ ಹಾಗೂ ಅರುಣ್ ಬೋಸ್‌ರು ಈ ಸಂಸ್ಥೆಯ ಆಡಳಿತಗಾರರಾಗಿದ್ದಾರೆ.)

ಬಂಗಾಲಿ ಚಿತ್ರ ನಿರ್ಮಾಣಕ್ಕೆ ಮತ್ತೆ ಹಲವರು ಕೈ ಹಾಕಿದರು. ಅದರ ಯಶಸ್ಸು ಹಾಗೂ ಲಾಭವನ್ನು ಪ್ರಗತಿಯನ್ನು ಕಂಡು, ಕೆಲವು ವಕೀಲರು ಹಾಗೂ ಶ್ರೀಮಂತ ವರ್ಗದವರು ಹಾಗೂ ನಟರು ಜತೆಗೂಡಿ ಶ್ರೀ ಶ್ರೀ ಬಿ. ಕೆ. ಘೋಷ್‌ರ ನೇತೃತ್ವದಲ್ಲಿ ೧೯೨೨ರಲ್ಲಿ "ತಾಜ್‌ಮಹಲ್ ಫಿಲ್ಮ್ ಕಂಪನಿ"ಯನ್ನು ಸ್ಥಾಪಿಸಿದರು. ಬಂಗಾಲದ ಸಾಹಿತ್ಯ ಸಿಥಿಯಿನ್ನೂ ತೆರೆಗೆ ಬಂದಿರದಿದ್ದ ಕಾಲವದು. "ತಾಜ್‌ಮಹಲ್ ಫಿಲ್ಮ್ ಕಂಪೆನಿ"ಯವರೇ ಸಾಹಿತ್ಯವನ್ನು ಚಿತ್ರವನ್ನಾಗಿ ಮಾರ್ಪಡಿಸಿದವರಲ್ಲಿ ಪ್ರಥಮರು. ಅವರು ಶರತ್‌ಚಂದ್ರ ಚಟರ್ಜಿಯವರ "ಆಂಧರೇರ್ ಆಲೂ"ವನ್ನು ತಯಾರಿಸಿದರು. ಇದರ ನಿರ್ದೇಶಕ ಶಿಶಿರ್ ಬಾಧುರಿ. ಆಗಿನ ರಂಗನಟಿ ಶ್ರೀಮತಿ ದುರ್ಗಾರಾಣಿ ಕಥಾನಾಯಕಿಯಾಗಿ ಅಭಿನಯಿಸಿದರು. ಇದೇ ಸಂಸ್ಥೆಯ ಎರಡನೆಯ ಚಿತ್ರ ಶ್ರೀ ಟಾಗೋರರ ಕಥೆಯಾಧರಿಸಿ ತಯಾರಿಸಿದ "ಮನಭಂಜನ್" ಎಂಬುದು. ನರೇಶ್‌ಮಿತ್ತರ ಈ ಚಿತ್ರದ ನಿರ್ದೇಶಕರು. ಇದಕ್ಕೂ ಮುನ್ನ ಅವರು "ಖೋಕಾ ಬಾಬು" ಎಂಬಿನ್ನೊಂದು ಚಿತ್ರವನ್ನು ತಯಾರಿಸಿದ್ದರು. ಈ ಸಂಸ್ಥೆಯ ನಾಲ್ಕನೆಯ ಹಾಗೂ ಕೊನೆಯ ಚಿತ್ರ–ಶರಶ್ಚಂದ್ರ ಚಟರ್ಜಿಯವರ ಕಥೆಯಾಧರಿಸಿದ "ಚಂದ್ರನಾಥ" (ನಿರ್ದೇಶನ ನರೇಶ್ ಮಿತ್ತರ್) ಈ ಚಿತ್ರ ೧೯೨೪ರ ಫೆಬ್ರುವರಿ ತಿಂಗಳಲ್ಲಿ ಬಿಡುಗಡೆಯಾಯಿತು. ಇದಕ್ಕೂ ಮುನ್ನ ೧೯೨೩ರಲ್ಲಿ "ಫೋಟೋಪ್ಲೇ ಸಿಂಡಿಕೇಟ್" ಎಂಬ ಒಂದು ಚಿತ್ರಸಂಸ್ಥೆ ಪ್ರಾರಂಭವಾಗಿ ಒಂದೇ ಒಂದು ಚಿತ್ರ ತಯಾರಿಸಿ (ಸೋಲ್ ಆಫ್ ಎ ಸ್ಲೇವ್) ಮುಚ್ಚಿತು. ಈ ಚಿತ್ರದ ಕಥೆ ಪ್ರೊ. ಆರ್. ಡಿ. ಬ್ಯಾನರ್ಜಿ ಅವರದು. ೧೯೨೬ರಲ್ಲಿ ಮಾರವಾಡಿಗಳೊಬ್ಬರ ಧನ ಸಹಾಯದಿಂದ ಇಂಡಿಯನ್ ಕಿನೇಮಾ ಆರ್ಟ ಎಂಬ ಸಂಸ್ಥೆ ಪ್ರಾರಂಭವಾಯ್ತು. ಇದು ಮದನ್‌ರನ್ನು ಹಿಂದೆ ಹಾಕಿತು. ಇದರ ಪ್ರಥಮ ಚಿತ್ರ "ಪುನರ್ಜನ್ಮ" (ನಿರ್ದೇಶನ ಜಾಯ್ ಗೋಪಾಲ ಪಿಳ್ಳೆ). ಅವರ ದ್ವಿತೀಯ ಚಿತ್ರ "ಶಂಕರಾಚಾರ್ಯ" ೧೯೨೮ರಲ್ಲಿ "ನಿಷಿದ್ಧ ಫಲ" ೧೯೨೯ರಲ್ಲಿ "ಕಿಡ್‌ನ್ಯಾಪ್ಡ ಗರ್ಲ" ಹಾಗೂ ೧೯೩೦ರಲ್ಲಿ "ಕಂಠಹಾರ" ೧೯೩೨ರಲ್ಲಿ "ಭಾಗ್ಯಲಕ್ಷ್ಮಿ" ಎಂಬ ಚಿತ್ರಗಳನ್ನು ಕಾಳಿಪ್ರಸಾದ ಘೋಷರು ನಿರ್ದೇಶಿಸಿದರು. ಏತನ್ಮಧ್ಯೆ "ಈಸ್ಟರ್ನ್ ಫಿಲ್ಮ ಸಿಂಡಿಕೇಟ್" "ಆರ್ಯಾ ಫಿಲ್ಮ ಕಂಪೆನಿ", "ಗ್ರಾಫಿಕ್ ಆರ್ಟ್ಸ್" ಹಾಗೂ "ಇಂಟರ್‌ನ್ಯಾಷನಲ್ ಫಿಲ್ಮ ಕ್ರಾಫ್ಟ" ಮುಂತಾದ ಚಿತ್ರಸಂಸ್ಥೆಗಳು ಹುಟ್ಟಿಕೊಂಡವು. ಇವುಗಳು ತಯಾರಿಸಿದ ಚಿತ್ರಗಳ ಸಂಖ್ಯೆ ಬಹಳ. ಸ್ಥಳಾಭಾವದಿಂದಾಗಿ ಅವೆಲ್ಲವುಗಳನ್ನೂ ಇಲ್ಲಿ ಉಲ್ಲೇಖಿಸಿಲ್ಲ.

ಮದನ್‌ರು ವಾಕಿ ಚಿತ್ರಗಳನ್ನು ತಯಾರಿಸಲು ಪ್ರಯತ್ನಪಟ್ಟರಾದರೂ ಅರ್ದೇಶಿರ್ ಎಂ. ಇರಾಣಿಯವರ "ಆಲಂಆರಾ" ಚಿತ್ರದಿಂದ ಅವರಿಗೆ ಬಹು ದೊಡ್ಡ ಪೆಟ್ಟು ಬಿತ್ತು. ಇದು ಭಾರತದ ಪ್ರಪ್ರಥಮ ವಾಕ್ಚಿತ್ರ ಆದರೂ ಕೆಲವೇ ದಿನಗಳಲ್ಲಿ ಮದನ್‌ರು ತಮ್ಮ ಪ್ರಥಮ ವಾಕ್ಚಿತ್ರವಾದ "ಜಮ್ಮಾ ಶಾಸ್ತಿ" ಎಂಬುದನ್ನು ಬಿಡುಗಡೆ ಮಾಡಿದರು. ಮುಂದೆ ಅವರು ಮತ್ತೆರಡು ವಾಕ್ಚಿತ್ರಗಳನ್ನು ಬಿಡುಗಡೆ ಮಾಡಿದರು, "ಜೋರ್ ಬಾರಾತ್" ಹಾಗೂ "ರಿಶಿರ್‌ಪ್ರೇಮ್" ಮುಂದೆ ವಾಕ್ಚಿತ್ರಗಳನ್ನು ತಯಾರಿಸಿದ ಸಂಸ್ಥೆಗಳು–ಈಸ್ಟ್ ಇಂಡಿಯಾ ಫಿಲ್ಮ ಕಂಪನಿ, ರಾಧಾ ಫಿಲ್ಮ್ಸ್, ಭಾರತ ಲಕ್ಷ್ಮಿ ಪಿಕ್ಚರ್ಸ್, ಪಯೋನಿಯರ್ ಫಿಲಮ್ಸ್ ಇತ್ಯಾದಿ.

ಬಂಗಾಲಿ ಚಿತ್ರರಂಗದ ಬಗ್ಗೆ ಮಾತನಾಡುವಾಗ ನ್ಯೂ ಥೇಟರ್ಸ್ ಬಗ್ಗೆ ಹೇಳಲೇಬೇಕು. ಅವರ "ಚಂಡಿದಾಸ್" ತಂತ್ರ, ಕಲೆ, ಹಾಗೂ ಸಂಗೀತ ಸಂಯೋಜನೆ, ನಟವರ್ಗ ಎಲ್ಲದರಲ್ಲೂ ಅದ್ವಿತೀಯವೆನಿಸಿತು. ಇವರೇ ಪ್ರಪ್ರಥಮವಾಗಿ ಹಿನ್ನೆಲೆ ಸಂಗೀತ ಉಪಯೋಗಿಸಿದರು. ದೇಬಕಿ ಬೋಸ್ ಇದರ ನಿರ್ದೇಶಕರು. ಇವರೇ ಮುಂದೆ ಮತ್ತೊಂದು ಚಿತ್ರ (ಪೂರನ್ ಭಕ್ತ) ನಿರ್ಮಿಸಿದರು. ಪಿ. ಸಿ. ಬರುವಾರ "ದೇವದಾಸ" ಚಿತ್ರವಂತೂ ಆಗಿನ ವಾಕಿ ಚಿತ್ರಗಳಲ್ಲೇ ಅತ್ಯುತ್ತಮವೆನಿಸಿತು. ಇದರಲ್ಲಿ ಮೊಟ್ಟ ಮೊದಲ ಬಾರಿಗೆ Telepathy shots ಉಪಯೋಗಿಸಲಾಗಿತ್ತು.

ನಿತಿನ್ ಬೋಸ್‌ರು ತಮ್ಮ "ಭಾಗ್ಯ ಚಕ್ರ" (೧೯೩೫) ಚಿತ್ರದಿಂದ ಹೊಸ ಸಂಪ್ರದಾಯ ಹಾಕಿದರು. ಹಿನ್ನೆಲೆ ಗಾಯನವನ್ನಿವರು ಪ್ರಥಮವಾಗಿ ಉಪಯೋಗಿಸಿಕೊಂಡರು. ೧೯೩೫ ಎಂದರೆ ವಾಕಿಚಿತ್ರಗಳಿಗೆ ಸ್ವಾಗತದ ಹಾಗೂ ಮೂಕಿ ಚಿತ್ರಗಳಿಗೆ ವಿದಾಯ ಹೇಳುವ ಕಾಲವೆನ್ನಬಹುದು. ೧೯೩೭–೩೮ರಲ್ಲಿ ನ್ಯೂ ಥೇಟರ್ಸ್‌ನವರು ದೀದಿ, ಮುಕ್ತಿ, ವಿದ್ಯಾಪತಿ, ಸಾಥಿ ಹಾಗೂ ಬಾರಿ ದೀದಿ ಚಿತ್ರಗಳನ್ನು ಬಿಡುಗಡೆ ಮಾಡಿದರು.

೧೯೩೯ರಲ್ಲಿ ಭಾರತೀಯ ಚಿತ್ರರಂಗಕ್ಕೆ ಜಾಗತಿಕ ಸಮರದ ಶಾಕ ತಟ್ಟದೇ ಇರಲಿಲ್ಲ. ೧೯೪೦ರಲ್ಲಿಯಂತೂ ಯಾವುದೇ ಉದ್ದಿಮ ನಡೆಯುವಂತಿರಲಿಲ್ಲ. ಯುದ್ಧಾನಂತರ ಎಲ್ಲದಕ್ಕೂ ಹೊಸ ಚೇತನ ಬಂತು. ಕಲ್ಪನಾ ಚಿತ್ರಗಳು, ಕಥಾನಕಗಳು ಹೊಸ ತಂತ್ರದಿಂದ ತಯಾರಾಗತೊಡಗಿದವು. ೧೯೪೪ರಲ್ಲಿ ಬಿಮಲ್ ರಾಯ್ ಅವರು 'ಉದಯೇರ್ ಪಾಥೆ' ಎಂಬ ಉನ್ನತ ಚಿತ್ರವನ್ನು ತಯಾರಿಸಿದರು. ೧೯೪೯ರಲ್ಲಿ ಮಕ್ಕಳ ಚಿತ್ರ ಪರಿವರ್ತನವನ್ನು ಸತ್ಯನ್‌ಬೋಸ್ ನಿರ್ದೇಶಿಸಿದರು.

ಸ್ವಾತಂತ್ರ್ಯಾನಂತರ ಸಾಧಾರಣವಾಗಿ ಎಲ್ಲ ಚಿತ್ರರಂಗಕ್ಕೂ ಸಿಕ್ಕಂತೆ ಬಂಗಾಲಿ ಚಿತ್ರರಂಗಕ್ಕೂ ಹೆಚ್ಚಿನ ಸೌಲಭ್ಯ ಸಿಕ್ಕಿತು. ಒಳ್ಳೊಳ್ಳೆಯ ಚಿತ್ರಗಳು ತಯಾರಾಗತೊಡಗಿದವು. ಸತ್ಯಜಿತ್‌ರಾಯ್‌ರೇ ಬಂಗಾಲದ ಪ್ರಸಿದ್ಧ ನಿರ್ದೇಶಕರೆನಿಸಿದ್ದಾರೆ. ಅವರ ಪಥೇರ್ ಪಾಂಚಾಲಿ, ಅಪರಾಜಿತ್, ಅಪುರ ಸಂಸಾರ್ ಹಾಗೂ ಮಹಾನಗರಗಳಂತೂ ತುಂಬಾ ಪರಿಣಾಮಕಾರೀ ಚಿತ್ರಗಳೆನಿಸಿದವು. ಚಾರುಲತಾ ಚಿತ್ರದಿಂದ ಅವರು ಜಗತ್ತಿನ ಹತ್ತು ಪ್ರಸಿದ್ಧ ನಿರ್ದೇಶಕರಲ್ಲೊಬ್ಬರೆನಿಸಿದರು. ಇವರಲ್ಲದೇ ಅಜಿತ್‌ಸೆನ್, ಪ್ರಭಾತ್ ಮುಖರ್ಜಿ, ರಾಜನ್ ತರಾಫದಾರ್ ಮುಂತಾದವರು ಸಹ ಬಂಗಾಲದ ಚಿತ್ರರಂಗವನ್ನು ಶ್ರೀಮಂತವಾಗಿಸಿದರು. ರಿಟ್‌ವಿಕ್ ಘಾಟಕರಂತೂ ಬಹು ಹೆಸರುವಾಸಿಯಾದರು. ತಮ್ಮ ಅಮೋಘ ಚಿತ್ರ ನಿರ್ಮಿತಿಯಿಂದ.

ಬಂಗಾಲಿ ಚಿತ್ರರಂಗದಲ್ಲಿ ಈ ಇಬ್ಬರ ಹೆಸರನ್ನು ಸೇರಿಸಲೇ ಬೇಕು. ತಪನ್ ಸಿನ್ಹಾ ಹಾಗೂ ಮೃಣಾಲ್ ಸೇನ್. ಮೃಣಾಲ್‌ಸೇನ್‌ರ ಭುವನ್‌ಸೋಮ್ ಬಹುವಾಗಿ ಮೆಚ್ಚುಗೆ ಗಳಿಸಿತು. ಅಷ್ಟೇ ಏಕೆ ಮೊನ್ನೆಯಷ್ಟೇ ಬರ್ಲಿನ್‌ನಲ್ಲಿ ನೆರವೇರಿದ ಚಿತ್ರಮೇಳದಲ್ಲಿ ಸತ್ಯಜಿತ್‌ರೇ ತಮ್ಮ ಅಶಾನಿ ಸಂಕೇತ್‌ಗಾಗಿ "ಸುವರ್ಣ ಕರಡಿ" ಪದಕ ಪಡೆದರು, ಇದು ಬಂಗಾಲಕ್ಕೆ, ಭಾರತಕ್ಕೆ ಹೆಮ್ಮೆಯ ವಿಷಯ,

# ದಕ್ಷಿಣದಲ್ಲಿ ಚಿತ್ರರಂಗ

★ ಎಚ್. ಕೆ. ವಿಜಯನಾರಸಿಂಹ
★ ಮತ್ತು ಜಿ. ಕೆ. ಪಾಟೀಲ



'ವೆಳ್ಳಿ ವಿಳಾ' ತಮಿಳು ಚಿತ್ರ
ನಿರ್ದೇಶಕ ಬಾಲಚಂದರ್

ದಕ್ಷಿಣ ಭಾರತದಲ್ಲಿ ಚಿತ್ರೋದ್ಯಮ ಕಾಲಿರಿಸಿದುದು 'ಆಲಂಆರಾ' ವಾಕ್ಚಿತ್ರದ ನಂತರವೇ ಎಂದು ತಿಳಿಯಲಾಗುತ್ತದೆ. ಈ ಉದ್ಯಮವನ್ನು ದಕ್ಷಿಣದಲ್ಲಿ ಪ್ರಾರಂಭಿಸಿದುದರ ಶ್ರೇಯಸ್ಸು ಶ್ರೀ ಎ. ನಾರಾಯಣನ್‌ರಿಗೆ ಸಲ್ಲಬೇಕು. ಅದುವರೆಗೆ ದಕ್ಷಿಣದ ಎಲ್ಲ ಭಾಷೆಗಳ ಚಿತ್ರಗಳನ್ನೂ ಮುಂಬೈ ಇಲ್ಲವೆ ಕೊಲ್ಹಾಪೂರಗಳಲ್ಲಿ ತಯಾರಿಸಲಾಗುತ್ತಿತ್ತು. ಶ್ರೀ ಎಚ್. ಎಂ. ರೆಡ್ಡಿಯವರು 'ಕಾಲಿದಾಸ್' ತಮಿಳು ಚಿತ್ರವನ್ನು ತಯಾರಿಸಿದುದು ಕೂಡ ಮುಂಬೈಯಲ್ಲಿಯೇ. ಅದರಲ್ಲಿ ಖ್ಯಾತ ಕಲಾವಿದೆ ಟಿ. ಪಿ. ರಾಜಲಕ್ಷ್ಮಿ ಪ್ರಮುಖ ಪಾತ್ರ ವಹಿಸಿದ್ದಳು. ಅದೇ ವೇಳೆಗೆ ರಾಜಾ ಸ್ಯಾಂಡೋ ಅವರು ಕೂಡ 'ಪಾರಿಜಾತ ಪುಷ್ಪಹರಣಂ' ಹಾಗು 'ಕೋವಾಲಂ' ಎಂಬೆರಡು ತಮಿಳು ಚಿತ್ರಗಳನ್ನು ನಿರ್ದೇಶಿಸಿದ್ದರು. ಆ ಚಿತ್ರಗಳಲ್ಲಿ ಮೈಸೂರಿನ ನಾಗೇಂದ್ರರಾವ ಎಂಬ ರಂಗಭೂಮಿ ನಟರು ಪ್ರಮುಖ ಪಾತ್ರ ವಹಿಸಿದ್ದರು. ಸ್ವಾಮ್ ವಿನಸೆಂಟ್‌ರು ತಯಾರಿಸಿದ 'ಹರಿಶ್ಚಂದ್ರ' ಹಾಗು 'ವಾಲಿ ವಿವಾಹ' ತಮಿಳು ಚಿತ್ರಗಳು ಅತ್ಯಂತ ಜನಪ್ರಿಯ ಚಿತ್ರಗಳು. ಅವೆರಡರಲ್ಲೂ ಟಿ. ಪಿ ರಾಜಲಕ್ಷ್ಮಿಯೇ ಪ್ರಮುಖ ಪಾತ್ರ ವಹಿಸಿದ್ದಳು. ಈ ಕಾಲಕ್ಕೇ ಭಾಷಾವಾರು ಕಲಾವಿದರ ವಿಭಜನೆಗೆ ನಾಂದಿಯಾಯಿತು.

ಅನಂತರದ ವರ್ಷಗಳು ದಾಕ್ಷಿಣಾತ್ಯ ಚಿತ್ರರಂಗಕ್ಕೆ ಅವಿಸ್ಮರಣೀಯವಾದವುಗಳೆನ್ನಬಹುದು. 'ಆಲಂಆರಾ' ಚಿತ್ರದೊಂದಿಗೆ ಅಮೇರಿಕ ಹಾಗು ಯುರೋಪ ದೇಶಗಳನ್ನು ಸಂದರ್ಶಿಸಿದ ದಕ್ಷಿಣದ ಶ್ರೀ ಎ. ನಾರಾಯಣನ್ ಹಿಂತಿರುಗುವಾಗ ಅಲ್ಲಿಂದ ಧ್ವನಿಮುದ್ರಣ ಯಂತ್ರಣ ಹಾಗು ಇತರ ಕೆಲ ಸಲಕರಣೆಗಳನ್ನು ತಂದು ಮದ್ರಾಸದಲ್ಲಿ 'ಶ್ರೀನಿವಾಸ ಸಿನೆಟೋನ್' ಎಂಬ ಚಿತ್ರ ತಯಾರಿಕಾ ಸಂಸ್ಥೆಯನ್ನು ಸ್ಥಾಪಿಸಿದರಲ್ಲದೆ "ಶ್ರೀನಿವಾಸ ಕಲ್ಯಾಣಮ್" ಹಾಗು ಇನ್ನಿತರ ಅನೇಕ ಚಿತ್ರಗಳನ್ನು ತಯಾರಿಸಿದರು. ಅವರ ಪತ್ನಿ ಹಾಗು ಶ್ರೀ ವಿ. ಎಸ್. ರಾಘವನ್‌ರು ಪ್ರಥಮ ಧ್ವನಿ ಮುದ್ರಣಕಾರರೆಂಬ ಕೀರ್ತಿಗೆ ಪಾತ್ರರಾದರು. ಅವರು ತಯಾರಿಸಿದ ಚಿತ್ರಗಳಲ್ಲಿ ಕೆಲವನ್ನು ಸ್ವತಃ ನಾರಾಯಣರೇ ದಿಗ್ದರ್ಶಿಸಿದ್ದರಾದರೆ ಕೆಲವನ್ನು ಆರ್. ಪ್ರಕಾಶ ಹಾಗು ರಾಜಾ ಚಂದ್ರಶೇಖರರು ನಿರ್ದೇಶಿಸಿದರು. ೧೯೩೩ ರಲ್ಲಿ ಪ್ರಭಾತ ಸಿನೇಟೋನಿನವರು ತಯಾರಿಸಿದ 'ಸೀತಾ ಕಲ್ಯಾಣಂ' ಚಿತ್ರದ ಪಾಲುಗಾರರಾಗಿದ್ದ ರಾಮನಾಥ, ಶೇಖರ ಹಾಗು ಮುರುಗಾದಾಸ ಮೊದಲಾದವರು ವೇಲ ಪಿಕ್ಚರ್ಸ್ ಲಿಮಿಟೆಡ್ ಎಂಬ ಚಿತ್ರ ತಯಾರಿಕಾ ಸಂಸ್ಥೆಯನ್ನು ಸೇರಿದರು. ಈ ಸಂಸ್ಥೆ ಆದೇ ತಾನೆ ಮದ್ರಾಸದಲ್ಲಿ ಸ್ಟುಡಿಯೋವನ್ನು ಪ್ರಾರಂಭಿಸಿತ್ತು. ಎಂ. ಟಿ. ರಾಜನ್ ಈ ಸಂಸ್ಥೆಯ ಮಾಲಿಕರಾಗಿದ್ದರು. ಅದೇ ವರುಷವೇ "ಮಾರ್ಕಂಡೇಯ" ಹಾಗು "ಪಟ್ಟಿನಾಥರ್" ಎಂಬೆರಡು ಚಿತ್ರಗಳನ್ನು ಈ ಸಂಸ್ಥೆ



ಎನ್. ಟಿ. ರಾಮರಾವ, ಭಾನುಮತಿ.
ತೆಲುಗು 'ಬೊಬ್ಬಿಲಿ ಯುದ್ಧಂ'ನಲ್ಲಿ



ನಾಗೇಶರಾವ, ಜಯಲಲಿತಾ.
'ಮನುಷ್ಯಲು ಮಮತಲು' ತೆಲುಗು ಚಿತ್ರದಲ್ಲಿ

ತಯಾರಿಸಿತು. ಈ ಚಿತ್ರಗಳು ತಾಂತ್ರಿಕ ದೃಷ್ಟಿಯಿಂದ ಉತ್ತಮವಾಗಿದ್ದು ಅಪಾರ ಹಣವನ್ನೂ ಗಳಿಸಿದವು.

ಕ್ರಮೇಣ ಮದ್ರಾಸದಲ್ಲಿ ಸ್ಟುಡಿಯೋಗಳ ಸಂಖ್ಯೆ ಬೆಳೆಯ ತೊಡಗಿದಂತೆ ಮುಂಬೈ ಕೊಲ್ಲಾಪುರಕ್ಕೆ ಹೋಗುತ್ತಿದ್ದ ದಕ್ಷಿಣದ ನಿರ್ಮಾಪಕರು ಮದ್ರಾಸದಲ್ಲಿಯೇ ಚಿತ್ರ ನಿರ್ಮಿಸಲು ನಿರ್ಧರಿಸಿದರು. ಈಗ ಚಲನಚಿತ್ರೋದ್ಯಮದಲ್ಲಿ ಎರಡು ಭಾಗಗಳಾದವು. ತಮಿಳು, ತೆಲುಗು, ಕನ್ನಡ, ಮಲಯಾಳಂ ಮೊದಲಾದವು ದಕ್ಷಿಣದ ಭಾಗವಾದರೆ; ಹಿಂದಿ, ಮರಾಠಿ, ಬಂಗಾಲಿ, ಚಿತ್ರಗಳು ಉತ್ತರದ ಭಾಗವೆನಿಸಿದವು. ಉತ್ತರ ಭಾರತದ ಚಿತ್ರೋದ್ಯಮ ಹೆಚ್ಚು ಪ್ರವರ್ಧಮಾನವೆನಿಸಿದೆ. ಅದಕ್ಕೆ ಕಾರಣವೆಂದರೆ ಮಾರುಕಟ್ಟೆಯ ವೈಶಾಲ್ಯತೆ.

ಈ ಸಮಯದಲ್ಲಿಯೇ ತಮಿಳುನಾಡಿನ ಅನೇಕ ಸಿರಿವಂತರು ಚಿತ್ರೋದ್ಯಮದೆಡೆ ಆಕರ್ಷಿತರಾದರು.



'ಚೆಂಬರತಿ' ಮಲಯಾಳಿ ಚಿತ್ರದ ಶ್ರೇಷ್ಠ ನಿರ್ದೇಶಕ ಪಿ. ಎನ್. ಮೇನನ್

ಆ ಕಾಲದಲ್ಲಿ ಉಪಯೋಗಿಸಲಾಗುತ್ತಿದ್ದ ಶ್ರೇಷ್ಠ ಸಲಕರಣೆಗಳಲ್ಲಿ ಫಿಡಲ್‌ಟೋನ್ ಸೌಂಡ ಯುನಿಟ್, ಬೆಲ್, ಹಾವೆಲ್ ಮಿಚೆಲ್ ಕ್ಯಾಮರಾಗಳು ಪ್ರಮುಖವಾದವು. ಫಿಲ್ಮಿನಲ್ಲಿ ಧ್ವನಿಯ ಮುದ್ರಣಗೈಯುವುದು ಅದೇ ತಾನೇ ಪ್ರಾರಂಭವಾದ ಕಾಲವದು. ಅಂತೆಯೇ ಕಲಾವಿದರು ಸಂಭಾಷಣೆಗಳನ್ನು, ಗೀತೆಗಳನ್ನು ಹೆಚ್ಚು ಎತ್ತರ ಧ್ವನಿಯಲ್ಲಿ ಹೇಳಬೇಕಾಗುತ್ತಿತ್ತು. ಅದುವರೆಗೆ ತಯಾರಾದ ಚಿತ್ರಗಳೆಲ್ಲ ಪೌರಾಣಿಕ ಕಥಾವಸ್ತುವಿನವೇ ಆಗಿದ್ದವು. ಈ ಮಧ್ಯ ಕೆಲ ಪಾಶ್ಚಾತ್ಯ ಚಿತ್ರಗಳು ಭಾರತದಲ್ಲಿ ಪ್ರದರ್ಶನಗೊಂಡವು. ಅವು ಪ್ರೇಕ್ಷಕರನ್ನು ಬಹುವಾಗಿ ಆಕರ್ಷಿಸಿದವೆನ್ನಬಹುದು. ಈಗ ದಾಕ್ಷಿಣಾತ್ಯರು ಪೌರಾಣಿಕ ಕಥೆಗಳನ್ನು ಬಿಟ್ಟು ಸಾಮಾಜಿಕ ಚಿತ್ರಗಳೆಡೆ ಗಮನ ಹರಿಸಿದರು. ರಾಜಾ ಸ್ಯಾಂಡೋ 'ಮೇನಕಾ' ಸಾಮಾಜಿಕ ಚಿತ್ರವನ್ನು ೧೯೩೫ರಲ್ಲಿ ತಯಾರಿಸಿದರು. ಮುಂದೆ 'ಲೀಲಾವತಿ' 'ಪತಿ ಭಕ್ತಿ' ಮೊದಲಾದವು ಚಿತ್ರಗಳು ಹೊರಬಂದವಲ್ಲದೆ ಅವು ಅಪಾರ ಯಶಸ್ಸನ್ನೂ ಪಡೆದವು.

ದ್ವಿತೀಯ ಮಹಾಯುದ್ಧಾನಂತರ ದಕ್ಷಿಣದ ಚಿತ್ರೋದ್ಯಮ ಕುಂಟುತ್ತ ಸಾಗಿತ್ತೆನ್ನಬಹುದು. ಸುಮಾರು ೧೯೫೦ರ ನಂತರ ಮಾತ್ರ ತಮಿಳು ಚಿತ್ರಗಳು ಭರದಿಂದ ತಯಾರಾಗಹತ್ತಿದವೆನ್ನಬಹುದು. ಭಾರತದ ಸೆಸಿಲ್ ಬಿ. ಡಿಮೆಲ್ ಎನಿಸಿದ ಜೆಮಿನಿಯ ವಾಸನ್‌ರು ೪೮ರಲ್ಲೇ ಸಾಹಸಮಯ ಚಿತ್ರವಾದ ಚಂದ್ರಲೇಖಾ (ತಮಿಳು) ತಯಾರಿಸಿದರಲ್ಲದೆ ಅವನ್ನು ಹಿಂದಿಗೂ ಡಬ್‌ಮಾಡಿ ಅಖಿಲ ಭಾರತ ಮಾರುಕಟ್ಟೆಯನ್ನು ಪ್ರವೇಶಿಸಿದರು. ಮುಂದೆ ಎ. ವ್ಹಿ. ಎಂ., ವಾಹಿನಿ, ವಿಜಯಾ ಸ್ಟುಡಿಯೋಗಳೂ ಹುಟ್ಟಿಕೊಂಡವಲ್ಲದೆ ಪ್ರಾದೇಶಿಕ ಚಿತ್ರಗಳ ಜೊತೆಗೆ ಹಿಂದಿ ಚಿತ್ರಗಳನ್ನೂ ನಿರ್ಮಿಸಿ ಯಶಸ್ಸು ಪಡೆದರು. ೧೯೫೦ರಿಂದ ೬೦ರ ವರೆಗಿನ ತಮಿಳು ಚಿತ್ರಗಳ ಪ್ರಮುಖ ತಾರಾಮಣಿಗಳೆಂದರೆ ಟಿ. ಆರ್. ರಾಜಕುಮಾರಿ, ರಂಜನ್, ಪುಷ್ಪವಲ್ಲಿ, ಮೊದಲಾದವರು.



'ಸಂಪೂರ್ಣರಾಮಾಯಣಂ' ತೆಲುಗು ಚಿತ್ರ ನಿರ್ದೇಶಿಸಿ ಖ್ಯಾತರಾದ ಬಾಪು

ಉತ್ಪಾದನೆ, ವಿತರಣೆ, ಪ್ರದರ್ಶನ ಇವು ಚಿತ್ರೋದ್ಯಮದ ಮೂರು ಅಂಗಗಳು. ಸ್ವಾತಂತ್ರ್ಯ ನಂತರದ ಅವಧಿಯಲ್ಲಿ ಈ ಉದ್ಯಮದ ಪ್ರಗತಿ ಕುಂಠಿತವಾದುದೇಕೆಂಬುದಕ್ಕೆ ಕಾರಣ ನೀಡುತ್ತ ಶ್ರೇಷ್ಠ ನಿರ್ಮಾಪಕ ವಾಸನ್ "ಯೋಜನೆಯ ಅಭಾವ, ಮಹತ್ವದ ಸ್ಥಾನಗಳಲ್ಲಿ ಅಯೋಗ್ಯ ಜನರ ಸೇರ್ಪಡೆ, ಹೆಚ್ಚಿನ ಕರಭಾರ, ಸಹಕಾರ ಹಾಗು ಸಂಘಟನೆಗಳ ಅಭಾವ, ಹಣ ಕಾಸಿನ ವಿಚಿತ್ರ ಹಿಡಿತ, ಉದ್ಯಮದ ಬಗೆಗೆ ಸರಕಾರದ ಅಸ್ಪಷ್ಟ ಧೋರಣೆ, ಕಚ್ಚಾ ಫಿಲ್ಮಿಗಾಗಿ ವಿದೇಶಗಳನ್ನು ಅವಲಂಬಿಸುವುದು ಇವೆಲ್ಲವು ಪ್ರಗತಿಗೆ ಆತಂಕ ಒಡ್ಡಿವೆ" ಎಂದು ಹೇಳಿದ್ದಾರೆ. ಅವರ ಹೇಳಿಕೆಯಲ್ಲಿ ಅಸಂಗತವಾದುದೇನೂ ಇಲ್ಲ.



'ಮರುಮಗಳ್' ಮಲಯಾಳಿ ಚಿತ್ರದಲ್ಲಿ ಪ್ರೇಮನಜೀರ



'ಚೆಮ್ಮೀನ್' ಮಲಯಾಳಿ ಚಿತ್ರದ ನಾಯಕಿ ಶೀಲಾ.



೧೯೩೪ ರಲ್ಲಿ ತಯಾರಾದ "ಸುಗುಣ ಸರಸ" ಸಾಮಾಜಿಕ ಚಿತ್ರದಲ್ಲಿ ಶೀಪು ಹಾಗು ಎಂ. ಎಸ್. ವಿಜಯಲತಾ

೧೯೩೫ ರಲ್ಲಿ ತಯಾರಾದ ಪೌರಾಣಿಕ ಚಿತ್ರವೊಂದರಲ್ಲಿ ರಾಜಾ ಸ್ಯಾಂಡೊ, ಪಿ. ಎಂ ಸ್ವಾಮಿ ಹಾಗು ಎಸ್. ಆರ್. ಮೀನಾಕ್ಷಿ ಸುಂದರಮ್

ಅನೇಕ ವರ್ಷಗಳಿಂದ ತಮಿಳು ಚಿತ್ರಗಳನ್ನು ನಿರ್ದೇಶಿಸುತ್ತಿರುವ ಕೆ. ಬಾಲಚಂದರ್ ಅವರಿಗೆ ಅವರ "ವೆಳ್ಳಿ ವಿಳಾ" ತಮಿಳು ಚಿತ್ರಕ್ಕಾಗಿ ಉತ್ತಮ ನಿರ್ದೇಶಕರೆಂಬ ಪ್ರಶಸ್ತಿ (೭೨ರಲ್ಲಿ ತಯಾರಾದುದು) ದೊರೆತಿದೆ. ತಮಿಳಿನಲ್ಲಿ ಮೊಟ್ಟಮೊದಲನೆ ಸಿನಿಮಾಸ್ಕೋಪ್ ಚಿತ್ರವೂ ಇದೇ ವರ್ಷ ತಯಾರಾಗಿದೆ. 'ರಾಜ ರಾಜ ಚೋಳನ್' ತಮಿಳಿನ ವೈಭವೋಪೇತ ಚಾರಿತ್ರಿಕ ಚಿತ್ರ. ಇದು ದಕ್ಷಿಣ ಭಾರತದ ಚಿತ್ರರಂಗದ ಖ್ಯಾತಿಯನ್ನು ಹೆಚ್ಚಿಸಿದ ಉತ್ತಮ ತಾಂತ್ರಿಕ ಮಟ್ಟದ ಪ್ರೌಢ ಚಿತ್ರ. ತಮಿಳಿನ ಖ್ಯಾತ ನಟ ಎಂ. ಜಿ. ಆರ್. ತಯಾರಿಸಿ ನಿರ್ದೇಶಿಸಿದ ಚಿತ್ರ "ಉಲಗಂ ಸುಟ್ರುಂ ವಾಲಿಬನ್" ಗಲ್ಲಾಪೆಟ್ಟಿಗೆಯನ್ನು ಸೂರೆಗೊಂಡ ಮತ್ತೊಂದು ಚಿತ್ರ. ಜಪಾನ್ ದೇಶದ ಹಿನ್ನೆಲೆಯಲ್ಲಿ ತಯಾರಾದ ಚಿತ್ರವಿದಾಗಿದೆ. ಪ್ರಗತಿಯ ದೃಷ್ಟಿಯಿಂದ ಈ ಮೂರು ಚಿತ್ರಗಳು ೭೨-೭೩ರ ಸಾಲಿನಲ್ಲಿ ಹೊಸ ದಾಖಲೆ ನಿರ್ಮಿಸಿದರೆ "ಪಟ್ಟಿಕ್ಕಾಡ ಪಟ್ಟಣಮಾ" ಚಿತ್ರ ಪ್ರಶಸ್ತಿಗೆ ಆಯ್ಕೆಯಾಗಿದೆ. ಒಟ್ಟಿನಲ್ಲಿ ೧೯೭೨-೭೩ ತಮಿಳು ಚಿತ್ರರಂಗದ ಮಹತ್ವದ ವರ್ಷವಾಗಿದೆ.

## ತೆಲುಗು ಚಿತ್ರರಂಗ

ದಕ್ಷಿಣ ಭಾರತ ಚಿತ್ರರಂಗದಲ್ಲಿ ತೆಲುಗು ದ್ವಿತೀಯ ಸ್ಥಾನ ಪಡೆಯುತ್ತಿದೆ. ಶ್ರೇಷ್ಠ ನಿರ್ದೇಶಕರು, ನುರಿತ ನಟವರ್ಗ ತೆಲುಗಿನಲ್ಲಿದ್ದರೂ ಅದಕ್ಕೆ ತನ್ನದೇ ಆದ ವೈಶಿಷ್ಟ್ಯವನ್ನು ಪಡೆಯುವದಾಗಿಲ್ಲವೆಂದು ಹೇಳಬಹುದು. ತಮಿಳು ಚಿತ್ರಗಳೊಂದಿಗೆ ತೆಲುಗು ಚಿತ್ರಗಳು ನಿರ್ಮಾಣವಾಗತೊಡಗಿದೆ. ೧೯೬೦ ರಿಂದ ೭೩ರ ವರೆಗಿನ ತಯಾರಾದ ಚಿತ್ರಗಳು ಕೇವಲ ೭೬೨ ಮಾತ್ರ. ಸರಾಸರಿ ೫೧ ಚಿತ್ರಗಳು ಪ್ರತಿವರ್ಷಕ್ಕೆ ನಿರ್ಮಾಣಗೊಂಡಂತಾಯಿತು. ಭಾರತದ ಎಲ್ಲ ಪ್ರಾದೇಶಿಕ ಭಾಷೆಯ ಚಿತ್ರಗಳೂ ಸೇರಿ ೧೯೭೩ರ ವರೆಗೆ ೭,೮೦೦ ಚಿತ್ರಗಳು ತಯಾರಾಗಿದ್ದು, ಅದರಲ್ಲಿ ತಮಿಳಿನ ಸರಾಸರಿ ೩೪ ಇದ್ದರೆ ತೆಲುಗಿನದು ಅಷ್ಟೇನೂ ಕಡಿಮೆ ಮಟ್ಟದ ಸಾಧನವಲ್ಲವೆಂದು ಇತರ ಪ್ರಾದೇಶಿಕ ಚಿತ್ರಗಳ ಸರಾಸರಿಯನ್ನು ತುಲನೆ ಮಾಡಿದರೆ ತಿಳಿಯುವುದು.

ತೆಲುಗು ಚಿತ್ರರಂಗದಲ್ಲಿ ಚಿತ್ರ ನಿರ್ಮಾಪಕರು, ಕಲಾವಿದರು, ತಂತ್ರಜ್ಞರು, ಬರಹಗಾರರು ಅಗ್ರಸ್ಥಾನದಲ್ಲಿದ್ದಾರೆ. ಚಿತ್ರ ನಿರ್ಮಾಪಕರಲ್ಲಿ ಎಚ್. ಎಂ. ರೆಡ್ಡಿ, ಕೆ. ವಿ. ರೆಡ್ಡಿ, ಪುಲ್ಲಯ್ಯ, ಬಿ. ಎನ್. ರೆಡ್ಡಿ, ಬಿ. ನಾಗಿರೆಡ್ಡಿ, ಪಿ. ಎಸ್. ರಾಮಕೃಷ್ಣ ರಾವ್, ಪ್ರಕಾಶ ರಾವ್, ಎಲ್. ವಿ. ಪ್ರಸಾದ ಮೊದಲಾದವರು ಪ್ರಮುಖರಾದರೆ, ಎನ್. ಟಿ. ರಾಮರಾವ್, ಎ. ನಾಗೇಶ್ವರ ರಾವ್, ಭಾನುಮತಿ, ಅಂಜಲಿ ದೇವಿ, ಸಾವಿತ್ರಿ, ಜಮುನಾ, ದೇವಿಕಾ, ನಾಗಯ್ಯ, ರೇಲಂಗಿ, ಮೊದಲಾದ ಕಲಾವಿದರು ಅಗ್ರಗಣ್ಯರಾಗಿರುವರು.

ಗುಣಮಟ್ಟದ ದೃಷ್ಟಿಯಿಂದ ಕೂಡ ತೆಲುಗು ಹಿಂದುಳಿದಿಲ್ಲ. ೧೯೫೩ರಲ್ಲಿ ಸ್ಥಾಪಿತವಾದ ಪ್ರಾದೇಶಿಕ ಪ್ರಶಸ್ತಿ ಸಮಿತಿಯಿಂದ ಅದು ಪ್ರಶಸ್ತಿ ಹಾಗೂ ರಾಷ್ಟ್ರಪತಿಗಳ ಬೆಳ್ಳಿಯ ಪದಕಗಳನ್ನುಗಳಿಸುತ್ತ ಬಂದಿದ. ಪೆದ್ದ ಮನಸುಲು, (೧೯೫೪) ಬಂಗಾರು ಪಾಪಾ (೧೯೫೫) ತೆನಾಲಿ ರಾಮಕೃಷ್ಣ (೧೯೫೬) ಪಿಲ್ಲಂಟಿ ಪ್ರಾಣಾಮುಲು (೧೯೫೮) Namina ನಮಿನಾ ಬಂಟು (೧೯೫೯) ಮಹಾ ಕವಿ ಕಾಳಿದಾಸ (೧೯೬೦) ಭಾರ್ಯಾ ಭರ್ತಲು (೧೯೬೧) ಮಹಾಮಂತ್ರಿ ತಿಮ್ಮರಸು (೧೯೬೨) ಲವ-ಕುಶ (೧೯೬೩) ಹಾಗು ಡಾ. ಚಕ್ರವರ್ತಿ (೧೯೬೪) ಚಿತ್ರಗಳು ಬೆಳ್ಳಿ ಪದಕವನ್ನು ಪಡೆದ ಶ್ರೇಷ್ಠ ಚಿತ್ರಗಳಾಗಿವೆ.

ತೆಲುಗು ಚಿತ್ರರಂಗ ಅನೇಕ ಸಾಮಾಜಿಕ ಚಿತ್ರಗಳನ್ನೂ ತಯಾರಿಸಿದ. ಪೌರಾಣಿಕ ಹಾಗು ಜಾನಪದ ಚಿತ್ರಗಳನ್ನೂ ತಯಾರಿಸಿದೆ. ಅದು ತಯಾರಿಸಿದ ಲವ-ಕುಶ (ಪ್ರಥಮ ವರ್ಣಚಿತ್ರ) ಅಪಾರ ಜನಪ್ರಿಯತೆ ಪಡೆದ ಚಿತ್ರ. ೧೯೬೫ರಲ್ಲಿ ಮೂರು ತೆಲುಗು ಚಿತ್ರಗಳು ಬಣ್ಣದಲ್ಲಿ ತಯಾರಾದುವು.

ತೆಲುಗು ಚಿತ್ರರಂಗ ಇತ್ತೀಚೆಗೆ ಹೊಸ ಮುಖಗಳಿಗೆ ಅವಕಾಶವಿತ್ತಿದ. ಇದೊಂದು ಗಮನಾರ್ಹ ಅಂಶವೆನ್ನಬಹುದು. ರಾಜಶ್ರೀ, ಗೀತಾಂಜಲಿ, ವಾಣಿಶ್ರೀ ಕಾಂಚನಾ, ಜಯಂತಿ, ಮೊದಲಾದವರು ಹೊಸ ಕಲಾವಿದರಲ್ಲಿ ಪ್ರಮುಖರೆನಿಸಿದ್ದಾರೆ. ನಿರ್ದೇಶಕ ಎ. ಸುಬ್ಬರಾವ್ ಅವರು ತಮ್ಮ "ತೇನೆ ಮನಸುಲು' ವರ್ಣಚಿತ್ರದಲ್ಲಿ ರಾಮಮೋಹನ, ಕೃಷ್ಣಾ, ಸಂಧ್ಯಾರಾಣಿ, ಜಯಶ್ರೀ ಮೊದಲಾದ ಹೊಸ ಕಲಾವಿದರನ್ನು ಬೆಳಕಿಗೆ ತಂದಿದ್ದಾರೆ. ಈ ಹೊಸಬರ ಸಾಲಿಗೆ ಕೆ. ಎ. ನಾಗೇಶ್ವರ ರಾವ್ (ಇಲ್ಲಾಲು) ಹಾಗು ಕೃಷ್ಣರಾಜು (ಬುಕಾ ಗೋರಿಂಕಾ) ಸೇರುತ್ತಾರೆ.

ದ್ವಿತೀಯಸ್ಥಾನ ಪಡೆದಿರುವ ತೆಲುಗು ಚಿತ್ರರಂಗ ೧೯೭೨-೭೩ರಲ್ಲಿ ಹೆಚ್ಚಿನ ಸಾಧನೆಯನ್ನಾಗಲಿ ಪ್ರಗತಿಯನ್ನಾಗಲಿ ತೋರಿಲ್ಲವೆಂದೇ ಹೇಳಬಹುದು. ಆದರೂ 'ಪಂಡಂಟಿ ಕಾಪುರಂ' ಚಿತ್ರ ಪ್ರಾದೇಶಿಕ ಪ್ರಶಸ್ತಿ ಗಳಿಸಿದೆ. ಉತ್ತಮ ನಿರ್ದೇಶಕರೆಂದು ಆಯ್ಕೆಯಾದ ನಾಲ್ವರು ದಾಕ್ಷಿಣಾತ್ಯರಲ್ಲಿ "ಸಂಪೂರ್ಣ ರಾಮಾಯಣಂ" ನಿರ್ದೇಶಿಸಿದ 'ಬಾಪು' ಕೂಡ ಒಬ್ಬರು. ಪ್ರಾಯೋಗಿಕ ಚಿತ್ರ 'ಸಾಕ್ಷಿ'ಯಿಂದ ತಮ್ಮ ಪ್ರತಿಭೆಯನ್ನು ತೋರುತ್ತ ಬಂದ 'ಬಾಪು' 'ರಾಮಾಯಣ'ದಿಂದ ಉತ್ತಮ ನಿರ್ದೇಶಕರೆಂದು ಆಯ್ಕೆಯಾದುದರಲ್ಲಿ ಅಚ್ಚರಿ ಏನಿಲ್ಲ.

# ಗಜಲಕ್ಷ್ಮಿ

ಸಂಪತ್ತು ಮತ್ತು ಸಮೃದ್ಧಿಗಳ ದೇವತೆ

ಸುಖ-ಸಂಪದ ಸಾಕ್ಷಾತ್ಕಾರಕ್ಕಾಗಿ



ಬ್ಯಾಂಕ ಆಫ್ ಇಂಡಿಯಾ

RAAS/P/5 4KAN

ತೆಲುಗು ಚಿತ್ರರಂಗದಲ್ಲಿ ಡಬ್ಬಿಂಗ್ ಚಿತ್ರಗಳಿಗೆ ವಿರೋಧವಿಲ್ಲದೆ ಗಳಿಕೆ ಇರುವುದರಿಂದ ಡಬ್ಬಿಂಗ್ ಚಿತ್ರಗಳ ಹಾವಳಿ ವಿಪರೀತ ಹೆಚ್ಚಿದೆ. ಇದು ನೇರವಾಗಿ ತಯಾರಾದ ತೆಲುಗು ಚಿತ್ರಗಳ ಪ್ರಗತಿಗೆ ಆತಂಕ ವನ್ನುಂಟು ಮಾಡುತ್ತಿದೆ. ಅದರ ಜೊತೆಗೆ ಪರಭಾಷೆ ಯಿಂದ ಎರವಲು ಪಡೆದ ಚಿತ್ರಗಳನ್ನೂ ತೆಲುಗು ಚಿತ್ರ ರಂಗ ತಯಾರಿಸುತ್ತಿರುವುದರಿಂದ ಅದರ ಪ್ರಗತಿಗೆ ವಿಶೇಷ ತೊಂದರೆಯಾಗಿದೆ ಎಂದು ನಿಃಸಂಕೋಚವಾಗಿ ಹೇಳಬಹುದು.

## ಮಲಯಾಳಂ ಚಿತ್ರರಂಗ

ಕೇರಳ ರಾಜ್ಯವಷ್ಟೇ ಮಲಯಾಳಂ ಚಿತ್ರಗಳಿಗೆ ಮಾರುಕಟ್ಟೆಯಾಗಿದೆ. ರಾಜಕಾರಣ ಈ ಪ್ರದೇಶದ ಪ್ರಮುಖ ಉದ್ದಿಮೆಯಾಗಿದೆ. ಕೆಳ ಮಟ್ಟದ ರಾಜ ಕಾರಣೆಯ ಭಾಷಣವನ್ನಾಲಿಸಲು ಇಲ್ಲಿನ ಜನ ಬಹು ಸಂಖ್ಯೆಯಲ್ಲಿ ಸೇರುತ್ತಿರುವುದು ಅದಕ್ಕೆ ಸಾಕ್ಷಿಯಾಗಿದೆ. ಇದೊಂದು ಪತ್ರಿಕೆಗಳಿಗೆ ಬಿಸಿ ಸುದ್ದಿಯಾಗಿ ಪರಿಣಮಿ ಸುತ್ತದೆ. ಇಂದಿಗೆ ಹದಿನೆಂಟು ವರ್ಷಗಳ ಹಿಂದೆ ಕೇರಳ ದಲ್ಲಿಯ ಒಂದು ಚಿತ್ರಮಂದಿರದ ಮುಂದೆ ಜನ ಸಾಗರವೇ ಸೇರಿತ್ತು. ನೆಚ್ಚಿನ ಯೋಧರಿಗೆ ಸತ್ಕಾರ ವನ್ನು ನೀಡುವುದೇ ಅವರೆಲ್ಲರ ಉದ್ದೇಶವಾಗಿತ್ತು. ಹಾಗೆಂದೊಡನೆ ಯುದ್ಧದಲ್ಲಿ ಅಸಾಮಾನ್ಯ ಸಾಹಸ ತೋರಿದ ಯೋಧರೇನಾದರೂ ಅಲ್ಲಿಗೆ ಬಂದಿದ್ದರೇ ಎಂಬ ಶಂಕೆ ನಿಮಗಾಗಬಹುದು. ಆದರೆ ವಸ್ತು ಸ್ಥಿತಿಯೇ ಬೇರೆಯಾಗಿತ್ತು. ಅಂದು 'ವೀರನ್' ಎಂಬ ತಮಿಳು ಚಿತ್ರದ ಪ್ರದರ್ಶನ ಪ್ರಾರಂಭವಾದುದರಿಂದ ಅಷ್ಟು ಜನಸಂದಣಿ ಅಲ್ಲಿ ಸೇರಿತ್ತೆಂದು ಹೇಳಿದರೆ ಅಚ್ಚರಿ ಎನಿಸಬಹುದಲ್ಲವೇ? ಆದರೆ ಇಂದು ಕಾಲ ಬದಲಾಗಿದೆ. ಸಾಹಸಮಯ ಚಿತ್ರಗಳು ಅದು ತಮಿಳಿ ನದಾಗಿರಲಿ, ಮಲಯಾಳಿ ಭಾಷೆಯದಾಗಿರಲಿ, ಜನ ರನ್ನು ಆಕರ್ಷಿಸಲಾರವು. ಐತಿಹಾಸಿಕ, ಪೌರಾಣಿಕ ಚಿತ್ರ ಗಳನ್ನು ಮಲಯಾಳಿಗಳು ಮೆಚ್ಚುವುದೇ ಇಲ್ಲ. ಮಾನ ವೀಯ ಸಮಸ್ಯೆಗಳನ್ನು ಕುರಿತಾದ ಚಿತ್ರಗಳು ಕೇರಳೀಯರಿಗೆ ಬಹು ಪ್ರಿಯವಾಗಿವೆ.

ವೈಭವೋಪೇತ ಚಿತ್ರಗಳನ್ನು ನಿರ್ಮಿಸುತ್ತಿದ್ದವರು ಮಾನವೀಯ ಸಮಸ್ಯೆಗಳ ಕುರಿತಾದ ಚಿತ್ರವನ್ನು ತಯಾ ರಿಸಲು ಹಿಂತೆಗೆಯುತ್ತಿದ್ದರು. ಇಂಥ ಚಿತ್ರಗಳಲ್ಲಿ ಹಣ ತೊಡಗಿಸುವುದೆಂದರೆ ಜೂಜಾಟವೆಂದೇ ಅವರ ಭಾವನೆ ಯಾಗಿತ್ತು. ಅಂಥ ನಿರ್ಮಾಪಕರು ಈಗ ಜನರ ಆಶೆ ಯನ್ನು ಗಮನಿಸಿ ಭವ್ಯ ಚಿತ್ರಗಳೆಡೆ ಲಕ್ಷ್ಯ ಹರಿಸದೆ, ಸರಳ, ಸುಂದರ, ಸಾಮಾಜಿಕಗಳತ್ತ ಗಮನ ಹರಿಸಿದರು. ಆ ಪರಿಣಾಮವಾಗಿ"Two measures of Rice" ಮಲಯಾಳಿ ಚಿತ್ರ ನಿರ್ಮಾಣವಾಗಿ ಅಂಥ ಯಶಸ್ಸು ಪಡೆಯದಿದ್ದರೂ ಜನ ಮನವನ್ನು ಸೂರೆಗೊಂಡಿತೆಂದೇ ಹೇಳಬೇಕು. ಇತ್ತೀಚೆಗೆ ತಾಕಾಳಿ (Thakaazhi) ಬಶೀರ ಪೊಟ್ಟೆಕಾಟ, ಕೇಶವದೇವ ಮೊದಲಾದ ಬರಹ ಗಾರರ ಕೃತಿಗಳು ಗಲ್ಲಾಪೆಟ್ಟಿಗೆಯ ದೃಷ್ಟಿಯಿಂದಲೂ ಯಶಸ್ವಿಯಾದ ಚಿತ್ರಗಳೆನಿಸಿವೆ.

ಚಿಕ್ಕ ಮಾರುಕಟ್ಟೆಗೆ ತಕ್ಕ ಹಾಗು ಯೋಗ್ಯವಾದ ಚಿತ್ರಗಳನ್ನು ನಿರ್ಮಿಸುವಲ್ಲಿ ಮಲಯಾಳಿಗರು ಜಾಣರು. ಉತ್ತಮ ಕಥಾವಸ್ತುವೇ ಚಿತ್ರದ ಜೀವಾಳ, ಕಥಾ ನಾಯಕ. ಕಡಿಮೆ ವೆಚ್ಚದಲ್ಲಿ ಕಥೆಯನ್ನು ಮನೋಜ್ಞ ವಾಗಿ ನಿರೂಪಿಸುವಲ್ಲಿ ಮಲಯಾಳಿ ಚಿತ್ರರಂಗ ಪ್ರಗತಿ ಸಾಧಿಸಿದೆ. ೧೯೭೨-೭೩ರಲ್ಲಿ ತಯಾರಾದ "ಚೆಂಬರತಿ" "ಸ್ವಯಂವರಂ" ಮಲಯಾಳಿ ಚಿತ್ರಗಳು ಉತ್ತಮ ಚಿತ್ರ ಗಳು. 'ಚೆಂಬರತಿ' ನಿರ್ದೇಶಿಸಿದ ಮೆನನ್ ಈ ವರ್ಷ ಆಯ್ಕೆಯಾದ ನಾಲ್ವರು ಉತ್ತಮ ನಿರ್ದೇಶಕರಲ್ಲೊ ಬ್ಬರು. ೧೯೭೨ರ ಉತ್ತಮ ಚಿತ್ರವೆಂದು ಸ್ವಯಂವರ ಪ್ರಶಸ್ತಿ ಪಡೆದರೆ ಚಿತ್ರದಲ್ಲಿ ಉತ್ತಮ ಅಭಿನಯ ನೀಡಿದುದಕ್ಕಾಗಿ ನಟಿ ಶಾರದಾ 'ಊರ್ವಶಿ' ಪ್ರಶಸ್ತಿ ಪಡೆದಿದ್ದಾಳೆ. ಮಲಯಾಳೀ ಚಿತ್ರಗಳಿಗೆ ಈಗೀಗ ತಮಿಳು ನಾಡಿನಲ್ಲೂ ಬೇಡಿಕೆ ಹೆಚ್ಚುತ್ತಿರುವುದರಿಂದ ಹಾಗೂ ಈ ಭಾಷೆಯ ಉತ್ತಮ ಚಿತ್ರಕಥೆಗಳು ಅನ್ಯ ಭಾಷೆಗಳಲ್ಲಿ ಜನಪ್ರಿಯವಾಗುತ್ತಿರುವದರಿಂದ, ಮಲಯಾಳಿ ಚಿತ್ರ ರಂಗ ಕ್ಷಿಪ್ರದಲ್ಲೇ ವಿಶಿಷ್ಟ ಪ್ರಗತಿಯನ್ನು ಸಾಧಿಸ ಬಲ್ಲದು.



ಹೀಗಾಗುತ್ತೆ ಅಂತ ನನಗೆ ಗೊತ್ತು... ಅದಕ್ಕಾಗಿಯೇ ಸಂತರ್ಪಣೆಗಳಿಗೆ ಹೋಗು ವಾಗಲೆಲ್ಲ ನಂ ತಾತನ ಅಂಗಿ ಹಾಕ್ಕೊಂಡು ಹೋಗ್ತೀನಿ...

ಊರ್ವಶಿ ಪ್ರಶಸ್ತಿ ಪಡೆದ ಶಾರದಾ ಜನಿಸಿದುದು ಆಂಧ್ರದ ತೆನಾಲಿಯಲ್ಲಿ. ಅವಳ ಮಾತೃಭಾಷೆ ತೆಲುಗು. ಭರತನಾಟ್ಯ ಪ್ರವೀಣೆ. ಮದ್ರಾಸದಲ್ಲಿ ಏರ್ಪಡಿಸಲಾದ ಆಕೆಯ ನೃತ್ಯ ಪ್ರದರ್ಶನವನ್ನು ವೀಕ್ಷಿಸಲು ಬಂದಿದ್ದ ಶ್ರೀ ಎಲ್. ವಿ. ಪ್ರಸಾದ ಅವಳ ಪ್ರತಿಭೆಯನ್ನು ಗುರು ತಿಸಿ ತಮ್ಮ 'ಇದ್ದರು ಮಿತ್ರುಲು' ಚಿತ್ರದಲ್ಲಿ ಅವಳಿಗೆ ಅವಕಾಶ ನೀಡಿದರು. ಇದು ಅವಳ ಮೊದಲ ತೆಲುಗು ಚಿತ್ರ. ಆದರೆ ಅದೇಕೋ ಅವಳು ತೆಲುಗು ಚಿತ್ರಪ್ರೇ ಮಿಗಳಿಗೆ ಹಿಡಿಸಲಿಲ್ಲ. ಈಕೆ ಅಭಿನಯಿಸಿದ ಮೊದಲ ಮಲಯಾಳಿ ಚಿತ್ರವೆಂದರೆ 'ಇನ್‌ಪಾವುಗಲ್' ಪ್ರೇಮ ನಜೀರ ನಾಯಕ ನಟನಾಗಿದ್ದ ಈ ಚಿತ್ರದಲ್ಲಿ. ಇದುವರೆಗೆ ಈಕೆ ಅಭಿನಯಿಸಿದ್ದು ೫೦ ಚಿತ್ರಗಳಲ್ಲಿ. ಅವುಗಳಲ್ಲಿ ಮಲ ಯಾಳೀ ಚಿತ್ರಗಳೇ ಹೆಚ್ಚು. "ಸಮಾಜಕೊ ಬದಲ ಡಾಲೋ" ಹಿಂದಿ ಚಿತ್ರದಲ್ಲಿ ನಟಿಸಿ ಅಖಿಲ ಭಾರತ ಕೀರ್ತಿ ಪಡೆದಿದ್ದಾಳೆ. ಈಕೆ ತೆಲುಗು ನಟಿಯೆಂದು ತೆಲುಗಿನವರು ಹೇಳಿಕೊಳ್ಳುತ್ತಾರೆ. ಆದರೆ ತಾನು 'ಮಲಯಾಳೀ' ಚಿತ್ರಗಳಿಗೆ ಹೆಚ್ಚು ಪ್ರಾಶಸ್ತ್ಯವೀಯುತ್ತೇನೆನ್ನುತ್ತಾಳೆ ಶಾರದಾ.




WITH BEST COMPLIMENTS FROM :

# NEW HARIYANA TRANSPORT CO.

FLEET OWNERS & TRANSPORT CONTRACTORS

*Head Offiice :*
155-C, Mahatma Gandhi Road.
CALCUTTA-7
Phone : 348315

*Bombay Office :*
37, Essaji Street.
BOMBAY-400 003.
Phone : 323486

ಕತ್ತಲು ಅಜ್ಞಾನ ಹಾಗೂ ಅನಾಗರಿಕತೆಯ ಲಾಂಛನ
ಬೆಳಕು ಸುಜ್ಞಾನ ಹಾಗೂ ಸುಸಂಸ್ಕೃತಿಯ ರವಿಕಿರಣ
ಕತ್ತಲಿನ ಕರಾಳ ಶಕ್ತಿಯನ್ನು ಗೆದ್ದ ಬೆಳಕಿನ ಹಬ್ಬ ದೀಪಾವಳಿ
ಅರವಿಂದ ಪರಿಮಳದ ಅಭಿಮಾನಿಗಳಿಗೆಲ್ಲ ಆನಂದದ ಬೆಳಕು ತರಲಿ!



★ ನಿರುದ್ಯೋಗದ ಭೀಕರ ಸಮಸ್ಯೆಯನ್ನು ನೀಗಲು ನಾಡಿಗೆ ನೆರವಾಗುವ ಕೈಗಾರಿಕೆ ಬೆಳೆಯಲಿ!

★ ಶ್ರಮಜೀವಿಗಳಿಗೆ ಆಶ್ರಯ ನೀಡುವ ಸಂಘ ಸಂಸ್ಥೆಗಳು ಬೆಳೆಯಲಿ!

★ ದುಡಿಮೆಯ ಗುಡಿಯಲ್ಲಿ ದುಃಖವೆಲ್ಲಿ?

★ ದುಡಿಯದ ಜೀವಿಗೆ ಸುಖವೆಲ್ಲಿ?

★ ಊದಬತ್ತಿ ಉದ್ಯಮದಲ್ಲಿ ಉತ್ತಮೋತ್ತಮ ಉದಾಹರಣೆಯಾಗಿ ಪರಿಮಳ ಪ್ರಪಂಚದ ಪ್ರಮುಖ ವಿಕ್ರಮವನ್ನು ವಿಶ್ವದ ಮೂಲೆ ಮೂಲೆಯಲ್ಲೂ ಸ್ಥಾಪಿಸಿರುವ

# ಅರವಿಂದ ಪರಿಮಳ ವರ್ಕ್ಸ್

ಅವರ




ಮುಂತಾದ ಗಂಧದ ಗುಡಿ ಮೈಸೂರಿನ ಹೆಮ್ಮೆಯ

ಅರವಿಂದ ಪರಿಮಳ ದ್ರವ್ಯಗಳನ್ನು

ಸಂಸ್ಕೃತಿಯ ಪ್ರಸಾರಕ್ಕಾಗಿ, ಸದಭಿರುಚಿಯ ಸಂಕೇತವಾಗಿ, ಶ್ರಮಜೀವಿಗಳ ಅಭ್ಯುದಯಕ್ಕಾಗಿ
ಬಳಸುವ ಪರಿಪಾ… …ನ ಪೀಳಿಗೆಗೆ ಒಳ್ಳೆಯ ಪಾಠ




# ೬೦ ವರ್ಷಗಳಲ್ಲಿ ನಾವು ಸಾಧಿಸಿದ್ದೇನು?

ಶ್ಯಾಮಸುಂದರ ಕುಲಕರ್ಣಿ



ಭಾರತೀಯ ಚಿತ್ರರಂಗಕ್ಕೆ ಈಗ ೬೧ ವರ್ಷ ತುಂಬಿದ್ದರೆ ಕರ್ನಾಟಕದ ಚಿತ್ರರಂಗಕ್ಕೆ ಈಗ ೪೪ ವರ್ಷ. ೧೯೧೩ರಲ್ಲಿ ದಾದಾಸಾಹೇಬ್ ಫಾಲ್ಕೆ ಅವರು 'ಹರಿಶ್ಚಂದ್ರ' ಚಿತ್ರ ತಯಾರಿಸಿ ಭಾರತದಲ್ಲಿ ಚಲನ ಚಿತ್ರ ಯುಗವನ್ನು ಪ್ರಾರಂಭಿಸಿದರೆ, ಕರ್ನಾಟಕದಲ್ಲಿ ೧೯೨೯ರಲ್ಲಿ 'ಮೃಚ್ಛಕಟಿಕ (ವಸಂತಸೇನಾ) ಎಂಬ ಚಿತ್ರವು ಮೊಟ್ಟ ಮೊದಲಬಾರಿ ತಯಾರಾಯಿತು.

ಹಾಗೆ ನೋಡಿದರೆ ಕರ್ನಾಟಕದಲ್ಲಿ ಬುದ್ಧಿಜೀವಿಗಳೇ ಚಲನ ಚಿತ್ರಯುಗವನ್ನು ಆರಂಭಿಸಿದರು. 'ಮೃಚ್ಛಕಟಿಕ' ಮೋಹನರಾಮ್ ಭವನಾನಿ ಎಂಬುವರು ಬೆಂಗಳೂರಿನಲ್ಲಿ ತಯಾರಿಸಿದ ಚಿತ್ರ, ಅದರಲ್ಲಿ ದಿ॥ ಟಿ.ಪಿ. ಕೈಲಾಸಂ, ಏಣಾಕ್ಷಿರಾಮರಾವ್, ಡಾ॥ ಎಂ.ಶಿವರಾಂ. ಕಮಲಾದೇವಿ ಚಟ್ಟೋಪಾಧ್ಯಾಯ, ಜಿ.ಕೆ. ನಂದಾ, ದ.ಕ. ಭಾರದ್ವಾಜ್, ಬಿ.ಎಸ್. ರಾಮರಾವ್ ಮುಂತಾದವರಿದ್ದರು. ತಯಾರಾದ ಮೊದಲ ಚಿತ್ರವೇ ಜರ್ಮನಿಯಲ್ಲೂ ಪ್ರದರ್ಶಿತವಾದುದು ನಾವು ಹೆಮ್ಮೆ ಪಡಬೇಕಾದ ವಿಷಯ.



ಮಿನುಗು ತಾರೆ ಕಲ್ಪನಾ

ನಂತರ ಗುಬ್ಬಿವೀರಣ್ಣ, ದೇವುಡು ನರಸಿಂಹಶಾಸ್ತ್ರಿ ಹಾಗೂ ಶ್ರೀ ಶ್ರೀನಿವಾಸಮೂರ್ತಿ ಅವರು ಕರ್ನಾಟಕ ಪಿಕ್ಚರ್ಸ್ ಲಾಂಛನದಲ್ಲಿ ಹಲವಾರು ಚಿತ್ರಗಳನ್ನು ತಯಾರಿಸಿದರು. ಅವರು ಬೆಂಗಳೂರಿನಲ್ಲಿ ಸ್ಥಾಪಿಸಿದ ಸ್ಟುಡಿಯೋದಲ್ಲಿ ತಯಾರಾದ ಮೊದಲ ಚಿತ್ರವೆಂದರೆ ವೈ.ವಿ. ರಾವ್ ನಿರ್ದೇಶನದ 'ಹರಿಮಾಯಾ' ನಂತರ ತಯಾರಾದ 'ಹಿಸ್ ಲವ್ ಅಫೇರ್' ಹಾಗೂ 'ಜೀವನ ಗೀತ' ಇವು ದೇವುಡು ಅವರ ಚಿತ್ರನಾಟಕ ಮತ್ತು ಕತೆ ಆಧರಿಸಿದವು. 'ಜೀವನ ಗೀತ' ಚಿತ್ರದಲ್ಲಿ ಇಂದಿನ ಖ್ಯಾತ ಹಿಂದೀ ತಾರೆ ಲಲಿತಾಪವಾರ್ ಹಾಗೂ ಆಕೆಯ ಪತಿ ಪವಾರ ಅಭಿನಯಿಸುತ್ತಿದ್ದರು. ಆದರೆ ಈ ಚಿತ್ರವು ಅರ್ಧ ತಯಾರಾದಾಗಲೇ ಪಾಲುದಾರರಲ್ಲಿ ಭಿನ್ನಾಭಿಪ್ರಾಯ ವುಂಟಾಗಿ ಕನ್ನಡಿಗರಿಂದ ಸ್ಥಾಪಿತವಾದ ಮೊದಲ ಸ್ಟುಡಿಯೊವು ಕೊನೆಗೊಂಡಿತು.

ಇದಕ್ಕೂ ಮೊದಲು ಬೆಂಗಳೂರು ದಂಡಿನ ಪ್ರದೇಶದ ಸೂರ್ಯ ಫಿಲಂ ಕಂಪನಿಯು ಅಂದಾಜು ೪೦ ಮೂಕ ಚಿತ್ರಗಳನ್ನು ತಯಾರಿಸಿದ್ದುಂಟು. ಆ ಕಂಪನಿಯ ಹೆಸರಾಂತ ಕಲಾವಿದರೆಂದರೆ ಎಂ. ಲಕ್ಷ್ಮೀಬಾಯಿ, ಅಶ್ವತ್ಥಮ್ಮ ಹಾಗೂ ಸುಂದರರಾವ್ ನಾಡಕರ್ಣಿ. ಶ್ರೀ ಕೋಟ ಶಿವರಾಮ ಕಾರಂತರು ಸ್ಟುಡಿಯೋವಿಲ್ಲದೆ 'ಭೂತ ರಾಜ' ಎಂಬ ಚಿತ್ರವನ್ನು ತಯಾರಿಸಿದ್ದು ಇದೇ ಅವಧಿಯಲ್ಲಿ.

## ತುಳು - ಕೊಡಗು ಭಾಷಾ ಚಿತ್ರಗಳು

ತುಳು ಹಾಗೂ ಕೊಡಗು ಭಾಷಾ ಚಿತ್ರರಂಗದ ಜನಕ ಎಂಬ ಹೆಸರು ಕನ್ನಡ ಚಿತ್ರ ತಯಾರಕ ಎಸ್. ಆರ್. ರಾಜನ್ ಅವರಿಗೆ ಸಲ್ಲುತ್ತದೆ. ಅವರು ತಯಾರಿಸಿದ "ಎನ್ನ ತಂಗಡಿ" ತುಳುವಿನ ಪ್ರಥಮ ಚಿತ್ರ. ಕೊಡಗು ಭಾಷೆಯ "ನಾಡ ಮನ್ನೆ ನಾಡ ಕೂಳು" ಎಂಬ ಪ್ರಪ್ರಥಮ ಚಿತ್ರವನ್ನು ತಯಾರಿಸಿದ ಶ್ರೇಯಸ್ಸು ಕೂಡ ಎಸ್. ಆರ್. ರಾಜನ್ ಅವರದು.

ಕೊಡಗಿನಲ್ಲಿ ಈವರೆಗೆ ಒಂದೇ ಒಂದು ಚಿತ್ರ ತಯಾರಾಗಿದೆ. ತುಳು ಭಾಷೆಯಲ್ಲಿ 'ದಾರೆದ ಬುಡೆದಿ,' 'ಪಗೆತ ಪುಗೆ,' 'ಬಿಸತ್ತಿ ಬಾಬು,' 'ಉಡಲ್ದ ತುಡರ್,' 'ಕೋಟಿ ಚೆನ್ನಯ್ಯ', 'ಯಾನ್ ಸನ್ಯಾಸಿ ಆಪೆ' ಹಾಗೂ 'ಕಾಸೂದಾಯೆನ್ ಕಂಡಾಣಿ' ಹೀಗೆ ಒಟ್ಟು ಎಂಟು ತುಳು ಚಿತ್ರಗಳು ಈ ಮೂರು ವರ್ಷಗಳಲ್ಲಿ ತಯಾರಾಗಿವೆ.

ತುಳು ಚಿತ್ರರಂಗದಲ್ಲಿ ಕೆ.ಎನ್. ಟೈಲರ್ ಅತ್ಯಂತ ಆಸ್ಥೆಯಿಂದ ದುಡಿಯುತ್ತ ಬಂದಿದ್ದಾರೆ. ವಿಶುಕುಮಾರ್ ನಿರ್ದೇಶನದ "ಕೋಟಿ ಚೆನ್ನಯ" ತುಳುರಂಗದಲ್ಲಿ ಅತ್ಯಂತ ಯಶಸ್ವೀ ಚಿತ್ರವೆನಿಸಿದೆ.

೧೯೩೧ ಮಾರ್ಚ್ ೧೪ರಂದು ಆರ್ದೇಶಿರ್ ಇರಾನಿ ತಯಾರಿಸಿದ ಭಾರತದ ಮೊಟ್ಟ ಮೊದಲ ವಾಕ್ಚಿತ್ರವು ತೆರೆ ಕಂಡಿತು. ಈ ಪ್ರಥಮ ವಾಕ್ಚಿತ್ರ ತಯಾರಿಕೆಯಲ್ಲಿ ಕನ್ನಡಿಗ ಎಚ್. ಎಂ. ರೆಡ್ಡಿ ಅವರು ಭಾಗವಹಿಸಿದ್ದರೆಂಬುದು ನಾವು ಹೆಮ್ಮೆ ಪಡಬೇಕಾದ ವಿಷಯ.

ಆಲಂಆರಾ ನಂತರ ಕೇವಲ ಮೂರು ವರ್ಷಗಳೊಳಗಾಗಿ ಕನ್ನಡದ ಪ್ರಥಮ ವಾಕ್ಚಿತ್ರವು ತೆರೆ ಕಂಡಿತು. ವೈ. ವಿ. ರಾವ್, ನಿರ್ದೇಶನದ ಈ ಚಿತ್ರದ ಹೆಸರು "ಸತಿ ಸುಲೋಚನ" ೪೦ ಸಹಸ್ರ ರೂ. ವೆಚ್ಚದೊಂದಿಗೆ ಅದು ಕೊಲ್ಹಾಪುರದಲ್ಲಿ ತಯಾರಾಯಿತು. ೧೯೩೪ ಮಾರ್ಚ್ ೩ರಂದು ಅದು ಬೆಂಗಳೂರಿನ ಪ್ಯಾರಾಮೌಂಟ್ ಚಿತ್ರಗೃಹದಲ್ಲಿ ತೆರೆ ಕಂಡು ಆರು ವಾರ ನಡೆಯಿತು.

ತೆರೆ ಕಂಡ ಪ್ರಥಮ ಚಿತ್ರ 'ಸತಿ ಸುಲೋಚನಾ' ವಾದರೂ ಸೆಟ್ಟೇರಿ ತಯಾರಿಕೆ ಆರಂಭಿಸಿದ ಕನ್ನಡದ ಮೊದಲ ವಾಕ್ಚಿತ್ರವು "ಭಕ್ತ ಧ್ರುವ". ಈ ಎರಡೂ ಚಿತ್ರಗಳ ತಯಾರಿಕೆಯಲ್ಲಿ ಬುದ್ಧಿಜೀವಿಗಳೇ ನಾಯಕತ್ವ ವಹಿಸಿದ್ದರು.

ಆ ನಂತರ ಪೌರಾಣಿಕ ಕಥೆ ಆಧರಿಸಿದ ಚಿತ್ರಗಳೇ ತಯಾರಾದವು. ಸಾಮಾಜಿಕ ಚಿತ್ರವೊಂದನ್ನು ಇಡೀ ದಕ್ಷಿಣಭಾರತದಲ್ಲೇ ಮೊದಲಬಾರಿ ತಯಾರಿಸಿದ ಶ್ರೇಯಸ್ಸು ಕನ್ನಡ ಚಿತ್ರರಂಗದ್ದು. ದಿ॥ ಹೆಚ್. ಎಲ್. ಎನ್. ಸಿಂಹ ದಿಗ್ದರ್ಶಿಸಿದ "ಸಂಸಾರ ನೌಕೆ" ಚಿತ್ರದ ಮೂಲಕವೇ (೧೯೩೬) ಬಿ. ಆರ್. ಪಂತುಲು, ಎಂ. ವಿ. ರಾಜಮ್ಮ, ಸಿಂಹ, ಹಾಗೂ ಡಿಕ್ಕಿ ಮಾಧವರಾವ್ ತೆರೆಗೆ ಪರಿಚಯವಾದರು.

೧೯೩೬ರಲ್ಲಿ ಕೈಗಾರಿಕೋದ್ಯಮಿ ಶ್ರೀ ವಿ. ತಿಮ್ಮಯ್ಯನವರು ಬೆಂಗಳೂರು ಮಲ್ಲೇಶ್ವರಂನಲ್ಲಿ "ಮೈಸೂರು ಸೌಂಡ್ ಸ್ಟುಡಿಯೋ ಸ್ಥಾಪಿಸಿದರು. ಅಲ್ಲಿ ೧೯೩೭ರಲ್ಲಿ 'ರಾಜಸೂಯಯಾಗ' ಚಿತ್ರವು ತಯಾರಾಯಿತು. ಕನ್ನಡನಾಡಿನಲ್ಲಿ ಕನ್ನಡಿಗರ ಸ್ಟುಡಿಯೋದಲ್ಲಿ ತಯಾರಾದ ಪ್ರಥಮ ಚಿತ್ರವಿದು. ಆದರೆ ಆ ಸ್ಟುಡಿಯೋವು ಮೂರು ಚಿತ್ರಗಳಿಗೇ ಮಂಗಳ ಹಾಡಿತು.

ನಂತರ 'ಪುರಂದರ ದಾಸ' 'ಸುಭದ್ರಾ' 'ವಸಂತಸೇನಾ' 'ಹರಿಶ್ಚಂದ್ರ' ಅ. ನ. ಕೃ. ಸಾಹಿತ್ಯದ 'ಜೀವನ ನಾಟಕ' ಚಿತ್ರಗಳು ತೆರೆಕಂಡು ಅಪಾರ ಯಶಸ್ಸು ಗಳಿಸಿದವು. ೧೯೪೩ರಲ್ಲಿ ತಾರೆ ಎಂ. ವಿ. ರಾಜಮ್ಮ ಅವರು "ರಾಧಾರಮಣ" ಎಂಬ ಚಿತ್ರ ತಯಾರಿಸಿ ಕನ್ನಡದ ಪ್ರಥಮ ಮಹಿಳಾ ನಿರ್ಮಾತೃವೆನಿಸಿದರು. ಆ ಚಿತ್ರದ ಮೂಲಕ ಜಿ. ವಿ. ಅಯ್ಯರ್ ಹಾಗೂ ಬಾಲಕೃಷ್ಣ ಬೆಳಕಿಗೆ ಬಂದರು.

೧೯೪೬ರಲ್ಲಿ ಮೈಸೂರಿನಲ್ಲಿ ರಾಮಯ್ಯನವರ "ನವಜ್ಯೋತಿ" ಸ್ಟುಡಿಯೋವು ಸ್ಥಾಪಿತವಾಯಿತು. ಅಲ್ಲಿ

ತಯಾರಾದ ಪ್ರಥಮ ವಾಕ್ಚಿತ್ರ 'ಕೃಷ್ಣ ಲೀಲಾ' ೧೯೫೧ರಲ್ಲಿ ಆ ಸ್ಟುಡಿಯೋದಲ್ಲಿ ತಯಾರಾದ "ಜಗನ್ಮೋಹಿನಿ" ಚಿತ್ರವು ದಾವಣಗೆರೆಯಲ್ಲಿ ೨೬ ವಾರ ಪ್ರದರ್ಶಿತವಾಯಿತು. ರಜತ ಮಹೋತ್ಸವ ಆಚರಿಸಿದ ಕನ್ನಡದ ಮೊದಲ ವಾಕ್ಚಿತ್ರವಿದು.

೧೯೫೪ರಲ್ಲಿ ತೆರೆಕಂಡ 'ಬೇಡರ ಕಣ್ಣಪ್ಪ' ಕನ್ನಡ ಚಿತ್ರರಂಗದಲ್ಲಿ ಹಲವು ಮುಖ್ಯ ಅಂಶಗಳಿಗೆ ಕಾರಣವಾಯಿತು. ರಾಷ್ಟ್ರಪ್ರಶಸ್ತಿ ಪಡೆದ ಮೊದಲ ಕನ್ನಡ ಚಿತ್ರವಿದು. ರಾಜಕುಮಾರ ಬೆಳಕಿಗೆ ಬಂದುದೂ ಇದೇ ಚಿತ್ರದ ಮೂಲಕ.

ಇದೇ ಸಮಯಕ್ಕೆ 'ನವಜ್ಯೋತಿ' ಸ್ಟುಡಿಯೋವು ಕದ ಮುಚ್ಚಿ, ಎಂ. ಎನ್. ಬಸವರಾಜಯ್ಯ ಅವರ ಪ್ರಿಮಿಯರ್ ಸ್ಟುಡಿಯೋ ಆರಂಭವಾಯಿತು. ಆ ಸ್ಟುಡಿಯೋದ ಮೊದಲ ಚಿತ್ರ 'ಸ್ತ್ರೀ ರತ್ನ' ಅದು ಭಾಗಶಃ ಬಣ್ಣದಲ್ಲಿ ತಯಾರಾಗಿ ಕನ್ನಡ ಪ್ರೇಕ್ಷಕರಿಗೆ ಮೊದಲ ಬಾರಿ ವರ್ಣ ಚಿತ್ರದ ಮಸಾಲೆ ತೋರಿಸಿತು.

೧೯೫೫ರಲ್ಲಿ ಆರ್. ನಾಗೇಂದ್ರರಾಯರು ತಯಾರಿಸಿದ 'ಪ್ರೇಮದ ಪುತ್ರಿ' ಚಿತ್ರವು ರಾಷ್ಟ್ರಪ್ರಶಸ್ತಿಯಲ್ಲಿ ರಜತಪದಕ ಪಡೆದ ಮೊದಲ ಚಿತ್ರವೆನಿಸಿತು.

ದಕ್ಷಿಣದಲ್ಲೇ ಮೊದಲ ಬಾರಿ ಅಖಿಲ ಭಾರತ ಮಟ್ಟದಲ್ಲಿ ರಾಷ್ಟ್ರಪತಿಗಳ ಮೂರರಲ್ಲೊಂದು ಪ್ರಶಸ್ತಿಯನ್ನು ಪಡೆದ ಶ್ರೇಯಸ್ಸು ಕನ್ನಡದ "ಸ್ಕೂಲ್ ಮಾಸ್ಟರ್" ಚಿತ್ರದ್ದು. ಬಿ. ಆರ್. ಪಂತುಲು ಅವರ ಈ ಚಿತ್ರವು ರಜತಮಹೋತ್ಸವ ಆಚರಿಸಿಕೊಂಡಿತು. ಪಂತುಲು ಈ ವರೆಗೆ ೫೧ ಚಿತ್ರಗಳನ್ನು ತಯಾರಿಸಿ ಕನ್ನಡದ ಅತಿ ದೊಡ್ಡ ನಿರ್ಮಾಪಕರೆನಿಸಿದ್ದಾರೆ. ಅವರು ತಯಾರಿಸಿದ "ಕಿತ್ತೂರು ಚೆನ್ನಮ್ಮ" ಹಾಗೂ "ಶ್ರೀ ಕೃಷ್ಣದೇವರಾಯ" ಚಿತ್ರಗಳು ಕನ್ನಡದ ಎರಡು ಮಹಾನ್ ಐತಿಹಾಸಿಕ ಚಿತ್ರಗಳೆನಿಸಿವೆ.

ಕಿವುಡು, ಮೂಕರ ಸಮಸ್ಯೆ ಆಧರಿಸಿ ಭಾರತದಲ್ಲೇ ಮೊದಲ ಚಿತ್ರ ತಯಾರಾದುದು ಕನ್ನಡದಲ್ಲಿ. 'ನಾಂದಿ' ಹೆಸರಿನ ಆ ಚಿತ್ರದ ನಿರ್ದೇಶಕರು ಲಕ್ಷ್ಮೀನಾರಾಯಣ್.

ಕನ್ನಡದಲ್ಲಿ ಕಾದಂಬರಿಯೊಂದನ್ನು ತೆರೆಗೆ ತರುವ ಸಾಹಸವು ನಡೆದುದು ಮೂಕಿ ಚಿತ್ರಗಳ ಯುಗದಲ್ಲಿ. (ದೇವುಡು ಅವರ 'ಕಳ್ಳರ ಕೂಟ'). ಆದರೆ ವಾಕ್ಚಿತ್ರ



ನಟಸಾರ್ವಭೌಮ ರಾಜಕುಮಾರ



ಜನಪ್ರಿಯ ತಾರೆ ಆರತಿ

ಯುಗವು ಆರಂಭವಾದ ನಂತರ ಚಿತ್ರೀಕರಣವಾದ ಮೊದಲ ಕಾದಂಬರಿ ಕೃಷ್ಣಮೂರ್ತಿ ಪುರಾಣಿಕರ 'ಧರ್ಮದೇವತೆ. ಅದು 'ಕರುಣೆಯೇ ಕುಟುಂಬದ ಕಣ್ಣು' ಹೆಸರಿನಿಂದ ತೆರೆ ಕಂಡಿತು. ಆನಂತರ ಪುರಾಣಿಕರ ಕಾದಂಬರಿ ಆಧರಿಸಿ ಮತ್ತೆರಡು ಚಿತ್ರಗಳು ತಯಾರಾದವು. (ಕುಲವಧು ಹಾಗೂ ಬಂಗಾರಿ)

ಇತ್ತೀಚೆ ತೆರೆ ಕಂಡ 'ಸ್ವಯಂವರ' ಚಿತ್ರವೂ ಸೇರಿ ಕನ್ನಡದಲ್ಲಿ ಕಾದಂಬರಿ ಆಧರಿಸಿ ತಯಾರಾದ ಒಟ್ಟು ಚಿತ್ರಗಳು ೩೨. ಇದರಲ್ಲಿ ಲೇಖಕಿಯರ ಕಾದಂಬರಿ ಆಧರಿತ ಚಿತ್ರಗಳು ಎಂಟು. ಲೇಖಕಿಯರಲ್ಲಿ ತ್ರಿವೇಣಿ ಅವರ ಕಾದಂಬರಿ ಆಧರಿಸಿ ತಯಾರಾದ ಚಿತ್ರಗಳು ಹೆಚ್ಚು (೩). ಲೇಖಕರಲ್ಲಿ ಈ ಗೌರವವು ಕೃಷ್ಣಮೂರ್ತಿ ಪುರಾಣಿಕ ಅವರಿಗೆ ಸಲ್ಲುತ್ತದೆ (೬).

ಕನ್ನಡದಲ್ಲಿ ನಾಟಕ ಆಧರಿಸಿ ತಯಾರಾದ ಚಿತ್ರಗಳು ಎರಡು. ಪರ್ವತವಾಣಿ ಅವರ 'ಉಂಡಾಡಿ ಗುಂಡ' ಆಧರಿಸಿ ತಯಾರಾದ 'ಕಣ್ಣು ಮುಚ್ಚಾಲೆ' ಅಂಥ ಮೊದಲ ಚಿತ್ರವಾದರೆ, ಎ. ಸೀ. ಅವರ 'ಶ್ರೀಶೈಲ ಶಿಖರ' ನಾಟಕ ಆಧರಿತ 'ಪಾಪ ಪುಣ್ಯ'–ಅಂಥ ಎರಡನೆಯ ಚಿತ್ರ. (ಸಂಸಾರ ನೌಕ, ಸದಾರಮೆ, ಮೊದಲಾದವು ಮೊದಲು ರಂಗಮಂಚದ ಮೇಲೆ ಪ್ರದರ್ಶಿತವಾಗಿ ತೆರೆಗೆ ಅಳವಡಿಸಲಾದ ನಾಟಕಗಳು.)

ಸಣ್ಣಕಥೆ ಆಧರಿಸಿ ತಯಾರಾದ ಮೊದಲ ಚಿತ್ರವೆಂದರೆ ಈ ವರ್ಷ ತೆರೆಕಂಡ 'ಸಂಕಲ್ಪ'. ಈಗ ಪೂರ್ಣಚಂದ್ರ ತೇಜಸ್ವಿ ಅವರ 'ಅಬಚೂರಿನ ಪೋಸ್ಟಾಫೀಸ್' ಹಾಗೂ ಗೊರೂರು ರಾಮಸ್ವಾಮಿ ಅಯ್ಯಂಗಾರ ಅವರ 'ಭೂತಯ್ಯನ ಮಗ ಅಯ್ಯು' ಕಥೆ ಆಧರಿತ ಚಿತ್ರಗಳೂ ತಯಾರಾಗುತ್ತಿವೆ.

ಕನ್ನಡದ ಪ್ರಥಮ ಐತಿಹಾಸಿಕ ಚಿತ್ರ "ರಣಧೀರ ಕಂಠೀರವ" (೧೯೬೦) ಸಂತರು ಹಾಗೂ ಕವಿಗಳ ಜೀವನಾಧಾರಿತ ಚಿತ್ರಗಳಲ್ಲಿ ಹೆಸರಿಸಬಹುದಾದ ಚಿತ್ರಗಳೆಂದರೆ 'ಜಗಜ್ಯೋತಿ ಬಸವೇಶ್ವರ' 'ಸರ್ವಜ್ಞಮೂರ್ತಿ', 'ಭಕ್ತ ಕನಕದಾಸ' 'ಸಂತ ತುಕಾರಾಂ' ಹಾಗೂ 'ಮಂತ್ರಾಲಯ ಮಹಾತ್ಮೆ.'

ಕಪ್ಪು ಬಿಳುಪು ಚಿತ್ರಗಳಲ್ಲಿ ಇತ್ತೀಚಿನ ಯಶಸ್ವಿ ಚಿತ್ರಗಳೆಂದರೆ 'ಗೆಜ್ಜೆ ಪೂಜೆ', 'ಮಣ್ಣಿನ ಮಗ' ಹಾಗೂ 'ನಮ್ಮ ಮಕ್ಕಳು' ಈ ಮೂರೂ ಚಿತ್ರಗಳು ರಜತೋತ್ಸವ ಆಚರಿಸಿದವು.

'ಸ್ತ್ರೀ ರತ್ನ' ಚಿತ್ರದಲ್ಲಿ ಅಂಶತಃ ಬಣ್ಣದ ರೀಲುಗಳಿದ್ದರೂ ಕನ್ನಡದ ಮೊದಲ ಬಣ್ಣದ ಚಿತ್ರ ಬಿ. ಎಸ್. ರಂಗಾ ಅವರ "ಅಮರ ಶಿಲ್ಪಿ ಜಕಣಾಚಾರಿ" (೧೯೬೪) ನಂತರ 'ಭಲೇ ಬಸವ', 'ಶ್ರೀಕೃಷ್ಣ ದೇವರಾಯ', ಮಿಸ್ಟರ್ ರಾಜಕುಮಾರ, ಸಿಡಿಲು ಮರಿ, ಶರಪಂಜರ, ಅದೃಷ್ಟವೋ ಅದೃಷ್ಟ, ಸಿಪಾಯಿ ರಾಮು, 'ಸುಭದ್ರಾ ಕಲ್ಯಾಣ 'ಬಂಗಾರದ ಮನುಷ್ಯ', 'ನಾಗರ ಹಾವು', ಬಿಡುಗಡೆ ಹಾಗೂ 'ಗಂಧದ ಗುಡಿ' ಹೀಗೆ ಒಟ್ಟು ಹದಿಮೂರು ವರ್ಣಚಿತ್ರಗಳು ತೆರೆ ಕಂಡಿವೆ.

ಪ್ರಾದೇಶಿಕ ಚಿತ್ರಗಳ ಇತ್ತೀಚಿನ ಹಣಗಳಿಕೆ ಇತಿಹಾಸದಲ್ಲೇ ಮೊದಲ ವಿಕ್ರಮವನ್ನು ಸ್ಥಾಪಿಸಿದ ಶ್ರೇಯಸ್ಸು ಪುಟ್ಟಣ್ಣ ನಿರ್ದೇಶನದ "ಶರಪಂಜರ" ಚಿತ್ರದ್ದು. 'ಶರಪಂಜರ', 'ಕೃಷ್ಣದೇವರಾಯ' ಹಾಗೂ 'ನಾಗರ ಹಾವು' ಚಿತ್ರಗಳು ರಜತ ಮಹೋತ್ಸವ ಆಚರಿ

## ಯಾವ ವರ್ಷ ಎಷ್ಟು ಚಿತ್ರ ತಯಾರಾದವು?

ಕನ್ನಡದ ಪ್ರಥಮ ವಾಕ್ಚಿತ್ರ 'ಸತಿ ಸುಲೋಚನ'ದಿಂದ (ಬಿಡುಗಡೆ: ೧೯೩೪ ಮಾರ್ಚ್ ೪) 'ಗಂಧದ ಗುಡಿ' ವರ್ಣಚಿತ್ರದವರೆಗೆ (ಬಿಡುಗಡೆ: ೧೯೭೩ ಸೆಪ್ಟೆಂಬರ್ ೨೧) ತೆರೆಕಂಡ ಕನ್ನಡ ಚಿತ್ರಗಳ ಸಂಖ್ಯೆ ೪೧೧. ರಾಜಕುಮಾರರ ಕುರಿತ ಒಂದು ಸಾಕ್ಷ್ಯ ಚಿತ್ರ ಹಾಗೂ ೨೩ ಡಬ್ಬಿಂಗ್ ಚಿತ್ರಗಳನ್ನೂ ಸೇರಿಸಿದರೆ ಈ ಸಂಖ್ಯೆ ೪೩೪ ಆಗುತ್ತದೆ.

ವಿವರಗಳು ಇಂತಿವೆ.

| ವರ್ಷ | ಚಿತ್ರಗಳು | ವರ್ಷ | ಚಿತ್ರಗಳು |
|---|---|---|---|
| ೧೯೩೪ | ೨ | ೧೯೫೬ | ೧೪ |
| | | ೧೯೫೭ | ೧೪ |
| ೧೯೩೫ | ೧ | ೧೯೫೮ | ೧೦ |
| ೧೯೩೬ | ೧ | ೧೯೫೯ | ೫ |
| ೧೯೩೭ | ೩ | ೧೯೬೦ | ೧೨ |
| ೧೯೪೧ | ೨ | ೧೯೬೧ | ೧೨ |
| ೧೯೪೨ | ೨ | ೧೯೬೨ | ೧೬ |
| ೧೯೪೩ | ೪ | ೧೯೬೩ | ೨೧ |
| ೧೯೪೫ | ೧ | ೧೯೬೪ | ೧೮ |
| ೧೯೪೭ | ೫ | ೧೯೬೫ | ೨೦ |
| ೧೯೪೮ | ೨ | ೧೯೬೬ | ೨೦ |
| ೧೯೪೯ | ೬ | ೧೯೬೭ | ೨೬ |
| ೧೯೫೦ | ೧ | ೧೯೬೮ | ೩೩ |
| ೧೯೫೧ | ೨ | ೧೯೬೯ | ೩೭ |
| ೧೯೫೨ | ೧ | ೧೯೭೦ | ೩೫ |
| ೧೯೫೩ | ೭ | ೧೯೭೧ | ೩೪ |
| ೧೯೫೪ | ೧೧ | ೧೯೭೨ | ೨೪ |
| ೧೯೫೫ | ೧೩ | ೧೯೭೩ | ೧೯ |

(ಸೆಪ್ಟೆಂಬರ್ ೩೦ರವರೆಗೆ)

# ದೀಪಾವಳಿ

ಉಜ್ವಲ ದೀಪಗಳಿಂದ ಮನೆಗಳು ಬೆಳಗುತ್ತಿವೆ. ಬಿರುಸು ಬಾಣಗಳ ಗದ್ದಲ ಬೀದಿಗಳಲ್ಲಿ ಪ್ರತಿಧ್ವನಿಸುತ್ತಿದೆ. ಎಲ್ಲೆಲ್ಲೂ ಹಬ್ಬದ ಹರ್ಷ, ಪುಟಾಣಿ ಮಕ್ಕಳ ಕೇಕೆ ನಲಿದಾಟ. ದೀಪಾವಳಿಯು ಹಬ್ಬ ... ಭದ್ರತೆ, ಸುಖಶಾಂತಿಯ ಆಶ್ವಾಸನೆಯನ್ನು ನೀಡುವ ಹಬ್ಬ.

ನಿಮ್ಮ ಜೀವನ ನಿರಂತರವಾಗಿ ಸುಖಮಯ ಹಾಗೂ ನಿಶ್ಚಿಂತೆಯಾಗಿರಲು ಜೀವವಿಮಾ ಭದ್ರತೆಯನ್ನು ಪಡೆಯಿರಿ.



ಜೀವವಿಮೆಗಿಂತ
ಶ್ರೇಷ್ಠ ಭದ್ರತೆ ಬೇರೊಂದಿಲ್ಲ.

ಿದರೆ "ಬಂಗಾರದ ಮನುಷ್ಯ" ಚಿತ್ರವು ತೆರೆ ಕಂಡಲ್ಲೆಲ್ಲ ಜಯಭೇರಿ ಹೊಡೆಯಿತು. ಅದೇ ಚಿತ್ರಗೃಹದಲ್ಲಿ (ಬೆಂಗಳೂರಿನ ಸ್ಟೇಟ್ಸ್) ಸತತವಾಗಿ ನಡೆದು, ಬೇರೆ ಚಿತ್ರ ಗೃಹಕ್ಕೆ ವರ್ಗವಾಗಿರುವ ಈ ಚಿತ್ರವು ದಕ್ಷಿಣ ಭಾರತದಲ್ಲೇ ಅತಿ ಹೆಚ್ಚು ಕಾಲ ಪ್ರದರ್ಶಿತವಾದ ಚಿತ್ರ.

ಕನ್ನಡದ 'ನಾಂದಿ' ಲಂಡನ್‌ನಲ್ಲಿ ಪ್ರದರ್ಶಿತವಾದ ಪ್ರಥಮ ವಾಕ್ಚಿತ್ರ. ಆದರೆ ಕನ್ನಡ ಚಿತ್ರರಂಗಕ್ಕೆ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಗೌರವ ತಂದು ಕೊಟ್ಟ ಕೀರ್ತಿ "ಸಂಸ್ಕಾರ" (೧೯೭೦) ಚಿತ್ರದ್ದು. ಅತ್ಯಂತ ಶ್ರೇಷ್ಠ ಚಿತ್ರವೆಂದು ರಾಷ್ಟ್ರಪತಿಗಳ ಸುವರ್ಣ



ಶ್ರೇಷ್ಠ ನಿರ್ದೇಶಕ ಕಣಗಾಲ್ ಪುಟ್ಟಣ್ಣ

ಪದಕ ಪಡೆದಿರುವ ಪ್ರಥಮ ಕನ್ನಡ ಚಿತ್ರವಿದು. ಮರುವರ್ಷವೇ 'ವಂಶ ವೃಕ್ಷ ಚಿತ್ರದ ನಿರ್ದೇಶನಕ್ಕಾಗಿ ಗಿರೀಶ್ ಕಾರ್ನಾಡ್ ಹಾಗೂ ಬಿ. ವಿ. ಕಾರಂತ್ ಅವರು ಶ್ರೇಷ್ಠ ನಿರ್ದೇಶಕರೆಂದು ರಾಷ್ಟ್ರೀಯ ಪ್ರಶಸ್ತಿ ಪಡೆದು ಅಂಥ ಗೌರವ ಪಡೆದ ಮೊದಲ ಕನ್ನಡಿಗರೆನಿಸಿದರು. ವಂಶವೃಕ್ಷ ಚಿತ್ರವು ಬೆಂಗಳೂರಿನಲ್ಲಿ ಬೆಳಗಿನ ಆಟಗಳ ರಜತ ಮಹೋತ್ಸವ ಆಚರಿಸಿರುವುದೊಂದು ದಾಖಲೆ.

'ಸಂಸ್ಕಾರ ಹಾಗೂ 'ವಂಶವೃಕ್ಷ' ಚಿತ್ರಗಳ ನಂತರ ಕನ್ನಡ ಚಿತ್ರರಂಗಕ್ಕೆ ಹೊಸ ತಿರುವು ಬಂದಿದ್ದು ಹೊಸ ಹೊಸ ಪ್ರಾಯೋಗಿಕ ಚಿತ್ರಗಳನ್ನು ತಯಾರಿಸುವ ಬಗ್ಗೆ ವಿಶೇಷ ಆಸ್ಥೆ ಕಂಡು ಬರುತ್ತಿದೆ. 'ವಂಶ ವೃಕ್ಷ'ದ ತಲಗೇರಿ ವೆಂಕಟರಾವ್ ಹಾಗೂ ಎಲ್. ವಿ. ಶಾರದಾ ತಮ್ಮ ಪ್ರಥಮ ಯತ್ನದಲ್ಲೇ ಶ್ರೇಷ್ಠ ನಟ ಹಾಗೂ ನಟಿಯೆಂದು ರಾಜ್ಯಪ್ರಶಸ್ತಿ ಪಡೆದಿದ್ದು, ಬಹುಶಃ ಬೇರೆ ಯಾವ ಭಾಷಾ ನಟ–ನಟಿಯರೂ ಇಂಥ ಗೌರವ ಪಡೆದಿರಲಾರರು.

೧೯೬೧ರಲ್ಲಿ ಕಲಾವಿದರು ಪ್ರವಾಹ ಪರಿಹಾರ ನಿಧಿಗಾಗಿ ರಾಜ್ಯಾದ್ಯಂತ ಪ್ರವಾಸ ಕೈಗೊಂಡು ಜನತೆಯೊಡನೆ ನಿಕಟಬಾಂಧವ್ಯ ಬೆಳೆಸಿಕೊಂಡರು. ೧೯೬೫ರಲ್ಲಿ ಡಬ್ಬಿಂಗ್ ಚಿತ್ರಗಳ ವಿರುದ್ಧ ರಾಜ್ಯದಲ್ಲಿ ದೊಡ್ಡ ಪ್ರತಿಭಟನಾ ಸತ್ರವೇ ನಡೆಯಿತು. ಇವೆಲ್ಲವುಗಳ ಫಲವಾಗಿ ಕನ್ನಡ ಚಿತ್ರಗಳ ತಯಾರಿಕೆಯು ಹೆಚ್ಚಿತು.

ಕನ್ನಡ ಚಿತ್ರನಿರ್ಮಾಣವು ರಾಜ್ಯದಲ್ಲೇ ಕೇಂದ್ರೀಕೃತವಾಗುವಂತೆ ಪ್ರೋತ್ಸಾಹ ನೀಡಲು ರಾಜ್ಯದಲ್ಲೇ ತಯಾರಾದ ಚಿತ್ರಗಳಿಗೆ ೫೦ ಸಾವಿರ ರೂಪಾಯಿ ಸಹಾಯ ಧನ ನೀಡುವ ಯೋಜನೆಯೊಂದನ್ನು ರಾಜ್ಯ ಸರ್ಕಾರವು ೧೯೬೭ ಆಗಸ್ಟ್ ತಿಂಗಳಿನಿಂದ ಜಾರಿಗೆ ತಂದಿತು. ಇದರಿಂದ ಕನ್ನಡ ಚಿತ್ರ ತಯಾರಿಕೆಯಲ್ಲಿ ಗಣನೀಯವಾದ ಏರಿಕೆ ಕಂಡು ಬಂದಿತು. ೧೯೬೪ರಲ್ಲಿ ೧೮ ಕನ್ನಡ ಚಿತ್ರಗಳು ತೆರೆ ಕಂಡರೆ ೧೯೬೯ರಲ್ಲಿ ಅತೀ ಹೆಚ್ಚು ಅಂದರೆ ೩೭ ಚಿತ್ರಗಳು ತೆರೆ ಕಂಡವು. ರಾಜ್ಯದಲ್ಲಿ ಹೊಸ ಮೂರು ಸ್ಟುಡಿಯೋಗಳು ತಲೆಯೆತ್ತಲೂ ಈ ಬಿರುಸಾದ ಚಟುವಟಿಕೆಯೇ ಕಾರಣ.

೧೯೬೯ರಲ್ಲಿ ಆರಂಭವಾದ ಬೆಂಗಳೂರು ಕಂಠೀರವ ಸ್ಟುಡಿಯೋನಲ್ಲಿ ಎರಡು ಚಿತ್ರೀಕರಣ ಅಂಗಣಗಳಿವೆ. ಚಾಮುಂಡೇಶ್ವರಿ ಸ್ಟುಡಿಯೋನಲ್ಲಿ ಎರಡು, ಅಭಿಮಾನ್ ಸ್ಟುಡಿಯೋನಲ್ಲಿ ಒಂದು, ಮೈಸೂರಿನ ಪ್ರಿಮಿಯರ್ ಸ್ಟುಡಿಯೋನಲ್ಲಿ ಆರು ಹೀಗೆ ಒಟ್ಟು ಹನ್ನೊಂದು ಸ್ಟುಡಿಯೋ ಫ್ಲೋರುಗಳ ಸೌಕರ್ಯವು ರಾಜ್ಯದಲ್ಲಿದೆ. ಈ ಸ್ಟುಡಿಯೋಗಳ ಮೇಲೆ ಹೂಡಲಾದ ಒಟ್ಟು ಬಂಡವಲು ೭೫ ಲಕ್ಷ ರೂಪಾಯಿ. ಮೈಸೂರು ರಾಜ್ಯದ ಚಲನಚಿತ್ರ ಅಭಿವೃದ್ಧಿ ಕಾರ್ಪೊರೇಷನ್ನು ಬೆಂಗಳೂರಿನ ಹೆಸರ ಘಟ್ಟದಲ್ಲಿ ಒಂದು ಸ್ಟುಡಿಯೋ ಹಾಗೂ ಚಿತ್ರನಗರ ನಿರ್ಮಾಣ ಯೋಜನೆಯಲ್ಲಿದೆ.

ಕನ್ನಡದಲ್ಲಿ ಚಿತ್ರ ನಿರ್ಮಾಣದ ಸೌಕರ್ಯಗಳು ಹೆಚ್ಚಿವೆ. ಜೊತೆಗೇ ಹೊಸ ಬಗೆಯ ಚಿತ್ರಗಳಿಗೆ ಬೆಂಬಲ ನೀಡುವ ಹುಮ್ಮಸ್ಸು ಕೆಲವು ವಿತರಕರಲ್ಲಾದರೂ ಕಂಡು ಬರುತ್ತಿದೆ. ಆದರೆ ಅಂಥ ಪ್ರಯೋಗಗಳಿಗೆ ಚಿತ್ರ ಗೃಹಗಳನ್ನು ದೊರಕಿಸುವದಾಗಲಿ, ಅವುಗಳ ದುಬಾರಿ ಬಾಡಿಗೆಯನ್ನು ತೆತ್ತು ಚಿತ್ರ ಪ್ರದರ್ಶಿಸುವುದಾಗಲೀ ತುಂಬಾ ಕಷ್ಟದ ಕೆಲಸ.

ಈಗ ಚಿತ್ರೋದ್ಯಮದಲ್ಲಿ ಎರಡು ಬಗೆಯ ಚಿತ್ರಗಳಿಗೆ ಮಾತ್ರ ವಿಶೇಷ ಬೆಂಬಲವುಂಟು. ರಾಜಕುಮಾರ ನಾಯಕನಾಗಿರಬೇಕು. ಇಲ್ಲ ಪುಟ್ಟಣ್ಣನವರ ನಿರ್ದೇಶನವಿರಬೇಕು. ಅಂಥ ಚಿತ್ರಗಳಿಗೆ ಮಾತ್ರ ಇಂದು ಬೆಂಬಲ ಉಂಟು. ಈಗ ಸಿದ್ದಲಿಂಗಯ್ಯನವರ ನಿರ್ದೇಶನಕ್ಕೂ ತುಂಬಾ ಬೇಡಿಕೆಯುಂಟು. ರಾಜಕುಮಾರ ಅವರು



"ಬಂಗಾರದ ಮನುಷ್ಯ" ಚಿತ್ರದ ನಿರ್ದೇಶಕ ಶ್ರೀ ಸಿದ್ದಲಿಂಗಯ್ಯ



ಕನ್ನಡ ಚಿತ್ರರಂಗಕ್ಕೆ ಹೊಸ ಪಥ ತೋರಿದ ಗಿರೀಶ್ ಕಾರ್ನಾಡ

ಸ್ವೀಕರಿಸುವ ಗೌರವಧನವು ನಾಲ್ಕು ವರ್ಷಗಳಲ್ಲಿ ಮೂರರಷ್ಟು ಹೆಚ್ಚಿದ್ದರೂ ಉಳಿದ ನಟರ ಬೆಲೆ ಅರ್ಧಕ್ಕೆ ಇಳಿದಿದೆ. 'ನಾಗರ ಹಾವು' ನಂತರ ವಿಷ್ಣುವರ್ಧನನಿಗೆ ಒಳ್ಳೆಯ ಬೇಡಿಕೆಯುಂಟು.

ನಾಯಕಿಯರಲ್ಲಿ ಕಲ್ಪನಾ, ಜಯಂತಿ, ಭಾರತಿಯವರ ಸ್ಥಾನವನ್ನು ಮೆಲ್ಲನೆ ಆರತಿ ಆಕ್ರಮಿಸುತ್ತಿದ್ದು, ರಾಜಕುಮಾರ ಪುಟ್ಟಣ್ಣ–ಈ ಇಬ್ಬರ ಚಿತ್ರಗಳಲ್ಲೂ ಆಕೆಗೆ ವಿಶೇಷ ಬೇಡಿಕೆಯುಂಟು.

ಸಂಖ್ಯೆಯ ದೃಷ್ಟಿಯಿಂದ ಹೇಳುವುದಾದರೆ ಕನ್ನಡದಲ್ಲಿ ೧೯೭೩ ಸೆಪ್ಟೆಂಬರ್ ೩೦ರ ವರೆಗೆ ತೆರೆ ಕಂಡ ಒಟ್ಟು ಚಿತ್ರಗಳು ೪೧೦. 'ಸತಿ 'ಸುಲೋಚನ ಮೊದಲ ಚಿತ್ರವಾದರೆ 'ಗಂಧದ ಗುಡಿ ೪೧೦ ನೇ ಚಿತ್ರ. ಇವುಗಳಲ್ಲಿ ೨೩ ಡಬ್ಬಿಂಗ್ ಚಿತ್ರಗಳೂ ಹಾಗೂ ರಾಜಕುಮಾರ ಕುರಿತು ತಯಾರಾದ 'ನಟಸಾರ್ವಭೌಮ' ಸಾಕ್ಷಿ ಚಿತ್ರವನ್ನು ಸೇರಿಸಿಲ್ಲ. ಗಂಧದ ಗುಡಿ ರಾಜಕುಮಾರ ಅಭಿನಯದ ೧೫೦ನೇ ಚಿತ್ರ. ಅಲ್ಲದೆ ಕಾಡಿನ ಹಿನ್ನೆಲೆಯಲ್ಲಿ ತಯಾರಾದ ಪ್ರಥಮ ವರ್ಣ ಚಿತ್ರವದು.

ಕನ್ನಡ ಚಿತ್ರರಂಗದ ಇತ್ತೀಚಿನ ಹೆಮ್ಮೆಯ ವಿಷಯವೆಂದರೆ ಛಾಯಾಗ್ರಾಹಕರಾದ ಡಿ. ವಿ. ರಾಜಾರಾಂ (ಶರಪಂಜರ, ಬಂಗಾರದ ಮನುಷ್ಯ, ಗಂಧದ ಗುಡಿ) ಚಿಟ್ಟಿಬಾಬು (ನಾಗರ ಹಾವು) ಹಾಗೂ ಶ್ರೀಕಾಂತ್ (ಗೆಜ್ಜೆ ಪೂಜೆ, ಎಡಕಲ್ಲು ಗುಡ್ಡದ ಮೇಲೆ) ಅಖಿಲ ಭಾರತ ಮಟ್ಟದಲ್ಲಿ ಪ್ರಶಂಸೆಗೆ ಪಾತ್ರರಾಗಿದ್ದಾರಲ್ಲದೆ ಹಾಲಿವುಡ್‌ಗೆ ಸರಿಸಮ ಚಿತ್ರಗಳನ್ನು ತಯಾರಿಸಬಲ್ಲ ಸಾಮರ್ಥ್ಯವನ್ನು ತೋರಿಸಿ ಕೊಟ್ಟಿದ್ದಾರೆ. ಕನ್ನಡ ಸಂಗೀತ ನಿರ್ದೇಶಕರು. ಇತರ ತಂತ್ರಜ್ಞರ ಬಗ್ಗೆ ಕೂಡ ಇದೇ ಮಾತನ್ನು ನಾವು ಹೇಳಬಹುದಾಗಿದೆ.

ಹೀಗೆ ತಂತ್ರದ ದೃಷ್ಟಿಯಿಂದ, ಪ್ರಯೋಗದ ದೃಷ್ಟಿಯಿಂದ ಕನ್ನಡ ಚಿತ್ರರಂಗವು ಮೈ ತುಂಬಿಕೊಂಡು ಹುಲುಸಾಗಿ ಬೆಳೆದಿದೆ. ತನ್ನ ನಾಲ್ಕು ದಶಕಗಳ ಇತಿಹಾಸದಲ್ಲಿ ಅದರ ಸಾಧನೆಗಳು ಗಣನೀಯವಾಗಿವೆ. ಇತ್ತೀಚಿನ ಐದು ವರ್ಷಗಳಂತೂ ಕನ್ನಡ ಚಿತ್ರರಂಗದ ಸುವರ್ಣ ಅಧ್ಯಾಯವನ್ನು ಬರೆದಿವೆ. ●

# ಟಿನೊಪಾಲ್®-ಎಸ್

## ಸಿಂಥೆಟಿಕ್ ಹಾಗೂ ಬ್ಲೆಂಡೆಡ್ ಬಟ್ಟೆಗಳಿಗೆ ಬಿಳುಪನ್ನೀಯಲು




ಟಿನೊಪಾಲ್®
ಕಾಟನ್ ಬಟ್ಟೆಗಳಿಗೆ




ಟಿನೊಪಾಲ್®-ಎಸ್
ಸಿಂಥೆಟಿಕ್ ಬಟ್ಟೆಗಳಿಗೆ

## ಅತ್ಯಧಿಕ ಬಿಳುಪಿಗೆ ಟಿನೊಪಾಲ್®

® ಟಿನೊಪಾಲ್ ಸೀಬಾ-ಗೈಗಿ ಲಿ., ಸ್ವಿಟ್ಸರ್‌ಲೇಂಡ್‌ನವರ ರಿಜಿಸ್ಟರ್ಡ್ ಟ್ರೇಡ್ ಮಾರ್ಕ್ ಆಗಿದೆ.
ಸುಹೃದ್ ಗೈಗಿ ಲಿ., ಪಿ. ಓ. ಬಾಕ್ಸ್ 11050. ಬೊಂಬಾಯಿ-400 020.

Shilpi HPMA 29/73 Kan

# ನಾವು ಮತ್ತು ಚಿತ್ರರಂಗ

(ಬೆಂಗಳೂರು ಪ್ರತಿನಿಧಿಯಿಂದ)

## ಎನ್. ವೀರಾಸ್ವಾಮಿ

(ನಿರ್ಮಾಪಕ ಹಂಚಿಕೆದಾರ)

ನಾನು ಅನೇಕ ಚಿತ್ರಗಳನ್ನು ತಯಾರಿಸಿದ್ದೇನೆ. ವಿತರಣೆ ಮಾಡಿದ್ದೇನೆ. ನನ್ನ ಅನುಭವವೆಂದರೆ ಜನರ ಅಭಿರುಚಿಯೇನು ಎಂಬುದನ್ನು ಮೊದಲೇ ನಿರ್ಧರಿಸುವದು ಕಷ್ಟದ ಕೆಲಸ. ನಾನು ತಯಾರಿಸುವ ಚಿತ್ರವು ಖಂಡಿತ ಯಶಸ್ವಿಯಾಗುವದೆಂದು ಯಾವ ನಿರ್ಮಾಪಕನೂ ಎದೆತಟ್ಟಿ ಹೇಳಿಕೊಳ್ಳಲಾರ.

ನಾನು ತಯಾರಿಸಿದ 'ಕುಲಗೌರವ' 'ನಾಗರಹಾವು' ಚಿತ್ರಗಳ ಅದ್ಭುತ ಯಶಸ್ಸನ್ನು ಕಂಡ ಜನ ನಾಳೆ ನಾನು ಬೇರೆ ಚಿತ್ರ ತಯಾರಿಸಿದರೆ ಇನ್ನೂ ಹೊಸದೇನನ್ನೋ ಬಯಸುತ್ತಾರೆ. ಹೀಗಾಗಿ ಚಿತ್ರರಂಗದಲ್ಲಿ ಒಮ್ಮೆ ಯಶಸ್ಸುಗಳಿಸಿದ ಮನುಷ್ಯನು ಸದಾ ಅಪಾಯದಲ್ಲಿರುತ್ತಾನೆ.

ಒಮ್ಮೆ ಯಶಸ್ವಿಯಾದ ತಯಾರಕನು ಆ ಗೌರವವನ್ನು ಉಳಿಸಿಕೊಳ್ಳುವದೂ ಅಗತ್ಯ. ಆದರೆ ಯಾವ ನಿರ್ಮಾಪಕನೂ ಜನರ ಕಣ್ಣಲ್ಲಿ ಮಣ್ಣೆರಚಲಾರ. ನಿರ್ಮಾಪಕ ನಿರ್ದೇಶಕರಿಗಿಂತ ಪ್ರೇಕ್ಷಕರು ಬುದ್ಧಿವಂತರು ಎಂದು ನಾನು ತಿಳಿದಿದ್ದೇನೆ. ಹೀಗಾಗಿ ಪ್ರತಿಯೊಂದು ಚಿತ್ರದಲ್ಲೂ ಹೊಸದೇನನ್ನಾದರೂ ನೀಡಿದರೇನೆ ನಿರ್ಮಾಪಕ ಬದುಕುತ್ತಾನೆ.

ಇನ್ನು ಫಾರ್ಮುಲಾ ಫಿಲಂಗಳ ಬಗ್ಗೆ ಆಗಾಗ ಟೀಕೆ ಕೇಳಿ ಬರುತ್ತಿದೆ. ಚಲನಚಿತ್ರವು ಅತ್ಯಂತ ಅಗ್ಗದ ಮನರಂಜನೆ ಸಾಧನವಾಗಿರುವದರಿಂದ ಮತ್ತು ಎಲ್ಲ ಬಗೆಯ ಜನರೂ ಚಿತ್ರ ನೋಡುವದರಿಂದ ಅದರಲ್ಲಿ ಎಲ್ಲ ರಸಗಳನ್ನು ಸೇರಿಸುವದು ಅಗತ್ಯವೆನಿಸುತ್ತದೆ.

ಈಗ ವರ್ಣಯುಗವು ಆರಂಭವಾಗಿರುವದರಿಂದ ಕನ್ನಡದಲ್ಲೂ ಬಣ್ಣದ ಚಿತ್ರಗಳನ್ನು ತಯಾರಿಸುವದು ಅತ್ಯವಶ್ಯವಾಗಿದೆ. ಸಹಾಯಧನ ನೀಡುತ್ತಿರುವ ಸರಕಾರವು ವರ್ಣಚಿತ್ರದ ಫಿಲಂ ಸ್ಟಾಕನ್ನು ಕೊಡಿಸುವ ಏರ್ಪಾಡು ಮಾಡಬೇಕು. ಅದರಿಂದ ಕನ್ನಡದಲ್ಲಿ ವರ್ಣಚಿತ್ರಗಳನ್ನು ತಯಾರಿಸಲು ಒಳ್ಳೆಯ ಪ್ರೋತ್ಸಾಹ ನೀಡಿದಂತಾಗುವದು.

ಇನ್ನು ಸೆನ್ಸಾರ್‌ನ ದ್ವಿಮುಖ ನೀತಿಯನ್ನು ನಾನು ಒಪ್ಪುವದಿಲ್ಲ. ಇಂಗ್ಲೀಷ್, ಹಿಂದೀ ಚಿತ್ರಗಳಿಗೊಂದು ಅಳತೆಗೋಲು, ಕನ್ನಡದಂಥಪ್ರಾದೇಶಿಕಚಿತ್ರಗಳಿಗೊಂದು ಅಳತೆಗೋಲು ಇರುವದನ್ನು ನಾನು ಒಪ್ಪುವದಿಲ್ಲ,



## ಎನ್. ಲಕ್ಷ್ಮೀನಾರಾಯಣ

(ನಿರ್ದೇಶಕ)

ನನ್ನ ತಂದೆ ವೈದ್ಯರಾದರೂ ಉತ್ತಮ ಚಿತ್ರ ಕಲಾವಿದರು. ತಾಯಿ ರಂಗಭೂಮಿಯಲ್ಲಿ ಪಳಗಿದವರು. ಅಕ್ಕನೊಬ್ಬ ಛಾಯಾಗ್ರಾಹಕ. ಹೀಗೆ ಬಾಲ್ಯದಲ್ಲೇ ನಾನು ಕಲಾತ್ಮಕ ವಾತಾವರಣದಲ್ಲಿ ಬೆಳೆದೆ. ಚಲನ ಚಿತ್ರ ತಂತ್ರದ ಕುರಿತು ನಾನಾ ಪುಸ್ತಕಗಳನ್ನು ಓದಿದೆ.

೧೯೫೩ರಲ್ಲಿ ನನ್ನ ಸೋದರಮಾವರೊಬ್ಬರು ಚಿತ್ರ ತಯಾರಿಸುವಾಗ ನಾನವರ ಸಹಾಯಕನಾದೆ. ನಂತರ ನಾಗೇಂದ್ರರಾಯರ ಸಹಾಯಕನಾದೆ. "ಕೆಡೋನು ಯಾವ ರಂಗದಲ್ಲಾದರೂ ಕೆಡ್ತಾನೆ. ಹೆಸರುಗಳಿಸುವವನು ಯಾವ ರಂಗದಲ್ಲಾದರೂ ಹೆಸರುಗಳಿಸ್ತಾನೆ" ಎಂಬುದು ನಾನು ಚಿತ್ರರಂಗ ಸೇರುವಾಗ ನನ್ನ ತಂದೆ ನೀಡಿದ ಆಶೀರ್ವಚನ.

ಮೊದಲಿನಿಂದಲೂ ವಿದೇಶೀ ಚಿತ್ರರಂಗದ ಬಗ್ಗೆ ಆಸ್ಥೆ ಇದ್ದ ನನಗೆ 'ಬ್ಲಿಸ್' ಕಿರು ಮೂಕಿಚಿತ್ರದ ಸ್ಕ್ರಿಪ್ಟ್ ನೋಡಿದ ಬ್ರಿಟಿಷ್ ಫಿಲಂ ಇನ್‌ಸ್ಟಿಟ್ಯೂಟಿನ ನಿರ್ದೇಶಕ ಜೇಮ್ಸ್‌ಕ್ವಿನ್–ಖುದ್ದಾಗಿ ತಾವೇ ಆಸ್ಥೆ ತೋರಿ, ಇನ್‌ಸ್ಟಿಟ್ಯೂಟಿನಿಂದ ಚಿತ್ರಕ್ಕಾಗಿ ೨೫೦ ಪೌಂಡು ಹಣ ದೊರೆಯುವಂತೆ ಮಾಡಿದರು. ಬ್ರಿಟಿಷ್ ಫಿಲಂ ಇನ್‌ಸ್ಟಿಟ್ಯೂಟಿನಿಂದ ಇಂಥ ಮನ್ನಣೆ ಪಡೆದ ಪ್ರಥಮ ಭಾರತೀಯ ಹಾಗೂ ಬ್ರಿಟಿಷೇತರ ವ್ಯಕ್ತಿ ನಾನು. ೧೯೬೯ರಲ್ಲಿ ಆ ಚಿತ್ರಕ್ಕೆ ಸಂಸ್ಥೆಯ ಪ್ರಶಸ್ತಿಪತ್ರವೂ, ಸ್ಯಾನ್ ಫ್ರಾನ್ಸಿಸ್ಕೋ ಚಿತ್ರೋತ್ಸವದಲ್ಲಿ ಪ್ರಶಸ್ತಿಯೂ ಸಿಕ್ಕಿತು.

೧೯೬೪ರಲ್ಲಿ ನಾನು ಮೊಟ್ಟಮೊದಲಬಾರಿ 'ನಾಂದಿ' ಚಿತ್ರವನ್ನು ದಿಗ್ದರ್ಶಿಸಿದೆ. ಬಹುಶಃ ಅದು ಭಾರತದಲ್ಲಿ ಕಿವುಡು–ಮೂಕರ ಬಗ್ಗೆ ತಯಾರಾದ ಪ್ರಥಮ ಚಿತ್ರ. ಅದು ಲಂಡನ್ನಿನಲ್ಲಿ ಪ್ರದರ್ಶಿತವಾದ ಕನ್ನಡದ ಪ್ರಥಮ ಚಿತ್ರ. ನಾನು ದಿಗ್ದರ್ಶಿಸಿದ 'ಮುಕ್ತಿ' 'ಉಯ್ಯಾಲೆ' ಚಿತ್ರಗಳು ವಿದೇಶಗಳಲ್ಲಿ ಪ್ರದರ್ಶಿತವಾಗಿವೆ ಹಾಗೂ ನಾನಾ ಪ್ರಶಸ್ತಿಗಳನ್ನು ಪಡೆದಿವೆ. ೧೯೭೧ರಲ್ಲಿ ನಾನು ಮೂರು ತಿಂಗಳು ಯೂರೋಪ ಯಾತ್ರೆ ಕೈಕೊಂಡು ಅಲ್ಲಿನ ಸಿನಿಮಾ ತಂತ್ರಗಳ ನಿಕಟ ಪರಿಚಯ ಮಾಡಿಕೊಂಡೆ.

ಸಿನಿಮಾವು ನನ್ನ ಮಾಧ್ಯಮ. ಅದರ ಮೂಲಕ ವಿಶ್ವದ ಜನತೆಯ ಪರಿಚಯ ಮಾಡಿಕೊಳ್ಳುವ ಆಸೆ ನನಗೆ. ಚಿತ್ರದಲ್ಲಿ ಅನಗತ್ಯವಾಗಿ ಮೇಕಪ್, ಹಾಡು ಯಾವುದೂ ಇರಬಾರದೆಂಬುದು ನನ್ನ ಅಭಿಪ್ರಾಯ. ತೆರೆಗೆ ಸಿದ್ಧವಾಗಿರುವ ನನ್ನ ಹೊಸ ಚಿತ್ರ "ಅಬಚೂರಿನ ಪೋಸ್ಟಾಫೀಸ್"ನಲ್ಲಿ ನಾನು ಈ ಮಾತನ್ನು ಪೂರ್ತಿ ಅನುಲಕ್ಷಿಸಿದ್ದೇನೆ. ಕೇವಲ ಹೊರಾಂಗಣ ಚಿತ್ರೀಕರಣದಲ್ಲಿ ಸಿದ್ಧವಾಗಿರುವ ಈ ಚಿತ್ರದಲ್ಲಿ ಯಾವ ಸನ್ನಿವೇಶವನ್ನೂ ಅನವಶ್ಯಕವಾಗಿ ಬೆಳಸಿಲ್ಲ. ಅಭಿನಯ ನಿರೂಪಣೆ, ಈ ಎಲ್ಲ ದೃಷ್ಟಿಯಿಂದಲೂ ಚಿತ್ರವು ನನಗೆ ಪೂರ್ತಿ ತೃಪ್ತಿ ನೀಡಿದೆ.

## ವಿಷ್ಣುವರ್ಧನ

(ನಾಯಕ ನಟ)

'ನಾಗರಹಾವು' ಚಿತ್ರದಲ್ಲಿ ನೀವು ನನ್ನನ್ನು ಸಿಟ್ಟಿದೆಯ ಗಂಡಾಗಿ ನೋಡಿದ್ದೀರಿ. ಆದರೆ ನನ್ನ ಕಣ್ಣುಗಳಲ್ಲಿ ಹೆಣ್ಣಿನ ಮಾದಕತೆ, ಮೋಹಕತೆಗಳೇ ಜಾಸ್ತಿ. ೧೯೬೯ರಲ್ಲಿ ಬೆಂಗಳೂರು ನ್ಯಾಷನಲ್ ಕಾಲೇಜಿನ ನಾಟಕ ಸ್ಪರ್ಧೆಯಲ್ಲಿ 'ಕತ್ತಲೆ ಬೆಳಕು' ನಾಟಕದಲ್ಲಿ ನನಗೆ ಅಭಿನಯದ ಪ್ರಶಸ್ತಿ ಸಿಕ್ಕಿದ್ದು ಕೂಡಾ ಸ್ತ್ರೀ ಪಾತ್ರಕ್ಕಾಗಿ.

ಷೇಕ್ಸಪಿಯರ್ 'ಒಥೆಲೊ' 'ಬ್ರಿಟಿಷ್ ಕ್ಯಾಂಡಲ್ ಸ್ಟಿಕ್" "ಮರ್ಚೆಂಟ್ ಆಫ್ ವೇನಿಸ್" ಚಿತ್ರಗಳಲ್ಲಿಯೂ

# ಜೀವನ ಒಂದು ಕಲೆ
# ಉಳಿತಾಯ ಅದರ ನೆಲೆ

ಉಳಿತಾಯಕ್ಕೆ ಅತ್ಯುತ್ತಮ ವೈಶ್ಯ ಬ್ಯಾಂಕ್.
ಏತಕ್ಕೆ ಗೊತ್ತೇ? ವೈಶ್ಯ ಬ್ಯಾಂಕ್ ತನ್ನ ವಿವಿಧ ಸೇವೆ
ಹಾಗೂ ಆಕರ್ಷಕ ಬಡ್ಡಿ ದರಗಳಿಂದ ನಿಮ್ಮ ಹಣವನ್ನು
ಕ್ಷೇಮವಾಗಿ ಬೆಳೆಸುತ್ತಲೇ ಇರುತ್ತದೆ.



ಉಳಿಸಲು, ಬೆಳೆಸಲು

## ದಿ ವೈಶ್ಯ ಬ್ಯಾಂಕ್
## ಲಿಮಿಟೆಡ್

ರಿಜಿ. ಆಫೀಸ್
ಅವೆನ್ಯೂ ರಸ್ತೆ, ಬೆಂಗಳೂರು-560002
ಛೇರ್ಮನ್: ಎಂ. ಆರ್. ಆರ್ಯ

ನಾನು ಸ್ತ್ರೀ ಪಾತ್ರವಹಿಸಿರುವೆ. 'ನಾಗರಹಾವು' ಚಿತ್ರೀಕರಣ ನಡೆವಾಗ ನಾಯಕಿ ಆರತಿಯವರು "ಹೆಣ್ ಪಾರ್ಟ್ ಮಾಡ್ತಾ ಇದ್ದವರು ಅಯ್ಯೋ, ಹೇಗ್ರಿ ಗಂಡಾದಿರಿ" ಎಂದು ತಮಾಷೆ ಮಾಡಿದ್ದರು.

ನಾನು ಅಭಿನಯಿಸಿದ ಮೊದಲ ಚಿತ್ರ "ವಂಶ ವೃಕ್ಷ". ಆ ಚಿತ್ರದಲ್ಲಿ ನಾನು ಪೃಥ್ವಿಯಾಗಿ ಅಭಿನಯಿಸಿರುವೆ. ಬಿ.ಎಸ್.ಸಿ. ಪದವೀಧರನಾದ ನಾನು ಪೂನಾ ಫಿಲಂ ಇನ್‌ಸ್ಟಿಟ್ಯೂಟ್ ಸೇರಿ ತರಬೇತು ಪಡೆವ ಆಸೆ ಇರಿಸಿಕೊಂಡಿದ್ದೆ. ಗಿರೀಶ್ ಕಾರ್ನಾಡ್ ಬಿ.ವಿ.ಕಾರಂತ್ ಅವರು ನನಗೆ ಇಲ್ಲಿಯೇ ಸಾಕಷ್ಟು ಪ್ರೋತ್ಸಾಹ ನೀಡಿದರು.

'ನಾಗರ ಹಾವು' ಚಿತ್ರದ ನಾಯಕನಾಗಿ ಶ್ರೀ ಪುಟ್ಟಣ್ಣ ಹಾಗೂ ನಿರ್ಮಾಪಕ ಶ್ರೀ ವೀರಾಸ್ವಾಮಿ ಅವರು ನನ್ನ ಆಯ್ಕೆಮಾಡಿದಾಗ ನನಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ಮೂರು ನೂರು ಜನ ಯುವಕರ ಪರೀಕ್ಷೆ ನಡೆಸಿ, ನನ್ನನ್ನವರು ಆಯ್ಕೆ ಮಾಡಿದ್ದರು.

'ನಾಗರಹಾವು' ಚಿತ್ರದ ರಾಮಾಚಾರಿ ಪಾತ್ರವನ್ನು ಅನೇಕರು ಮೆಚ್ಚಿಕೊಂಡಿದ್ದಾರೆ. ನಂತರ 'ಸೀತೆಯಲ್ಲ ಸಾವಿತ್ರಿ' 'ಮನೆ ಬೆಳಗಿದ ಸೊಸೆ' ಹಾಗೂ 'ಗಂಧದ ಗುಡಿ' ಚಿತ್ರಗಳು ತೆರೆಕಂಡಿವೆ.

ಈಗ ತಮಿಳು ಚಿತ್ರಗಳಿಂದಲೂ ಕರೆ ಬಂದಿದೆ. ಹಿಂದೀ ನಿರ್ಮಾಪಕರಿಂದಲೂ ಮಾತುಕತೆ ನಡೆದಿದೆ. ಕನ್ನಡ ನಟನಾಗಿ ಕನ್ನಡ ಚಿತ್ರಗಳಿಗೇ ನಾನು ಆದ



ಪ್ರಾಶಸ್ತ್ಯ ನೀಡುತ್ತೇನೆ. ಆದರೆ ಬೇರೆ ಭಾಷಾ ಚಿತ್ರಗಳಲ್ಲೂ ಅಭಿನಯಿಸಬೇಕು–ನಾನು ಹೋದದ್ದೆಲ್ಲ ರಾಮಾಚಾರಿಯಂತೆ–ನನ್ನ ಧ್ವಜವನ್ನು–ಕನ್ನಡದ ಧ್ವಜವನ್ನು ಸ್ಥಾಪಿಸಬೇಕು ಎಂಬುದು ನನ್ನ ಆಸೆ.



## ಭಾರತಿ

### (ನಾಯಕ ನಟಿ)

ನಾನು ಪಿ.ಯು.ಸಿ. ವಿದ್ಯಾರ್ಥಿನಿಯಾಗಿದ್ದಾಗ ನನಗೆ ಕಲ್ಯಾಣಕುಮಾರ್ ಅವರ ಚಿತ್ರದಲ್ಲಿ ಅಭಿನಯಿಸುವ ಕರೆ ಬಂದಿತು. ತೀರ ಆಕಸ್ಮಿಕವಾಗಿ. ಮೊದಲ ಚಿತ್ರದಲ್ಲೇ ಈಜು ಉಡುಪು ತೊಟ್ಟಾಗ ಕೆಲವರು ಹುಬ್ಬುಗಂಟಿಕ್ಕಿದ್ದೂ ಉಂಟು.

ಆದರೆ ಪಂತುಲು ಅವರ "ದುಡ್ಡೇ ದೊಡ್ಡಪ್ಪ" ಚಿತ್ರದಲ್ಲಿ ನನಗೆ ಅಭಿನಯದ ಹೆಚ್ಚು ಅವಕಾಶ ಸಿಕ್ಕಿತು. ನಾನು ಕರ್ನಾಟಕದಲ್ಲಿ ಹುಟ್ಟಿ ಬೆಳೆದ ಮರಾಠಿಗರ ಕುಟುಂಬಕ್ಕೆ ಸೇರಿದವಳು. ನನಗೆ ಶಾಸ್ತ್ರೀಯ ಸಂಗೀತ, ಭರತನಾಟ್ಯ, ಶಿಲ್ಪಕಲೆಯ ಬಗ್ಗೆ ಅಪಾರ ಅಕ್ಕರೆ. ಅವಕಾಶ ಸಿಕ್ಕರೆ ಓದು ಮುಂದುವರಿಸಿ ಪದವಿ ಪಡೆಯುವ ಹಂಬಲ ಈಗಲೂ ಬಿಟ್ಟಿಲ್ಲ. ನಾನು ಚಿತ್ರವೊಂದರಲ್ಲಿ ಹಿನ್ನಲೆಗಾಯಕಿಯಾಗಿ ಕೂಡ ಹಾಡಿರುವೆ.

ನಾನು ಐದೂವರೆ ಅಡಿ ಎತ್ತರವಿರುವೆ. ನನ್ನ ಮೈಕಟ್ಟು ಬದಲಾಗದಂತೆ ನನ್ನ ಆರೋಗ್ಯವನ್ನೂ ಶಾರೀರಿಕ ಸಮತೋಲನವನ್ನೂ ಕಾಯ್ದುಕೊಂಡಿರುವೆ. ತಮಿಳು, ತೆಲುಗು, ಒಂದೆರಡು ಹಿಂದೀ ಚಿತ್ರಗಳಲ್ಲಿಯೂ ಅಭಿನಯಿಸಿರುವ ನನಗೆ ಕನ್ನಡ ಚಿತ್ರಗಳೆ ಪಂಚಪ್ರಾಣ. ಇದೀಗ ನಾನು 'ಸಾವಿತ್ರಿ–ಗಾಯತ್ರಿ' ಎಂಬ ಚಿತ್ರದಲ್ಲಿ ದ್ವಿಪಾತ್ರಗಳಲ್ಲಿ ಅಭಿನಯಿಸುತ್ತಿರುವೆ.

ದಕ್ಷಿಣ ಭಾರತದಲ್ಲೆ ಅತ್ಯಧಿಕ ಕಾಲ ಪ್ರದರ್ಶಿತವಾದ 'ಬಂಗಾರದ ಮನುಷ್ಯ' ಚಿತ್ರದಲ್ಲಿ ನಾಯಕಿಯಾಗಿ ಅಭಿನಯಿಸಿದ ನಾನು ಸುದೈವಿ ಎಂದು ತಿಳಿದಿದ್ದೇನೆ. ಕನ್ನಡ ಚಿತ್ರರಂಗವು ನನಗೆ ತಾರಾಪಟ್ಟ ಕಟ್ಟಿತು, ನನ್ನನ್ನು ಬೆಳೆಸಿತು, ಕೀರ್ತಿಗಳಿಸಿಕೊಟ್ಟಿತು.

'ಬಂಗಾರದ ಮನುಷ್ಯ'ದಲ್ಲಿ ನಾನು ಹಾಡಿದ ಒಂದು ಹಾಡು–ಕನ್ನಡ ಚಿತ್ರರಂಗದ ಬಗೆಗಿನ ನನ್ನ ಹೃದಯ ಗೀತೆಯಂತಿದೆ "ಬಾಳ ಬಂಗಾರ ನೀನು, ಹಣೆಯ ಸಿಂಗಾರ ನೀನು, ನಿನ್ನ ಕೈಲಾಡೋ ಗೊಂಬೆ ನಾನಯ್ಯ, ಗೊಂಬೆ ನಾನಯ್ಯ"

## ತೂಗುದೀಪ ಶ್ರೀನಿವಾಸ

### ( ಖಳನಾಯಕ ನಟ )

ನಾನು ಚಿತ್ರರಂಗ ಸೇರಿದ್ದು, ರವಿ ನಿರ್ದೇಶನದ 'ತೂಗು ದೀಪ' ಚಿತ್ರದ ಮೂಲಕ. ಹೀಗಾಗಿ ತೂಗು ದೀಪ ಶ್ರೀನಿವಾಸ ಎಂದೇ ನನಗೆ ಹೆಸರು ಬಂದಿದೆ. ಮದ್ರಾಸಿನಲ್ಲಿ ಚಿತ್ರದ ಚಿತ್ರೀಕರಣವು ನಡೆದಾಗ ನಾನು ಬಹಳಷ್ಟು ಹೆದರಿದ್ದೆ. ಆಗ ರಾಜಕುಮಾರ್ ಅವರು ನನ್ನನ್ನು ಕರೆದು, ಬೆನ್ನು ತಟ್ಟಿ "ಮೈಸೂರಿನ ಆರ್ಟಿಸ್ಟ ನೀವು. ಮೈಸೂರಿನ ಹುಲಿ ಇದ್ದ ಹಾಗೆ ಇರಬೇಕು" ಎಂದು ಆತ್ಮೀಯತೆಯಿಂದ ಹೇಳಿ ನನಗೆ ಅಭಿನಯದ ಪಾಠ ಹೇಳಿಕೊಟ್ಟರು.

ಅವರ ಪ್ರೇಮಹಸ್ತದ ಸ್ಪರ್ಶದಿಂದಾಗಿ ನನ್ನಲ್ಲಿ ಅದೆಂಥ ಉತ್ಸಾಹವು ತುಂಬಿಕೊಂಡಿತೆಂದರೆ ಆ ಚಿತ್ರವನ್ನು ನೋಡಿದವರೆಲ್ಲ ನಾನೊಬ್ಬ ದುಷ್ಟವ್ಯಕ್ತಿ, ಎಂದು ಭಾವಿಸುವಷ್ಟು ಯಶಸ್ವಿಯಾಗಿ ನಾನು ಖಳನಟನಾಗಿ ಯಶಸ್ವೀ ಅಭಿನಯ ನೀಡಿದ್ದೆ.

ಆ ಚಿತ್ರ ನೋಡಿದ ನನ್ನ ಸಹೋದರಿಯಂತೂ "ಇನ್ನು ನೀನು ವಿಲನ್ ಪಾತ್ರ ವಹಿಸಬೇಡ" ಎಂದು ಆಗ್ರಹಪಡಿಸಿದಳು. ತನ್ನ ಕಣ್ಣೆದುರಿನಲ್ಲೇ ತನ್ನಣ್ಣನನ್ನು ಜನ ದುಷ್ಟ ಎಂದು ಭಾವಿಸುವುದು ಆಕೆಗೆ ಬೇಡವಾಗಿತ್ತು.

ಖಳನಟನ ತೊಂದರೆಯೆಂದರೆ ಒಬ್ಬರೂ ಅವನನ್ನು ಮೆಚ್ಚುವದಿಲ್ಲ. ನನ್ನನ್ನು ಕಂಡರೆ ಹೆಂಗಸರು ಮಕ್ಕಳಂತೂ, ಅಷ್ಟು ದೂರ ಓಡಿಹೋಗುತ್ತಾರೆ ಇದೆಲ್ಲ ಕಂಡು ಒಮ್ಮೊಮ್ಮೆ ನನಗೇ ಹೆದರಿಕೆಯಾಗುತ್ತದೆ. ತಕ್ಷಣ ಕನ್ನಡಿಯಲ್ಲಿ ಮುಖ ನೋಡಿಕೊಳ್ಳುತ್ತೇನೆ. ಸುಮಾರು ೪೦ ಚಿತ್ರಗಳಲ್ಲಿ ಖಳನಟನಾಗಿ



ಅಭಿನಯಿಸಿ, ನಿಜವಾಗಿಯೂ ನನ್ನ ಮುಖದಲ್ಲಿ ಕ್ರೌರ್ಯತುಂಬಿದೆಯೇ ಎಂದು ಕನ್ನಡಿಯಲ್ಲಿ ಪರೀಕ್ಷಿಸಿಕೊಳ್ಳುವಾಗ, ನನ್ನ ಪ್ರತಿಬಿಂಬವು ನನ್ನ ಹುಚ್ಚು ಭ್ರಮೆಯನ್ನು ಕಂಡು ನಕ್ಕಂತಾಗುತ್ತದೆ.



## 'ದೀಪಾವಳಿ' ಶುಭ ಸಂದರ್ಭದಲ್ಲಿ ನಮ್ಮ ಎಲ್ಲಾ ಹಿತೈಷಿಗಳಿಗೂ, ಗ್ರಾಹಕರಿಗೂ ಹಾರ್ದಿಕ ಶುಭಾಶಯಗಳು

★ ಅತಿಥಿಗಳನ್ನು ಮತ್ತು ಆಹ್ವಾನಿತರನ್ನು ಸತ್ಕರಿಸಿ ಸಂತೋಷಪಡಿಸುವುದರಲ್ಲಿ ನಮ್ಮ ಭಾರತಕ್ಕೆ ಚಾರಿತ್ರಿಕ ಹಿನ್ನೆಲೆ ಇದೆ.

★ ಮುನ್ಸೂಚನೆ ಇಲ್ಲದೆ ಆಕಸ್ಮಿಕವಾಗಿ ಆಗಮಿಸುವ ಅತಿಥಿಗಳನ್ನು ಸ್ವಾಗತಿಸುವ ಸಂದರ್ಭ ಒದಗಿ ಬರುತ್ತದೆ

★ ಅನೇಕ ವೇಳೆ ಸಮಯದ ಅಭಾವದಿಂದ ತೊಂದರೆ ಹಾಗೂ ಅಧಿಕ ಹಣ ಮತ್ತು ಕಾಲ ವ್ಯಯವಾಗಬಹುದು.

## ಆದರೆ ಇದಕ್ಕಾಗಿ ನೀವು ಯೋಚಿಸಬೇಕಾಗಿಲ್ಲ!

ನಿಮಗಾಗಿ ಮತ್ತು ನಿಮ್ಮ ಅತಿಥಿಗಳಿಗಾಗಿ ತರಹೆವಾರಿ ಸಿಹಿ ಮತ್ತು ಖಾರ ತಿಂಡಿಗಳನ್ನು ಬಿಸಿ ಬಿಸಿಯಾಗಿ ತಯಾರಿಸಿಟ್ಟಿರುತ್ತೇವೆ.

ನಿಮ್ಮ ಆಗಮನವನ್ನು ಆದರದಿಂದ ಸ್ವಾಗತಿಸಿ ಸೇವೆ ಸಲ್ಲಿಸಲು ಶಿವಮೊಗ್ಗದಲ್ಲಿ ಸದಾ ಸಿದ್ಧವಾಗಿರುವ ಏಕೈಕ ಸಂಸ್ಥೆ.

# ಶ್ರೀ ವೆಂಕಟೇಶ ಸ್ವೀಟ್ ಹೌಸ್

## ನರಸಿಂಹ ಭವನ

ಬಿ. ಹೆಚ್. ರಸ್ತೆ, :: ಶಿವಮೊಗ್ಗ.

ಸಾರ್ವಜನಿಕರ ಸಹಕಾರದಿಂದ 10 ವರ್ಷಗಳ ನಿರಂತರ ಸೇವೆ ಸಲ್ಲಿಸಿ ಈಗ 11 ನೇ ವರ್ಷದಲ್ಲಿ ಪದಾರ್ಪಣ ಮಾಡಿದ್ದೇವೆ.

ವಿ. ಸೂ :

ನಿಮ ಪ್ರವಾಸಗಳಿಗೂ ಮತ್ತು ವಿಹಾರಗಳಿಗೂ ಅಗತ್ಯವಾದ ಹೊಸ ಅಂಬಾಸಡರ್ ಲಕ್ಸುರಿ ಟ್ಯಾಕ್ಸಿ ಬಾಡಿಗೆ ದೊರೆಯುತ್ತದೆ.

ಫೋನ್
ಹಾಲ್ : 2643
ಮನೆ : 2143
ವರ್ಕ್ಸ್ : 2932

ಮಾಲೀಕರು : ಯು. ವಿ. ಮಂಜುನಾಥ ಐತಾಳ

## ಕಲಾ

(ಸಹಾಯಕ ನಟಿ)

ಬೆಂಗಳೂರಿನಲ್ಲಿ ಹುಟ್ಟಿ ಬೆಳೆದ ನನ್ನ ಮೊದಲ ಹೆಸರು ಚಂದ್ರಕಲಾ. ನನ್ನ ತಂದೆ ರುದ್ರಪ್ಪನವರು ವರ್ತಕರಾದರೂ, ಚಿತ್ರರಂಗ ಸೇರಲು ಬಯಸಿದಾಗ ಅಡ್ಡ ಬರಲಿಲ್ಲ.

ಎಂ.ವಿ. ರಾಜಮ್ಮ-ಪಂತುಲು ಅವರ "ಮಕ್ಕಳ ರಾಜ್ಯ" ಚಿತ್ರದಲ್ಲಿ ಅಭಿನಯಿಸಿದಾಗ ನಾನಿನ್ನೂ ಎಂಟನೆಯ ವರ್ಗದ ವಿದ್ಯಾರ್ಥಿನಿ. ಅನಂತರ 'ಭಕ್ತ ಕಬೀರ್' 'ಶಿವರಾತ್ರಿ ಮಹಾತ್ಮೆ' 'ಸಂತ ತುಕಾರಾಂ' ಮೊದಲಾದ ಚಿತ್ರಗಳಲ್ಲದೆ ತೆಲುಗು, ತಮಿಳು ಚಿತ್ರಗಳಲ್ಲಿಯೂ ಬಾಲನಟಿಯಾಗಿ ಅಭಿನಯಿಸಿದೆ.

ಅನಂತರ ನೃತ್ಯವಿದ್ವಾನ್ ವಳವೂರು ರಾಮಯ್ಯ ಪಿಳ್ಳೆಯವರ ಬಳಿ ಭರತನಾಟ್ಯ ಮತ್ತು ಓರಿಯೆಂಟಲ್ ನೃತ್ಯಗಳನ್ನು ಅಭ್ಯಸಿಸಿದೆ. ಆಗಲೇ ನೃತ್ಯತಾರೆ ಪದ್ಮಿನಿಯವರ ಪರಿಚಯವಾಗಿ ಅವರ ತಂಡದಲ್ಲಿ ನರ್ತಕಿಯಾಗಿ ನಾನಾ ಕಾರ್ಯಕ್ರಮಗಳಲ್ಲಿ ಭಾಗವಹಿಸಿದೆ.

'ಶರಪಂಜರ' 'ಪರೋಪಕಾರಿ' 'ಸಿಪಾಯಿ ರಾಮು' 'ಕೃಷ್ಣದೇವರಾಯ' 'ಬಂಗಾರದ ಮನುಷ್ಯ' 'ನಂದಗೋಕುಲ' ಹೀಗೆ ಎರಡು ಡಜನ್ ಚಿತ್ರಗಳಲ್ಲಿ



ಅಭಿನಯಿಸಿರುವ ನನಗೆ ಭಾವನಾತ್ಮಕ ಪಾತ್ರಗಳೆಂದರೆ ಬಹಳ ಮೆಚ್ಚು. ಸಾಮಾಜಿಕ, ಪತ್ತೇದಾರಿ ಕಾದಂಬರಿಗಳನ್ನು ಬಿಡುವಿನಕಾಲದಲ್ಲಿ ಓದುತ್ತೇನೆ. ಕೈಲಿ ಟ್ರಾನ್ಸಿಸ್ಟರ್ ಇದ್ದರೆ ಈ ಲೋಕವನ್ನೇ ಮರೆಯುತ್ತೇನೆ.

## ಉಡುಪಿ ಬಿ. ಜಯರಾಂ

(ನೃತ್ಯ ನಿರ್ದೇಶಕ)

ನಾನು ಉಡುಪಿ ತಾಲ್ಲೂಕಿನ ಬಾಳೆಕುದ್ರುನಲ್ಲಿ



ಹುಟ್ಟಿ ಬೆಳೆದವ. ಬಾಲ್ಯದಿಂದಲೇ ಹಳ್ಳಿಯ 'ದಾಸರ ಕೀರ್ತನೆ'ಗಳ ಉರು ಹೊಡೆದು, ಕಂಠಶ್ರೀಯನ್ನು ಬೆಳೆಸಿಕೊಂಡಿದ್ದೆ. ಆ ಕಾಲದಲ್ಲಿ ನಾಯಕ ನಟರಾದವರು ಸ್ವತಃ ಚಿತ್ರಗಳಲ್ಲಿ ಹಾಡಬೇಕಾಗಿದ್ದರಿಂದ, ನಾನು ಸಂಗೀತವನ್ನು ಕಲಿತು ನಾಯಕ ನಟನಾಗ ಬಯಸಿದ್ದೆ.

'ಭಕ್ತಕಬೀರ್' ಚಿತ್ರದಲ್ಲಿ ಪುಟ್ಟ ಪಾತ್ರವೊಂದು ದೊರೆತು. ಅನಂತರ ಅದು ಕೈಬಿಟ್ಟಾಗ ಅದು ನನ್ನ ಜೀವನಪಥವನ್ನೇ ಬದಲಿಸಿತು. ನಾಯಕನಾಗ ಬಯಸಿದವನು "ಬಿಲ್ಹಣ" (೧೯೪೭) ಚಿತ್ರದ ಹಿನ್ನೆಲೆ ಗಾಯಕನಾದೆ. ನಂತರ ಜೆಮಿನಿ ಸಂಸ್ಥೆಯನ್ನು ಸೇರಿ "ಚಂದ್ರಲೇಖಾ" (೧೯೪೮) ಚಿತ್ರದಲ್ಲಿ ಮೊದಲ ಬಾರಿ ನೃತ್ಯ ಪ್ರದರ್ಶನ ನೀಡಿದೆ. ಅನಂತರ ಚೆನ್ನಾಗಿ ನೃತ್ಯಾಭ್ಯಾಸಮಾಡಿ ಸಹಾಯಕ ನೃತ್ಯ ದಿಗ್ದರ್ಶಕನಾದೆ. ಆ ಸಮಯ ನಾನು ದಿನಕ್ಕೆ ಮೂರು ಗಂಟೆ ಮಾತ್ರ ನೃತ್ಯ ಮಾಡುತ್ತಿದ್ದೆ.

೧೯೫೫ರಲ್ಲಿ ಸ್ವತಂತ್ರವಾಗಿ "ಭಾಗ್ಯೋದಯ" ಚಿತ್ರದ ನೃತ್ಯದಿಗ್ದರ್ಶನ ನೀಡಿದೆ. ಕೊಂಕಣಿ, ತುಳು, ಸಿಂಹಳಿ ಚಿತ್ರಗಳಲ್ಲದೆ ಹಿಂದಿಯ "ದಿಲ್ ತೇರಾ ದೀವಾನಾ" "ಕಂಗನ್" ಹಾಗೂ "ಸ್ಕೂಲ್ ಮಾಸ್ಟರ್" ಚಿತ್ರಗಳಿಗೂ ನಾನು ನೃತ್ಯ ದಿಗ್ದರ್ಶಕನಾಗಿದ್ದೆ. ಹೀಗಾಗಿ ಈವರೆಗೆ ನಾನು ಒಟ್ಟು ನಾಲ್ಕು ನೂರು ಚಿತ್ರಗಳ ನೃತ್ಯ ದಿಗ್ದರ್ಶಕನಾಗಿ ಕೆಲಸ ಮಾಡಿರುವೆ.

ಆದರೆ ನನಗೆ ಸವಾಲೊಡ್ಡುವಂಥ ಕಠಿಣ ಕೆಲಸವು ನನಗೆ ಯಾವ ಚಿತ್ರದಲ್ಲೂ ದೊರೆತಿಲ್ಲ. ಚಿತ್ರಗಳಲ್ಲಿ ಜನರ ಅಭಿರುಚಿಗೆ ತಕ್ಕಂತೆ ನಾವು ನೃತ್ಯವನ್ನು ಅಳವಡಿಸುತ್ತೇವೆ.

'ಬಂಗಾರದ ಮನುಷ್ಯ'ದ ಸುಗ್ಗಿಯ ಚಿತ್ರವನ್ನು ಜನ ಮೆಚ್ಚಿಕೊಂಡ ನಂತರ ನನ್ನಲ್ಲಿ ಇದೀಗ ಆತ್ಮವಿಶ್ವಾಸವು ಕುದುರುತ್ತಿದೆ. ಮುಂದೆ ಸಾಧ್ಯವಾದರೆ ಶಾಂತಾರಾಂ ಅವರ "ಝನಕ್ ಝನಕ್ ಪಾಯಲ್ ಬಾಜೆ" ದಂಥ ನೃತ್ಯಪ್ರಧಾನ ಚಿತ್ರವನ್ನು ತಯಾರಿಸಬೇಕು. ಹಾಗೂ ನಿವೃತ್ತಿಯ ನಂತರ ಬೆಂಗಳೂರಿ ನೃತ್ಯಶಾಲೆಯೊಂದನ್ನು ಆರಂಭಿಸಬೇಕು' ಎಂಬುದು ನನ್ನ ಮಹತ್ವಾಕಾಂಕ್ಷೆ

## ಬಿ. ಕೆ. ಸುಮಿತ್ರಾ

(ಹಿನ್ನೆಲೆ ಗಾಯಕಿ)

ನಾನು ಬಿ.ಎಸ್.ಸಿ. ಪದವೀಧರೆ. ಆದರೆ ಮೊದಲಿನಿಂದಲೂ ನನಗೆ ಸಂಗೀತದ ಹುಚ್ಚು. ಯಕ್ಷಗಾನ, ನಾಟ್ಯ ಎಲ್ಲದರಲ್ಲೂ ಆಸ್ಥೆ. ಒಮ್ಮೆ ಮದ್ರಾಸಿಗೆ ಹೋದಾಗ ನನ್ನ ಗುರು ಶ್ರೀ ಎಂ. ಪ್ರಭಾಕರ್ (ಪಂಢರಿಬಾಯಿ ಅವರ ಸಹೋದರ) ಅವರ ಜೊತೆ ವಾಹಿನಿ ಸ್ಟುಡಿಯೋಕ್ಕೆ ಹೋದಾಗ ಆಕಸ್ಮಿಕವಾಗಿ ನನ್ನ ಕಂಠ ಪರೀಕ್ಷೆ ನಡೆಯಿತು.

ಸಂಗೀತ ನಿರ್ದೇಶಕ ಜಿ.ಕೆ. ವೆಂಕಟೇಶ್ ಅವರು "ಕವಲೆರಡು ಕುಲ ಒಂದು" ಚಿತ್ರದಲ್ಲಿ ಒಂದು ಹಾಡು ಹೇಳುವ ಅವಕಾಶವನ್ನು ಕಲ್ಪಿಸಿಕೊಟ್ಟರು.

ಈವರೆಗೆ ಸುಮಾರು ೫೦ ಚಿತ್ರಗಳಿಗಾಗಿ ನಾನು ಹಾಡಿರುವೆ. ಎರಡುವರ್ಷ ಹಿಂದೆ ನನ್ನ ವಿವಾಹವಾಯಿತು. ರಿಜರ್ವ್‌ಬ್ಯಾಂಕಿನಲ್ಲಿರುವ ಪತಿ ಶ್ರೀ ಎಂ.



ಎಲ್. ಸುಧಾಕರ್ ಕೂಡ ಒಳ್ಳೆಯ ಗಾಯಕ. ಪತಿ-ಪತ್ನಿ ಇಬ್ಬರೂ ಕನ್ನಡ ಚಿತ್ರರಂಗದಲ್ಲಿ [illegible]ಾಗಿ ಉತ್ತಮ ಹೆಸರು ಗಳಿಸಬೇಕು ಎಂಬುದು ನನ್ನ ಮಹದಾಸೆ.



 ದೀಪಾವಳಿಯು ಸರ್ವರಿಗೂ ಸುಖ-ಸಂಪದಭಿವೃದ್ಧಿಯನ್ನೀಯಲಿ! 

# ದಿ ವಿಜಾಪೂರ ಕೋ-ಆಪರೇಟಿವ್ಹ ಸ್ಪಿನಿಂಗ್ ಮಿಲ್ ಲಿಮಿಟೆಡ್, ವಿಜಾಪೂರ

| | |
|---|---|
| ಅಧಿಕೃತ ಶೇರು ಬಂಡವಲು | ರೂ. ೫೦,೦೦,೦೦೦ |
| ಸಂದಾಯವಾದ ಶೇರು ಬಂಡವಲು | ರೂ. ೩೧,೦೫,೦೦೦ |
| ಒಟ್ಟು ಹೂಡಿಕೆಗಳು | ರೂ. ೮೭,೦೦,೦೦೦ |
| ಪ್ರಾಜೆಕ್ಟಿನ ಎಸ್ಟಿಮೇಟ ವೆಚ್ಚ | ರೂ. ೯೬,೦೦,೦೦೦ |

| | |
|---|---|
| ಕೂಡ್ರಿಸಿದ ಒಟ್ಟು ಮಗ್ಗಗಳ ಸಂಖ್ಯೆ | ೧೨೩೨೦ |
| ಪ್ರಾರಂಭಿಸಲಾದ ಮಗ್ಗಗಳು | ೯೨೪೦ |

ಉತ್ಪಾದಿಸುವ ನೂಲಿನ ಕೌಂಟ ೩೪s ಕೋನ್ಸ & ೪೦s ಹ್ಯಾಂಕ್ಸ

## ನಿತ್ಯದ ಉತ್ಪಾದನೆ

| | |
|---|---|
| ೩೪s ಕೋನ್ಸ | ೧೧೦೦ ಕೆಜಿ. |
| ೪೦s ಹ್ಯಾಂಕ್ಸ | ೪೦೦ ಕೆಜಿ. |
| ಬೋಧ ಚಿನ್ಹ | **"GOLGUMJ"** |

ನಮ್ಮ ಮಿಲ್ಲಿನಲ್ಲಿ ಉತ್ಪಾದಿಸಲ್ಪಡುವ ನೂಲಿನ ಪ್ರಖ್ಯಾತಿಯು
ವಿಜಾಪುರದ ಗೋಲಗುಮ್ಮಟದಷ್ಟು ಭವ್ಯವಾಗಿದೆ.

**ಡಿ. ಸೇತುಮಾಧವನ್ ರಾವ್**
ಸೆಕ್ರೆಟರಿ

**ಐ. ಸಿ. ನಾಗಠಾಣ**
ಚೇರಮನ್

# ಹಿಂದಿ ಮರಾಠಿ ಚಿತ್ರಗಳ ಕನ್ನಡ ತಾರೆಯರು

(ಮುಂಬಯಿ ಪ್ರತಿನಿಧಿಯಿಂದ)

## ವೈಜಯಂತಿಮಾಲಾ

ಹಿಂದಿ ಶ್ರೇಷ್ಠ ನಟಿ ನೃತ್ಯತಾರೆ ಈಗ ಮರಾಠಿ ಚಿತ್ರಗಳ ನಿರ್ಮಾಪಕಿ, ನಟನೆಯಿಂದ ನಿವೃತ್ತಿ.

೧. ಮುಂಬಯಿಯಲ್ಲಿ ದೊರೆಯುವಷ್ಟು ಅವಕಾಶಗಳು ಕನ್ನಡನಾಡಿನಲ್ಲಿ ದೊರೆಯುತ್ತಿಲ್ಲವೆಂದೇ ಇಲ್ಲಿಗೆ ಬಂದೆ. ಇಲ್ಲಿಯ ಸಾಧನೆಯಿಂದ ನನಗೆ ತುಂಬ ಸಮಾಧಾನ ದೊರೆತಿದೆ.

೨. ಈ ಜಗತ್ತು ಎಷ್ಟು ಒಳ್ಳೆಯದು–ಕೆಟ್ಟವುಗಳಿಂದ ತುಂಬಿದೆಯೋ ಚಿತ್ರರಂಗವೂ ಅದೇ ರೀತಿಯಾಗಿದೆ.

೩. ಸಾಹಸ ಮಾಡಲು ಪ್ರಯತ್ನಿಸು.

೪. ಕೆಲವು ಒಳ್ಳೆಯ ಕನ್ನಡ ಚಿತ್ರಗಳನ್ನು ನೋಡಿದ್ದೇನೆ. ಅವಕಾಶ ಕೊಟ್ಟಿದ್ದರೆ ಕನ್ನಡ ಚಿತ್ರಗಳಲ್ಲಿ ನಟಿಸಲು ಸಿದ್ಧ. ಆದರೆ ಈಗ ನೃತ್ಯಕ್ಕೇ ನಾನು ಪ್ರಾಧಾನ್ಯ ಕೊಡುತ್ತೇನೆ.

೫. ಓಹೋ ಖಂಡಿತವಾಗಿ.



ವೈಜಯಂತಿ ಮಾಲಾ

ಮುಂಬಯಿಯ ಹಿಂದಿ ಮತ್ತು ಮರಾಠಿ ಚಿತ್ರಗಳಲ್ಲಿ ಅನೇಕ ಕನ್ನಡಿಗರು ನಟಿಸುತ್ತಾರೆ; ಇತರ ಕೆಲಸಗಳನ್ನು ಮಾಡುವ ತಜ್ಞರಿದ್ದಾರೆ. ಚಿತ್ರರಂಗದ ಬಗ್ಗೆ ಅವರ ಸ್ವಾರಸ್ಯಕರ ಅನುಭವಗಳೇನು? 'ಕರ್ಮವೀರ' ದೀಪಾವಳಿ ಸಂಚಿಕೆಗಾಗಿ ಮಾಡಿದ ಈ ವಿಶೇಷ ಸಂದರ್ಶನ-ಸಮೀಕ್ಷೆ ಚಿತ್ರರಂಗದ ಬಗ್ಗೆ ಸರಿಯಾದ ತಿಳುವಳಿಕೆ ಮೂಡಿಸಲು ಸಹಾಯಕವಾದೀತು.

### ಸಂದರ್ಶನ–ಸಮೀಕ್ಷೆಯ ಪ್ರಶ್ನೆಗಳು

೧) ಕನ್ನಡನಾಡನ್ನು ಬಿಟ್ಟು ಮುಂಬಯಿಗೆ ಬಂದು ಚಿತ್ರರಂಗದಲ್ಲಿ ಮಾಡಿದ ನಿಮ್ಮ ಕೆಲಸದ ಬಗ್ಗೆ ನಿಮಗೆ ಸಾರ್ಥಕ ಭಾವ ಬಂದಿದೆಯೇ?

೨) ಅನೇಕರು ತಿಳಿದಿರುವಷ್ಟು ಚಿತ್ರರಂಗ ಕೆಟ್ಟದೆಯೇ? ಅಥವಾ ಕೆಲವರು ಭಾವಿಸಿರುವಷ್ಟು ಒಳ್ಳೆಯದಿದೆಯೆ?

೩) ಚಿತ್ರಗಳಲ್ಲಿ ಕೆಲಸಮಾಡಿ ನೀವು ಜೀವನದಲ್ಲಿ ಕಲಿತ ದೊಡ್ಡ ಪಾಠ ಯಾವುದು?

೪) ಕನ್ನಡ ಚಿತ್ರಗಳ ಬಗೆ ನಿಮ್ಮ ಪ್ರತಿಕ್ರಿಯೆ? ನೀವೇಕೆ ಕನ್ನಡ ಚಿತ್ರಗಳಲ್ಲಿ ಭಾಗವಹಿಸುವದಿಲ್ಲ?

೫) ಭಾರತೀಯ ಚಿತ್ರಗಳ ಬಗ್ಗೆ ನೀವು ಆಶಾವಾದಿಯಾಗಿದ್ದೀರಾ?



ಲೀನಾ ...

## ಲೀನಾ ಚಂದಾವರಕರ

ಇತ್ತೀಚಿನ ಕನ್ನಡಿತಿಯರಲ್ಲಿ ಬಹಳ ಎತ್ತರಕ್ಕೆ ಏರಿದ ಹಿಂದಿ ಚಿತ್ರ ತಾರೆ.

೧. ನಾನು ಮಾಡಬೇಕಾದ ಕೆಲಸ ಇನ್ನೂ ಬಹಳ ಇದೆ.

೨. ಅವರವರ ಮನಸ್ಸಿನ ಮಟ್ಟಕ್ಕೆ ಸರಿಯಾಗಿ ತಮ್ಮ ತಮ್ಮ ದೃಷ್ಟಿಕೋನಗಳಿಂದ ಮಾತನಾಡುತ್ತಾರೆ ಒಳ್ಳೆಯದು, ಕೆಟ್ಟುದು, ಎಲ್ಲ ಕಡೆ ಸಮ್ಮಿಶ್ರವಾಗಿದೆ

೩. ಎಲ್ಲರಿಗೂ ಎರಡು ಮುಖಗಳಿವೆ ಎಂಬ ಸತ್ಯ!

೪. ಕನ್ನಡ ಚಿತ್ರಗಳು ಚೆನ್ನಾಗಿವೆ. ಕೆಲವನ್ನು ನೋಡಿ ನಾನು ಹಿಂದಿಗೆ ತರುವಂತೆ ನಿರ್ಮಾಪಕರಿಗೆ ಸಲಹೆಯಿತ್ತಿದ್ದೇನೆ ಕೂಡ. ಕನ್ನಡದಲ್ಲಿ ಒಳ್ಳೆಯ ಪಾತ್ರ ಕೊಟ್ಟರೆ ನಾನು ಪಾತ್ರ ವಹಿಸುವ ಆಸೆಯಿದೆ.

೫. ಜಗತ್ತಿನಲ್ಲೇ ಭಾರತೀಯ ಚಿತ್ರಗಳು ಶ್ರೇಷ್ಠ ಎನ್ನುವ ದಿನ ಬರುವುದು ದೂರವಿಲ್ಲ.

## ಜ್ಯೋತಿಕಾ ರಾವ್

ಕನ್ನಡ ನಾಟಕಗಳ ನಟಿ–ಹಿಂದಿಯ ಉದಯೋನ್ಮುಖ ತಾರೆ.

೧. ಇದೊಂದೇ ಕೆಲಸ ನನಗೆ ಜೀವನದಲ್ಲಿ ಆತ್ಮಾನಂದ ಕೊಡುತ್ತದೆ ಎಂಬುದು ನನ್ನ ವಿಶ್ವಾಸ.

೨. ನನಗೂ ಚಿತ್ರರಂಗದಲ್ಲಿ ಕೆಟ್ಟ ಅನುಭವವಾಗಿದೆ. ಆದರೆ ಅದಕ್ಕಾಗಿ ಇಡೀ ಚಿತ್ರರಂಗವನ್ನು ನಾನು ದೂರುತ್ತಿಲ್ಲ.

೩. ಒಳ್ಳೆಯ ಅವಕಾಶಗಳನ್ನು ಕೂಡಲೇ ತೆಗೆದುಕೊಳ್ಳಬೇಕು.

೪. ಕನ್ನಡ ನಾಟಕಗಳಲ್ಲಿ ಈಗಲೂ ನಟಿಸುತ್ತಿದ್ದೇನೆ. ಕನ್ನಡ ಚಿತ್ರಗಳಲ್ಲಿ ಛಾನ್ಸು ಕೊಟ್ಟರೆ ಈಗ ಸಿದ್ಧ.

೫. ಹೌದು.



ಲಿನೆಟ್ಟ ವಿಲಿಯಮ್ಸ್.



ಜ್ಯೋತಿಕಾ ರಾವ್

## ಲಿನೆಟ್ಟೆ ವಿಲಿಯಮ್ಸ್

ಮಿಸ್ ಇಂಡಿಯಾ ಆಗಿ ಈಗ ಹಿಂದಿ ಚಿತ್ರಗಳಲ್ಲಿ ನಟಿಸಲು ಸಿದ್ಧಳಾಗಿದ್ದಾಳೆ.

೧. ಒಳ್ಳೆಯದು ಎಲ್ಲಿ ಆಗುತ್ತದೆಯೋ ಅದೇ ನಮ್ಮ ನಾಡು.

೨. ಚಿತ್ರರಂಗ ಚೆನ್ನಾಗಿದೆಯೆಂದೇ ನಾನು ಇಲ್ಲಿಗೆ ಬಂದಿದ್ದೇನೆ.

೩. ಈ ಪ್ರದರ್ಶನಾ ಜಗತ್ತಿನಲ್ಲಿ ಎಲ್ಲರೂ ನಟರೆ.

೪. ಚಿತ್ರಗಳಲ್ಲಿ ನಟಿಸುವವರಿಗೆ ಭಾಷಾ ಭೇದವಿರಬಾರದು, ನನಗಿಲ್ಲ.

೫. ಅದನ್ನು ಹೇಳುವಷ್ಟು ನಾನು ದೊಡ್ಡವಳಾಗಿಲ್ಲ.



ವಿ. ಕೆ. ಮೂರ್ತಿ



ಕಾನನ ಕೌಶಲ್

## ಇಂದುಮತಿ ಪೈಂಗಣಕರ್
### (ಕಾನನ್ ಕೌಶಲ್)

ಹಿಂದಿ–ಮರಾಠಿ–ಗುಜರಾತಿ ಚಿತ್ರಗಳ ಹೊಸ ಕಾಂತ ತಾರೆ.

೧. ನನ್ನ ಕೆಲಸ ತುಂಬ ಆತ್ಮಸಂತೋಷ ಕೊಟ್ಟಿದೆ.

೨. ಚಿತ್ರರಂಗದಲ್ಲಿ ಬಹಳ ಕೆಟ್ಟವರೂ ಇರಬಹುದು; ಒಳ್ಳೆಯವರು ಮಾತ್ರ ಅನೇಕರಿರುವುದು ನನ್ನ ಅನುಭವಕ್ಕೆ ಬಂದಿದೆ.

೩. ಭಾಷೆಗಳು ಒಂದು ಸೌಲಭ್ಯ; ತಡೆಯಲ್ಲ. ಭಾಷಾಂಧರೂ ಇದರಿಂದ ಕಲಿಯುವುದು ಬಹಳವಿದೆ

೪. 'ವರಾಡಿ–ವಾಜಂತ್ರಿ' ಮರಾಠಿ–ಕನ್ನಡ ಚಿತ್ರದಲ್ಲಿ ನಾನು ಕನ್ನಡ ಹುಡುಗಿಯಾಗಿ ನಟಿಸಿದ್ದೇನೆ. ಈಗಲೂ ಕನ್ನಡ ಚಿತ್ರಗಳಲ್ಲಿ ನಟಿಸುವ ಆಸೆ ತುಂಬ ಇದೆ,

೫. ನಾವು ಯಾರಿಗೂ ಕಡಿಮೆಯಿಲ್ಲ,

## ವಿ. ಕೆ. ಮೂರ್ತಿ

ಭಾರತದ ಮೊತ್ತಮೊದಲ ಸಿನೆಮಾಸ್ಕೋಪ್ ಚಿತ್ರ ಛಾಯಾಗ್ರಾಹಕರು. ಒಳ್ಳೆಯ ಕನ್ನಡ ನಾಟಕ–ಲೇಖಕ–ದಿಗ್ದರ್ಶಕ

೧. ಸಾಧನೆ–ಪ್ರಯೋಗ ಮಾಡುತ್ತಿರುವಾಗ ದೊರೆಯುವ ಸಂತೋಷದ ಅನುಭವ ನನಗಾಗಿದೆ.

೨. ಇವೆರಡೂ ಇಲ್ಲದ ಭಾಗ ಜಗತ್ತಿನಲ್ಲಿ ಎಲ್ಲಾದರೂ ಇದೆಯೆ?

೩. "ನಿಯತಂ ಕುರು ಕರ್ಮ"

೪. ಕೆಲವು ಚಿತ್ರಗಳು ಚೆನ್ನಾಗಿವೆ. ಕನ್ನಡಕ್ಕಾಗಿ ನಾನು ದುಡಿಯಲು ಸಿದ್ಧ.

೫. ನಾವು ಪ್ರಗತಿಪಥದಲ್ಲಿದ್ದೇವೆ.



## ಮುದ್ದು ಶೆಟ್ಟಿ

ಹೆಸರಾಂತ ಮಲ್ಲಯುದ್ಧ ದಿಗ್ದರ್ಶಕ. ಈಗ ಸ್ವತಃ ಹಿಂದಿ, ತುಳು ಚಿತ್ರ ನಿರ್ಮಾಪಕ.

೧. ನನ್ನ ಕೆಲಸದಲ್ಲಿ ಇನ್ನೂ ಪ್ರಗತಿ ತೋರಿಸಬೇಕೆಂಬ ಭಾವವೇ ನನಗೆ ಬರುತ್ತದೆ.

೨. ಕಳೆದ ಎರಡು ದಶಕಗಳಿಂದ ನನ್ನ ಜೀವನ ರೂಪಿಸಿದ ಚಿತ್ರರಂಗ ನನಗೆ ಸೌಭಾಗ್ಯ ನಿಧಿ.

೩. ಪ್ರವಾಹದ ವಿರುದ್ಧ ಈಜಬೇಕು.

೪. ಕನ್ನಡ ಚಿತ್ರಗಳು ಇನ್ನೂ ಒಳ್ಳೆಯದಾಗಬೇಕೆಂಬುದು ನನ್ನ ಪ್ರಾಮಾಣಿಕ ಆಸೆ. ಅದರ ಸೇವೆಗೆ ನಾನು ಸದಾ ಸಿದ್ಧ.

೫. ನಾವು ಕನಿಷ್ಠರು ಎಂಬ ದಾಸ್ಯಭಾವ ಹೋಗಬೇಕು.



## ಕೆ. ಎ. ನಾರಾಯಣ್

ಹಿಂದಿಯ ಅತ್ಯಂತ ಯಶಸ್ವಿ ಚಿತ್ರಕಥೆ, ಸಂಭಾಷಣಾ ಲೇಖಕರು. ಚಿತ್ರ ನಿರ್ಮಾಣವನ್ನು ಆರಂಭಿಸಿದ್ದಾರೆ.

೧. ಇಲ್ಲಿಗೆ ಎಲ್ಲರೂ ಬರುವುದು ಅವಕಾಶ ಹುಡುಕಿಕೊಂಡು. ಕೆಲಸ ಮಾಡುವ ಛಲ ಇದ್ದವನಿಗೆ, ಅದೃಷ್ಟ ಒಲಿದವನಿಗೆ ಇಲ್ಲಿ ಯಶಸ್ಸು ದೊರೆಯಲೇಬೇಕು.

೨. ಗಾಜಿನ ಮನೆಯಲ್ಲಿ ಕೂತು ಕಲ್ಲು ತೂರಬಾರದು.

೩. ಸಾಹಸ ಮಾಡುವ ಹುಮ್ಮಸ್ಸು.

೪, ೫. ಭಾರತೀಯ ಚಿತ್ರರಂಗವೇ ಅಭಿವೃದ್ಧಿ ಹೊಂದುತ್ತಿದೆ. ಕನ್ನಡವೂ ಇದರಲ್ಲಿ ಸೇರಿದೆ. ಜಗತ್ತಿನ ಕೆಲವು ಅತ್ಯಂತ ಶ್ರೇಷ್ಠ ತಾರೆಯರು ನಮ್ಮಲ್ಲಿದ್ದಾರೆ, ಚಿತ್ರಗಳನ್ನು ನಾವು ನಿರ್ಮಿಸಿದ್ದೇವೆ. ಭಾರತೀಯರಿಗೆ ಆತ್ಮಾಭಿಮಾನ ಬೆಳೆಯಬೇಕು.



## ವಿಕ್ರಮ

ಹುಬ್ಬಳ್ಳಿಯ ಮೈನುದ್ದೀನ ಪೂನಾ ಫಿಲ್ಮ್ ಇನ್ಸ್‌ಟಿಟ್ಯೂಟ್‌ನಿಂದ ಬಂದ ಉದಯೋನ್ಮುಖ ನಟ

೧. ನಾನು ಇನ್ನೂ ಆರಂಭದ ಹಂತದಲ್ಲಿಯೇ ಇದ್ದೇನೆ. ಆದರೆ ಪ್ರಗತಿಪಥದಲ್ಲಿರುವೆನೆಂಬ ಅಭಿಮಾನವಿದೆ.

೨. ಚಿತ್ರರಂಗದಲ್ಲಿ ಒಳ್ಳೆಯ –ಕೆಟ್ಟ ಅನುಭವಗಳೆರಡೂ ನನಗೆ ಆಗಿವೆ.

೩. ಯಾವುದಕ್ಕೂ ಹೆದರಬಾರದು.

೪. ನಾನು ಸಿದ್ಧನಿದ್ದೇನೆ.

೫. ಇಲ್ಲವಾದರೆ ನಾನು ಭಾರತೀಯ ಚಿತ್ರಗಳಲ್ಲಿ ಸೇರುತ್ತಿದ್ದೆನೆ?



ಮುದ್ದು ಶೆಟ್ಟಿ

## ಆತ್ಮಾರಾಮ್

ದಿ॥ ಗುರುದತ್ ಅವರ ತಮ್ಮ. ಹೆಸರಾಂತ ದಿಗ್ದರ್ಶಕ–ನಿರ್ಮಾಪಕ.

೧. ಜೀವನದುದ್ದಕ್ಕೂ ಕೆಲಸ ಮಾಡುತ್ತ ಇರುವುದರಲ್ಲೇ ಒಂದು ಬಗೆಯ ಸಾರ್ಥಕತೆಯಿದೆ.

೨. ಒಬ್ಬ ಮನುಷ್ಯನೆಂದರೆ ಒಂದು ಕೋತಿ, ಒಂದು ಹುಲಿ, ಒಂದು ನವಿಲು, ಒಂದು ಕೋಗಿಲೆಯಂತೆ. ಮಿಶ್ರಣ ಮಾತ್ರ ಪ್ರತಿಯೊಬ್ಬರಲ್ಲೂ ಬೇರೆ ಬೇರೆ. ಚಿತ್ರರಂಗವೂ ಹಾಗೆಯೆ.

೩. ಜೀವನದಲ್ಲಿ ಪಾಠ ಕಲಿಯಲಿಕ್ಕಾಗಿ ನಾನು ಚಿತ್ರಗಳಲ್ಲಿ ಕೆಲಸ ಮಾಡುತ್ತೇನೆ.

೪. ಕೆಲವು ಕನ್ನಡ ಚಿತ್ರಗಳನ್ನು ನಾನು ನೋಡಿ ಮೆಚ್ಚಿದ್ದೇನೆ. ಸದ್ಯಕ್ಕೆ ಕನ್ನಡ ಚಿತ್ರ ತಯಾರಿಸುವ ಯೋಜನೆಯಿಲ್ಲ.

೫. ನಮ್ಮ ಚಿತ್ರಗಳ ಬಗ್ಗೆ ನಾನು ತುಂಬ ಅಭಿಮಾನ, ಆಸೆಯಿಟ್ಟುಕೊಂಡಿದ್ದೇನೆ.



ಇಂಥಾ ಕತ್ತಿಗಳಿಗೆಲ್ಲಾ ಹೆದರೋದಿಲ್ಲ ಅಂದೆಯಾ? ಹಂಗಾದ್ರೆ ಹೇಳು ಇನ್ನೆಂಥಾ ಕತ್ತಿಗೆ ಹೆದರ್ತೀಯಾ...??

## With Our Deepavali Greetings



We Completed twenty Six years of Successful Service. we have gone-ahead of the Mile-stone in the Type Casting Industry. Hence you can be rest assured of the accuracy and durability of our Types in English, Kannada, Marathi, and Telugu Languages.

A TRIAL WILL CONVINCE YOU

# SRI ANANDA TYPE FOUNDRY

Koppikar Road, HUBLI

Phone: Office: 2124 Residence 4007 Gram ANADATYPE-HUBLI

Our Branch Offices At Hydeabad 29 Narayanaguda, Opp Shanthi Talkies

Phone: 52625 HYDERABAD-29 AP

MANGALORE:- Lower Car street: Mangalore

---

 ನಮ್ಮ ಗ್ರಾಹಕರಿಗೂ ಹಿತೈಷಿಗಳಿಗೂ ದೀಪಾವಳಿಯ ಶುಭಾಶಯುಗಳು! 




ನೂತನ ವರುಷವು ಸರ್ವರಿಗೂ ಮಂಗಲಕರವಾಗಲಿ!

ಅಖಂಡ ಕರ್ನಾಟಕದಲ್ಲಿ ಜನಾನುರಾಗ ಪಡೆದ
ಉತ್ಕೃಷ್ಟವೆಂದು ಹೆಸರುಗಳಿಸಿದ

# ಎ. ರಹಮಾನ

## ಬೀಡಿಗಳು

ನಿಮ್ಮ ಸೇವನೆಗೆ ಉತ್ತಮವಾಗಿವೆ. ಅಲ್ಲದೆ ನಮ್ಮ ಗ್ರಾಹಕರು ಆದರದಿಂದ ನೀಡುವ ಹೆಚ್ಚಿನ ಪ್ರೋತ್ಸಾಹವನ್ನು ಕೋರುತ್ತೇವೆ.

ಕಾರಖಾನೆಗಳು :
ಧಾರವಾಡ, ಹುಬ್ಬಳ್ಳಿ, ರಾಣೇಬೆನ್ನೂರ.

ತಯಾರಕರು :
ಎಚ್. ಎಂ. ದಾಸನಕೊಪ್ಪ ಆ್ಯಂಡ್ ಸನ್ಸ್,
ಧಾರವಾಡ.

# ಕಲಾಕೇಸರಿ ಉದಯಕುಮಾರ

ಜಿ. ಎಸ್. ಭಟ್ಟ

ಕನ್ನಡದ ಜನಪ್ರಿಯ ನಟ ಉದಯಕುಮಾರ ಅವರಿಗ ಕನ್ನಡ ಭಾಷೆ, ಸಾಹಿತ್ಯಗಳೆಂದರೆ ಎಲ್ಲಿಲ್ಲದ ಅಭಿಮಾನ. ಗೋವಿಂದ ಪೈ, ಬಿ. ಎಂ. ಶ್ರೀ, ಕುವೆಂಪು ಮೊದಲಾದ ಸಾಹಿತಿಗಳ ಭಾವಚಿತ್ರಗಳಿಗೆ ಅವರ ಮನೆಯಲ್ಲಿ ಬಹು ಗೌರವದ ಸ್ಥಾನ. ಅವರ ಗ್ರಂಥ ಭಂಡಾರದಲ್ಲಿ ಸಾವಿರಾರು ಕನ್ನಡ ಪುಸ್ತಕಗಳಿವೆ. ಅವಿರತ ದುಡಿಮೆಯ ಮಧ್ಯೆಯೂ ಬಿಡುವುಮಾಡಿಕೊಂಡು ಕನ್ನಡ ಪುಸ್ತಕಗಳನ್ನೋದುತ್ತಾರೆ. ಇವರಿಗೆ ದುರಭಿಮಾನ ಎನ್ನುವಷ್ಟರ ಮಟ್ಟಿಗೆ ಅವರ ಕನ್ನಡ ಪ್ರೇಮ ಉಜ್ವಲವಾಗಿದೆ. ಸಾಹಿತ್ಯ-ಭಾಷೆಗಳ ಬಗ್ಗೆ ಅವರು ತಾಸುಗಟ್ಟಲೆ ಮಾತನಾಡಬಲ್ಲರು. ಕನ್ನಡದಲ್ಲಿ ಸಾಹಸದ ಪಾತ್ರಗಳಿಗೆ ಹೆಸರಾದ ಉದಯಕುಮಾರ ಭಾವಪೂರ್ಣ ಪಾತ್ರಗಳನ್ನು ಚೆನ್ನಾಗಿ ಅಭಿನಯಿಸಬಲ್ಲರು.

ಉದಯಕುಮಾರರು ವ್ಯಾಯಾಮ ಶಾಲೆಯ ಉಪಾಧ್ಯಾಯರಾಗಿದ್ದರು. ಕೋಮುವಾರು ಭಾವನೆಗೆ ಬಲಿಯಾಗಿ ಸರ್ಕಾರಿ ನೌಕರಿಯನ್ನು ತ್ಯಜಿಸಿದರು. ಬಳಿಕ ಅವರು ಕಾಂಗ್ರೆಸ್ ಕಾರ್ಯಕರ್ತರಾಗಿ ದುಡಿದರು. ರಾಜಕೀಯ ಬೇಸರವಾದಾಗ ಅದಕೆ ಶರಣು ಹೊಡೆದು ಆಚಾರ್ಯ ವಿನೋಬಾ ಭಾವೆಯವರಿಗಾಗಿ ಪ್ರಚಾರ ಕಾಪೆಯಲ್ಲಿ ಭಾಷಣ ಮಾಡುತ್ತಿದ್ದರು. ಹೀಗೆ ವರ್ಣರಂಜಿತ ಬಾಳಿನ ಅವರು ರಂಗಭೂಮಿ ಪ್ರವೇಶಿಸಿದ್ದು ನಾಟಕರತ್ನಾಕರ ಗುಬ್ಬಿವೀರಣ್ಣ ಮತ್ತು ಶ್ರೀಮತಿ ಬಿ. ಜಯಮ್ಮ ಅವರ ಅಕ್ಕರೆಯ ಆಹ್ವಾನದಿಂದಾಗಿ. ಅವರ ದೃಷ್ಟಿಯಲ್ಲಿ ಇದೊಂದು ಅದೃಷ್ಟದ ಪರೀಕ್ಷೆ. ಗುಬ್ಬಿ ಕಂಪನಿಯಲ್ಲಿ ಅವರು ಕೆಲಸ ಮಾಡಿದ್ದು ಕೇವಲ ಮೂರು ತಿಂಗಳು. ಗುಬ್ಬಿ ಕಂಪನಿ ಮೈಸೂರಿಗೆ ಬಂದಾಗ ಮಹಾತ್ಮ ಚಿತ್ರದ ಮಾಲೀಕರಾದ ಡಿ. ಶಂಕರಸಿಂಗರು 'ದೈವ ಸಂಕಲ್ಪ' ಚಿತ್ರಕ್ಕೆ ಕರೆದರು. ಅವರ ದೃಷ್ಟಿಯಲ್ಲಿ ಇದು ಅವರ ಬಾಳಿನ ಅದೃಷ್ಟ ಪರೀಕ್ಷೆಯದ್ವಿತೀಯಾಂಕ.

ಜನವರಿ ೨೬-೧೯೫೬ರಂದು ಮದರಾಸಿನಿಂದ ಪ್ರಕಾಶ ಚಿತ್ರದ ಹಂಚಿಕೆದಾರರು ಉದಯ ಪ್ರೊಡಕ್ಷನ್ಸ ರವರು ಭಾಗ್ಯೋದಯ ಚಿತ್ರ ಪ್ರಾರಂಭಿಸಿ ನಾಯಕ ಪಾತ್ರಧಾರಿಯಾಗಿ ಇವರನ್ನು ಆಹ್ವಾನಿಸಿದರು. ವ್ಯಾಯಾಮ ಶಾಲೆಯ ಶಿಕ್ಷಕ, ಕಾಂಗ್ರೆಸ್ ಪ್ರಚಾರಕ ರಂಗ ಭೂಮಿಯ ನಟ ಬಿ. ಎಸ್. ಸೂರ್ಯನಾರಾಯಣ ಮೂರ್ತಿ ಉದಯಚಿತ್ರದವರಿಂದ 'ಉದಯಕುಮಾರರಾದರು. ಭಾಗ್ಯೋದಯ ಚಿತ್ರದಿಂದ ಅವರು ಚಲನ ಚಿತ್ರರಂಗಕ್ಕೆ ಇಳಿದರು.

ಉದಯಕುಮಾರ ಅವರು ಚಿತ್ರಜಗತ್ತನ್ನು ಪ್ರವೇಶಿಸುವ ಮುನ್ನ ಅದೊಂದು ಜ್ಞಾನಸರಸ್ಸು, ಸಾರಸ್ವತ ಪ್ರಪಂಚದ ವಿವೇಕವಂತರ ಶಾಂತಿಧಾಮ ಎಂದು ಭಾವಿಸಿದ್ದರಂತೆ. ಆದರೆ ಚಿತ್ರಜಗತ್ತು ಪ್ರವೇಶಿಸಿದ ನಂತರ ಸಿಹಿಗಿಂತ ಹೆಚ್ಚಾಗಿ ತಾವು ಉಂಡಿದ್ದು ಕಹಿಯನ್ನು ಎಂದವರು ಹೇಳುತ್ತಾರೆ. ಕಣ್ಣೀರಿನಲ್ಲಿ ಕೈ ತೊಳೆಯುವಂಥ ಭೀಕರ ಸಮಸ್ಯೆಗಳಿಗೆ ಬಲಿಯಾಗಿ ಅವರು ಬದುಕಿ ಬಂದರು. ಅವಹೇಳನ, ದ್ವೇಷ, ಕುಹಕ, ವ್ಯಂಗ್ಯೋಕ್ತಿಗಳ ನಡುವೆ ಬಾಳಿ ಬಂದರು,

ಅವರ ಅನೇಕ ಚಿತ್ರಗಳು ಸಾಹಸಮಯವಾದವುಗಳು. ಜೀವನದ ಉದ್ದಕ್ಕೂ ಅಪಾಯವೇ. ಬ್ರಹ್ಮ ತಮಗೆ ಬರೆದಿಟ್ಟ ಲಿಪಿ ಎಂಬುದು ಅವರ ಅನುಭವ. ಕಾಡು ಮೃಗಗಳ ಜೊತೆ ಹೋರಾಡಿ ಕತ್ತಿವರಸೆಗಳಲ್ಲಿ ಲಾಠಿ ಏಟುಗಳಲ್ಲಿ ಮೈಯನ್ನು ಪಳಗಿಸಬೇಕಾಯಿತು. ಇವರಿಗೆ ಡ್ಯೂಪ್ ಉಪಯೋಗಿಸುವ ಪದ್ಧತಿ ಹಿಡಿಸದು. ಅದರಿಂದ ಇನ್ನೊಬ್ಬ ಸಂಸಾರಿಗೆ ಅಪಾಯವಾದರೆ ಜೀವನದುದ್ದಕ್ಕೂ ಅವರು ವ್ಯಥೆಪಡುತ್ತಾರೆ. ಇಂಥ ಒಂದು ಘಟನೆಯನ್ನು ಅವರು ನನಗೆ ಹೇಳಿದರು—"ನನ್ನ ವೃತ್ತಿ ಸಹೋದರ ರಾಜಕುಮಾರರೂ ನಾನೂ ಇಬ್ಬರೂ



ಒಂದೇ ಚಿತ್ರದಲ್ಲಿ ಕೆಲಸ ಮಾಡುತ್ತಿದ್ದೆವು ಆ ಚಿತ್ರ ಕಠಾರಿ ವೀರ. ಚಿತ್ರೀಕರಣಕ್ಕೆ ಮುನ್ನ ಅಭ್ಯಾಸಮಾಡುತ್ತಿದ್ದೆವು. ಆಗ ನನ್ನ ಕತ್ತಿ ರಾಜಕುಮಾರರ ಕಣ್ಣಿಗೆ ಬಿತ್ತು. ತಲೆ ಸುತ್ತಿ ಬಿದ್ದು ಬಿಟ್ಟರು. ಆತ್ಮಹತ್ಯೆಯನ್ನಾದರೂ ಮಾಡಿಕೊಳ್ಳಲೇ ಎಂದು ನನ್ನ ಬಗ್ಗೇ ನನಗೆ ಜಿಗುಪ್ಸೆ. ಕೈ ಹಿಡಿದು ಕೂಡಿಸಿಕೊಂಡು ನಾನು ಸಮಾಧಾನ ಹೇಳುವುದಕ್ಕೆ ಬದಲಾಗಿ ನನ್ನನ್ನೇ ಸಮಾಧಾನಪಡಿಸಿದರು ರಾಜಕುಮಾರ. ಅನೇಕ ಚಿತ್ರಗಳಲ್ಲಿ ಡ್ಯೂಪ್ ಇಲ್ಲದೆ ಕೆಲಸ ಮಾಡುತ್ತಿದ್ದೆವು. ಈಗಲೂ ಅಷ್ಟೇ. ಕನ್ನಡ ನಟರು ಯಾರ ಸಾಹಸವನ್ನೂ ಎರವಲು ಪಡೆಯಬೇಕಾಗಿಲ್ಲ"

ಉದಯಕುಮಾರರು ನೂರಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಆದರೆ ಅವರಿಗೆ ಸಂಪೂರ್ಣ ತೃಪ್ತಿ ನೀಡಿದ ಚಿತ್ರ ಯಾವುದೂ ಇಲ್ಲ. ಅವರ ಅಭಿಪ್ರಾಯದಲ್ಲಿ ತೃಪ್ತಿ ಎಂದರೆ ಪೂರ್ಣವಿರಾಮ.

ಕಲಾವಿದರಲ್ಲಿ ರಾಜಕೀಯವಿದೆ ಎಂಬುದನ್ನೂ ಉದಯಕುಮಾರರು ಒಪ್ಪುವುದಿಲ್ಲ. "ಇದು ಪೂರ್ಣವಾಗಿ ಸುಳ್ಳು. ಇವರನ್ನು ಸಾಕುವ ನಿರ್ಮಾಪಕರು ಗೆದ್ದ ಎತ್ತಿನ ಬಾಲ ಹಿಡಿಯುವ ಸೋಗನ್ನು ಬಿಟ್ಟರೆ ಯಾವ ರಾಜಕೀಯವೂ ಇಲ್ಲ. ಚಿತ್ರರಂಗ ಒಬ್ಬನ ಸೊತ್ತಲ್ಲ. ಅದು ಕಲ್ಪವೃಕ್ಷ. ಅದೊಂದು ವಿಶಾಲವಾದ ವೃತ್ತಿ ಚಕ್ರ"

"ನಿರ್ಮಾಪಕ ಇಂದಿನ ಪರಿಸ್ಥಿತಿಯಲ್ಲಿ ಉಳಿಯಬೇಕಾದರೆ ಪ್ರದರ್ಶನ ಮಂದಿರದ ಮಾಲೀಕರು ಮಾನವತೆಯನ್ನು ದೂರವಾಗಿಟ್ಟು ಯಾವ ನಾಡಿನ ಮಣ್ಣಿನಲ್ಲಿ ಬೆಳಕು ಕಂಡರೋ ಆ ನಾಡಿನ ನುಡಿಯ ಕಲಾ ಪ್ರಪಂಚಕ್ಕೆ ಕೊಡಲಿಯಾಗಬಾರದು. ನಿರ್ಮಾಪಕ ತಂದ ಬಂಡವಾಳ, ನಟರ ವೃಂದದಿಂದ ಚಿತ್ರೀಕರಣವಾಗಿ ಹಂಚಿಕೆಯಾಗುವುದೇ ಕಷ್ಟ ಎನ್ನುವಂಥ ಪರಿಸ್ಥಿತಿ ಇರುವಾಗ ಪ್ರದರ್ಶನಕಾರರು ಇವಿಷ್ಟನ್ನೂ ಕಬಳಿಸುವ ದೈತ್ಯರಾಗಿದ್ದಾರೆ" ಎಂಬುದು ಉದಯ್ ಅವರ ಅಭಿಪ್ರಾಯ.

ಕನ್ನಡ ಚಿತ್ರಗಳು ಯಾವ ಭಾಷೆಯ ಚಿತ್ರಗಳಿಗಾದರೂ ಹೆಗಲೆಣೆಯಾಗಿ ನಿಲ್ಲಬಲ್ಲವು ಎನ್ನುತ್ತಾರೆ, ಅವರು "ರಾಷ್ಟ್ರದ ಮೂಲಾಧಾರ ಹಾಗೂ ವಿವೇಚನಾ ಶಕ್ತಿ, ಸಮಗ್ರ ಮಾನವನ ಅಸ್ತಿತ್ವವನ್ನು ಅಲುಗಾಡಿಸಿ ವಿಚಾರ ಪರಂಪರೆಯತ್ತ ಗಮನ ಸೆಳೆದು ಅವನ ಮಟ್ಟಕ್ಕನುಸರಿಸಿ ಪ್ರಜ್ಞೆ ತರುವಂಥ ಶಕ್ತಿ ಚಲನ ಚಿತ್ರಕ್ಕೆ ಉಂಟು. ಕನ್ನಡ ಚಲನಚಿತ್ರ ಯಾವ ದೇಶದವರ ಮುಂದಾದರೂ ತಲೆ ಎತ್ತಿ ನಿಲ್ಲಬಲ್ಲುದು. ಅದು ಕುಂಟಲು ಕಾರಣ ಪ್ರದರ್ಶನದ ದುಬಾರಿ ದರಗಳು"

ನಮ್ಮ ಚಿತ್ರಗಳ ಪ್ರಗತಿ ಅದು ಸಂಪೂರ್ಣವಾಗಿ ಕರ್ನಾಟಕದಲ್ಲಿ ನೆಲೆ ನಿಲ್ಲುವುದರ ಮೇಲೆ ಅವಲಂಬಿಸಿದೆ ಎನ್ನುತ್ತಾರೆ ಉದಯಕುಮಾರರು, "ನಿರ್ಮಾಪಕರ ಸಂಘ-ಸುವ್ಯವಸ್ಥಿತ ರೀತಿಯಲ್ಲಿ ಸಂಘಟಿತವಾಗಿ ಇವರಿಗೂ ಸರ್ಕಾರಕೂ ನಿಕಟ ಸಂಬಂಧ ಬೆಳೆಸಿಕೊಳ್ಳಬೇಕು. ತಾಂತ್ರಿಕವರ್ಗದವರು ಹಂಚಿಕೆದಾರರು, ಈ ಸಂಘಗಳಿಂದ ಒಬ್ಬೊಬ್ಬರನ್ನು ಆರಿಸಿಕೊಳ್ಳಬೇಕು. ನಮ್ಮ ನಾಡಿಗೇ ಪ್ರತ್ಯೇಕವಾದ ಸೆನ್ಸಾರ್ ಮಂಡಳಿ ಇರಬೇಕು."

ಉದಯಕುಮಾರ ಕೇವಲ ನಟರಷ್ಟೇ ಅಲ್ಲ, ಉತ್ತಮ ವಾಗ್ಮಿಗಳು. ಬಿಡುವು ದೊರೆತಾಗ ಅವರು ನಾಲ್ಕಾರು ಗ್ರಂಥಗಳನ್ನೂ ಬರೆದಿದ್ದಾರೆ. ಆದರೆ ಅವನ್ನು ಪ್ರಕಟಿಸುವ ಗೋಜಿಗೇ ಹೋಗಿಲ್ಲ. ಇದೇ ಮಹಾಸುದಿನ ಎಂಬ ಚಿತ್ರವನ್ನೂ ಅವರು ನಿರ್ಮಿಸಿದ್ದಾರೆ. ಆದರೆ ಹಂಚಿಕೆದಾರರಿಂದ ಅವರಿಗೆ ಒಂದು ರೂಪಾಯಿಯೂ ಬಂದಿಲ್ಲವಂತೆ. ಇದೀಗ ಅವರು 'ಪರಶುರಾಮ' ಚಿತ್ರ ನಿರ್ಮಿಸುವ ಯೋಚನೆಯಲ್ಲಿದ್ದಾರೆ. ಅವರದು ಸಾಹಸೀ ಪಾತ್ರವಷ್ಟೇ ಅಲ್ಲ: ಸಾಹಸೀ ಜೀವನವೂ ಹೌದು. ಅವರು ಮಾರುತಿಯ ಭಕ್ತರು. ಮಾರುತಿಯ ಮುಂದೆ ಕುಳಿತು ಅಂದಿನ ಒಪ್ಪು ತಪ್ಪುಗಳನ್ನು ಒಪ್ಪಿಸಿ ನಿಶ್ಚಿಂತೆಯಿಂದ ಸಕಲರಿಗೂ ಶ್ರೇಯಸ್ಸಾಗಲೆಂದು ಪ್ರಾರ್ಥಿಸುತ್ತಾರೆ. ತಮ್ಮ ಜೀವನಕ್ಕೆ ದಾರಿ ತೋರಿದವನೇ ಮಾರುತಿ ಎಂದವರು ಹೇಳುತ್ತಾರೆ. ತಮ್ಮ ತಂದೆ ಶ್ಯಾ. ಶ್ರೀನಿವಾಸಯ್ಯನವರ ಬಗ್ಗೆ ಅವರಿಗೆ ತುಂಬ ಅಭಿಮಾನ.

ತಮ್ಮ ವಿದ್ಯಾಭಾಸ ಕಾಲದಲ್ಲಿ ವಾರಾನ್ನದ ಜೊತೆಗೆ ಜ್ಞಾನಾನ್ನವನ್ನೂ ಉಣಬಡಿಸಿದ ಸಾಹಿತಿಗಳ ವೃಂದ ಡಿ. ವಿ. ಗುಂಡಪ್ಪ, ತಿ. ತಾ. ಶರ್ಮ, ಸಿದ್ದವನಹಳ್ಳಿ ಕೃಷ್ಣಶರ್ಮ, ನರಸಿಂಹಶಾಸ್ತ್ರಿ ದೇವುಡು ಮೊದಲಾದವರನ್ನು ಅವರು ನೆನೆದುಕೊಳ್ಳುತ್ತಾರೆ. ಉದಯಕುಮಾರರು ಪರಮ ದೈವಭಕ್ತರು: ಸಾಹಿತ್ಯ ಪ್ರೇಮಿ. ಮತ್ತು ಕನ್ನಡ ಚಿತ್ರಪ್ರಪಂಚದ ಹೆಮ್ಮೆಯ ನಟರು. ●



ಎಲ್ಲರಿಗೂ ನಮ್ಮ ಹೊಸ
ದೀಪಾವಳಿಯ ಶುಭಾಶಯಗಳು !!

# ಬಳ್ಳಾರಿ ತಾಲೂಕ ವ್ಯವಸಾಯೋತ್ಪನ್ನ ಸಹಕಾರ ಮಾರಾಟ ಸಂಘ (ನಿ)

(ರೈ. ನಂ. 124)

## ಬಳ್ಳಾರಿ

ಫೋನ್: ಆಫೀಸ್: 318 ಕೈಸ್ ಮಿಲ್: 771

ರೈತರಿಂದ ರೈತರಿಗಾಗಿ ಸ್ಥಾಪಿಸಲ್ಪಟ್ಟ
ಪ್ರಗತಿಪರ ಸಹಕಾರ ಸಂಸ್ಥೆ

| | | |
|---|---|---|
| ಷೇರು ಬಂಡವಾಳ | ರೂ. | 4,53,610=00 |
| ಕಾಯ್ದಿಟ್ಟ ನಿಧಿ | ರೂ. | 16,948=70 |
| ಇತರ ನಿಧಿಗಳು | ರೂ. | 33,750=00 |

– ಹಂಚಿಕೆದಾರರು –

★ ರಸಾಯನಿಕ ಗೊಬ್ಬರ;
★ ಕ್ರಿಮಿನಾಶಕ ಔಷಧಿಗಳು;
★ ಉತ್ತಮ ತಳಿ ಬೀಜಗಳು;
★ ಆಹಾರ ಧಾನ್ಯಗಳು.

ಅಧ್ಯಕ್ಷ:
**ಶ್ರೀ Y. ಬಸವರಡ್ಡಿ**

1) R ರಾಮರಾವು
2) B. ದೊಡ್ಡ ಬಸವನಗೌಡ
3) ಬಿ. ಶಿವಾರಡ್ಡಿ
4) B. ಹಂಪಲಾಕ್ಷಿ ರೆಡ್ಡಿ
5) T. ಲಿಂಗನಗೌಡ
6) G. S. ತಿಮ್ಮನಗೌಡ
7) ಡಿ ಆರ್. ತಿಮ್ಮರೆಡ್ಡಿ
8) A E.O B D.C.C Bank Ltd., Ballary
9) Asst. Registrar of C. S.

O. M. ಚನ್ನಬಸಯ್ಯ
ಕಾರ್ಯದರ್ಶಿ

 ದೀಪಾವಳಿಯು ಸುಖದಾಯಕವಾಗಲಿ ! 

ಫೋನ್ : ೩೦೩

# ಶ್ರೀ ಶಾರದಾ ಇಂಜನಿಯರಿಂಗ್ ವರ್ಕ್ಸ್

ಬಿ. ಹೆಚ್. ರಸ್ತೆ : : ಶಿವಮೊಗ್ಗ

## ಆಧುನಿಕ ಕೃಷಿ ಕೈಗಾರಿಕೆಗೆ ಅತ್ಯಮೂಲ್ಯ ಕೊಡುಗೆ

## ಕಬ್ಬಿಣದಿಂದ ತಯಾರಿಸಿದ ಎತ್ತಿನಗಾಡಿ

ಶಾರದಾ ಇಂಜನಿಯರಿಂಗ ಮಾಡಲ್ ನಂ. ೩

ತಯಾರಕರು: ಎಂ. ಮುನಿರತ್ನಂ



ಚಕ್ರದ ಅಳತೆ ೫ ಅಡಿ ಎತ್ತರ. ೧೨ ಕಾಲುಗಳ ಚಕ್ರಕ್ಕೆ ಗಾಡಿಗೆ ಹಾಕುವ ಪಟ್ಟಿ ಹಾಕಿರುತ್ತೆ. ಸಂಪೂರ್ಣ ಕಬ್ಬಿಣದಿಂದಲೇ ತಯಾರಿಸಲ್ಪಟ್ಟಿದೆ. ಎಲ್ಲಾ ಅಳತೆಗಳೂ ಮರದ ಗಾಡಿಗಿಂತ ನಾಲ್ಕಾನೆ ಅಂತ ಕಡಿಮೆಯಿರುತ್ತೆ. ಎತ್ತುಗಳು ಸುಲಭ ಹಾಗೂ ಸರಳವಾಗಿ ಎಳೆಯಲು ಅನುಕೂಲವಾಗಿದೆ. ಮರದ ಗಾಡಿಗಿಂತ ಎರಡರಷ್ಟು ಭಾರ ಹಾಕಬಹುದು. ೫—೬ ವರ್ಷಗಳವರೆಗೆ ರಿಪೇರಿ ಇರುವುದಿಲ್ಲ. ರೈತರ ಕಾಮಧೇನುವಾಗಿರುವ ಈ ಗಾಡಿಯ ಉಪಯೋಗ ಪಡೆದುಕೊಳ್ಳಿ, ಯಾವ ಅಳತೆಗೆ ಬೇಕಾದರೂ ಗಾಡಿ ತಯಾರಿಸಿಕೊಡಲಾಗುತ್ತದೆ.

ಹಾಸನ, ಮಂಡ್ಯ, ಚಿತ್ರದುರ್ಗ, ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಈ ಕಬ್ಬಿಣದ ಗಾಡಿಗಳು ಕಳೆದ ೨ ವರ್ಷಗಳಿಂದ ಉಪಯೋಗಿಸಲ್ಪಟ್ಟು, ಬಾಳಿಕೆ ಖಾತ್ರಿಯಾದ ನಂತರ ಜನಾದರಣೀಯವಾಗಿವೆ ಎಂದು ತಿಳಿಸಲು ಹೆಮ್ಮೆ ಪಡುತ್ತೇವೆ.

ವಿ. ಸೂ:- ಅಲ್ಲದೆ, ಟ್ರ್ಯಾಕ್ಟರ್ ಟ್ರೈಲರ್ ಮತ್ತು ಎಲ್ಲ ಬಗೆಯ ವ್ಯವಸಾಯೋಪಕರಣಗಳನ್ನೂ [illegible].



ನಡೆ-ನುಡಿಯಲ್ಲಿಯ ಈ ಸೌಜನ್ಯತೆ ಇದು ಆರತಿಯ ವೈಶಿಷ್ಟ್ಯ.

( ಬೆಂಗಳೂರ ಪ್ರತಿನಿಧಿಯಿಂದ )

**

ಚಿತ್ರಗಳು:

ಪ್ರಗತಿ ಸ್ಟುಡಿಯೋ ಬೆಂಗ್ಳೂರು

# ಕೀರ್ತಿ ಶಿಖರವೇರಿದ-ತಾರೆ ಆರತಿ

ಕನ್ನಡ ಚಿತ್ರರಂಗದ ಇತ್ತೀಚಿನ ಐದು ವರ್ಷಗಳು ಅತ್ಯಂತ ಮಹತ್ವರವಾದವುಗಳು. ಹೊಸ ನಿರ್ದೇಶಕರು, ನಾಯಕರು, ತಂತ್ರಜ್ಞರು ಈ ಅವಧಿಯಲ್ಲಿ ಬೆಳಕಿಗೆ ಬಂದುದಲ್ಲದೆ ಒಳ್ಳೆಯ ಹೆಸರು ಕೂಡ ಗಳಿಸಿದರು. ಇದೇ ಅವಧಿಯಲ್ಲಿ ಕನ್ನಡ ಚಿತ್ರರಂಗಕ್ಕೆ ದೊರೆತ ಮಹತ್ವರ ಕಲಾವಿದೆಯೆಂದರೆ ಆರತಿ.

ಪುಟ್ಟಣ್ಣನವರ 'ಗೆಜ್ಜೆಪೂಜೆ' ಚಿತ್ರದಲ್ಲಿ ಗಂಗಾಧರನ ತಂಗಿಯಾಗಿ ಚಿತ್ರರಂಗ ಪ್ರವೇಶಿಸಿದ ಆರತಿ ಇಂದು ಕನ್ನಡ ಚಿತ್ರರಂಗದಲ್ಲಿ ಅತಿ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸುತ್ತಿರುವ ಏಕಮೇವ ತಾರೆ.

ಆರತಿಯ ಜನ್ಮಸ್ಥಳ ಮೈಸೂರು ಜಿಲ್ಲೆಯ ಕಣಗಾಲ್. ಲಂಗಹಾಕಿಕೊಂಡು ಶಾಲೆಗೆ ಹೋಗುತ್ತಿದ್ದಾಗಿನಿಂದಲೂ ಅದೇ ಊರಿನವರಾದ ನಿರ್ದೇಶಕ ಎಸ್.ಆರ್. ಪುಟ್ಟಣ್ಣ ಆಕೆಯನ್ನು ಬಲ್ಲರು. ಆ ಹುಡುಗಿಯನ್ನು 'ಗೆಜ್ಜೆ ಪೂಜೆ' ಚಿತ್ರದಲ್ಲಿ ಅಭಿನಯಿಸಲು ಆಹ್ವಾನಿಸಿದಾಗ ಆರತಿಯ ತಂದೆ-ತಾಯಿ ಇಬ್ಬರೂ ಹೌಹಾರಿದರು.

ಏನು? ನಮ್ಮ ಹುಡುಗಿ ಸಿನಿಮಾ ಸೇರಿ ಬಣ್ಣ ಬಳಿದುಕೊಳ್ಳುವುದೇ?" ಎಂದು. ಆದರೆ ಪುಟ್ಟಣ್ಣ ತಮ್ಮ ಸ್ವಭಾವಸಹಜವಾದ ಛಲವನ್ನು ಬಿಡಲಿಲ್ಲ. ಓಲಿಸಿ ಮನವೊಲಿಸಿದರು. ಆರತಿಯನ್ನು ಆಗ್ರಹದಿಂದ ಚಿತ್ರರಂಗಕ್ಕೆ ಎಳೆತಂದರು, ಮತ್ತು ಕನ್ನಡ ಚಿತ್ರರಂಗಕ್ಕೆ ಉತ್ತಮ ಕಲಾವಿದೆಯೊಬ್ಬಳ ಕಾಣಿಕೆಯಾಗಿ ನೀಡಿದರು.

ಆರತಿಗೆ ಚಿತ್ರರಂಗ ಸೇರುವ ಆಸೆ ಎಳ್ಳಷ್ಟೂ ಇರಲಿಲ್ಲ. ಮೊದಲ ಬಿ.ಎಸ್.ಸಿ. ಓದುವಾಗ ಅವಳಿಗಿದ್ದ ಒಂದೇ ಗುರಿ-ವೈದ್ಯಳಾಗಿ ಕುಷ್ಠರೋಗಿಗಳ ಸೇವೆ ಸಲ್ಲಿಸುವದು.

ಆದರೆ ತಾರೆಯಾದ ನಂತರ 'ಕನ್ನಡವೇ ನನ್ನ ದೇವರು' ಇತರ ಭಾಷೆಯ ಚಿತ್ರಗಳಲ್ಲಿ ನನಗೆ ಅವಕಾಶ ಸಿಕ್ಕರೂ ಕನ್ನಡವನ್ನು ಮರೆಯುವಷ್ಟು ನಾನು ದೊಡ್ಡವಳಲ್ಲ" ಎಂದು ಆರತಿ ಹೇಳುತ್ತಾಳೆ.

ನೀಳವಾದ ದೇಹ, ಸುಂದರ ಮುಖವನ್ನು ಹೊಂದಿರುವ ಆರತಿ, "ಎಡಕಲ್ಲು ಗುಡ್ಡದ ಮೇಲೆ" ಚಿತ್ರದ



'ಕಲಾವಿದೆಯಾಗುತ್ತೇನೆಂದು ಕನಸಿನಲ್ಲೂ ನೆನೆಸಿರಲಿಲ್ಲ' ಎನ್ನುತ್ತಾಳೆ ಆರತಿ.

ಅತ್ಯಂತ ದುಃಖದ ಸನ್ನಿವೇಶಗಳಲ್ಲೂ ತಾರೆ ಜಯಂತಿಯೊಂದಿಗೆ ತಮಾಷೆಯೊಂದಿಗೆ ಕಾಲ ಕಳೆಯುವದನ್ನು ನಾನು ನೋಡಿರುವೆ. ಆದರೆ ನಿರ್ದೇಶಕರು ಟೇಕಿಗೆ ರೆಡಿ ಎಂದಾಕ್ಷಣ ಅವಳು ತಕ್ಷಣ ಅಭಿನಯದಲ್ಲಿ ತನ್ಮಯಳಾಗಿ ಬಿಡುತ್ತಾಳೆ.

'ಗೆಜ್ಜೆ ಪೂಜೆ' ಚಿತ್ರವು ಬಿಡುಗಡೆಯಾದ ಮೂರು ತಿಂಗಳಲ್ಲೇ ಆರತಿ ನಾಲ್ಕು ಚಿತ್ರಗಳಿಗೆ ನಾಯಕಿಯಾಗಿ ಆಯ್ಕೆಯಾದಳು. "ಠಕ್ಕ ಬಿಟ್ರೆ ಸಿಕ್ಕ" "ಅನುಗ್ರಹ" "ಕಸ್ತೂರಿ ನಿವಾಸ" "ಪ್ರತಿಧ್ವನಿ" "ಶ್ರೀ ಕೃಷ್ಣ ರುಕ್ಮಿಣಿ ಸತ್ಯಭಾಮಾ" "ಸಿಪಾಯಿರಾಮು" "ಭಲೇ ಹುಚ್ಚ" "ಬಂಗಾರದ ಮನುಷ್ಯ" "ಮನೆಬೆಳಗಿದ ಸೊಸೆ" "ನ್ಯಾಯವೇ ದೇವರು" ಇವು ಈವರೆಗೆ ತೆರೆಕಂಡ ಆರತಿಯ ಕನ್ನಡ ಚಿತ್ರಗಳು. ತೆಲುಗು, ಮಲಯಾಳಂ ಚಿತ್ರಗಳಲ್ಲೂ ಆಕೆ ಅಭಿನಯಿಸಿದ್ದಾಳೆ.

ಅವಳ ಅಭಿನಯದ "ಎಡಕಲ್ಲು ಗುಡ್ಡದ ಮೇಲೆ" "ಮೂರುವರೆ ವಜ್ರ" "ಮಹಾತ್ಯಾಗ" "ನಾನೂ ಬಾಳಬೇಕು" "ಬಂಗಾರದ ಪಂಜರ" ಚಿತ್ರಗಳು ಬೇಗ ತೆರೆ ಕಾಣಲಿವೆ.

ಪುಟ್ಟಣ್ಣ ದಿಗ್ದರ್ಶನದ "ಉಪಾಸನೆ" "ಶುಭಮಂಗಳ" "ಬಿಳಿಯ ಹೆಂಡತಿ" ವರ್ಣ ಚಿತ್ರಗಳಿಗೆ ಆಕೆ ನಾಯಕಿಯಾಗಿ ಆಯ್ಕೆಯಾಗಿದ್ದಾಳೆ.

ಇಷ್ಟೊಂದು ಚಿತ್ರಗಳಲ್ಲಿ ಅಭಿನಯಿಸುತ್ತಿದ್ದರೂ ಚಿತ್ರರಂಗಕ್ಕೆ ಅಂಟಿಕೊಳ್ಳದ ಹುಡುಗಿಯರಂತೆ ಅವಳ ಸ್ವಭಾವವಿದೆ. ಪ್ರತಿಯೊಂದು ಚಿತ್ರವು ಪೂರ್ತಿಗೊಂಡಾಗಲೂ ಅವಳಿಗೆ "ಏಕಪ್ಪಾ ನನಗೀ ಸಿನಿಮಾ ಹುಚ್ಚು. ಒಳ್ಳೆಯ ಮನೆಯಿದೆ. ಆತ್ಮೀಯ ಬಂಧುಗಳಿದ್ದಾರೆ. ಪ್ರೀತಿಯ ಸೋದರರಿದ್ದಾರೆ. ಆದರೂ ನಟಿಯಾಗುವ ಹುಚ್ಚು ನನಗೇಕೆ?" ಎಂದೆನ್ನಿಸುವದಂತೆ.

"ಆದರೆ ಅಭಿನಯ ನನ್ನ ಧಮನಿ ಧಮನಿಗಳಲ್ಲಿ ಹರಿಯುತ್ತಿದೆ. ಒಂದು ಒಳ್ಳೆಯ ಚಿತ್ರವು ಪೂರ್ತಿಯಾಗಿ ತೆರೆಕಂಡು ಜನ ನಿಮ್ಮ ಅಭಿನಯವನ್ನು ಹೊಗಳಿದರೆ, ಅದಕ್ಕಿಂತ ದಿವ್ಯ ಅನುಭವ ಬೇರೆ ಯಾವುದಿದೆ ಹೇಳಿ?" ಎಂದಾಕೆ ಪ್ರಶ್ನಿಸುತ್ತಾಳೆ.

ಆರತಿಯ ವೈಶಿಷ್ಟ್ಯವೆಂದರೆ ಅವಳೆಂದೂ ಅಭಿನಯ ಹಾಗೂ ನೃತ್ಯ ಶಿಕ್ಷಣ ಪಡೆದವಳಲ್ಲ. ಕ್ಯಾಮರಾ, ಎದುರು ನಿಂತಾಗ ತಂತಾನೆ ಸ್ಫೂರ್ತಿ ಬಂದು ಆಕೆ ಸಹಜ ಅಭಿನಯ ನೀಡುತ್ತಾಳಂತೆ. ಆದರೆ ನಂತರದ ಟೇಕುಗಳಿಗಿಂತ ಮೊದಲನೇ 'ಟೇಕು' ಹೆಚ್ಚು ಚೆನ್ನಾಗಿರುತ್ತದೆ ಎಂಬುದು ಆಕೆಯ ಅಭಿಪ್ರಾಯ.

ಚಿತ್ರದಲ್ಲಿ ಅಭಿನಯಿಸಲು ಆರಂಭಿಸಿದಾಗಿನಿಂದ ಕಣ್ಣಲ್ಲಿ ಗೂಡುಕಟ್ಟಿಕೊಂಡಿದ್ದ ನಾಚಿಕೆ, ಅಂಜುಗುಳಿ ಸ್ವಭಾವವು ದೂರವಾಗಿದೆಯೆಂದು ಆರತಿ ಹೇಳುತ್ತಾಳೆ.

"ನೀವು ನಟಿಯಾಗದಿದ್ದರೂ ಅಭಿನಯದಲ್ಲಿ ತರಬೇತಿ ಪಡೆಯಬೇಕು" ಎಂಬುದು ಯುವತಿಯರಿಗೆ ಆಕೆಯ ಸಲಹೆ. ಅದರಿಂದ ಹೆಣ್ಣು ಒಳಗಿಂದೊಳಗೇ ಕೊರಗುವದು ತಪ್ಪಿ, ಮನೋವಿಕಾಸವಾಗುವದೆಂದು ಆಕೆ ಹೇಳುತ್ತಾಳೆ.

ಆರತಿಗೆ ಐಶ್ವರ್ಯದ ಹಪಾಹಪಿತನವಿಲ್ಲ. "ವಜ್ರ ವೈಢೂರ್ಯ, ಕಾರು, ಬಂಗ್ಲೆ ಇದಾವುದೂ ನನಗೆ ಮುಖ್ಯವಲ್ಲ. ನಾನು ಉತ್ತಮ ಕಲಾವಿದೆಯಾಗಿ ಬೆಳೆಯಬೇಕು" ಎಂಬುದೊಂದೇ ನನ್ನಾಸೆ ಎಂದು ಆರತಿ ಹೇಳುತ್ತಾಳೆ.

ಕನ್ನಡದಲ್ಲಿ ಗಲ್ಲಾಪೆಟ್ಟಿಗೆ ದೃಷ್ಟಿಯಿಂದ ಎರಡು ಬಗೆಯ ಚಿತ್ರಗಳು ಅತ್ಯಂತ ಯಶಸ್ವಿಯಾಗಿವೆ. ರಾಜಕುಮಾರ್ ನಾಯಕರಾಗಿ ಅಭಿನಯಿಸಿರುವ ಚಿತ್ರಗಳು ಒಂದು ದೃಷ್ಟಿಯಿಂದ ಯಶಸ್ಸುಗಳಿಸಿದರೆ, ಇನ್ನೊಂದು ದೃಷ್ಟಿಯಿಂದ ಪುಟ್ಟಣ್ಣನವರ ಚಿತ್ರಗಳು ಯಶಸ್ವಿಯಾಗಿವೆ. ಆದರೆ ಈ ಎರಡೂ ಗುಂಪಿಗೂ ಬೇಕಾದವಳಾಗಿ ಆರತಿ ಇಂದು ಚಿತ್ರರಂಗದಲ್ಲಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿದ್ದಾಳೆ.






Sovereign

WISH YOU
ALL
A HAPPY
DEEPAVALI



MANGALORE TILES &
TERRA - COTTA




SOVEREIGN
TILE WORKS
BOLOOR, MANGALORE-3

Phone : 5086
Gram : SOVEREIGN

# ಭಾರತೀಯ ಚಿತ್ರೋದ್ಯಮ

ಶಂಕರ ಪಾಟೀಲ



ಭಾರತೀಯ ಚಲಚ್ಚಿತ್ರೋದ್ಯಮವು ಆರು ದಶಕಗಳನ್ನು ಪೂರೈಸಿದೆ; ಇದೀಗ ಏಳನೆಯ ದಶಕದಲ್ಲಿ ಅದು ಪದಾರ್ಪಣ ಮಾಡಿರುವುದು. ಅದು ನಡೆದು ಬಂದಈ ಸುದೀರ್ಘದಾರಿ ಕುತೂಹಲ ಕೆರಳಿಸುವಂಥದು. ಮೂಕಿಯಿಂದ ಟಾಕಿಯುಗ, ಕಪ್ಪು-ಬಿಳುಪು ಚಿತ್ರಗಳಿಂದ, ಬಣ್ಣದ ಚಿತ್ರಗಳು, ಪೌರಾಣಿಕ, ಐತಿಹಾಸಿಕ ಥಾಡಸಿ ಚಿತ್ರಗಳಿಂದ ಸಾಮಾಜಿಕ, ಜಾನಪದ, ಅಪರಾಧಿ ಚಿತ್ರಗಳು,ಸ್ಟುಡಿಯೊ ಒಳಾಂಗಣ ಚಿತ್ರಣದಿಂದ ಹೊರಾಂಗಣ ಚಿತ್ರಣ, ಹೀಗೆ ಅದ್ಭುತವಾದ ರೀತಿಯಲ್ಲಿ ಅದುಮಾರ್ಗವನ್ನು ಕ್ರಮಿಸಿ ಬಂದಿರುವುದು; ಅಮೋಘವಾದ ರೀತಿಯಲ್ಲಿ ಗಾತ್ರ ಹಾಗೂ ಗುಣಗಳಲ್ಲಿ ಅದು ಪ್ರಗತಿಯನ್ನು ಸಾಧಿಸಿರುವುದು. ಇದಕ್ಕಿಂತ ಮುಖ್ಯವಾಗಿ ಅದು ಕಲಾತ್ಮಕವಾದ ಮನೋರಂಜನ ಸಾಧನವಾಗಿರುವದರೊಂದಿಗೆ ಬೃಹತ್ ಉದ್ದಿಮೆಯಾಗಿ ಬೆಳೆದು ನಿಂತಿರುವುದು. ಕಲಾತ್ಮಕ ಚಿತ್ರಗಳು ಕಡಿಮೆಯಾಗಿ, ಅಗ್ಗದ ವಾಣಿಜ್ಯ ಚಿತ್ರಗಳು ಕ್ರಮೇಣ ಹೆಚ್ಚುತ್ತಿವೆ. ಮೌಲ್ಯಗಳಲ್ಲಿ ಅಧೋಗತಿ ಕಂಡುಬರುತ್ತಿದೆ; ಕರಭಾರದ ಪ್ರಮಾಣ ಅತಿಯಾಗಿ ಹೆಚ್ಚುತ್ತಿದೆ. ತಯಾರಿಕಾ ವೆಚ್ಚವೂ ಬೆಳೆಯತೊಡಗಿರುವುದು. ಆದರೆ ಪ್ರೇಕ್ಷಕರ ಸಂಖ್ಯೆ ಇವೆಲ್ಲವನ್ನು ಮೀರಿಸಿ ಬೆಳೆಯುತ್ತಿದೆ. ಅನೇಕ ಸಮಸ್ಯೆಗಳನ್ನು ಅದು ಎದುರಿಸಬೇಕಾಗಿ ಬರುತ್ತಿದ್ದರೂ ಅದರ ಪ್ರಸಾರವ್ಯಾಪ್ತಿ ಹೆಚ್ಚುತ್ತಲೇ ಇದೆ; ಕ್ಷೇತ್ರಗಳೂ ಹೆಚ್ಚುತ್ತಿವೆ. ರಂಗಗಳೂ ವಿಸ್ತರಿಸುತ್ತಿವೆ. ಇಂದಿಗೂ ಅದೊಂದೇ ಜನತೆಯ ಏಕಮಾತ್ರ ಅಗ್ಗದ ಮನೋರಂಜನೆಯ ಸಾಧನೆಯಾಗಿ ನಿಂತಿರುವುದು ಚಿತ್ರೋದ್ಯಮದ ಒಂದು ವೈಶಿಷ್ಟ್ಯ, ವಿಶೇಷ ಲಕ್ಷಣವಾಗಿರುವದನ್ನು ನಾವು ಕಾಣುತ್ತೇವೆ,

## ಸ್ಥಿತಿ-ಗತಿ

ಭಾರತೀಯ ಚಿತ್ರೋದ್ಯಮವು ವರ್ಷಕ್ಕೆ ಸುಮಾರು ೫೦ಕೋಟಿರೂಪಾಯಿ ಆದಾಯವನ್ನು ಮನೋರಂಜನ ಕರ ಮತ್ತು ಪ್ರದರ್ಶನ ತೆರಿಗೆ ರೂಪದಲ್ಲಿ ರಾಷ್ಟ್ರದ ಬೊಕ್ಕಸಕ್ಕೆ ನೀಡುತ್ತಿರುವುದು. ಈ ಉದ್ದಿಮೆಯಲ್ಲಿ ತೊಡಗಿಸಿರುವ ಮೂಲಬಂಡವಲವು ಸುಮಾರು ಒಂದುನೂರು ಕೋಟಿ ರೂಪಾಯಿಗಳು. ಇದರ ವಿವಿಧ ಕ್ಷೇತ್ರಗಳು ಮತ್ತು ರಂಗಗಳಲ್ಲಿ ಸುಮಾರು ಒಂದು ಕಾಲು ಲಕ್ಷ ಜನರಿಗೆ ಉದ್ಯೋಗ ದೊರಕಿರುವುದು. ಈಗ ಇದರ ವಾರ್ಷಿಕ ಆದಾಯವು ಸುಮಾರು ೧೫೦ಕೋಟಿ ರೂಪಾಯಿಗಳು. ದಿನಕ್ಕೆ ಒಂದರಂತೆ ಚಿತ್ರದ ನಿರ್ಮಾಣವಾಗುತ್ತಿದ್ದು ವರ್ಷಕ್ಕೆ ಹಿಂದಿ ಹಾಗೂ ಇತರ ಭಾರತೀಯ ಭಾಷೆಗಳಲ್ಲಿ ಸೇರಿ ಸುಮಾರು ೪೧೦ ಚಿತ್ರಗಳ ನಿರ್ಮಾಣವಾಗುವುದು. ಹಿಂದಿ ಪ್ರಥಮ ಸ್ಥಾನದಲ್ಲಿದ್ದು ಅಖಿಲಭಾರತ ಪೇಟೆ ಅದಕ್ಕಿರುವುದು. ನಂತರದ ಸ್ಥಾನ ತಮಿಳು, ತೆಲುಗು ಚಿತ್ರರಂಗಕ್ಕಿದೆ.ಬಂಗಾಲಿ-ಮಲೆಯಾಳ ತೃತೀಯ ಸ್ಥಾನದಲ್ಲಿದ್ದು, ಕನ್ನಡ ನಾಲ್ಕನೆ ಸ್ಥಾನದಲ್ಲಿದೆ. ಮರಾಠಿಯಲ್ಲಿ ಈಗ ಚಿತ್ರಗಳು ಬರುವುದು ಕಡಿಮೆಯಾಗಿದೆ. ರಾಷ್ಟ್ರದಲ್ಲಿರುವ ಸುಮಾರು ೮ಸಾವಿರ ಶಾಶ್ವತ ಹಾಗೂ ಅರೆಶಾಶ್ವತ ಚಿತ್ರಮಂದಿರಗಳಲ್ಲಿ ಪ್ರತಿದಿನ ಸುಮಾರು ೭೦ ಲಕ್ಷ ಜನರು ಚಿತ್ರಗಳನ್ನು ವೀಕ್ಷಿಸುತ್ತಿರುವರು. ರಾಷ್ಟ್ರದ ಔದ್ಯಮಿಕ ರಂಗದಲ್ಲಿ-ಮೂಲ ಬಂಡವಲದ ದೃಷ್ಟಿಯಿಂದ ಎರಡನೆಯ ಸ್ಥಾನವನ್ನು, ಕೆಲಸಗಾರರಿಗೆ ಕೊಡುವ ಸಂಬಳ ಸಾರಿಗೆ ದೃಷ್ಟಿಯಿಂದ ನಾಲ್ಕನೆಯ ಸ್ಥಾನವನ್ನು, ಕೆಲಸಗಾರರ ಸಂಖ್ಯೆಯ ದೃಷ್ಟಿಯಿಂದ ಐದನೆಯ ಸ್ಥಾನವನ್ನು ಪಡೆದಿರುವುದು. ವಿಶ್ವಚಿತ್ರನಿರ್ಮಿತಿಯ ದೃಷ್ಟಿಯಿಂದ ಪರಿಶೀಲಿಸಿದಾಗ ಕಥಾನಕ ಚಿತ್ರಗಳ ನಿರ್ಮಾಣದಲ್ಲಿ ಭಾರತವು ಮೂರನೆಯ ಸ್ಥಾನವನ್ನು ಪಡೆಯುವುದು. ಹೀಗಿದ್ದರೂ ಅದರ ಸ್ಥಿತಿಗತಿಗಳು ಸಮಾಧಾನಕರವಿರುವದಿಲ್ಲ. ಒಂದು ಯೋಜಿತ ರೀತಿಯಲ್ಲಿ ಅಲ್ಲಿ ನಿರ್ಮಾಣ ಕಾರ್ಯ ನಡೆದಿರುವದಿಲ್ಲ; ಒಳ್ಳೆಯ ಚಿತ್ರಗಳು ಅಪರೂಪವಾಗಿ ಬರುತ್ತಿವೆ. ಭದ್ರ ಬುನಾದಿಯನ್ನು ಅದು ಹಾಕಿಕೊಂಡಿರುವದಿಲ್ಲ. ಅದರ ಸಮಸ್ಯೆಗಳು ದಿನದಿನಕ್ಕೆ ಹೆಚ್ಚುತ್ತಿರುವದರ ಜೊತೆಗೆ ಕ್ಲಿಷ್ಟವಾದ ರೂಪವನ್ನು ತಾಳುತ್ತಿರುವುದೂ ಕಂಡು ಬರುವುದು. ಆದರೆ ನನಗೆ ಸಮಾಧಾನವೆಂದರೆ ಇವುಗಳನ್ನು ಪರಿಹರಿಸಲು ಚಿತ್ರೋದ್ಯಮಿಗಳು ಆತುರರಾಗಿರುವದನ್ನು ಕಂಡು ಅವುಗಳನ್ನು ನಿವಾರಿಸಿಕೊಳ್ಳುವ ಲವಲವಿಕೆ ಅವರಲ್ಲಿದೆ. ಅವರ ಇಂಥ ಪ್ರಯತ್ನಗಳಲ್ಲಿ ಕಳಕಳಿ ಇದೆ.

## ಹಣಕಾಸು

ಚಿತ್ರೋದ್ಯಮದಲ್ಲಿ ಹಣಕಾಸಿನ ಪೂರೈಕೆ ಅಂದಿನಿಂದ ಇಂದಿನವರೆಗೆ ಒಂದು ಪ್ರಾಮುಖ್ಯವಾದ ಸಮಸ್ಯೆಯಾಗಿ ಉಳಿದಿದೆ. ನಿರ್ಮಾಪಕರು ಸಾಕಷ್ಟು ಶ್ರೀಮಂತರಿರುವದಿಲ್ಲ. ಚಿತ್ರಕ್ಕೆ ಬೇಕಾಗುವಷ್ಟು ಬಂಡವಲನ್ನು ಅವರೊಬ್ಬರೇ ಒದಗಿಸಿಕೊಳ್ಳಲು ಸಾಧ್ಯವಿರುವ ಸಂಭವ ಕಡಿಮೆ. ಇಂಥ ಸಂದರ್ಭದಲ್ಲಿ ಅವರಿಗೆ ಹಣವೊದಗಿಸುವವರ ಆವಶ್ಯಕತೆ ಇರುವುದು. ಬ್ಯಾಂಕುಗಳು ಚಿತ್ರರಂಗಕ್ಕೆ ಹಣಕಾಸನ್ನು ಒದಗಿಸುವದಿಲ್ಲ. ಹೀಗಾಗಿ ಅವರು ಖಾಸಗಿ ಸಾಹುಕಾರರಿಂದ ಹೆಚ್ಚಿನ ಬಡ್ಡಿದರ ತೆತ್ತು ಹಣಕಾಸನ್ನು ಪಡೆಯುವರು. ಇದು ಅಲ್ಪಾವಧಿಯ ಸಾಲವಾಗಿದ್ದರೂ ಕನಿಷ್ಠ ೩೫% ರಿಂದ ೮೫%ರವರೆಗೆ ಬಡ್ಡಿದರವಿರುವುದು. ಅನೇಕ ಸಲ ನೂರಕ್ಕೆ ನೂರರಷ್ಟು ದರ ಕೊಡಬೇಕಾಗಿ ಬಂದರೂ ಅಚ್ಚರಿಪಡಬೇಕಿಲ್ಲ. ಇದರ ಜೊತೆಗೆ ಪ್ರತಿಶತ ಹತ್ತರಷ್ಟು ಗೌರವಧನವನ್ನು ತೆತ್ತಬೇಕು. ಗೌರವಧನ ಮತ್ತು ಬಡ್ಡಿಗಳನ್ನು ಸಾಮಾನ್ಯವಾಗಿ ಮುಂಗಡವಾಗಿ ವಜಾ ಮಾಡಿಕೊಂಡೇ ಕೊಡುವರು. ಚಿತ್ರ ಹಣಕಾಸಿನ ನಿಗಮವನ್ನು ೧೯೭೦ರಷ್ಟು ಹಿಂದೆಯೇ ಈ ಉದ್ದೇಶಕ್ಕಾಗಿ ರಚಿಸಲಾಗಿದೆ. ಆದರೆ ಅದು ಕೇವಲ ಕಲಾತ್ಮಕ ಚಿತ್ರಗಳಿಗೆ ಸಾಲವನ್ನು ಕೊಡುತ್ತಿರುವುದು. ಅದು ಸಾಲವಾಗಿ ನೀಡಿದ ಕೆಲವು ಚಿತ್ರಗಳು ಇನ್ನೂ ಪೂರ್ಣವಾಗಿಲ್ಲ; ಕೆಲವು ಬಿಡುಗಡೆಯಾಗಿರುವದಿಲ್ಲ. ಕೆಲ ನಿರ್ಮಾಪಕರಿಂದ ಸಾಲವೂ ಮರಳಿ ಬಂದಿಲ್ಲ. ಸುಮಾರು ೧೩ ಲಕ್ಷರೂ ಕಟ್ಟುಬಾಕಿಯೆಂದು ವಜಾ ಮಾಡಲು ಉದ್ದೇಶಿಸಿದೆ. ಹೀಗೆ ಅದರ ಉದ್ದೇಶವೂ ಈಡೇರುತ್ತಿಲ್ಲವೆಂಬುದು ಬೇರೆ ಮಾತು. ಚಿತ್ರ ನಿರ್ಮಾಪಕರು ಇಷ್ಟು ಅಧಿಕ ಬಡ್ಡಿ ತೆತ್ತಬೇಕಾಗುವುದು ಕನಿಕರದ ಮಾತೇನೊ ಸರಿ. ಆದರೆ ಅನೇಕ ಸಲ ಈ ಸಾಹುಕಾರರು ಮುಂಗಡ ಬಡ್ಡಿ-ಗೌರವಧನ ಪಡೆದು ಸಮಾಧಾನಗೊಳ್ಳಬೇಕಾಗುವುದು. ಅಸಲು ಅವರಿಗೆ ಕನ್ನಡಿಯ ಗಂಟಾಗಿ ಪರಿಣಮಿಸುವುದು. ಇಂಥ ಪರಿಸ್ಥಿತಿ ಎದುರಿಸಲು ಅಣಿಯಾಗಿ ಅವರು ಸಾಲವನ್ನು ನೀಡಲು ಮುಂದಾಗಬೇಕು. ಇದರ ಜೊತೆಗೆ ಹಣಕಾಸು ನೀಡುವ ಇನ್ನೊಂದು ವರ್ಗವೆಂದರೆ ಚಿತ್ರಗಳ ಹಂಚಿಕೆದಾರರದು. ಅವರು ತಾವು ವಹಿಸಿಕೊಳ್ಳುವ ಚಿತ್ರಗಳಿಗಾಗಿ ನಿರ್ಮಾಪಕರಿಗೆ ಮುಂಗಡವನ್ನು ನೀಡುವರು. ಪ್ರತಿಯಾಗಿ ನಿರ್ಮಾಪಕರನ್ನು ತಮ್ಮ ಕೃಪಾಕಟಾಕ್ಷಕ್ಕೆ ಒಳಪಡಿಸಿಕೊಳ್ಳುವರು.

## ಆರ್ಥಿಕ ನೆರವು ಅವಶ್ಯ

ಚಿತ್ರೋದ್ಯಮದ ಈ ಸಂಕೀರ್ಣವಾದ ಹಣಕಾಸಿನ ಪರಿಸ್ಥಿತಿ ಅನೇಕ ಸಲ ಉತ್ತಮ ಚಿತ್ರಗಳ ನಿರ್ಮಾಣಕ್ಕೆ ಆತಂಕಕಾರಿಯಾಗಿ ಪರಿಣಮಿಸುವುದು. ನಿರ್ಮಾಪಕರು ತಮ್ಮ ಹಣವು ಬೇಗ ಮರಳಿಬರುವಂತೆ ಚಿತ್ರಗಳನ್ನು ನಿರ್ಮಿಸುವರು. ಕೇವಲ ವ್ಯಾಪಾರಿ ಮನೋವೃತ್ತಿಯಿಂದ ಇಲ್ಲದ್ದನ್ನೆಲ್ಲ ಚಿತ್ರದಲ್ಲಿ ತುಂಬುವರು. ಇಂದಿನ ಹೆಚ್ಚಿನ ಚಿತ್ರಗಳಲ್ಲಿ ಕಾಣಿಸಿಕೊಳ್ಳುವ ಕ್ಯಾಬ್ರೆ ನೃತ್ಯ, ಲೈಂಗಿಕತೆಯ ಅತಿ ಪ್ರದರ್ಶನ, ಅಪರಾಧಿವೃತ್ತಿಯ ಪ್ರಯೋಗ, ನಗ್ನತೆ ಇವಕ್ಕೆ ಕಾರಣ ಇದೇ ಆಗಿರುವುದು. ಚಿತ್ರ ಹಂಚಿಕೆದಾರರು ಬಯಸುವ ಕಾರಾಗಣಕ್ಕೆ ನಿರ್ಮಾಪಕ ಅವಕಾಶವನ್ನು ಕೊಡಬೇಕಾಗುವುದು: ಅವನಿಗೆ ಬೇಕಾದ ರೀತಿಯಲ್ಲಿ ಕಥಾವಸ್ತು ಅಣಿಗೊಳ್ಳಬೇಕಾಗುವುದು, ನಿರ್ಮಾಪಕರು ನಿರ್ಮಾಣದ ಮೌಲ್ಯಗಳನ್ನು

[illegible]ಡೆಗಾಸುವರು. ಅನೇಕ ಸಲ ಅವರ ಪರಿಶ್ರಮಕ್ಕೆ ತಕ್ಕ ಫಲವೂ ಕೂಡ ದೊರೆಯದೇ ಹೋಗಬಹುದು. ಹೀಗಾಗಿ ಈ ಬಗೆಯ ಹಣಕಾಸಿನ ಪರಿಸ್ಥಿತಿ ನಮ್ಮ ಚಿತ್ರೋದ್ಯಮದ ಗುಣಮಟ್ಟದ ಮೇಲೆ ಅನಿಷ್ಟ ಪರಿಣಾಮವನ್ನು ಬೀರುವದೆಂಬುದು ಸ್ಪಷ್ಟವಾಗುವುದು. ಚಿತ್ರೋದ್ಯಮದಿಂದ ಸಿಂಹಪಾಲು ಆದಾಯವನ್ನು ಪಡೆಯುವ ಕೇಂದ್ರ ಮತ್ತು ರಾಜ್ಯ ಸರಕಾರಗಳು ಈ ಉದ್ದಿಮೆಗೆ ಹಣಕಾಸು ಒದಗಿಸುವಲ್ಲಿ ಆ ಮೂಲಕ ಚಿತ್ರೋದ್ದಿಮೆ ಭದ್ರತೆಯನ್ನು ಪಡೆಯುವಂತಾಗಲು ಏನಾದರೂ ಮಾಡುವುದು ಅವಶ್ಯವಿದೆ. ಕನಿಷ್ಠ ಬ್ಯಾಂಕುಗಳಿಗೆ ಈ ಅವಕಾಶ ನೀಡಬೇಕು ಎಂದು ನಾನು ಕಂಡ ಹಲವಾರು ಪ್ರಮುಖರು ಈ ಸಮಸ್ಯೆಯನ್ನು ಪ್ರಸ್ತಾಪಿಸಿ ಅಭಿಪ್ರಾಯಪಟ್ಟರು. ಕರ್ನಾಟಕ–ಆಂಧ್ರ ರಾಜ್ಯಗಳಲ್ಲಿ ಸ್ಥಾನಿಕವಾಗಿ ನಿರ್ಮಾಣಗೊಳ್ಳುವ ಚಿತ್ರಗಳಿಗೆ ಸಹಾಯಧನವನ್ನು ಈಚೆಗೆ ನೀಡಲಾಗುತ್ತಿದೆ. ಆದರೆ ಇದರಿಂದ ಎಂಥೆಂಥ ಚಿತ್ರಗಳೂ ನಿರ್ಮಾಣವಾಗಬಹುದು. ಅದನ್ನು ನಿವಾರಿಸಲು ಈ ಸಹಾಯಧನವನ್ನು ಗುಣಮಟ್ಟಕ್ಕೆ ಜೋಡಿಸುವುದು ಅವಶ್ಯ ಎಂಬ ಒಂದು ಅಭಿಪ್ರಾಯವೂ ಇದೆ. ರಾಜ್ಯಸರಕಾರ ಈಚೆಗಷ್ಟೇ ಇಂಥ ಕಟ್ಟುನಿಟ್ಟನ್ನು ತೆಗೆದು ಹಾಕಿದ್ದು ಅಷ್ಟು ಸರಿಯಾಗಲಿಲ್ಲವೆಂದು ಇವರು ಹೇಳುತ್ತಾರೆ. ಅದೇನೇ ಇದ್ದರೂ ಕರ್ನಾಟಕ ರಾಜ್ಯದಲ್ಲಿ ಕನ್ನಡ ಚಿತ್ರಗಳ ನಿರ್ಮಾಣಕ್ಕೆ ಇಷ್ಟರಮಟ್ಟಿಗಾದರೂ ನೆರವು ದೊರೆಯುತ್ತಿರುವುದು ತುಂಬ ಸಂತೋಷದ ಸಂಗತಿಯೇ ಆಗಿರುವುದು. ಆದರೂ ಈ ಸಂಕೀರ್ಣತೆ ನಿವಾರಣೆಯಾಗದೆ ಹೋದರೆ ಅನೇಕ ಚಿತ್ರ ನಿರ್ಮಾಪಕರು ಆ ರಂಗದಿಂದ ಹಿಂದೆ ಸರಿಯುವುದು ಅನಿವಾರ್ಯವಾಗುವುದು. ಓರ್ವ ಪ್ರಮುಖ ನಿರ್ಮಾಪಕರ ಅಭಿಪ್ರಾಯದಲ್ಲಿ ಪ್ರತಿವರುಷ ಸುಮಾರು ೫೦ ಇಂಥ ನಿರ್ಮಾಪಕರು ನಿವೃತ್ತರಾಗುವರು ಮತ್ತೆ ಹೊಸಬರು ಅವರ ಸ್ಥಾನವನ್ನು ತುಂಬುವರು. ಹೀಗಾಗಿ ರಾಷ್ಟ್ರದಲ್ಲಿ ಇಂದು ಸುಮಾರು ಒಂದು ಸಾವಿರದಷ್ಟು ನಿರ್ಮಾಪಕರ ಸಂಖ್ಯೆ ಅಬಾಧಿತವಾಗಿ ಉಳಿದಿರುವುದು.

## ಚಿತ್ರಪರಿಶೀಲನ

ಚಿತ್ರಗಳ ಪೂರ್ವ ಪರಿಶೀಲನೆ ಇಂದು ನಮ್ಮ ಚಿತ್ರೋದ್ಯಮದ ಇನ್ನೊಂದು ಪ್ರಮುಖ ಸಮಸ್ಯೆಯಾಗಿ ನಿಂತಿದೆ; ಪೂರ್ವಪರಿಶೀಲನೆ ಹಾಗೂ ಸರ್ಟಿಫಿಕೇಟ್ ನೀಡಿಕೆ ಸಂವಿಧಾನಾತ್ಮಕವಾಗಿಯೂ ಕ್ರಮಬದ್ಧವಾಗಿರುವದಾಗಿಯೂ ವರಿಷ್ಠ ನ್ಯಾಯಾಲಯವು ಒಂದು ಪ್ರಕರಣದಲ್ಲಿ ತೀರ್ಪುನೀಡುವಾಗ ಸ್ಪಷ್ಟವಾಗಿ ಹೇಳಿರುವುದು. ಅದನ್ನು ವಿಧಿಸಿರುವುದು ಸಮಾಜದ ಹಿತದ ದೃಷ್ಟಿಯಿಂದ ಅತ್ಯಂತ ಯೋಗ್ಯವಾಗಿರುವದೆಂದೂ ಅದು ತಿಳಿಸಿರುವುದು. ಚಿತ್ರೋದ್ದಿಮೆ ಹಲವಾರು ತೊಂದರೆಗಳನ್ನು ಇದರಿಂದ ಎದುರಿಸಬೇಕಾಗಿ ಬಂದಿದ್ದರೂ ಗುಣಮಟ್ಟವನ್ನು ಕಾಪಾಡಿಕೊಳ್ಳಲು ಅದು ಸಹಾಯಕಾರಿಯಾಗಿದೆಯೆಂಬುದನ್ನು ಅನೇಕ ನಿರ್ಮಾಪಕರು ಒಪ್ಪಿಕೊಳ್ಳುತ್ತಾರೆ. ಇಂಥ ಒಂದು ಕಟ್ಟುಪಾಡು ಇಲ್ಲದಿದ್ದರೆ, ನಿಯಂತ್ರಣವಿಲ್ಲದೇ ಹೋಗಿದ್ದರೆ ನಾವು ನಿರ್ಮಾಪಕರು ಎಂಥೆಂಥ ಚಿತ್ರಗಳನ್ನು ನಿರ್ಮಿಸುತ್ತಿದ್ದೆವೊ ಎಂದವರು ಅಭಿಪ್ರಾಯವನ್ನು ಪಡುವುದೂ ಉಂಟು. ಆದರೆ ಈಚೆಗೆ ವಿಶೇಷತಃ ಕಳೆದ ೬–೮ ತಿಂಗಳಿಂದ ಇದು ತುಂಬ ವಿವಾದವನ್ನುಂಟುಮಾಡಿರುವುದು. ಹಿಂಸೆ, ಲೈಂಗಿಕತೆ, ಅಪರಾಧಿವೃತ್ತಿ ಈ ಬಗೆಗೆ ಮಂಡಳಿಯು ತುಂಬ ಕಟ್ಟುನಿಟ್ಟಿನಿಂದ ವರ್ತಿಸುತ್ತಿದ್ದು ಅನೇಕ ಚಿತ್ರಗಳಲ್ಲಿಯ ಇಂಥ ಸನ್ನಿವೇಶಗಳಿಗೆ ಕತ್ತರಿ ಪ್ರಯೋಗ ವಿಧಿಸಲಾಗಿದೆ. ಅದನ್ನು ಒಪ್ಪದ ಚಿತ್ರಗಳಿಗೆ ಬಿಡುಗಡೆಗೆ ಅವಕಾಶ ಸಿಕ್ಕಿರುವದಿಲ್ಲ. ಚಿತ್ರೋದ್ಯಮಿಗಳು ಇದರಿಂದ ಗಲಿಬಿಲಿಗೊಂಡಿದ್ದಾರೆ, ಸಿಡಿದೆದ್ದಿದ್ದಾರೆ. ನಿರ್ಮಾಪಕರು, ಅವರ ಸಂಸ್ಥೆಗಳು ಈ ಬಗೆಗೆ ಕೈಕೊಳ್ಳಬೇಕಾದ ಕ್ರಮಗಳನ್ನು ಕುರಿತು ಚರ್ಚಿಸತೊಡಗಿದ್ದಾರೆ, ತೀವ್ರವಾಗಿ ಪ್ರತಿಭಟಿಸುವ ಹವಣಿಕೆಯಲ್ಲಿಯೂ ಇದ್ದಾರೆ. ಸರಕಾರದ ಪರಿಶೀಲನೆಯ ವಿರುದ್ಧ ತಮ್ಮದೇ ಆದ ಒಂದು ಪರಿಶೀಲನಾ ಪದ್ಧತಿಯನ್ನು ಏರ್ಪಡಿಸಿಕೊಳ್ಳುವ ತೀವ್ರ ವಿಚಾರದಲ್ಲಿರುವರು. ಚಿತ್ರಪರಿಶೀಲನೆ ಮಂಡಳಿಯು ಅನುಸರಿಸುವ ಈ ನೀತಿ ಚಿತ್ರಗಳಿಗೆ ಮಾರಕವಾಗಿ ಪರಿಣಮಿಸಿದೆಯೆಂದು ಇಂಥ ಕೆಲ ನಿರ್ಮಾಪಕರು ಹೇಳುತ್ತಿದ್ದಾರೆ. ಈ ವಿಚಾರವು ಸೂಕ್ತವಾದ ರೀತಿಯಲ್ಲಿ ಇತ್ಯರ್ಥವಾಗದೇ ಹೋದರೆ ಚಿತ್ರೋದ್ಯಮದಲ್ಲಿ ಒಂದು ಬಗೆಯ ಬಿಕ್ಕಟ್ಟು ಕೂಡ ತಲೆದೋರಬಹುದೆಂದು ವ್ಯಕ್ತವಾಗುತ್ತಿದೆ.

ನಿರ್ಮಾಪಕರ ತೊಡಕು–ತೊಂದರೆಗಳನ್ನು ಸರಿಯಾಗಿ ಅರಿತುಕೊಳ್ಳದಿರುವುದು, ಅರ್ಥಮಾಡಿಕೊಳ್ಳದಿರುವುದು ಮಂಡಳಿ ಈ ರೀತಿ ಬಿಗುವಿನಿಂದ ವರ್ತಿಸುತ್ತಿರುವುದಕ್ಕೆ ಕಾರಣವಾಗಿದೆ; ಕಲಾತ್ಮಕ ಚಿತ್ರಗಳಿಂದ ವಾಣಿಜ್ಯ ಚಿತ್ರಗಳನ್ನು ಭಿನ್ನವಾಗಿ ಪರಿಗಣಿಸಲು ಇವರು ಮುಂದಾಗುತ್ತಿಲ್ಲ. ನಿರ್ಮಾಪಕರಿಗೆ ಹಾಕಿದ ದುಡ್ಡು ಬಾರದೇ ಹೋಗುವದಾದರೆ ಅವರು ಈ ರಂಗದಲ್ಲಿ ಏಕೆ ಇರಬೇಕು? ನಮ್ಮ ಜನಕ್ಕೆ ಇಂದು ಸಾಮಾನ್ಯ ಮನೋರಂಜನೆ ಬೇಕು. ಕಲಾತ್ಮಕವಾದ ಚಿತ್ರಗಳಿಂದ ಅಂಥ ಮೌಲಿಕ ಚಿತ್ರಗಳಿಂದ ಸಂತೋಷಿಸುವವರು ಎಷ್ಟು ಜನ? ಕೇವಲ ಕೆಲವೇ ಕೆಲವು ಉನ್ನತವರ್ಗದವರು; ಬುದ್ಧಿವಂತರು. ಆದರೆ ಬಹುಜನಕ್ಕೆ ಬೇಕಾದುದು ಸಾಮಾನ್ಯವಾದ ಮನೋರಂಜನೆ.ಬೇಸತ್ತ ಜೀವನಕ್ಕೆ ಅದನ್ನು ಹೋಗಲಾಡಿಸಿಕೊಳ್ಳುವ ರಂಜನೆಬೇಕು. ಅದನ್ನು ವಾಣಿಜ್ಯ ಚಿತ್ರಗಳು ನೀಡುವವು. ಅದಕ್ಕಾಗಿ ಕ್ಯಾಬ್ರೆ, ಹಾಡು, ನೃತ್ಯ, ಸಂಗೀತಗಳ ಸೂತ್ರವು ಬೇಕು. ಲೈಂಗಿಕತೆಯೂ ಬೇಕು; ಅಪರಾಧವೂ ಬೇಕು ಎಂದು ನಾನು ಕಂಡ ಓರ್ವ ಪ್ರಮುಖ ನಿರ್ಮಾಪಕರು ಅಭಿಪ್ರಾಯವನ್ನು ಪಟ್ಟರು. ನಿರ್ಮಾಪಕರ ಸಂಸ್ಥೆಯೂ ಹೆಚ್ಚುಕಡಿಮೆ ಇದೇ ಬಗೆಯ ಅಭಿಪ್ರಾಯವನ್ನು ಹೊಂದಿರುವುದು. ಆದರೆ ಚಿತ್ರ ಎಂಥದೇ ಇರಲಿ ಪುಕ್ಕಟೆ ಯಾರೂ ನೋಡುವದಿಲ್ಲವಲ್ಲ!

## ಖೋಸಲಾ ಆಯೋಗದ ಸೂಚನೆ

ವರಿಷ್ಠ ನ್ಯಾಯಾಲಯವು ಪೂರ್ವ ಪರಿಶೀಲನೆಯು ಕ್ರಮಬದ್ಧವೆಂದು ಸಾರುವ ಸಂದರ್ಭದಲ್ಲಿ ಕೆಲಮಾತುಗಳನ್ನು ಸ್ಪಷ್ಟಪಡಿಸಿರುವುದು. ಲೈಂಗಿಕತೆ ಮತ್ತು ಅಶ್ಲೀಲತೆ ಒಂದೇ ಅಲ್ಲವೆಂದೂ, ಲೈಂಗಿಕತೆಯೇ ಅಶ್ಲೀಲತೆಯೇ ಆಗಲಾರದೆಂದೂ ಅನೈತಿಕವೆನಿಸಲಾರದೆಂದೂ ಹೇಳಿ ಲೈಂಗಿಕತೆ ವ್ಯಾಪಾರಿ ದೃಷ್ಟಿಕೋನವನ್ನು ಹೊಂದಿ ನಿಂತಾಗ ಕತ್ತರಿ ಪ್ರಯೋಗ ಅನಿವಾರ್ಯವೆನಿಸುವದೆಂದು ಅದು ತಿಳಿಸಿದೆ. ಈ ದೃಷ್ಟಿಯಿಂದ ಸರ್ಟಿಫಿಕೆಟ್ಟುಗಳನ್ನು ಕೊಡುವಾಗ ಎರಡು ವರ್ಗಗಳನ್ನೂ ಮಾಡಲಾಗಿರುವುದು.' 'U' ಸಾರ್ವತ್ರಿಕ: ಮಕ್ಕಳು ಹಿರಿ–ಕಿರಿಯರು ಎಲ್ಲರೂ ನೋಡಬಹುದು. 'A' ಕೇವಲ ಪ್ರೌಢರಿಗಾಗಿ ೧೮ ವರುಷದ ಮೇಲಿನವರು ಮಾತ್ರ, ಆದರೆ ಈ ನಿಯಮಗಳನ್ನು ನಮ್ಮ ಪ್ರದರ್ಶಕರು ಅನೇಕ ಸಲ ಕಟ್ಟುನಿಟ್ಟಾಗಿ


ದೀಪಾವಳಿಯ
ಹಾರ್ದಿಕ
ಶುಭಾಶಯಗಳು



ಸರ್ವಗ್ರಾಹಕರಿಗೂ ಮತ್ತು ರೈತ ಬಂಧುಗಳಿಗೂ
ಹಾರ್ದಿಕ ಶುಭಾಶಯಗಳು

ಎಮ್. ಜೆ. ಫರ್ಟಿಲಾಯಝರ್ಸ ಪ್ರಾ. ಲಿ.

ಫ್ಯಾಕ್ಟರಿ: ಹೊನಗೆ ಜಿಲ್ಲಾ : ಬೆಳಗಾವಿ
ಆಫೀಸ್: ಪುಣೆ ಬೆಂಗಳೂರ ರಸ್ತೆ ಬೆಳಗಾವಿ
ಗ್ರಾಮ: 'ಎಮ್ ಜೆ.' ಫೋನ್ : 1618

ರಜಿಸ್ಟರ್ಡ್ ಆಫೀಸ : ಲಕ್ಷ್ಮೀಪುರಿ, ಕೊಲ್ಹಾಪುರ

# ನಿಮ್ಮ ಕನಸು ಅಫಘಾನ ಸ್ನೋದಿಂದ ನನಸಾಗಲಿ !

ಒಂದೇ ಒಂದು
ಪರಿಪೂರ್ಣ ಸೌಂದರ್ಯ
ವರ್ಧಕ ಪ್ರಸಾಧನ.
ನಿಮ್ಮ ರೂಪ-ಲಾವ
ಣ್ಯಕ್ಕೆ ಪರಿಪೂರ್ಣತೆ
ಕೊಡುತ್ತದೆ.
ಅಫಘಾನ್ ಸ್ನೋ
ತತ್ಕಾಲ ಮೃದು
ಕ್ರಿಯೆಗೆ ಒಳಪಟ್ಟು
ನಿಮ್ಮಲ್ಲಿ ಸುಪ್ತವಾದ
ಸುಕುಮಾರ
ಸೌಂದರ್ಯವನ್ನು
ಪ್ರಕಟಪಡಿಸುತ್ತದೆ.




AFGHAN SNOW E. S. PATANWALA, BOMBAY-86

ಪಾಲಿಸುತ್ತಿಲ್ಲವೆಂಬುದನ್ನು ನಾನು ಕಂಡಾರೆ ಕಂಡಿದ್ದೇನೆ. 'A' ಸರ್ಟಿಫಿಕೆಟ್ ಪಡೆದ ಚಿತ್ರಗಳಿಗೆ ಇಂಥ ಎಳೆವರೆಯದವರ ಅತಿ ದಟ್ಟಣೆ. ಜನರನ್ನು ಸುಲಭವಾಗಿ ಆಕರ್ಷಿಸುವ ಸಾಧನೆಯಾಗಿ ಈ ಸರ್ಟಿಫಿಕೆಟ್ ಪರಿಣಮಿಸಿದೆ. ನಿರ್ಮಾಪಕರಲ್ಲಿ ಅನೇಕರಿಗೆ ಅದನ್ನು ಪಡೆಯುವ ಹವಣಿಕೆ ಉಂಟಾಗುವುದು ಸ್ವಾಭಾವಿಕವು. ಈ ಅಂಶವನ್ನು ಗಮನಿಸಿದಾಗ ಹೊಸಲಾ ಆಯೋಗದ ಸೂಚನೆ ಗಮನಾರ್ಹ. ಅದು ಇವೆರಡರ ಮಧ್ಯದಲ್ಲಿ ಒ ವರ್ಗ ನಿರ್ಮಿಸಿದ. ಬಾಲಕರೊಂದಿಗೆ ಮಕ್ಕಳು ನೋಡಬಹುದಾದ ಚಿತ್ರಗಳ ವರ್ಗ ಇದು. ಚುಂಬನ ಮತ್ತು ನಗ್ನತೆಯ ಪ್ರದರ್ಶನಗಳಿಗೆ ಅದು ಅವಕಾಶ ನೀಡಿದೆಯೆಂದು ಕೆಲ ದಿನಗಳ ಹಿಂದೆ ತೀವ್ರವಾದ ಆಕ್ಷೇಪಣೆ ಕೂಡ ಕೇಳಿಬಂತು. ಕಥೆಯ ಭಾಗವಾಗಿ ಅದನ್ನು ನಿರೂಪಿಸುವಾಗ ಚುಂಬಿಸುವ ಮತ್ತು ನಗ್ನತೆಯ ಸನ್ನಿವೇಶ, ದೃಶ್ಯಗಳು ಬಂದರೆ ಅವು ಕಲಾತ್ಮಕವಾಗಿ ಮೂಡಿಸಲ್ಪಡಬೇಕು; ಅಂಥ ದೃಶ್ಯಗಳನ್ನು ಚಿತ್ರಿಸಬಾರದು. ಅವನ್ನು ಇಡಿಯಾಗಿ ಇರಗೊಡಬೇಕು. ಅದೇ ಅಂಥ ಅನೇಕ ದೃಶ್ಯಗಳನ್ನು ಅನಾವಶ್ಯಕವಾಗಿ ವ್ಯಾಪಾರಿದೃಷ್ಟಿಯಿಂದ ಸೇರಿಸಿದ್ದರೆ ಇಡೀ ಚಿತ್ರವನ್ನೇ ನಿರಾಕರಿಸಬೇಕು. ಅದರ ಈ ಸೂಚನೆ ಪಿಶವಾಗಿ ಸುವರ್ಣಮಾಧ್ಯಮವಾಗಿರುವುದು.

ಪರಿಶೀಲಕರು ವಿದೇಶಿ ಚಿತ್ರಗಳಿಗೆ ಒಂದು, ಭಾರತೀಯ ಚಿತ್ರಗಳಿಗೆ ಇನ್ನೊಂದು ಹೀಗೆ ಎರಡು ಮಟ್ಟಗಳನ್ನು ಅನುಸರಿಸುತ್ತಾರೆಂಬ ತೀವ್ರವಾದ ಆಕ್ಷೇಪಣೆಯೂ ಇದೆ; ಅದೇಕೆ ಹಿಂದಿ ಚಿತ್ರಗಳಿಗೊಂದು, ಇತರ ಭಾರತೀಯ ಚಿತ್ರಗಳಿಗೆ ಮತ್ತೊಂದು ಮಟ್ಟ ಅನುಸರಿಸುತ್ತಾರೆಂದು ಪ್ರಮುಖ ದಾಕ್ಷಿಣಾತ್ಯ ನಿರ್ಮಾಪಕರು, ನಿರ್ದೇಶಕರು ನನ್ನಲ್ಲಿ ತಿಳಿಸಿದರು. ವಿದೇಶಿ ಚಿತ್ರಗಳಲ್ಲಿ ಬರುವ ಚುಂಬನ, ನಗ್ನತೆ, ಹಿಂಸೆ ಅವರ ಪರಿಸರದ ಸ್ವಾಭಾವಿಕ ಚಿತ್ರಣ, ಮೇಲಾಗಿ ಅವನ್ನು ನೋಡುವ ಪ್ರೇಕ್ಷಕರ ಸಂಖ್ಯೆ ಅತ್ಯಲ್ಪ ಎಂದು ಈ ವಿಷಯದಲ್ಲಿ ಹೇಳಲಾಗುತ್ತಿದೆ. ಇಂದು ನಗರ ಪಟ್ಟಣಗಳಲ್ಲಿ ನೃತ್ಯ ಸಂಗೀತಗಳ ಸಾಮೂಹಿಕತೆಯ ಹಾವಳಿ ಹೆಚ್ಚಿದೆಯೆಂಬ ಮಾತು ನಿಜವಾಗಿದ್ದರೂ, ಉಚ್ಚವರ್ಗದವರ ಕ್ಲಬ್ಬುಗಳೂ ಇದಕ್ಕೆ ಹೊರತಾಗಿಲ್ಲವೆಂಬ ಮಾತಿನಲ್ಲಿ ತಥ್ಯವಿದ್ದರೂ ಈ ಚಿತ್ರಗಳನ್ನು ನೋಡುವ ನಮ್ಮ ಗ್ರಾಮಾಂತರ ಪ್ರದೇಶದ ಯುವಕರು, ಕೃಷಿಕರು ಏನು ತಪ್ಪು ಮಾಡಿದ್ದಾರೆ?, ಅವರ ಮೇಲೇಕೆ ಈ ಚಿತ್ರಗಳನ್ನು ಹೇರಬೇಕು? ಎಂದು ಕೇಳುವವರಿಗೆ ನಮ್ಮ ನಿರ್ಮಾಪಕರಲ್ಲಿ ಯಾವ ಉತ್ತರವೂ ಇಲ್ಲ. ಈ ಮಾತನ್ನು ಅನುಲಕ್ಷಿಸಿದಾಗ ಎಲ್ಲ ಚಿತ್ರಗಳಿಗೂ ಈ ಸಾಮಾನ್ಯ ಸೂತ್ರ ನಿಜವಾಗಿ ಅವಶ್ಯವಿಲ್ಲ. ಇಂಥ ಸೂತ್ರದ ಚಿತ್ರವೊಂದು ಯಶಸ್ವಿಯಾದಾಗ ಎಲ್ಲ ನಿರ್ಮಾಪಕರೂ ಅದಕ್ಕೆ ಮುಗಿಬೀಳುವರು. ಆದರೆ ಭಾರತೀಯ ಸಂಸ್ಕೃತಿಯ ಚೌಕಟ್ಟಿನಲ್ಲಿ ಚಿತ್ರಗಳನ್ನು ನಿರ್ಮಿಸುವುದೇ ಶ್ರೇಯಸ್ಕರವಾದುದು ಎಂಬುದನ್ನು ನಮ್ಮ ನಿರ್ಮಾಪಕರು ಗಮನಿಸಿದರೆಷ್ಟು ಚೆನ್ನ!

## ಚಿತ್ರ ವಿತರಣೆ

ಚಿತ್ರಗಳ ವಿತರಣೆ ನಮ್ಮ ಚಿತ್ರೋದ್ದಿಮೆ ಎದುರಿಸುತ್ತಿರುವ ಇನ್ನೊಂದು ಮಹತ್ವರವಾದ ಸಮಸ್ಯೆಯಾಗಿದೆ. ಚಿತ್ರೋದ್ಯಮದಲ್ಲಿ ಅವರ ಪಾತ್ರವೂ ಪ್ರಮುಖವಾದುದು. ವ್ಯಾವಹಾರಿಕ ದೃಷ್ಟಿಯಿಂದ ಇವರು ಚಿತ್ರಗಳ ಸಗಟು ವ್ಯಾಪಾರಿಗಳು–ನಿರ್ಮಾಪಕ ಮತ್ತು ಪ್ರದರ್ಶಕನ ನಡುವಿನ ಕೊಂಡಿ ಇವರು. ೧೯೨೮ರಲ್ಲಿ ಇಂಥ ಸಂಸ್ಥೆಗಳು ಕೇವಲ ೧೧ ಇದ್ದವು. ಅವು ಕೂಡ ವಿದೇಶಿ ಚಿತ್ರಗಳ ಹಂಚಿಕೆ ನೋಡಿಕೊಳ್ಳುತ್ತಿದ್ದವು. ಈಗ ಸುಮಾರು ೧೨೦೦ ಚಿತ್ರಹಂಚಿಕಾ ಸಂಸ್ಥೆಗಳು ಕೆಲಸ ಮಾಡುತ್ತಿದ್ದು ಸುಮಾರು ಹತ್ತು ಸಾವಿರ ಜನರು ಅವುಗಳಲ್ಲಿ ನಿರತರಾಗಿರುವರು. ನಿರ್ಮಾಪಕ, ಹಂಚಿಕೆದಾರ ಪ್ರದರ್ಶಕ ಪರಸ್ಪರ ಅವಲಂಬಿತರು. ಅವರಲ್ಲಿ ಯಾರಾದರೊಬ್ಬರು ಹಿಂದೇಟು ಹಾಕಿದರೂ ತೊಂದರೆಯೇ. ಆದರೂ ಹಂಚಿಕೆದಾರನ ಸಮಸ್ಯೆ ವಿಚಿತ್ರವಾದುದು. ಅವನು ಚಿತ್ರಗಳನ್ನು ನೋಡದೆಯೇ ಅವನ್ನು ಹಂಚಿಕೆಗೆ ಪಡೆದುಕೊಳ್ಳುವ ಕರಾರು ಮಾಡಿಕೊಳ್ಳುವನು. ನಿರ್ಮಾಪಕನಿಗೆ ಮುಂಗಡ ನೀಡುವನು. ಚಿತ್ರ ನಿರ್ಮಾಣ


JOHNSTON
TURBINE PUMPS



ದೀಪಾವಳಿಯು ಸರ್ವರಿಗೂ
ಶುಭವನ್ನೀಯಲಿ !!

ಜಾನ್‌ಸ್ಟನ್
ಟರ್ಬಾಯಿನ್
ಪಂಪುಗಳು

ದಯವಿಟ್ಟು ಸಂಪರ್ಕ
ಬೆಳೆಸಿರಿ



ಮೆ ||
ಎಸ್. ಸಿ.
ಜಿಗಜಿನ್ನಿ

ಸ್ಟೇಶನ್ ರಸ್ತೆ, ಬಾಗಲಕೋಟೆ

Phone: 72

40-41, ಫೋರ್ಟ ರಸ್ತೆ, ಬೆಳಗಾವಿ

ಫೋನ್ : 2372

# ಪೆಟ್ರೋಲಿಯಮ್ ಉತ್ಪಾದನೆ ಎಲ್ಲಿ ಬೇಕಾದಲ್ಲಿಗೆ ತಲುಪಿಸುತ್ತದೆ

ರಾಷ್ಟ್ರವ್ಯಾಪಿ ಸಂಗ್ರಹಣ ಹಾಗೂ ವಿತರಣಾಲಯಗಳಿಂದ "ಇಂಡಿಯನ ಆಯಿಲ" ಸಂಸ್ಥೆಯು ರಾಷ್ಟ್ರಕ್ಕೆ ಸೇವೆ ಸಲ್ಲಿಸಲು ಪೆಟ್ರೋಲಿಯಂ ಉತ್ಪಾದನೆಗಳ ಅಬಾಧಿತ ಪ್ರವಾಹವನ್ನೇ ಇಟ್ಟುಕೊಂಡಿದೆ.

೨೦೦ ಇನ್‌ಸ್ಟಾಲೇಶನ್ನುಗಳು, ಬಲ್ಕ ಡಿಪೋಗಳು ಮತ್ತು ವಾಯುಮಾರ್ಗದ ಇಂಧನ ಪೂರೈಕೆ ಸ್ಟೇಶನ್ನುಗಳು, ಮತ್ತು ೩೦೦೦ ಕ್ಕೂ ಮಿಕ್ಕಿ ಪೆಟ್ರೋಲ್/ಡಿಸೆಲ್ ಸ್ಟೇಶನ್ನುಗಳು-ಇವೆಲ್ಲವುಗಳ ಮೂಲಕ ಈ ಉತ್ಪಾದನೆಗಳನ್ನು ಎಲ್ಲಿ ಬೇಕಾದಲ್ಲಿಗೆ ತಲುಪಿಸಲು ಇಂಡಿಯನ್ ಆಯಿಲ್ ಆಶ್ವಾಸನೆ ಕೊಡುತ್ತದೆ.

ಸಮುದ್ರ ಕಿನಾರೆಯ ಟ್ಯಾಂಕರುಗಳು, ಪೈಪುಲಾಯಿನುಗಳು, ರೇಲ್ ಟ್ಯಾಂಕ ವಾಗೀನುಗಳು, ಟ್ಯಾಂಕ ಟ್ರಕ್ಸ ಮತ್ತು ಟ್ಯಾಂಕ ಗಾಡಿಗಳು ಇತ್ಯಾದಿ ಸಾಗಾಟದ ಎಲ್ಲ ನಮೂನೆಗಳನ್ನು ಸೇವೆಯಲ್ಲಿ ಅಣಿಗೊಳಿಸಲಾಗಿದೆ.

೧೯೭೧-೭೨ ರಲ್ಲಿ ಇಂಡಿಯನ್ ಆಯಿಲ್ ಸಂಸ್ಥೆಯು ಅಂದಾಜು ೧೪ ದಶಲಕ್ಷ ಕಿಲೋಲೀಟರಿನಷ್ಟು ಮಾರಾಟ ಮಾಡಿದೆ. ಹೀಗೆ ರಾಷ್ಟ್ರದ ಪೆಟ್ರೋಲಿಯಂ ಉತ್ಪಾದನೆಯ ಒಟ್ಟು ಅವಶ್ಯಕತೆಯ ಸುಮಾರು ೫೫% ನಷ್ಟು ಪೂರೈಸಲಾಗಿದೆ. ಹೀಗೆ ಅಭಿವೃದ್ಧಿ ಯೋಜನೆಗಳಲ್ಲಿಯೂ ಹಾಗೂ ಸಂರಕ್ಷಣ ಪ್ರಯತ್ನಗಳಲ್ಲಿಯೂ ರಾಷ್ಟ್ರಕ್ಕೆ ಅನುಪಮ ಸೇವೆ ಸಲ್ಲಿಸುತ್ತದೆ.




ಆರ್ಥಿಕ ಅಭಿವೃದ್ಧಿಗಾಗಿ ಒಂದು ರಾಷ್ಟ್ರೀಯ ವಿಕ್ಷೇಪ

**ಇಂಡಿಯನ್ ಆಯಿಲ್ ಕಾರ್ಪೊರೇಶನ್ ಲಿ.,**



ದಲ್ಲಿ ವಿಲಂಬವಾಗಲಿ, ಹೆಚ್ಚು ವೆಚ್ಚಬರಲಿ ಇವನು ಸಹಿಸಬೇಕು. ಪ್ರದರ್ಶಕ ಬೇಗ ಥಿಯೇಟರು ಕೊಡದಿದ್ದರೂ ಇವನು ಸಹಿಸಬೇಕು. ಈಗ ತುಂಬ ಚಿತ್ರಗಳು ಬರುತ್ತಿರುವದರಿಂದ ಪ್ರದರ್ಶಕ ಬೇಗ ಥಿಯೇಟರು ಕೊಡುವದಿಲ್ಲ. ಅಲ್ಲದೇ ಆದಾಯ ಸ್ವಲ್ಪ ಕಡಿಮೆಯಾದರೂ ಕಿತ್ತಿ ಹಾಕಿಬಿಡುವನು. ಪ್ರಚಾರದ ಹೊಣೆಗಾರಿಕೆ, ಗಳಿಕೆಯ ಹೊಣೆಗಾರಿಕೆ, ಅದನ್ನು ಯಶಸ್ವಿಗೊಳಿಸುವ ಹೊಣೆಗಾರಿಕೆ ವಿತರಕನದು. ಅವನು ಕಣ್ಣುಮುಚ್ಚಿ ಚಿತ್ರ ತೆಗೆದುಕೊಂಡಿರುತ್ತಾನೆ. ಅಂಧಕಾರದಲ್ಲಿ ಸಿಕ್ಕು ತೊಳಲಾಡುವ ಕುರುಡನಂತೆ ಅವನು ಎಂದು ನಮ್ಮ ಪ್ರಮುಖ ಹಂಚಿಕೆದಾರರೊಬ್ಬರು ನನಗೆ ಅವರ ಪಾತ್ರದ ಬಗೆಗೆ ವಿವರಿಸುತ್ತ ನುಡಿದರು. ತಾವು ಸ್ವತಃ ಬಂಡವಲು ತೊಡಗಿಸಿ, ಶ್ರಮಕ್ಕೆ ತಕ್ಕ ಪ್ರತಿಫಲವಿಲ್ಲದೆ ದುಡಿವ ವರ್ಗ ಇವರದಾಗಿದೆ. ಆದರೂ ನಿರ್ಮಾಪಕರಿಗೆ ಅವನು ಇಂಥದೇ ತಾರಾ ಜೋಡಿ ಇರಬೇಕು; ಕಥಾವಸ್ತು ಈ ರೀತಿ ಇರಬೇಕು ಇಂಥ ಕರಾರುಗಳನ್ನು ಹಾಕಬಹುದು. ಪ್ರದರ್ಶಕನಿಗೂ ಅವನು ಹಲವಾರು ಸಲ ಕರಾರುಗಳನ್ನು ಹಾಕಬಹುದು. ತನ್ನ ಹಳೆಯ ಚಿತ್ರಗಳನ್ನು ತೆಗೆದುಕೊಳ್ಳುವ ಪ್ರದರ್ಶಕನಿಗೇ ಹೊಸ ಚಿತ್ರಗಳನ್ನು ಕೊಡುವದಾಗಿ ಹೇಳಬಹುದು. ಆದರೆ ವ್ಯವಹಾರದಲ್ಲಿ ಅವನು ಕಷ್ಟನಷ್ಟಗಳನ್ನು ವಹಿಸುವ ಸಂಭವಗಳೇ ಹೆಚ್ಚು. ಇಂಥ ಒಂದು ಎದೆಗಾರಿಕೆಯನ್ನು ಅವನು ಈ ರಂಗದಲ್ಲಿ ತೋರಿಸುವುದು ಅವಶ್ಯವಿದೆ. ಹಾಗಿಲ್ಲವಾದರೆ ಅವನು ಯಶಸ್ವಿಯಾಗಿ ಪರಿಸ್ಥಿತಿ ಎದುರಿಸಲಾರ, ಕೆಲಸವನ್ನು ಮಾಡಲಾರ.



ದೀಪಾವಳಿಯು ಸರ್ವರಿಗೂ ಸುಖ, ಶಾಂತಿ,
ಅಭಿವೃದ್ಧಿಯನ್ನೀಯಲಿ !!


ಅರ್ಕ-ಲಿವ

ಕಾಮಿಣಿಯ ಮೇಲೆ ಪ್ರಭಾವಿ ಔಷಧ

ಯಕೃತ ವೃದ್ಧಿ, ಹಾಗೂ ಪಿತ್ತ ಪ್ರಧಾನ
ರೋಗಗಳ ಮೇಲೆ ಬಹಳ ಪರಿಣಾಮ
ಕಾರಿಯಾಗಿದೆ ಬದ್ಧಕೋಷ್ಟತೆ, ಅಗ್ನಿ ಮಾಂದ್ಯ,
ತಿಸ್ಸೃತ್ಯ ಆಹಾರಗಳ ದೋಷ ಗಳಿಂದ
ಆಗುವ ಕಾಹಿಲೆಗಳ ಮೇಲೆ ಇದು
ಚೆನ್ನಾಗಿ ಕೆಲಸ ಮಾಡುತ್ತದೆ, ಮುಖ್ಯ
ಯಕೃತ ದೋಷ ಹಾಗೂ ಕಾಮಿಣಿ
ರೋಗದ ಮೇಲೆ ಅತ್ಯಂತ
ಪ್ರಭಾವಿಯಾಗಿ ಕಾರ್ಯಮಾಡುತ್ತದೆ.





ಆಯುರ್ವೇದೀಯ ಅರ್ಕಶಾಲಾ ಲಿ. ಸಾತಾರಾ.
ಕರ್ನಾಟಕ ಕೇಂದ್ರ: ಕೊಪ್ಪೀಕರ ರೋಡ, ಹುಬ್ಬಳ್ಳಿ—ಟಿ. ನಂ. 3670

ಅರ್ಕಶಾಲಾ ಮಾರಾಟ ಕೇಂದ್ರಗಳು:
೧೫೧೧೪, ಮಾರುತಿಗಲ್ಲಿ, ಬೆಳಗಾವಿ.
ಮುನ್ಸಾರ್ಸ ಮಾರ್ಕೆಟ, ಶಿವರಾಮ ಪೇಟೆ ಮೈಸೂರು-೧


## ಚಿತ್ರಮಂದಿರಗಳ ಕೊರತೆ

ಪ್ರದರ್ಶಕ, ಚಿತ್ರೋದ್ಯಮದಲ್ಲಿ ಮೂರನೆಯ ಪ್ರಮುಖ ಅಂಗವನ್ನು ನಿರ್ವಹಿಸುವ ವ್ಯಕ್ತಿ. ಥಿಯೇಟರ ಮಾಲಿಕನೇ ಇವನು. ಇಂದು ರಾಷ್ಟ್ರದಲ್ಲಿ ಸುಮಾರು ೮ ಸಾವಿರ ಚಿತ್ರಮಂದಿರಗಳಿವೆ. ಆದರೆ ಈ ಸಂಖ್ಯೆ ನಮ್ಮ ಜನಸಂಖ್ಯೆಯ ದೃಷ್ಟಿಯಿಂದ ಏನೂ ಸಾಲದು. ಸಾಮಾನ್ಯವಾಗಿ ೪ಲಕ್ಷ ಜನಕ್ಕೆ ೧ಚಿತ್ರಮಂದಿರವಿರುವುದು. ನಗರಪಟ್ಟಣಗಳಲ್ಲಿಯೇ ಅವು ಹೆಚ್ಚು. ಗ್ರಾಮಾಂತರ ಪ್ರದೇಶಕ್ಕೆ ಚಿತ್ರಗಳು ನೇರವಾಗಿ ತಲುಪಲು ಇನ್ನೂ ಎಷ್ಟು ದಿವಸ ಬೇಕೊ! ಇಂದು ಚಿತ್ರೋದ್ಯಮ ಎದುರಿಸುತ್ತಿರುವ ನಿಜವಾದ ಸಮಸ್ಯೆಗಳಲ್ಲಿ ಚಿತ್ರಮಂದಿರಗಳ ಕೊರತೆ ಅತಿ ಮುಖ್ಯವಾದುದು. ಇದರಿಂದಾಗಿ ಹೊಸಚಿತ್ರಗಳು ಪ್ರದರ್ಶನಕ್ಕೆ ಪಾಳಿ ಹಚ್ಚಬೇಕು. ಕನಿಷ್ಠ ಆದಾಯದ ಭರವಸೆ ಮೊದಲಾಗಿ ಕರಾರುಗಳು ಈ ಮೂಲಕ ಸೃಷ್ಟಿಯಾಗುತ್ತಿವೆ. ಈ ರಂಗದಲ್ಲಿ ಸುಮಾರು ೯೦ ಸಾವಿರದಷ್ಟು ಕೆಲಸಗಾರರು ಇದ್ದಾರೆ. ಚಿತ್ರಗಳು ಬೇಗ ಬೇಗ ಪ್ರದರ್ಶನ ಕಾಣದೆ, ಆ ಮೂಲಕ ತಾನು ತೊಡಗಿಸಿದ ಹಣ ಬೇಗ ಬೇಗ ಕೈಸೇರದೆ ಹಂಚಿಕೆದಾರ ಮತ್ತು ನಿರ್ಮಾಪಕ ತೊಳಲಾಡುತ್ತಿರುವರು. ಚಿತ್ರಮಂದಿರಗಳ ಸಂಖ್ಯೆಯನ್ನು ಹೆಚ್ಚಿಸಲು ಚಿತ್ರ ಹಣಕಾಸಿನ ನಿಗಮದವರು, ಹಂಚಿಕೆದಾರರು, ಅದೇಕೆ ನಿರ್ಮಾಪಕರು ತುಂಬ ಯತ್ನಿಸುತ್ತಿರುವರು. ಆದರೆ ಚಿತ್ರಮಂದಿರಗಳಲ್ಲಿ ಬಂಡವಲು ತೊಡಗಿಸಿ ನಾನಾ ಸಮಸ್ಯೆ ಎದುರಿಸುತ್ತಿರುವ ಹಲವಾರು ಪ್ರದರ್ಶಕರು, ಚಿತ್ರಮಂದಿರ ನಡೆಸುವ ಪಾಡು ಯಾರಿಗೂ ಬೇಡ ಎಂದು ತಮ್ಮ ಅನುಭವವನ್ನು ವಿವರಿಸಿದರು. ಸ್ಥಳ ದೊರಕಿಸಲು ಅನೇಕರ ಕಾಲು ಹಿಡಿಯಬೇಕು; ಕಟ್ಟಡ ನಿರ್ಮಿಸಲು ಸಾಮಗ್ರಿಗಳ ಕೊರತೆ. ಇವೆಲ್ಲ ಎದುರಿಸಿ ಮಂದಿರ ನಿರ್ಮಿಸಿದ ನಂತರ ಪ್ರತಿ ವರುಷ ಲೈಸೆನ್ಸಗಾಗಿ ಪರದಾಟ, ಲೋಕೋಪಯೋಗಿ ವಿಭಾಗ, ಆರೋಗ್ಯ ವಿಭಾಗ, ವಿದ್ಯುತ್ ವಿಭಾಗ, ಕರವಿಭಾಗ ಹೀಗೆ ನಾನಾ ವಿಭಾಗದವರನ್ನು ಸಂಬಾಳಿಸಬೇಕು. ಪ್ರೇಕ್ಷಕರನ್ನು ಸಂಭಾಳಿಸಬೇಕು. ಅಲ್ಲದೇ ಮನರಂಜನಾ ಕರ, ಪ್ರದರ್ಶನ ತೆರಿಗೆ ಮೊದಲಾದವನ್ನು ನೇರವಾಗಿ ಸಲ್ಲಿಸಬೇಕು. ಅನೇಕ ಸಲ ಹಂಚಿಕೆದಾರರು ಉತ್ತಮ ಚಿತ್ರಗಳಿಗೆ ಕರಾರು ಹಾಕುವರು. ತುಂಬ ಬೇಸರ ಬಂದು ಹೋಗುವುದು ಎಂದು ಈ ರಂಗದಲ್ಲಿ ಹಲವಾರು ದಿನಗಳಿಂದ ಇರುವ ಪ್ರಮುಖ ಪ್ರದರ್ಶಕರು ಅಭಿಪ್ರಾಯಪಟ್ಟರು. ಇಷ್ಟಿದ್ದರೂ ಇದು ಲಾಭದಾಯಕವಾದ ವೃತ್ತಿ ಎಂಬುದನ್ನು ಅವರು ಒಪ್ಪಿಕೊಳ್ಳುವರು. ಆದರೆ ಅನೇಕ ಚಿತ್ರಮಂದಿರಗಳು ಪ್ರೇಕ್ಷಕರಿಗೆ ಕನಿಷ್ಠ ಸೌಕರ್ಯಗಳನ್ನು ಒದಗಿಸಲು ಮುಂದಾಗುವದಿಲ್ಲ; ಫ್ಯಾನುಗಳು ಸರಿಯಾಗಿರುವದಿಲ್ಲ. ಆಸನಗಳು ವ್ಯವಸ್ಥಿತವಾಗಿರುವದಿಲ್ಲ. ಮುಂಗಡ ತಿಕೀಟನ ಏರ್ಪಾಡು ಇಲ್ಲ; ಹೊರಗೆ ನಿಂತುಕೊಂಡೇ ಇರಬೇಕು. ಹೆಣ್ಣುಮಕ್ಕಳಿಗೆ ಕೂಡ ಕೂಡಲು-ಯೋಗ್ಯ ಏರ್ಪಾಡು ಇರುವದಿಲ್ಲ: ಕೆಲ ಚಿತ್ರಮಂದಿರಗಳಲ್ಲಿ ಯೋಗ್ಯ ಯಂತ್ರೋಪಕರಣಗಳೂ ಇರುವದಿಲ್ಲ. ಈ ಮಾತು ಬೇರೆ. ಹೀಗಿದ್ದರೂ ದಟ್ಟಣೆ ತುಂಬ. ನೂಕು ನುಗ್ಗಲು. ಅನೇಕ ಸಲ ಸ್ಥಳಾವಕಾಶ ಸಾಲದೇ ಬಂದಾಗ ಹೆಚ್ಚಿನ ಆಸನಗಳು; ಚಿತ್ರಮಂದಿರಗಳ ಸಂಖ್ಯೆ ಹೆಚ್ಚುವದರ ಜೊತೆಗೆ ಪ್ರೇಕ್ಷಕರಿಗೆ ಕನಿಷ್ಠ ಸೌಲಭ್ಯಗಳು ದೊರೆಯಬೇಕು, ಚಿತ್ರೋದ್ಯಮದ ನಿಜ

ದೀಪಾವಳಿಯ ಸುಸಂದರ್ಭದಲ್ಲಿ ನಮ್ಮೆಲ್ಲ



ಹಿತಚಿಂತಕರಿಗೂ ಗ್ರಾಹಕರಿಗೂ ಅಭಿನಂದನೆಗಳು



## ಪ್ರವಾಸಿಗರ ನೆಚ್ಚಿನ ಆಯ್ಕೆ

# ಹೊಟೆಲ್ ಅನುಪಮ

ಸ್ಟೇಶನ್ ರೋಡ್,
ಬೆಳಗಾವಿ





★ ಅತ್ಯಾಧುನಿಕ ಮಾದರಿಯಲ್ಲಿ ನಿರ್ಮಾಣಗೊಂಡ ಅನುಪಮವಾದ ಹೊಟೆಲ್

## ಊಟ, ವಸತಿ ಮತ್ತು ಉಪಹಾರಗೃಹ

ಗ್ರಾಮ : "ಅನುಪಮ",



ಫೋನ್ಸ್ { 2005, 2006, 2007






ಬಹುಮಾನಗಳ ಒಟ್ಟು ಮೊತ್ತ

ರೂ. 17,39,200

| | | | |
|---|---|---|---|
| 4 ಮೊದಲನೆಯ ಬಹುಮಾನಗಳು | ರೂ. | 1,00,000 | ಪ್ರತಿಯೊಂದು |
| 4 ಎರಡನೆಯ ಬಹುಮಾನಗಳು | ರೂ. | 10,000 | ಪ್ರತಿಯೊಂದು |
| 4 ಮೂರನೆಯ ಬಹುಮಾನಗಳು | ರೂ. | 5,000 | ಪ್ರತಿಯೊಂದು |
| 80 ನಾಲ್ಕನೆಯ ಬಹುಮಾನಗಳು | ರೂ. | 1,000 | ಪ್ರತಿಯೊಂದು |
| 400 ಐದನೆಯ ಬಹುಮಾನಗಳು | ರೂ. | 500 | ಪ್ರತಿಯೊಂದು |
| 2,000 ಆರನೆಯ ಬಹುಮಾನಗಳು | ರೂ. | 100 | ಪ್ರತಿಯೊಂದು |
| 4,000 ಏಳನೆಯ ಬಹುಮಾನಗಳು | ರೂ. | 50 | ಪ್ರತಿಯೊಂದು |

ಬಹುಮಾನ ಗೆಲ್ಲಲು
6493 ಅವಕಾಶಗಳು
ಸಾವಿರಾರು ಸಮಾಧಾನ ಬಹುಮಾನಗಳು.

ಪ್ರತಿ ಟಿಕೆಟ್ಟಿನ ಬೆಲೆ
ರೂ. 1 ಮಾತ್ರ






ಏಕೈಕ ಅಧಿಕೃತ ಮಾರಾಟಗಾರರು:
ಮೈಸೂರು ಸೇಲ್ಸ್
ಇಂಟರ್‌ನ್ಯಾಷನಲ್ ಲಿ
(ಲಾಟರಿ ವಿಭಾಗ) 'ಹರಿನಿವಾಸ್'
36, ಕನ್ನಿಂಗ್‌ಹ್ಯಾಂ ರಸ್ತೆ,
ಬೆಂಗಳೂರು-560052 ಫೋ 26713
ಶಾಖೆಗಳು:
ಮುಂಬಾಯಿ, ದೆಹ್ಲಿ, ಮದ್ರಾಸು.

ಸಾಹ-ಸಾಕ 387

ವಾದ ಅನ್ನದಾತನಿಗೆ ಯೋಗ್ಯವಾದ ಮನ್ನಣೆ-ಪುರಸ್ಕಾರ ಇನ್ನೂ ದೊರೆಯಬೇಕಿದೆ.

## ಕಥೆ-ತಾರಾಗಣ

ಚಿತ್ರನಿರ್ಮಾಪಕನು ಹಣಕಾಸನ್ನು ಒದಗಿಸಿಕೊಂಡನಂತರ ಕಥೆ, ತಾರಾಗಣ ನಿರ್ಮಾಣ ಸಿಬ್ಬಂದಿ, ದಿಗ್ದರ್ಶಕ, ಸಂಗೀತ, ನೃತ್ಯ, ಸಂಯೋಜನೆ, ಸ್ಟುಡಿಯೊ, ಸಂಕಲನ, ಕಚ್ಚಾಸರಕು ಈ ಮೊದಲಾದವನ್ನು ಏರ್ಪಡಿಸಿಕೊಳ್ಳಬೇಕು. ನಿರ್ಮಾಣ ಪೂರೈಸಿದ ನಂತರ ಪ್ರಚಾರ, ಬಿಡುಗಡೆ ಏರ್ಪಾಡು, ಅತ್ತ ಲಕ್ಷ್ಯವಹಿಸಬೇಕು. ಇವುಗಳಲ್ಲಿ ಕಥೆ ಮತ್ತು ತಾರಾಗಣದ ಆಯ್ಕೆ ಕೆಲಮಟ್ಟಿಗೆ ಸಮಸ್ಯಾತ್ಮಕ. ಈಚೆಗೆ ಚಿತ್ರಸಾಹಿತಿಗಳು, ಗೀತಕಾರರು ಅಧಿಕ ಸಂಖ್ಯೆಯಲ್ಲಿ ನಿರ್ಮಾಣಗೊಂಡಿರುವರು. ಆದರೆ ಹೆಚ್ಚಿನ ಕಥೆಗಳು ಕೇವಲ ಪ್ರಣಯ ಪ್ರೇಮಗಳನ್ನು ಸುತ್ತುವರಿದು ನಿಂತುವು. ಎರಡು ಹೆಣ್ಣು ಒಂದು ಗಂಡು, ಒಂದು ಗಂಡು-ಎರಡು ಹೆಣ್ಣು. ಈಚೆಗೆ ಕೆ.ಎ. ನಾರಾಯಣರಂಥವರು ಇಬ್ಬರು ಮಕ್ಕಳು, ತಾಯಿ, ಅವರಲ್ಲಿ ಒಬ್ಬನು ಕೇಡಿಯಾಗಿದ್ದು ಸುಧಾರಿಸುವವನು ಹೀಗೆ ಕಥೆಗೆ ಹೊಸ ತಿರುವನ್ನು ಕೊಡಲು ಮುಂದಾಗಿರುವರು. ಮರಾಠಿ ಮತ್ತು ಬಂಗಾಲಿಗಳಲ್ಲಿ ಮಾತ್ರ ಜನ ಜೀವನಕ್ಕೆ ಸಮೀಪವಾದ ಕಥಾವಸ್ತುವಿನ ಆಯ್ಕೆಯಾಗುತ್ತಿದೆ. ಅದೇ ರೀತಿ ಹಿಂದಿ ಮತ್ತು ಕನ್ನಡಗಳಲ್ಲಿ ಕಾದಂಬರಿಗಳನ್ನು ಬಳಸಿಕೊಳ್ಳುವುದು ಹೆಚ್ಚಿದೆ. ಕನ್ನಡದ ಅನೇಕ ಕಥೆಗಳು ಉತ್ತಮ ಚಿತ್ರಗಳಾಗಿರುವದರಿಂದ ಹಿಂದಿಗೂ, ಇತರ ಭಾಷೆಗಳಿಗೂ ಪ್ರವೇಶ ಪಡೆಯುತ್ತಿವೆ. ಆದರೂ ಒಟ್ಟಾರೆ ನಮ್ಮ ಚಲಚ್ಚಿತ್ರಗಳಲ್ಲಿ ಒಳ್ಳೆಯ ಕಥೆ ದೊರಕುವುದು ಅಪರೂಪ. ಹೆಚ್ಚಾಗಿ ಅನುಕರಣೆ ಕಾಣುತ್ತಿದೆ. ಇದೊಂದು ಕೊರತೆ ಮತ್ತು ಸಮಸ್ಯೆಯೆಂದೇ ಹೇಳಬೇಕು. ಈಚೆಗೆ ಅನೇಕ ಹೊಸ ತಾರೆಯರು ಚಿತ್ರರಂಗಕ್ಕೆ ಬರುತ್ತಿದ್ದಾರೆನ್ನುವುದು ಸಮಾಧಾನದ ಸಂಗತಿ. ಆದರೆ ಅನೇಕ ತಾರಾಜೋಡಿಗಳು ನಿರ್ಮಾಪಕರಿಗೆ ಇಂಥವರೇ ಇರಬೇಕೆಂಬ ಕರಾರು ಹಾಕುತ್ತಿದ್ದರು; ಹಾಕುತ್ತಿದ್ದಾರೆ. ಈ ಮೊದಲು ತರಬೇತಿ ಇರುತ್ತಿರಲಿಲ್ಲ. ಈಗ ಫಿಲ್ಮ್ ಸಂಸ್ಥೆ ಈ ತರಬೇತಿ ನೀಡುತ್ತಿದೆ. ಉಳಿದ ರಂಗಗಳಲ್ಲೂ ತರಬೇತಿ ಹೊಂದಿದ ಸಿಬ್ಬಂದಿ ದೊರೆಯುತ್ತಿದೆ. ಈಗ ನಮ್ಮಲ್ಲಿ ಸುಮಾರು ೬೫ ಸ್ಟುಡಿಯೋಗಳಿವೆ. ಅವೆಲ್ಲವೂ ಸುಸಜ್ಜಿತವಾದುವು. ಚಿತ್ರ ನಿರ್ಮಾಣಕ್ಕೆ ಅವುಗಳ ಕೊರತೆಯೇನೂ ಇಲ್ಲ. ಆದರೆ ಕೊರತೆ ಇರುವುದು ಕಚ್ಚಾ ಫಿಲ್ಮಿನದು. ಸುಮಾರು ೭ ಕೋಟಿ ರೂ.ಗಳ ಕಚ್ಚಾ ಫಿಲ್ಮನ್ನು ಆಯಾತಮಾಡಿಕೊಳ್ಳಲಾಗುತ್ತಿದೆ. ವಿಶೇಷವಾಗಿ ಬಣ್ಣದ ಚಿತ್ರಗಳಿಗಾಗಿ ಕಚ್ಚಾ ಸರಕು ಹೊರಗಿನಿಂದಲೇ ಬರಬೇಕು. ಈಗ ಉದಕಮಂಡಲದಲ್ಲಿ ಕಿರು ಪ್ರಮಾಣದಲ್ಲಿ ಉತ್ಪಾದನೆ ಪ್ರಾರಂಭವಾಗಿದ್ದರೂ ಅದು ಸಾಲದು. ಈ ಆಯಾತದಿಂದಾಗಿ ಚಿತ್ರಗಳ ವೆಚ್ಚದ ಮೇಲೆ ಪರಿಣಾಮವಾಗುವುದು. ಈ ಉದ್ದಿಮೆಯಲ್ಲಿರುವ ದೊಡ್ಡ ಪ್ರಮಾಣದ ಕಳ್ಳ ಹಣವು ನಿಜವಾಗಿ ಇನ್ನೊಂದು ದೊಡ್ಡ ಸಮಸ್ಯೆಯಾಗಿದೆ. ಚಲಚ್ಚಿತ್ರ ವಿಚಾರಣಾ ಆಯೋಗವು ೧೯೫೧ರಷ್ಟು ಹಿಂದೆಯೇ ಈ ಸಮಸ್ಯೆಯ ತೀವ್ರತೆಯನ್ನು ಗಮನಿಸಿತ್ತು. "ಈ ಅಸಿಷ್ಟವು ಎಣಿಸಿದ್ದಕ್ಕಿಂತ ಹೆಚ್ಚು ವ್ಯಾಪಕ ಸ್ವರೂಪದ್ದಾಗಿದ್ದು ಈ ಬಗೆಗೆ ಪೂರ್ಣ ವಿಚಾರಣೆ ನಡೆಯುವುದು ಅಗತ್ಯವಿರುವುದು" ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸಿತ್ತು.

ವುದು. ಚಿತ್ರರಂಗದ ಪ್ರಮುಖರಾದ ದಿಗ್ದರ್ಶಕರು, ಸಂಗೀತ ದಿಗ್ದರ್ಶಕರು ಮತ್ತು ನಾಯಕ-ನಾಯಕಿಯರು ವಾಡಿಕೆಯ ಕರಾರಿನ ಹಣಕ್ಕಿಂತ ನಾಲ್ಕರಲ್ಲಿ ಒಂದು ಪಾಲಿಗೆ ಪ್ರತ್ಯಕ್ಷವಾಗಿ ಕರಾರು ಮಾಡಿಕೊಂಡು ಉಳಿದುದನ್ನು ಕಳ್ಳಹಣದಲ್ಲಿ ತೆಗೆದುಕೊಳ್ಳುವದು. ಕರ ಮತ್ತಿತರ ಹೊಣೆಗಾರಿಕೆ ತಪ್ಪಿಸಿಕೊಳ್ಳುವುದೇ ಇದರ ಉದ್ದೇಶವಾಗಿರುವುದು. ಆದರೆ ಇದರಿಂದ ಚಿತ್ರರಂಗದ ಪ್ರಗತಿಗೆ ಆತಂಕವಾಗಿದೆಯೆಂಬುದನ್ನೇ ಅವರು ಮರೆಯುತ್ತಿದ್ದಾರೆ. ಆತ್ಮಸಂಯಮದಿಂದ ಮಾತ್ರ ಈ ಅನಿಷ್ಟವನ್ನು ನಿವಾರಿಸುವುದು ಸಾಧ್ಯವಿರುವುದು.

## ಪರಿಶ್ರಮದ ಸಾಹಸ

ಭಾರತೀಯ ಚಿತ್ರೋದ್ಯಮವು ಇನ್ನೂ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದರೂ ಈಗ ನಾವು ಚರ್ಚಿಸಿದ ಸಮಸ್ಯೆಗಳು ಪ್ರಾಮುಖ್ಯವಾದವು ಮತ್ತು ಮೂಲಭೂತವಾದವಾಗಿರುವವು. ಬಹುಶಃ ಸಮಸ್ಯೆಗಳ ಈ ಅಗಾಧತೆಯನ್ನು ಗಮನಿಸಿಯೇ ದಕ್ಷಿಣ ಭಾರತದ ಪ್ರಸಿದ್ಧ ಮತ್ತು ನಿರ್ಮಾಪಕ-ದಿಗ್ದರ್ಶಕರಾದ ಶ್ರೀ ಎಸ್.ಎಸ್. ವಾಸನ್‌ರವರು ಚಿತ್ರೋತ್ಪಾದನೆಯು ಹಣಗಳಿಕೆಯ ಸಾಧನವಲ್ಲ ಎಂದು ಹೇಳುತ್ತ, "ಚಿತ್ರೋದ್ಯಮವು ನಿರ್ಮಾಣ, ಹಂಚಿಕೆ, ಪ್ರದರ್ಶನ ಹೀಗೆ ವಿವಿಧ ಘಟ್ಟಗಳ, ಚಟುವಟಿಕೆಗಳ ತೀವ್ರವಾದ ಮತ್ತು ಪರಿಶ್ರಮದ ಸಾಹಸವೆನಿಸಿದೆ" ಎಂದೂ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದು ಎಷ್ಟು ಯಥಾರ್ಥವಾಗಿದೆಯೆಂಬ ಮಾತು ನಮ್ಮ ಅರಿವೆಗೆ ಬರುವುದು. "ಯಾವ ನಿರ್ಮಾಪಕನೂ ಸದಾಕಾಲ ಯಶಸ್ವಿಯಾಗಲಾರನು; ಹಾಗೆ ಹೇಳಿಕೊಳ್ಳುವುದು ಜಂಭದ ಮಾತೆನಿಸುವುದು. ನಿರ್ಮಾಪಕ ಜನರ ಪ್ರವೃತ್ತಿಯನ್ನು ಅನುಸರಿಸಿ ಚಿತ್ರಗಳನ್ನು ನಿರ್ಮಿಸಬೇಕು. ಅಂದರೆ ಅವರ ಪ್ರವೃತ್ತಿ ಬದಲಾಗುತ್ತಿದೆಯೆಂಬುದನ್ನು ಅರಿತುಕೊಳ್ಳಬೇಕು. ತಾರಾಗಣದ ಆಯ್ಕೆಯಲ್ಲಿಯೂ ಜನರ ಪ್ರವೃತ್ತಿಯನ್ನು ಗಮನಿಸುವುದು ಯೋಗ್ಯವಾದರೂ ಆಗಾಗ ಹೊಸ ತಾರಾಗಣದೊಂದಿಗೆ ಚಿತ್ರಿಸುವ ಸಾಹಸವನ್ನು ಮಾಡುವದು ಯೋಗ್ಯ. ಒಟ್ಟಾರೆ ನಿರ್ಮಾಪಕ ತನ್ನ ಹೊಣೆಗಾರಿಕೆಯನ್ನು ಅರಿತುಕೊಂಡು ಮುನ್ನಡೆಯಬೇಕು" ಎಂದು ಕನ್ನಡದ ಪ್ರಮುಖ ಮತ್ತು ಯಶಸ್ವಿ ನಿರ್ಮಾಪಕರೊಬ್ಬರು ಹೇಳುವ ಮಾತು ಭಾರತೀಯ ಚಿತ್ರೋದ್ಯಮಕ್ಕೆ ಮಾರ್ಗದರ್ಶಿಯಾದ ಸೂತ್ರವಾಗಿದೆಯೆಂದು ನನಗೆನಿಸುತ್ತದೆ. ಅದೇ ಕಾಲಕ್ಕೆ ನಮ್ಮ ಹಿಂದಿನ ರಾಷ್ಟ್ರಪತಿ ಡಾ.ಎಸ್. ರಾಧಾಕೃಷ್ಣನ್ ಅವರು ಹೇಳಿದ ಮಾತು ಗಮನಾರ್ಹವಾಗಿದೆ. "ಚಲಚ್ಚಿತ್ರಗಳು ಉತ್ತಮ ಗುಣಮಟ್ಟದವಾಗಿರುವುದು ಬಹು ಮಹತ್ವದ ಅಂಶ. ನಮ್ಮ ರಾಷ್ಟ್ರದ ಸಾಂಸ್ಕೃತಿಕ ಜೀವನದಲ್ಲಿ ಅವು ಮಹತ್ತರವಾದ ಪಾತ್ರವನ್ನು ನಿರ್ವಹಿಸುವವು. ಚಲಚ್ಚಿತ್ರಗಳು ಜನರ ಮನಸ್ಸು-ಹೃದಯಗಳ ಮೇಲೆ ಅವರಿಗೆ ಗೊತ್ತಿಲ್ಲದೆಯೇ ಪರಿಣಾಮ ಬೀರುವವು. ಈ ಮಾತನ್ನು ಮನದಂದು ಅವುಗಳ ಗುಣಮಟ್ಟವನ್ನು ಉನ್ನತಗೊಳಿಸಬೇಕು"

ಚಲಚ್ಚಿತ್ರಗಳು ಒಂದು ರೀತಿಯಲ್ಲಿ ಪಾಕವಿದ್ದಂತೆ. ಅದು ರುಚಿಕರವಿಲ್ಲದಿದ್ದರೆ ಊಟಮಾಡುವವರು ಟೀಕಿಸುವುದು ಸ್ವಾಭಾವಿಕ; ಅಂತೇ ಈ ಪಾಕವು ಸರ್ವಗ್ರಾಹ್ಯವಾಗಬೇಕು. ಚಿತ್ರನಿರ್ಮಾಪಕ ನಿರ್ಮಿಸುವಾಗ ಅಂಧಕಾರದಲ್ಲಿರುವನು; ಅವನಿಗೆ ಅದರ ಯಶಾಪಯಶಗಳ ಅರಿವಿರುವದಿಲ್ಲ. ಅದರ ಪ್ರೊಸೆಸಿಂಗ್ ನಡೆವುದು ಕೂಡ ಅಂಧಕಾರದಲ್ಲಿ. ಪ್ರೇಕ್ಷಕರು ನೋಡುವುದು ಅಂಧಕಾರದಲ್ಲಿ. ಹೀಗೆ ಅಂಧಕಾರದ ಸಾಮ್ರಾಜ್ಯವಿದ್ದರೂ ಅದು ಜನ ಮನದ ಮೇಲೆ ಬೆಳಕು ಬೀರಬೇಕು. ಹಾಗಾದರೆ ನಿರ್ಮಾಪಕ-ಕೋಟ್ಯಾಧೀಶನಾದಾನು. ಇಲ್ಲವಾದರೆ ಭಿಕ್ಷೆಯೇ ಅವನಿಗೆ ಗತಿ. ಇಷ್ಟೆಲ್ಲ ಪರಿಸ್ಥಿತಿಯಿದ್ದರೂ ನಾನು ಕಂಡ ಚಿತ್ರೋದ್ಯಮಿಗಳು ಈ ಉದ್ದಿಮೆಯ ಭವಿತವ್ಯದ ಬಗೆಗೆ ಆಶಾವಾದಿಗಳಾಗಿರುವದನ್ನು ಕಂಡೆ. ಅದು ಉಳಿದು ಬೆಳೆವ ಭರವಸೆ, ಅವರಿಗೆಲ್ಲ ಇದೆ. ಸರಕಾರ ನೀತಿ ಬದಲಿಸದೇ ಹೋದರೆ, ಪ್ರೋತ್ಸಾಹ ಕೊಡದೆ ಹೋದರೆ ಕೆಲ ನಿರ್ಮಾಪಕರು ದಿವಾಳಿ ತೆಗೆದು ಹಿನ್ನಡೆಯಬಹುದು, ಅಷ್ಟೇ; ಎಂದೇನೂ ಅವರೆನ್ನುತ್ತಾರೆ. ಆದರೆ ಚಲಚ್ಚಿತ್ರ ಕಲೆ-ವಿಜ್ಞಾನಗಳ ಸಂಗಮದಿಂದ ರೂಪುಗೊಂಡ ವಿಚಿತ್ರ ಸೃಷ್ಟಿ. ಅದರ ಪರಿಣಾಮ ಶಾಶ್ವತವಾದುದು. ಚಿತ್ತ ಭಿತ್ತಿಯ ಮೇಲೆ ನೆಲೆ ನಿಲ್ಲುವಂಥದು. ಕಲಾತ್ಮಕ-ವಾಣಿಜ್ಯ ಎಂದು ವರ್ಗೀಕರಿಸುವುದು ಸರಿಯಾಗದು. ಚಿತ್ರ ಯಾವುದೇ ಇರಲಿ ಪ್ರವೇಶ ಧನ ತೆತ್ತೇ ನೋಡುವರಲ್ಲವೆ? ಹೀಗಿರುವಾಗ ಈ ಉದ್ದಿಮೆ ಒಂದು ಶಿಸ್ತು, ನಿಯಮ, ಯೋಜನೆ ಮಾಡಿಕೊಳ್ಳದೇ ಹೋದರೆ ಯೋಜಿತ ಬೆಳವಣಿಗೆ, ಅಭಿವೃದ್ಧಿ ಅಸಾಧ್ಯ. ಈಗಿನಂತೇ ಹರುಕು-ಮುರುಕು ರೀತಿಯಲ್ಲಿ ಬೆಳವಣಿಗೆ. ಚಿತ್ರೋದ್ಯಮಿಗಳೂ, ಸರಕಾರದವರೂ ಪ್ರತಿಷ್ಠೆಯ ಸೆಳವಿಗೆ ಬೀಳದೇ ಒಂದೆಡೆ ಸೇರಿ ಒಂದು ಯೋಜನೆ ಮಾಡಿಕೊಂಡರೆ ಭಾರತೀಯ ಚಿತ್ರರಂಗ ಉಜ್ವಲವಾಗಿ ಬೆಳಗಬಹುದು.


# ಆನಂದ ಭವನ

ಫೋನ ನಂ. 393

ಈಗ ತಮ್ಮೆದುರಿಗೆ ಅತ್ಯಾಧುನಿಕ ಪದ್ಧತಿಯಲ್ಲಿ,
ನಿರ್ಮಾಣಗೊಂಡು ತಮ್ಮ ಸೇವೆಗೆ ಅಣಿಯಾಗಿದೆ
ಜೊತೆಗೆ ಲಾಜಿಂಗದ ವ್ಯವಸ್ಥೆ.

ದೀಪಾವಳಿಯ
ಶುಭಾಶಯಗಳು!



# ಆನಂದ ಭವನ

ವಸತಿ, ಮತ್ತು ಉಪಹಾರಗೃಹ

ಕಲಮಠರೋಡ : ಬೆಳಗಾವಿ

## ದೀಪಾವಳಿಯ ಶುಭಾಶಯಗಳು

# ಬೆಳೆಯುತ್ತಿರುವ ಶೇಷು




maa/CBL/260 Kan

ಶೇಷುವಿಗೆ ಐದು ವರ್ಷ. ಪಾಠದಲ್ಲಿ, ಆಟದಲ್ಲಿ ಚತುರ. ಕಾರ್ಪೊರೇಷನ್ ಬ್ಯಾಂಕಿನ ಜನತಾ ಡಿಪಾಸಿಟ್ ಖಾತೆಯಲ್ಲಿ ಹಣ ಉಳಿಸಿರುವ ಹೆಮ್ಮೆ ಬೇರೆ ಅವನಿಗೆ.

ಜನತಾ ಡಿಪಾಸಿಟ್ ಯೋಜನೆ ಉಳಿತಾಯ ಮಾಡುವುದಕ್ಕಿರುವ ಅತ್ಯಂತ ಸುಲಭ ಮಾರ್ಗ. ದಿನವೊಂದಕ್ಕೆ 25 ಪೈಸೆಯಾದರೂ ಸಾಕು. ಪ್ರತಿ ದಿನವೂ ನೀವು ಬ್ಯಾಂಕಿಗೆ ಹೋಗಬೇಕಾಗಿಲ್ಲ. ಬ್ಯಾಂಕಿನ ಅಧಿಕೃತ ಪ್ರತಿನಿಧಿಯೇ ನಿಮ್ಮ ಠೇವಣಿಗಳನ್ನು ಸ್ವೀಕರಿಸಲು ನಿಮ್ಮ ಮನೆ ಬಾಗಿಲಿಗೇ ಬರುತ್ತಾನೆ.

ಶೇಷು ಬೆಳೆದಂತೆಲ್ಲ ಅವನ ಜನತಾ ಠೇವಣಿಗಳೂ ಬೆಳೆಯುತ್ತವೆ. ಶಾಲೆ ಮುಗಿಸುವ ಹೊತ್ತಿಗೆ ಬ್ಯಾಂಕಿನಲ್ಲಿ ಅವನಿಗಾಗಿ ಸಾಕಷ್ಟು ಹಣ ಸಂಗ್ರಹಗೊಂಡಿರುತ್ತದೆ.
ಉಳಿತಾಯ ಒಂದು ಸಹಜ ಪ್ರವೃತ್ತಿ. ಶೇಷು ಅದನ್ನು ಅಭ್ಯಾಸಮಾಡಿಕೊಂಡಿದ್ದಾನೆ.



ESTD. 1906

— ಸ್ನೇಹ ವಿಶ್ವಾಸ ನಮ್ಮ ಪರಂಪರೆ

**ಕಾರ್ಪೊರೇಷನ್ ಬ್ಯಾಂಕ್ ಲಿಮಿಟೆಡ್**

ರಜಿಸ್ಟರ್ಡ್ ಕಚೇರಿ: ಉಡುಪಿ,
ಆಡಳಿತ ಕಚೇರಿ: ಮಂಗಳೂರು-1.

KARMAVEER 27-10-73 Licence No. 38 Licensed to Post without prepayment Registered with the Registrar of News Paper of India ounder No. 3558/57 Reg. No. BG. 39


Beauty Bulletin

ಬನ್ನಿ! ಮೈಸೂರು ಸ್ಯಾಂಡಲ್ ಸೋಪದ
ಮೋಹಕ ವಿಶ್ವದಲ್ಲಿ ಒಬ್ಬರಾಗಿರಿ!
ಸೌಂದರ್ಯ ಜೋಪಾಸನೆಯಲ್ಲಿ ೧ ರಿಂದ ೪ ರ ಸಾಧನೆ

1 ASTRINGENT
2 DEODORANT
3 SOFTENS SKIN
4 CLINGING FRAGRANCE




ಸೌಂದರ್ಯ ಜೋಪಾಸನೆಯಲ್ಲಿ ೧ ರಿಂದ ೪ ರ ಸಾಧನೆ, ವಿಲಾಸಿ ಸುಖ ಭೋಗ ನಿಮ್ಮ ತ್ವಚೆಯನ್ನು ಸೌಮ್ಯವಾಗಿರಿಸಿ ಮೃದು ಮಧುರ ವಾಗಿಸುವ ಸಳದಿ ನೊರೆ, ಅಂಟುತನ ಹಾಗೂ ವಾಸನೆ ನಿವಾರಿಸುತ್ತದೆ. ಮನಮೋಹಕ ಪರಿಮಳ ಯಾವಾಗಲೂ ನಿಮ್ಮ ಸುತ್ತ ಘಮಘಮಿಸುತ್ತದೆ.

ಮೈಸೂರು ಸರಕಾರದ ಸೋಪ ಫ್ಯಾಕ್ಟರಿ, ಬೆಂಗಳೂರು.

